# ಮಧ್ಯಕಾಲೀನ ಕರ್ನಾಟಕ ಚರಿತ್ರೆಯಲ್ಲಿ ದಲಿತರು

[ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸುತ್ತಿರುವ ಪಿಎಚ್.ಡಿ. ಮಹಾಪ್ರಬಂಧ]

ಒ. ದೇವರಾಜ

ಮಾರ್ಗದರ್ಶಕರು
ಡಾ. ವಿಜಯ್ ಪೂಣಚ್ಚ ತಂಬಂಡ
ಪ್ರಾಧ್ಯಾಪಕರು



ಚರಿತ್ರೆ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೦೭

# ಮಧ್ಯಕಾಲೀನ ಕರ್ನಾಟಕ ಚರಿತ್ರೆಯಲ್ಲಿ ದಲಿತರು

[ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸುತ್ತಿರುವ ಪಿಎಚ್.ಡಿ. ಮಹಾಪ್ರಬಂಧ]


ಓ. ದೇವರಾಜ




ಮಾರ್ಗದರ್ಶಕರು

ಡಾ. ವಿಜಯ್ ಪೂಣಚ್ಚ ತಂಬಂಡ

ಪ್ರಾಧ್ಯಾಪಕರು







ಚರಿತ್ರೆ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೭

# ದೃಢೀಕರಣ ಪತ್ರ

ಓ. ದೇವರಾಜ ಅವರು ಮಧ್ಯಕಾಲೀನ ಕರ್ನಾಟಕ ಚರಿತ್ರೆಯಲ್ಲಿ ದಲಿತರು ಎಂಬ ಶೀರ್ಷಿಕೆಯ ಪಿಎಚ್.ಡಿ. ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲಾಗುತ್ತಿರುವ ಈ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.



ಸ್ಥಳ : ವಿದ್ಯಾರಣ್ಯ
ದಿನಾಂಕ : 10.12.2007

ಡಾ. ವಿಜಯ್ ಪೂಣಚ್ಚ ತಂಬಂಡ
ಮಾರ್ಗದರ್ಶಕರು ಹಾಗೂ ಪ್ರಾಧ್ಯಾಪಕರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಪ್ರಮಾಣ ಪತ್ರ

ಮಧ್ಯಕಾಲೀನ ಕರ್ನಾಟಕ ಚರಿತ್ರೆಯಲ್ಲಿ ದಲಿತರು ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು ಡಾ. ವಿಜಯ್ ಪೂಣಚ್ಚ ತಂಬಂಡ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಪ್ರಬಂಧವನ್ನು ಈ ಮೊದಲು ಯಾವ ಪದವಿಗೂ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ : 10. 12. 2007

O. Devaraj

ಓ. ದೇವರಾಜ

ಸಂಶೋಧಕ

ಚರಿತ್ರೆ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಪರಿವಿಡಿ


**ಅಧ್ಯಾಯ ಒಂದು**

**ಪ್ರಸ್ತಾವನೆ / ೧**

ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಆಕರಗಳು

**ಅಧ್ಯಾಯ ಎರಡು**

**ಚಾರಿತ್ರಿಕ ಹಿನ್ನೆಲೆ / ೧೨**

೨.೧ ವೈದಿಕ ಪರಂಪರೆ

೨.೧.೧ ವರ್ಣ ಮತ್ತು ಜಾತಿ

೨.೧.೨ ವರ್ಣ ಸಂಕರ

೨.೨ ಬೌದ್ಧ ಮತ್ತು ಜೈನ ಪರಂಪರೆಗಳು

೨.೩ ಹದಿನೆಂಟು ಜಾತಿಗಳು

೨.೪ ಕರ್ನಾಟಕದ ಕೆಲವು ಪ್ರಮುಖ ಅಸ್ಪೃಶ್ಯ ಜಾತಿಗಳು

೨.೫ ಅಸ್ಪೃಶ್ಯತೆ ಮತ್ತು ದಲಿತ

೨.೬ ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

**ಅಧ್ಯಾಯ ಮೂರು**

**ದಲಿತರು ಮತ್ತು ಸಮಾಜ / ೫೦**

೩.೧ ಜಾತಿಯ ಸಂರಚನೆ ಮತ್ತು ದಲಿತರಿಗಿದ್ದ ಸಾಮಾಜಿಕ ಸ್ಥಾನಮಾನ

೩.೧.೧ ವಾಸಸ್ಥಾನ

೩.೧.೨ ಸಂಬಳಿಗೋಲು

೩.೧.೩ ಆಹಾರ ಪದ್ಧತಿ

೩.೨ ಭಕ್ತಿ ಚಳವಳಿಗಳು

೩.೨.೧ ಸಾಮಾಜಿಕ ಮತ್ತು ಧಾರ್ಮಿಕ ಆಂದೋಲನಗಳಾಗಿ ಭಕ್ತಿ ಚಳವಳಿಗಳು

೩.೨.೨ ರಾಮಾನುಜಾಚಾರ್ಯರು ಮತ್ತು ದಲಿತ ವರ್ಗ

೩.೨.೩ ವಚನ ಚಳವಳಿ

೩.೨.೪ ಹರಿದಾಸ ಚಳವಳಿ

೩.೩ ದೇವಾಲಯ ಸಂಸ್ಕೃತಿ ಮತ್ತು ದಲಿತರು
೩.೩.೧ ಪರಿಚಾರಕ ವರ್ಗ
೩.೩.೨ ಮಠಗಳು
೩.೩.೩ ದೇವದಾಸಿ ಪದ್ಧತಿ
೩.೪ ಲಿಂಗವಂತ ಕುರುಬರು ಮತ್ತು ಲಿಂಗವಂತ ದಲಿತರು
೩.೪.೧ ಲಿಂಗವಂತ ದಲಿತರ ಬಗೆಗಿನ ಸಾಮಾಜಿಕ ದೃಷ್ಟಿಕೋನಗಳು
೩.೪.೨ ಇತರೆ ಲಿಂಗವಂತ ದಲಿತ ಸಮುದಾಯಗಳು
೩.೫ ಮತಾಂತರ ಪ್ರಕ್ರಿಯೆ ಮತ್ತು ದಲಿತರು
೩.೫.೧ ಜೈನ ಧರ್ಮ
೩.೫.೨ ವೀರಶೈವ ಧರ್ಮ
೩.೫.೩ ಇಸ್ಲಾಂ ಧರ್ಮ
೩.೫.೪ ಕ್ರಿಶ್ಚಿಯನ್ ಧರ್ಮ
೩.೬ ದಲಿತರ ಮತ್ತು ಬ್ರಾಹ್ಮಣರ ಕೆಲವು ಸಂಬಂಧಗಳು
೩.೭ ಗ್ರಾಮದೇವತೆಗಳು
೩.೮ ಬುಡಕಟ್ಟು ಸಮುದಾಯಗಳು
೩.೮.೧ ಸಾಂಸ್ಕೃತಿಕ ವೀರರು ಮತ್ತು ಚರಿತ್ರೆ
೩.೮.೨ ಮಲೆಮಾದೇಶ್ವರ
೩.೮.೩ ಮಂಟೇಸ್ವಾಮಿ
೩.೮.೪ ಜುಂಜಪ್ಪ
೩.೮.೫ ಮೈಲಾರಲಿಂಗ
೩.೯ ತುಳುನಾಡು
೩.೯.೧ ಪಾಡ್ದನಗಳು ಮತ್ತು ಚರಿತ್ರೆ
೩.೯.೨ ಕೊರಗ ತನಿಯ
೩.೯.೩ ಕೋಡ್ದಬ್ಬು ತನ್ನಿಮಾನಿಗ
೩.೯.೪ ಕಲ್ಕುಡ ಕಲ್ಲುರ್ಟಿ
೩.೧೦ ಕೊಡಗು ಪ್ರದೇಶ
೩.೧೦.೧ ಫಣಿಯರವರು

**ಅಧ್ಯಾಯ ನಾಲ್ಕು**

**ದಲಿತರು ಮತ್ತು ಅರ್ಥವ್ಯವಸ್ಥೆ** / ೧೫೨

೪.೧ ಗುಲಾಮ ಪದ್ಧತಿ
೪.೧.೧ ತೊತ್ತುಗಳು

೪.೧.೨. ದಲಿತರ ಮಾರಾಟ
೪.೧.೩ ಮಲೆನಾಡು ಪ್ರದೇಶ ಮತ್ತು ದಲಿತ ಮಹಿಳೆ
೪.೧.೪ ಕೆನರಾ ಕರಾವಳಿಯಲ್ಲಿ ಪೋರ್ಚುಗೀಸರು
೪.೧.೫ ಕೊಡಗು ಪ್ರದೇಶ
೪.೧.೬ ಗುಲಾಮರ ವೃತ್ತಿ
೪.೨ ಜೀತಗಾರಿಕೆ
೪.೩ ವೃತ್ತಿಗಳು
೪.೪ ತೆರಿಗೆ
೪.೪.೧ ಬಿಟ್ಟಿ
೪.೪.೨ ತೆರಿಗೆ ನಿರಾಕರಣೆ ಸಂದರ್ಭಗಳು
೪.೫ ಭೂಮಾಲೀಕರು ಮತ್ತು ಕೃಷಿಕಾರ್ಮಿಕರು
೪.೫.೧ ಭೂಮಾಲೀಕರು ಮತ್ತು ದಲಿತರು
೪.೫.೨ ಕೂಲಿ ಪದ್ಧತಿ
೪.೬ ಬಾರಾಬಲೂತಿ ಪದ್ಧತಿ
೪.೬.೧ ವರ್ಗಗಳು
೪.೬.೨ ವರ್ತಕ ಶ್ರೇಣಿಗಳು

**ಅಧ್ಯಾಯ ಐದು**

**ದಲಿತರು ಮತ್ತು ರಾಜ್ಯವ್ಯವಸ್ಥೆ / ೨೦೨**

೫.೧ ಆಡಳಿತಾತ್ಮಕ ಸಂಬಂಧಗಳು
ಪ್ರಕ್ರಿಯೆಗಳು
೫.೧.೧ ವೀರಗಲ್ಲುಗಳು
೫.೧.೨ ಮಾಸ್ತಿಕಲ್ಲುಗಳು
೫.೨ ಸೈನ್ಯದ ಸೇವೆ
೫.೩ ತಳವಾರಿಕೆ
೫.೪ ಪಾಳೆಯಗಾರರು ಮತ್ತು ದಲಿತರು

**ಅಧ್ಯಾಯ ಆರು**

**ಉಪಸಂಹಾರ / ೨೩೩**

**ಅನುಬಂಧ / ೨೪೦**

ಪರಾಮರ್ಶನ ಗ್ರಂಥಗಳು

# ಪ್ರಸ್ತಾವನೆ

ಕನ್ನಡದ ಗುರುತು ೨೦ನೇ ಶತಮಾನದಲ್ಲಿ ಸ್ಪಷ್ಟಗೊಳ್ಳುತ್ತ ರಾಜಕೀಯ ಮತ್ತು ಭೌಗೋಳಿಕ ರೂಪವನ್ನು ಪಡೆದುಕೊಂಡ ಭಿನ್ನ ಭಿನ್ನ ಆಯಾಮಗಳು ಸಂಶೋಧಕರಿಗೆ ಅಧ್ಯಯನದ ದೃಷ್ಟಿಯಲ್ಲಿ ಸವಾಲಾಗಿರುವುದು ಹೊಸತೇನಲ್ಲ. ವಸಾಹತು ಕಾಲದಲ್ಲಿ ಅದರಲ್ಲೂ ಪ್ರಮುಖವಾಗಿ ೨೦ನೇ ಶತಮಾನದ ಆರಂಭ ದಶಕಗಳಲ್ಲಿ ಪ್ರಾಬಲ್ಯದಲ್ಲಿದ್ದ ರಾಷ್ಟ್ರೀಯವಾದಿ ಚರಿತ್ರೆ ಬರವಣಿಗೆಗಳು ಒಂದು ಬಗೆಯ "ರಾಷ್ಟ್ರೀಯತೆ"ಯನ್ನು ನಿರ್ವಹಿಸಲು ಆರಂಭಿಸಿದವು. ಆ ಕಾಲದ ವಸಾಹತು ವಿರೋಧಿ ಆಂದೋಲನದಲ್ಲಿ ಬಲಾಢ್ಯವಾಗಿದ್ದ ಕಾಂಗ್ರೆಸ್ ಚಳವಳಿ ಪ್ರತಿಪಾದಿಸುತ್ತಿದ್ದ ಭಾರತೀಯ ರಾಷ್ಟ್ರೀಯ ಚಳವಳಿ ಇದರಿಂದ ಹೊರತೇನು ಆಗಿರಲಿಲ್ಲ. ಈ ಕಾರಣದಿಂದಲೇ ಆ ಕಾಲದ ಬುದ್ಧಿಜೀವಿಗಳು ಮತ್ತು ಸಂಶೋಧಕರು ಮೊಳಕೆಯೊಡೆಯುತ್ತಿದ್ದ ಭಾರತದ ಗುರುತಿಗೆ ಸ್ಪಷ್ಟ ಕಲ್ಪನೆ ಕೊಡಲು ಚರಿತ್ರೆಯ ರಚನೆ ಬಗ್ಗೆ ಚಿಂತಿಸಲಾರಂಭಿಸಿದರು. ಬ್ರಿಟಿಷ್ ಚರಿತ್ರೆಕಾರರು ಅವ್ಯಾಹತವಾಗಿ ಮತ್ತು ಆಕ್ರಮಣಕಾರಿಯಾಗಿ "ಭಾರತೀಯ ಮೌಲ್ಯಗಳನ್ನು ಮತ್ತು ಸಂಸ್ಕೃತಿಯನ್ನು" ಟೀಕಿಸುತ್ತಿದ್ದು ಈ ಬಗೆಯ ಚಿಂತನೆಗೆ ಗ್ರಾಸ ನೀಡಿದವು.

ಈ ಹಿನ್ನೆಲೆಯಲ್ಲಿ ರಾಷ್ಟ್ರೀಯವಾದಿಗಳಿಗೆ ಭಾರತೀಯರ ಸ್ವಾಭಿಮಾನ, ಗೌರವ ಮತ್ತು ಪ್ರತಿಷ್ಠೆಗಾಗಿ ಬದಲಿ ಚರಿತ್ರೆಯನ್ನು ಕಟ್ಟುವುದು ಅನಿವಾರ್ಯವಾಯಿತು. ಹೀಗಾಗಿ ಅಂತಹ ಚರಿತ್ರೆಗಳು ರಾಷ್ಟ್ರೀಯವಾದಿ ಚರಿತ್ರೆಕಾರರ ಮನೋಭೂಮಿಕೆಯನ್ನು ಅಭಿವ್ಯಕ್ತಗೊಳಿಸಲು ಸಾಧನಗಳಾದವು. ಇವು ವಸಾಹತು ಕಾಲದಲ್ಲಿ ತಮ್ಮ ಸೀಮಿತ ಗುರಿಯನ್ನು ತಲುಪಲು ಸಹಾಯಕವಾದರೂ ವಸಾಹತೋತ್ತರ ದಿನಗಳಲ್ಲಿ ಬುಗಿಲೆದ್ದ ಪ್ರಾದೇಶಿಕ ಸಾಮಾಜಿಕ ಹಾಗೂ ರಾಜಕೀಯ ಪ್ರಶ್ನೆಗಳಿಗೆ ಪೂರಕವಾಗಲು ಸಹಕಾರಿಯಾಗಲಿಲ್ಲ. ಪರಿಣಾಮವಾಗಿ ಕರ್ನಾಟಕವು ಸೇರಿದಂತೆ ಬಹುತೇಕ ರಾಜ್ಯಗಳ ಚರಿತ್ರೆ, ಚರಿತ್ರೆಗಳು ಕೇವಲ ಉತ್ತರ ಭಾರತದ ಚರಿತ್ರೆಗಳ ಅಡಿಟಿಪ್ಪಣಿಗಳಾಗುವಷ್ಟು ಮಾತ್ರ ಮಹತ್ವ ಪಡೆದುಕೊಂಡವು. ಇಂದು ಸುಮಾರು ಆರು ಕೋಟಿ ಜನರು ಮಾತನಾಡುವ ಭಾಷೆಯಾದ ಕನ್ನಡ ಅಥವಾ ಆ ಮೂಲಕ ಕಂಡುಕೊಂಡ ಕರ್ನಾಟಕದ ಚರಿತ್ರೆಯ ಬಗ್ಗೆ ಅಧ್ಯಯನ ನಡೆಸುತ್ತಿರುವುದು ಸೂಕ್ತವಾಗಿದೆ. ಏಕೆಂದರೆ ಕರ್ನಾಟಕದ ಚರಿತ್ರೆಯನ್ನು ರಚಿಸುವ ಹೊತ್ತಿಗೆ ಕೂಡ 'ರಾಷ್ಟ್ರೀಯವಾದಿ' ಮಿತಿಗಳನ್ನು ಅನೇಕ ಚರಿತ್ರೆಕಾರರಿಗೆ ಮೀರಲು ಸಾಧ್ಯವಾಗಲಿಲ್ಲ. ಹೀಗಾಗಿ ಅವರು ರಚಿಸಿದ ಪ್ರಾಚೀನ, ಮಧ್ಯಕಾಲೀನ ಮತ್ತು ಆಧುನಿಕ ಚರಿತ್ರೆಗಳು ಬಹುತೇಕವಾಗಿ ನಮ್ಮ ಸಮಾಜದ ಉನ್ನತ ವರ್ಗಗಳ/ಜಾತಿಗಳ ಚರಿತ್ರೆಗಳೇ ಆದವು. ಇಲ್ಲಿ ಕೆಳವರ್ಗ/ಜಾತಿಗಳ ಚರಿತ್ರೆ ಮುಖ್ಯವಾಗಲೇ ಇಲ್ಲ. ಈ ಹಿನ್ನೆಲೆಯಲ್ಲಿ 'ಮಧ್ಯಕಾಲೀನ ಕರ್ನಾಟಕ ಚರಿತ್ರೆಯಲ್ಲಿ ದಲಿತರು' ಎನ್ನುವ ವಿಷಯವು ಪ್ರಸ್ತುತ ಅಧ್ಯಯನದಲ್ಲಿ ವಸ್ತು ವಿಷಯವಾಗಿ ಚರ್ಚೆಗೆ ಒಳಪಟ್ಟಿದೆ.

## ಅಧ್ಯಯನದ ಉದ್ದೇಶ ಮತ್ತು ಪ್ರಾಮುಖ್ಯತೆ

'ದಲಿತ' ಎನ್ನುವ ಪದ ಇಂದು ಭಾರತದಲ್ಲಿ ಹೆಚ್ಚು ಪ್ರಚಲಿತದಲ್ಲಿದೆ. ಇದಕ್ಕೆ ಕರ್ನಾಟಕವು ಹೊರತಾಗಿಲ್ಲ. ದಲಿತ ಪದದ ಅನ್ವೇಷಣೆ ಇಪ್ಪತ್ತನೇ ಶತಮಾನದಲ್ಲಿ ಕಾಣಿಸಿಕೊಂಡರೂ ಅದರ ಅಂತರಾಳ ಮತ್ತು ಆಶಯ ಮಾತ್ರ ಪ್ರಾಚೀನವಾದುದು. ಕರ್ನಾಟಕದ ಮಟ್ಟಿಗೆ ಈ ಪದದಿಂದ ಗುರುತಿಸಲಾಗುವ ಜನಾಂಗವಾಗಲಿ, ಸಂಸ್ಕೃತಿಯಾಗಲಿ ಇತ್ತೀಚಿನ ದಿನಗಳಲ್ಲಿ ದಲಿತ ಸಂಘರ್ಷ ಸಮಿತಿಯ ಚಟುವಟಿಕೆಗಳಿಂದ ಎಂಬುದು ಸ್ಪಷ್ಟ. ಈ ಬೆಳವಣಿಗೆಯ ಮೂಲಕ ಚರಿತ್ರೆಯ ಪುನಾರಚನೆಗೆ ಸಾಧ್ಯವಾಗಿರುವುದು ಸ್ಪಷ್ಟವಾಗಿದೆ. 'ದಲಿತ' ಎನ್ನುವ ಪದವು ಅರ್ಥ ವ್ಯಾಪ್ತಿಯಿಂದಾಗಿ ಆರಂಭದಿಂದಲೂ ಚರ್ಚೆಗೆ ಗ್ರಾಸವಾಗಿದೆ. 'ದಲಿತರು' ಎಂದರೆ ಅಸ್ಪೃಶ್ಯರು ಎನ್ನುವ ಅರ್ಥ ವ್ಯಾಪಕವಾಗಿದ್ದರೂ ಅಸ್ಪೃಶ್ಯರೆಂದು ಪರಿಗಣಿಸಲಾದ *ಹೊಲೆಯ ಮಾದಿಗ, ಆದಿ ಕರ್ನಾಟಕ, ಅಂತ್ಯಜ, ಪಂಚಮ* ಮೊದಲಾದ ಸಮುದಾಯಗಳ ಜೊತೆಗೆ ಬುಡಕಟ್ಟು ಸಮುದಾಯಗಳನ್ನು ಪ್ರಸ್ತುತ ಅಧ್ಯಯನದಲ್ಲಿ ಅಭ್ಯಸಿಸಲಾಗಿದೆ. ಅಸ್ಪೃಶ್ಯರನ್ನು ಗುರುತಿಸಲು ಪ್ರಥಮ ಬಾರಿಗೆ ಮರಾಠಿಯಲ್ಲಿ *ದಲಿತ* ಎಂಬ ಶಬ್ದವನ್ನು ಬಳಸಲಾಯಿತು. ಇದು ಮೂಲತಃ ಸಂಸ್ಕೃತ ಶಬ್ದ. ೧೮೩೧ರಲ್ಲಿ ರಚಿಸಲಾಗಿರುವ ನಿಘಂಟುವಿನಲ್ಲಿ (*ಮಾಲ್ಸ್‌ವರ್ತ್ಸ್ ಮರಾಠಿ-ಇಂಗ್ಲೀಷ್ ಡಿಕ್ಷನರಿ, ೧೮೩೧*) ದಲಿತ ಎನ್ನುವ ಪದಕ್ಕೆ ಕೆಲವು ಅರ್ಥಗಳನ್ನು ಕೊಡಲಾಗಿದೆ. ಅದರಲ್ಲಿ ಈ ಪದವನ್ನು ತಲಭಾಗ, ಮುರಿದುಹೋದ, ತುಂಡು ತುಂಡಾಗಿರುವ ಎಂಬರ್ಥದಲ್ಲಿ ಬಳಸಲಾಗಿದೆ. ದಲಿತ ಎಂಬ ಪದವನ್ನು 'ತುಳಿತಕ್ಕೊಳಪಟ್ಟ ವರ್ಗಗಳು' (ಡಿಪ್ರೆಸ್ಡ್ ಕ್ಲಾಸಸ್) ಎಂಬರ್ಥದಲ್ಲಿ ಹಿಂದಿ ಮತ್ತು ಮರಾಠಿ ಭಾಷೆಯಲ್ಲಿ ಬಳಸಲಾಯಿತು. ಕಾಲಕ್ರಮೇಣ ಭಾರತದಾದ್ಯಂತ ಅಸ್ಪೃಶ್ಯ ಜಾತಿಗಳನ್ನು ದಲಿತ ಹೆಸರಿನಿಂದ ಕರೆಯಲು ಪ್ರಾರಂಭಿಸಲಾಯಿತು.[೧] ಕರ್ನಾಟಕದ ಅಸ್ಪೃಶ್ಯರಲ್ಲಿ ಹೆಚ್ಚಿನ ಸಂಖ್ಯೆಯಲ್ಲಿರುವರು ಹೊಲೆಯರು ಮತ್ತು ಮಾದಿಗರು. ಚಾರಿತ್ರಿಕವಾಗಿ ಇವೆರಡು ಪದಗಳು ಚರಿತ್ರೆ ಮತ್ತು ಸಾಹಿತ್ಯದಲ್ಲಿ ಪ್ರಮುಖವಾಗಿ ಕಾಣಿಸಿಕೊಳ್ಳುತ್ತವೆ.

ಚಾರಿತ್ರಿಕವಾಗಿ ಅದರಲ್ಲೂ ಮಧ್ಯಕಾಲೀನ ಕರ್ನಾಟಕದ ಚರಿತ್ರೆಯಲ್ಲಿ ಹೊಲೆಯರ-ಮಾದಿಗರ ಮತ್ತು ಮುಖ್ಯವಾಹಿನಿಯ ಸಮಾಜದಿಂದ ದೂರವಿದ್ದ ಬುಡಕಟ್ಟು ಸಮುದಾಯಗಳ ವಿವರಗಳು ಮತ್ತು ವಿಶ್ಲೇಷಣೆಗಳು ದೊರಕುವುದಿಲ್ಲ. ಆಧುನಿಕ ಸಂದರ್ಭದಲ್ಲಿ ಮಧ್ಯಕಾಲೀನ ಚರಿತ್ರೆಯ ವಿವಿಧ ಮಜಲುಗಳನ್ನು ಅರ್ಥ ಮಾಡಿಕೊಳ್ಳುವುದು ಸಂಕೀರ್ಣವಾದ ವಿಚಾರವಾಗಿದೆ. ಪ್ರಧಾನಧಾರೆಯ ಒಪ್ಪಿತವಾದ ಚರಿತ್ರೆಯಲ್ಲಿ ಹೊಲೆಯ ಮಾದಿಗ ಮತ್ತು ಬುಡಕಟ್ಟು ಸಮುದಾಯಗಳನ್ನು ಕೇಂದ್ರವಾಗಿಟ್ಟುಕೊಂಡು ಮಾಡಿರುವ ಅಧ್ಯಯನಗಳು ಅಪರೂಪವಾಗಿವೆ. ಕರ್ನಾಟಕ ಚರಿತ್ರೆ ರಚನೆಯ ಸಂದರ್ಭದಲ್ಲಿ ಪ್ರಸ್ತುತ ಅಧ್ಯಯನವು ಈ ಬಗೆಯ ಸಂಕೀರ್ಣತೆಗಳನ್ನು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸುತ್ತಿದೆ. ಈ ದೃಷ್ಟಿಯಲ್ಲಿ ದಲಿತ ಎನ್ನುವ ಆಧುನಿಕ ಯುಗದ ಶೋಷಣೆಗೆ ಒಳಪಟ್ಟ ಸಮುದಾಯಗಳನ್ನು ಬಿಂಬಿಸುವಂತಹ ಸಂಕೇತದ ಮೂಲಕ ಚರಿತ್ರೆಯನ್ನು ಅರ್ಥ ಮಾಡಿಕೊಳ್ಳಲು ಪ್ರಸ್ತುತ ಅಧ್ಯಯನವು ಉದ್ದೇಶಿಸಿದೆ. ಈ ಹಿನ್ನೆಲೆಯಲ್ಲಿ ಶೋಷಣೆಗೆ ಒಳಪಟ್ಟು ಈ ಸಮುದಾಯಗಳ ಚರಿತ್ರೆಯನ್ನು ದಲಿತ ಚರಿತ್ರೆಯೆಂದೇ ವ್ಯಾಖ್ಯಾನಿಸುವುದು ಹೆಚ್ಚು ಪ್ರಸ್ತುತವಾಗಿದೆ. ರಾಷ್ಟ್ರೀಯವಾದಿ ಚರಿತ್ರೆಕಾರರು ರಚಿಸಿದ ಬರವಣಿಗೆಗಳನ್ನು ಕೆಲವು ಹೊಸ ಸಾಮಾಜಿಕ ಚಳವಳಿಗಳು ಟೀಕೆಗೆ ಗುರಿಪಡಿಸಿದವು. ಅವುಗಳಲ್ಲಿ ೧೯೭೦ರ ದಶಕದಲ್ಲಿ ಕರ್ನಾಟಕದ

ರಾಜಕೀಯ ಮತ್ತು ಸಾಮಾಜಿಕ ಆಯಾಮಗಳಲ್ಲಿ ಬಿರುಗಾಳಿಯನ್ನು ಎಬ್ಬಿಸಿದ ದಲಿತ ಚಳವಳಿ ಕೂಡ ಒಂದು. ಕೆಳಸಮುದಾಯಗಳ ಚರಿತ್ರೆಯನ್ನು ಸಾಂಪ್ರದಾಯಿಕ ಅಧ್ಯಯನ ಮಾದರಿಗಳಲ್ಲಿ ಅಲಕ್ಷಿಸಿದೆ ಎಂದು ಈ ಚಳುವಳಿ ವಿಮರ್ಶೆಗೆ ಒಳಪಡಿಸಿತು. ಹಾಗೆಯೇ ದಲಿತ ಸಮುದಾಯಗಳ ಚರಿತ್ರೆ ರಚನೆ ಮತ್ತು ಪುನಾರಚನೆ ಆಗಬೇಕೆಂದು ಒತ್ತಾಯಿಸಿತು. ಹೆಚ್ಚಿನ ಅಧ್ಯಯನಗಳು ಮಧ್ಯಕಾಲೀನ ಕರ್ನಾಟಕದ ಚರಿತ್ರೆಯನ್ನು ರಾಜಕೇಂದ್ರಿತ ನೆಲೆಯಲ್ಲಿ ರಚಿಸಿರುವುದರಿಂದ ಕೆಳಸಮುದಾಯಗಳು ಮತ್ತು ದಲಿತರ ಕುರಿತು ಹೆಚ್ಚಿನ ವಿವರಣೆಗಳನ್ನು ನಿರೀಕ್ಷಿಸುವುದು ಕಷ್ಟಸಾಧ್ಯ. ಚರಿತ್ರೆಯನ್ನು ಏಕರೂಪ ನೆಲೆಯಿಂದ ಅಧ್ಯಯನ ಮಾಡದೇ ಬಹುರೂಪ ನೆಲೆಯಲ್ಲಿ ಅಭ್ಯಸಿಸಿದರೆ ಸಮಾಜದ ಒಟ್ಟು ಚಿತ್ರಣವನ್ನು ಗ್ರಹಿಸಲು ಸಾಧ್ಯವಿದೆ. ಈ ಅವಧಿಯ ಧರ್ಮ, ಪಂಥಗಳು, ಧಾರ್ಮಿಕ ಕಟ್ಟುಪಾಡುಗಳು ಕೂಡ ಉಳಿದ ಸಾಮಾಜಿಕ ಪ್ರಕ್ರಿಯೆಗಳನ್ನು ದೂರ ತಳ್ಳಿದವು. ಇವುಗಳಲ್ಲಿ ಸಮಾಜದ ಅರ್ಥ ವ್ಯವಸ್ಥೆಯ ಒಳನೋಟ ಸಿಗುವುದಿಲ್ಲ. ಈ ಹಿನ್ನೆಲೆಯಲ್ಲಿ ವಸಾಹತುಪೂರ್ವ ದಲಿತ ಸಮಾಜದ ಜನಜೀವನವನ್ನು ಚಾರಿತ್ರಿಕ ನೆಲೆಗಟ್ಟಿನಲ್ಲಿ ಅರ್ಥೈಸಿಕೊಳ್ಳಲು ಪ್ರಯತ್ನಿಸಲಾಗಿದೆ. ಈ ಕಾರಣದಿಂದಲೇ ಪ್ರಸ್ತುತ ಮಹಾಪ್ರಬಂಧವು ಮಧ್ಯಕಾಲೀನ ಕರ್ನಾಟಕ ಚರಿತ್ರೆಯಲ್ಲಿ ದಲಿತರು ಎನ್ನುವ ವಿಷಯವನ್ನು ಕೇಂದ್ರವಾಗಿಟ್ಟುಕೊಂಡು ಅಧ್ಯಯನವನ್ನು ಮಾಡಲು ಉದ್ದೇಶಿಸಿದೆ.

ಕರ್ನಾಟಕದ ಚರಿತ್ರೆಯನ್ನು ಕಟ್ಟುವಲ್ಲಿ ಅನೇಕ ಚರಿತ್ರೆಕಾರರ ಕಾಣಿಕೆ ಮಹತ್ವದ್ದಾಗಿದ್ದರೂ ಕರ್ನಾಟಕ ಚರಿತ್ರೆ ಬರವಣಿಗೆಯ ಪರಂಪರೆಯು ಅನೇಕ ಮಿತಿಗಳನ್ನು ಮೀರಲು ಸಾಧ್ಯವಾಗಲಿಲ್ಲ. ಬಹುತೇಕ ಅಧ್ಯಯನಗಳು ಕರ್ನಾಟಕದ ಚರಿತ್ರೆಯನ್ನು ರಚಿಸುವ ಸಂದರ್ಭದಲ್ಲಿ ವ್ಯಕ್ತಿನಿಷ್ಠ ಮಾದರಿಯನ್ನೆ ಹೆಚ್ಚು ಅವಲಂಬಿಸಿದವು. ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕದ ಚರಿತ್ರೆ ಅಧ್ಯಯನಗಳು ಈ ದೃಷ್ಟಿಯಿಂದ ಭಿನ್ನವೆನಿಸುವುದಿಲ್ಲ. ಅವುಗಳಲ್ಲಿ ರಾಜಕೀಯ ಮತ್ತು ಧಾರ್ಮಿಕ ವೈರುಧ್ಯಗಳು ಪ್ರಮುಖವಾಗಿರುವುದನ್ನು ನೋಡಬಹುದು.[2] ಸಮಾಜವು ಒಂದು ಕಾಲಘಟ್ಟದಿಂದ ಮತ್ತೊಂದು ಕಾಲಘಟ್ಟಕ್ಕೆ ಬದಲಾಗುವ ಸಂದರ್ಭದಲ್ಲಿ ಕಾರಣ ಮತ್ತು ಪರಿಣಾಮಗಳನ್ನು ಗುರುತಿಸಲು ಈ ಬಗೆಯ ಅಧ್ಯಯನಗಳಲ್ಲಿ ಸಾಧ್ಯವಾಗುವುದಿಲ್ಲ. ಇದಕ್ಕೆ ಚರಿತ್ರೆ ರಚನಾ ಮಾದರಿಗಳು ಕೂಡ ಮುಖ್ಯ ಕಾರಣವಾಗ ಲಾರಂಭಿಸಿದವು. ಸಮಾಜದ ಸಾಮಾಜಿಕ ಮತ್ತು ಆರ್ಥಿಕ ವೈರುಧ್ಯಗಳನ್ನು ಅರ್ಥ ಮಾಡಿಕೊಳ್ಳಲು ಮತ್ತು ಅಧ್ಯಯನ ಮಾಡಲು ಭೂತಕಾಲದ ಘಟನೆಗಳನ್ನು ಒರೆ ಹಚ್ಚಬೇಕಾಗುತ್ತದೆ. *ವಸಾಹತುಶಾಹಿ, ರಾಷ್ಟ್ರೀಯವಾದಿ, ಮಾರ್ಕ್ಸ್‌ವಾದಿ* ಮತ್ತು *ಸಬಾಲ್ಟರ್ನ್* ಬರವಣಿಗೆ ಚರಿತ್ರೆ ಬರವಣಿಗೆಗಳ ಮೇಲೆ ಪ್ರಭಾವ ಬೀರಿವೆ. ಮಾರ್ಕ್ಸ್ ಮತ್ತು ಸಬಾಲ್ಟರ್ನ್ ಸಿದ್ಧಾಂತಗಳು ಚರಿತ್ರೆ ಲೇಖನಶಾಸ್ತ್ರದ ಮೇಲೆ ಬೀರಿದ ಪರಿಣಾಮದಿಂದಾಗಿ ಸಮಾಜದ ತಳಸಮುದಾಯಗಳ ಚರಿತ್ರೆಯ ರೂಪುರೇಷೆಗಳು ಮರುವಿಮರ್ಶೆಗೆ ಒಳಪಟ್ಟವು. ಇವೆಲ್ಲವುಗಳನ್ನು ಗಮನಿಸಿದರೆ ಕರ್ನಾಟಕವು ಹೊಸ ಬಗೆಯ ಚಾರಿತ್ರಿಕ ಸಂಶೋಧನೆಗೆ ಒಳಪಟ್ಟಿರುವುದು ಕಂಡುಬರುತ್ತದೆ. ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕದ ಅಧ್ಯಯನಗಳು ಇದರಿಂದ ಹೊರತೇನಲ್ಲ.

ದಲಿತರು ವೃತ್ತಿಸಂಬಂಧ ಹಿನ್ನೆಲೆಯಲ್ಲಿ ಸಮಾಜದ ಅಗತ್ಯ ಸೇವೆ ಸಲ್ಲಿಸುವಲ್ಲಿ ಪ್ರಮುಖ ಪಾತ್ರ ವಹಿಸಿದರೂ ದಲಿತರ ಆರ್ಥಿಕ ಚರಿತ್ರೆಯ ಅಧ್ಯಯನಗಳನ್ನು ಹೆಚ್ಚಾಗಿ ಕಾಣಲಾಗುವುದಿಲ್ಲ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಮಹಾಪ್ರಬಂಧವು ಚಾರಿತ್ರಿಕ ನೆಲೆಯಲ್ಲಿ ದಲಿತರ ಆರ್ಥಿಕ ಸಂಬಂಧಿ ವಿಷಯಗಳನ್ನು ಚರ್ಚಿಸಲು ಮತ್ತು ಅಧ್ಯಯನ

ಮಾಡಲು ಯತ್ನಿಸಿದೆ. ದಲಿತರಿಗೆ ಮತ್ತು ರಾಜ್ಯವ್ಯವಸ್ಥೆಗೆ ಅವಿನಾಭಾವ ಸಂಬಂಧವಿದ್ದರೂ ಈ ಕುರಿತು ಗಂಭೀರ ಅಧ್ಯಯನಗಳು ನಡೆದಿಲ್ಲವೆಂದರೆ ತಪ್ಪಾಗಲಾರದು. ಈ ದೃಷ್ಟಿಯಿಂದ ಮಧ್ಯಕಾಲೀನ ಸಂದರ್ಭದ ರಾಜ್ಯ ವ್ಯವಸ್ಥೆಯೊಂದಿಗೆ ದಲಿತರ ಸಂಬಂಧಗಳ ಕುರಿತು ಅಧ್ಯಯನ ಮಾಡಲು ಯತ್ನಿಸಲಾಗಿದೆ. ಅಸ್ಪೃಶ್ಯ ಎಂಬ ಶಬ್ದಕ್ಕೆ ಸಂವಾದಿಯಾಗಿ ದಲಿತ ಎನ್ನುವ ಶಬ್ದವನ್ನು ಪ್ರಸ್ತುತ ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ.

**ಆಕರಗಳು**

ಪ್ರಸ್ತುತ ಅಧ್ಯಯನದ ವಿವಿಧ ಆಯಾಮಗಳನ್ನು ಗಂಭೀರವಾಗಿ ಅರ್ಥ ಮಾಡಿಕೊಳ್ಳಲು ಮತ್ತು ಕರ್ನಾಟಕದ ಚರಿತ್ರೆಯನ್ನು ಪುನಾರಚಿಸುವಲ್ಲಿ ಯುರೋಪಿನ ವಿದ್ವಾಂಸರ ಕೊಡುಗೆ ಮಹತ್ವಪೂರ್ಣವಾದದ್ದು (ವಿಲ್ಕ್ಸ್, ಬುಕಾನನ್, ಬಿ.ಎಲ್.ರೈಸ್, ಸೀವೆಲ್ ಮುಂತಾದವರು)[೬] ಹಾಗೂ ವಿದೇಶಿ ಪ್ರವಾಸಿಗರ ಬರವಣಿಗೆಗಳು ಸಹಾಯಕವಾಗಿವೆ. *ರಾಷ್ಟ್ರೀಯವಾದಿ,*[೭] *ಮಾರ್ಕ್ಸ್‌ಸಂನ ಪ್ರಭಾವಕ್ಕೊಳಗಾದ* ಬರವಣಿಗೆಗಳನ್ನು ಬಳಸಿಕೊಳ್ಳಲಾಗಿದೆ.[೮] ಅಸ್ಪೃಶ್ಯ-ದಲಿತ ವಿಷಯಕ್ಕೆ ಸಂಬಂಧಿಸಿದ ವಿವರಗಳು ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕ ಚರಿತ್ರೆಯಲ್ಲಿ ಬಹಳ ವಿರಳವಾಗಿ ಕಂಡುಬರುತ್ತವೆ. ಕರ್ನಾಟಕದ ಕೆಳಸಮುದಾಯಗಳ ಚರಿತ್ರೆಯನ್ನು ಕಟ್ಟಲು ಮತ್ತು ಅರ್ಥ ಮಾಡಿಕೊಳ್ಳಲು ಮೇಲಿನ ಸೈದ್ಧಾಂತಿಕ ಹಿನ್ನೆಲೆಯ ಚರಿತ್ರೆಕಾರರ ಬರವಣಿಗೆಗಳನ್ನು ಬಳಸಿಕೊಳ್ಳಲಾಗಿದೆ. ಅಂದಿನ ಸಾಮಾಜಿಕ ಪರಿಸ್ಥಿತಿಯಲ್ಲಿ ದಲಿತರನ್ನು ನೋಡುವುದು, ಮುಟ್ಟುವುದು ಅಸಾಧ್ಯವಾಗಿರಬೇಕಾದರೆ, ಇನ್ನು ದಾಖಲೆಗಳು ಅವರ ಕುರಿತು ಚರ್ಚಿಸುವುದು ತುಸು ಕಷ್ಟವೆ. ಸಮಕಾಲೀನ ಸಂದರ್ಭದ ವಿದೇಶಿ ಪ್ರವಾಸಿಗರ ಬರವಣಿಗೆ ಮತ್ತು ಪ್ರಾಚೀನ ಕನ್ನಡ ಪಠ್ಯಗಳು ಈ ಕೊರತೆಯನ್ನು ನೀಗಿಸುತ್ತವೆ.

ಅಸ್ಪೃಶ್ಯತೆ/ದಲಿತ ಚರಿತ್ರೆಯ ಕುರಿತು ಕನ್ನಡದ ಮಟ್ಟಿಗೆ ಬರವಣಿಗೆಗಳು ತುಂಬಾ ಕಡಿಮೆ. ಎಂ.ಚಿದಾನಂದ ಮೂರ್ತಿ ಅವರ 'ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ' ಎನ್ನುವ ಕೃತಿಯನ್ನು ಒಂದು ಮುಖ್ಯ ಆಕರವನ್ನಾಗಿ ಬಳಸಿಕೊಂಡು ಅಧ್ಯಯನ ಮಾಡಲಾಗಿದೆ.[೯] ಚರಿತ್ರೆಯ ಆಕರಗಳ ಅನುಪಸ್ಥಿತಿಯಲ್ಲಿ ಸಾಹಿತ್ಯವು ಹೇಗೆ ಚರಿತ್ರೆಯನ್ನು ಕಟ್ಟಿಕೊಡುತ್ತದೆ ಎಂಬುದಕ್ಕೆ *ಕವಿರಾಜಮಾರ್ಗ, ಧರ್ಮಾಮೃತ, ಹರಿಶ್ಚಂದ್ರ ಕಾವ್ಯ* ಮುಂತಾದ ಕೃತಿಗಳು ಸಾಕ್ಷಿಯಾಗಿವೆ.[೧೦] ಅಧ್ಯಯನಕ್ಕೆ ಪೂರಕವಾಗಿ ಕನ್ನಡ ಪ್ರಾಚೀನ ಪಠ್ಯಗಳನ್ನು ಸಂದರ್ಭಾನುಸಾರವಾಗಿ ಬಳಸಿಕೊಳ್ಳಲಾಗಿದೆ. ಕನ್ನಡ ಪಠ್ಯಗಳು ಪ್ರಮುಖ ಆಕರವಾಗಿದ್ದು ದಲಿತ ಚರಿತ್ರೆಯನ್ನು ಕುರಿತು ಚರ್ಚಿಸಲು ಅನುವು ಮಾಡಿಕೊಡುತ್ತವೆ.

ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದ ಆಕರಗಳು ಪ್ರಾಚೀನ ಕರ್ನಾಟಕ ಚರಿತ್ರೆಯಲ್ಲಿ ಬಹಳ ವಿರಳವಾಗಿ ಸಿಗುತ್ತವೆ. ಅಲ್ಲಲ್ಲಿ ಕೆಲವು ಶಾಸನಗಳು ದೊರೆತರೂ ಅವು ಬಹುತೇಕವಾಗಿ ಬಲಾಢ್ಯ ಜಾತಿಗಳ ಅಭಿಪ್ರಾಯಗಳನ್ನೇ ವ್ಯಕ್ತಪಡಿಸುವುದನ್ನು ನೋಡಬಹುದು. ಆದರೆ, ಇವುಗಳಿಗೆ ವ್ಯತಿರಿಕ್ತವಾಗಿ ದೊರಕಿರುವ ಶಾಸನಗಳೂ ಇವೆ. ಅವುಗಳನ್ನು ಮಹಾಪ್ರಬಂಧದ ವಿವಿಧ ಭಾಗಗಳಲ್ಲಿ ಉಲ್ಲೇಖಿಸಲಾಗಿದೆ. ಕ್ರಿ.ಶ. ೯೬೪ರ ಸೊರಬದಲ್ಲಿ ದೊರಕಿದ ಶಾಸನವು (ಎಪಿಗ್ರಾಫಿಯಾ ಕರ್ನಾಟಿಕ, ಸಂಪುಟ-೮, ೫೮೩, ಕ್ರಿ.ಶ. ೯೬೪) ಉದಾಹರಣೆಗೆ ಹೊಲೆಯನೊಬ್ಬ ದಾನ ಕೊಟ್ಟ ಸಂಗತಿ ಬಗ್ಗೆ ಹೇಳುತ್ತದೆ. ಇದೇ ತರಹದ ಮಾದರಿಗಳನ್ನು ಕ್ರಿ.ಶ. ೯೯೭ರ ಶಾಸನ (ಎಪಿಗ್ರಾಫಿಯಾ ಕರ್ನಾಟಿಕ, ಸಂಪುಟ-೮, ಸೊರಬ, ಕ್ರಿ.ಶ. ೯೯೭) ಮತ್ತು ೧೧ನೆಯ ಶತಮಾನದ ಶಾಸನಗಳಲ್ಲಿಯೂ (ಕರ್ನಾಟಕ ಇನ್‌ಸ್ಕ್ರಿಪ್‌ಶನ್,

ಸಂಪುಟ-೫, ಕ್ರಿ.ಶ. ೧೨೨೧) ಕಂಡುಬರುವುದು. ಇಲ್ಲಿ ದೊರಕಬಹುದಾದ ಮಾಹಿತಿಗಳನ್ನು ದಲಿತಕೇಂದ್ರಿತ ದೃಷ್ಟಿಯಿಂದ ನೋಡುವ ಕ್ರಮ ಇತ್ತೀಚೆಗೆ ಪ್ರಮುಖವಾಗಿದ್ದರೂ ಚರಿತ್ರೆಯನ್ನು ಇತ್ತೀಚೆಗೆ ಅರ್ಥ ಮಾಡಿಕೊಳ್ಳಲು ಶಾಸನಗಳ/ವೀರಗಲ್ಲುಗಳ ಮುಂತಾದ ವಿವರಗಳು ಸಾಕಾಗುವುದಿಲ್ಲ. ಈ ಹಿನ್ನೆಲೆಯಲ್ಲಿ ಬುಡಕಟ್ಟು ಕಾವ್ಯಗಳನ್ನು (ಮಲೆ ಮಾದೇಶ್ವರ, ಮಂಟೇಸ್ವಾಮಿ, ಜುಂಜಪ್ಪ ಮುಂತಾದವುಗಳು) ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.[೮]

ಚರಿತ್ರೆ ರಚನೆಯಲ್ಲಿ ಮೌಖಿಕ ಆಕರಗಳನ್ನು ಬಳಸಿಕೊಳ್ಳುತ್ತಿರುವುದು ಕಾಣಬಹುದು. ಕರ್ನಾಟಕದ ಸಾಂಸ್ಕೃತಿಕ ವೀರರ, ಗ್ರಾಮ ದೈವಗಳ, ಚಾರಿತ್ರಿಕ ಸ್ಥಳಗಳ ಕುರಿತು ಮೌಖಿಕ ಆಕರಗಳು ಬಹುಮುಖ್ಯ ಪಾತ್ರ ವಹಿಸುತ್ತವೆ. ಲಾವಣಿ, ಗಾದೆ, ಒಗಟು, ಐತಿಹ್ಯ ಮತ್ತಿತರ ಆಕರ ಸಾಮಗ್ರಿಗಳು ಮಧ್ಯಕಾಲೀನ ಕರ್ನಾಟಕದ ಚರಿತ್ರೆಯನ್ನು ಬಹುಮುಖ ದೃಷ್ಟಿಕೋನದಲ್ಲಿ ಅಧ್ಯಯನ ಮಾಡಿ ರಚಿಸಲು ಯತ್ನಿಸಲಾಗಿದೆ.[೯] ಇದರ ಜೊತೆಗೆ ವಿಶ್ವಕೋಶಗಳು, ಗ್ಯಾಜೆಟಿಯರ್‌ಗಳು, ನಿಘಂಟುಗಳು, ಪ್ರಕಟಿತ, ಅಪ್ರಕಟಿತ ಆಕರಗಳು, ಪತ್ರಿಕೆಗಳು ಮುಂತಾದ ಆಕರಗಳನ್ನು ಈ ಪ್ರಬಂಧದಲ್ಲಿ ಬಳಸಿಕೊಳ್ಳಲಾಗಿದೆ.[೧೦]

## ವ್ಯಾಪ್ತಿ

ಚರಿತ್ರೆಯ ಕಾಲಘಟ್ಟವನ್ನು ಗುರುತಿಸುವ ಸಂದರ್ಭದಲ್ಲಿ ಚರಿತ್ರೆಕಾರರು ಅನುಸರಿಸುವ ಮಾನದಂಡಗಳು, ಚರಿತ್ರೆಯಲ್ಲಿ ಕಾಲ ವಿಂಗಡಣೆಯ ಅಗತ್ಯಗಳು ಮತ್ತು ಇವುಗಳಿಂದ ಚರಿತ್ರೆಯನ್ನು ಅರ್ಥ ಮಾಡಿಕೊಳ್ಳಲು ಉಂಟಾಗುವ ತೊಡಕುಗಳು ಮುಂತಾದ ಪ್ರಶ್ನೆಗಳು ಗಂಭೀರ ಸ್ವರೂಪದ್ದಾಗಿವೆ. ಕಾಲಘಟ್ಟದ ವಿಂಗಡಣೆ ಮೂಲತಃ ಯುರೋಪಿನ ಮೂಲದ್ದು. 'ಮಧ್ಯಕಾಲೀನ'ವೆಂಬುದು ಒಂದು ಐತಿಹಾಸಿಕ ಹಂತ. ಭಾರತೀಯ ಇತಿಹಾಸ ಲೇಖನ ಕಲೆಯಲ್ಲಿ ಪ್ರಾಚೀನ, ಮಧ್ಯಕಾಲೀನ ಮತ್ತು ಆಧುನಿಕ ಎನ್ನುವುದು ಇತ್ತೀಚಿನ ಜಾಯಮಾನವಲ್ಲ.[೧೧] ಘಟನೆಗಳನ್ನು ಅರ್ಥ ಮಾಡಿಕೊಳ್ಳುವ ಹಿನ್ನೆಲೆಯಲ್ಲಿ ಕಾಲಘಟ್ಟಗಳನ್ನು ಬಹುತೇಕವಾಗಿ ವೃತ್ತಿಪರ ಚರಿತ್ರೆಕಾರರು ಒಪ್ಪಿಕೊಂಡಿದ್ದಾರೆ. ಹೀಗಾಗಿ ಕರ್ನಾಟಕದ ಚರಿತ್ರೆ ಈ ರೀತಿಯ ಕಾಲ ವಿಂಗಡಣೆಯಿಂದ ಹೊರತಾಗಿಲ್ಲ. ಮಧ್ಯಕಾಲೀನ ಸಂದರ್ಭದಲ್ಲಿ ರಾಷ್ಟ್ರಕೂಟರು, ಕಲ್ಯಾಣಿ ಕಲಚೂರ್ಯರು, ಹೊಯ್ಸಳರು, ವಿಜಯನಗರದ ಅರಸರು, ಬಹಮನಿ, ಇಕ್ಕೇರಿ, ಮೈಸೂರಿನ ಅರಸರು ಆಳ್ವಿಕೆ ಮಾಡಿದ್ದಾರೆ. ಹಾಗೆಯೇ ಸಾಮಂತ ಅರಸರು, ಪಾಳೆಯಪಟ್ಟುಗಳು ಆಳಿರುವುದನ್ನು ಗಮನಿಸಬಹುದು. ಅಧ್ಯಯನದ ಅನುಕೂಲಕ್ಕೆ ಮಧ್ಯಕಾಲೀನ ಕರ್ನಾಟಕವೆಂದರೆ ೧೦ನೇ ಶತಮಾನದಿಂದ ೧೮ನೇ ಶತಮಾನದ ತನಕ ವ್ಯಾಪ್ತಿಯನ್ನು ಇಟ್ಟುಕೊಳ್ಳಲಾಗಿದೆ. ಇನ್ನೂ ಸ್ಪಷ್ಟವಾಗಿ ಹೇಳುವುದಾದರೆ ಅದು ವಸಾಹತುಪೂರ್ವ ಕಾಲಘಟ್ಟವಾಗಿದೆ. ಸಮುದಾಯಗಳ ಚರಿತ್ರೆಯನ್ನು ಗುರುತಿಸುವಾಗ ಈ ರೀತಿಯ ಗೆರೆ ಕೊರೆದು ಅಧ್ಯಯನ ಮಾಡುವುದು ಚರಿತ್ರೆಕಾರರಿಗೆ ಕಷ್ಟ. ಆದರೆ ಅಧ್ಯಯನದ ಅನುಕೂಲಕ್ಕಾಗಿ ಈ ರೀತಿಯ ವಿಂಗಡಣೆ ಅನಿವಾರ್ಯವಾಗಿದೆ. ಅಧ್ಯಯನದ ಅವಧಿಯಲ್ಲಿ ಬಹುತೇಕ ಬುಡಕಟ್ಟು ಕಾವ್ಯಗಳು ಹುಟ್ಟಿಕೊಂಡಿರುವುದು ವಿಶೇಷ. ಮೌಖಿಕ ಚರಿತ್ರೆಯಲ್ಲಿ ಕಾಲ ವಿಂಗಡಣೆ ಮಾಡುವುದು ಕಷ್ಟಸಾಧ್ಯ. ೧೯೪೦ರ ದಶಕದ ಭಾರತದ ರಾಜಕಾರಣವನ್ನು ವ್ಯಾಪಿಸಿದ ಮತೀಯ ವಾತಾವರಣದಿಂದ ಪ್ರೇರಿತವಾದ ಚರಿತ್ರೆ ಬರವಣಿಗೆ ಮಾದರಿಗಳು ಪ್ರಾಚೀನ/ಮಧ್ಯಕಾಲೀನ ಚರಿತ್ರೆಯ ಅಧ್ಯಯನವನ್ನು ವಿರೂಪಗೊಳಿಸಿದವು. ಈ ಮಾದರಿಗಳು ಪ್ರಾಚೀನ ಭಾರತವನ್ನು *ಹಿಂದೂ ಸಂಸ್ಕೃತಿ* ಮತ್ತು *ಸಂಸ್ಕೃತ* ವಾಙ್ಮಯದೊಂದಿಗೆ

ನೇರವಾಗಿ ಸಮೀಕರಿಸಿ ಅದೇ ಭಾರತದ ನಿಜವಾದ ಸಂಸ್ಕೃತಿಯೆಂದು ಒತ್ತಿಹೇಳಲು ಪ್ರಯತ್ನಿಸಿತು. ಕರ್ನಾಟಕದ ಸಂದರ್ಭದಲ್ಲಿ ಈ ಕಾಲಘಟ್ಟದಲ್ಲಿ ದಲಿತರ ಚರಿತ್ರೆಯನ್ನು ಕೇಂದ್ರೀಕರಿಸಿಕೊಂಡು ಅಧ್ಯಯನ ಮಾಡುವುದು ಪ್ರಸ್ತುತ ಅಧ್ಯಯನದ ಉದ್ದೇಶವಾಗಿದೆ.

ಈ ಅಧ್ಯಯನವು ಒಟ್ಟು ಆರು ಅಧ್ಯಾಯಗಳನ್ನು ಒಳಗೊಂಡಿದೆ. ಮೊದಲನೇ ಅಧ್ಯಾಯವು ಪ್ರಸ್ತಾವನೆಯ ಭಾಗ. ಇದರಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ, ಆಕರಗಳ ವಿಚಾರ ಕುರಿತು ಚರ್ಚಿಸಲಾಗಿದೆ. ಎರಡನೇ ಅಧ್ಯಾಯದಲ್ಲಿ ವೈದಿಕ ಪರಂಪರೆಗಳು, ವರ್ಣ ಮತ್ತು ಜಾತಿ, ವರ್ಣ ಸಂಕರ, ಬೌದ್ಧ ಮತ್ತು ಜೈನ ಪರಂಪರೆಗಳು, ಹದಿನೆಂಟು ಜಾತಿಗಳು, ಕರ್ನಾಟಕದ ಕೆಲವು ಪ್ರಮುಖ ಅಸ್ಪೃಶ್ಯ ಜಾತಿಗಳು, ಅಸ್ಪೃಶ್ಯತೆ ಮತ್ತು ದಲಿತ ವಿಚಾರಗಳು ಹಾಗೂ ಇದುವರೆಗೆ ನಡೆದಿರುವ ಅಧ್ಯಯನಗಳ ಸಮೀಕ್ಷೆ ಕುರಿತು ಚರ್ಚಿಸಲಾಗಿದೆ. ಮೂರನೇ ಅಧ್ಯಾಯದಲ್ಲಿ 'ದಲಿತರು ಮತ್ತು ಸಮಾಜ' ಎನ್ನುವ ವಿಷಯವನ್ನು ಕುರಿತು ಚರ್ಚಿಸಲಾಗಿದೆ. ಸಮಾಜದಲ್ಲಿ ದಲಿತರಿಗಿದ್ದ ಸ್ಥಾನಮಾನ, ಸಾಮಾಜಿಕ ಮತ್ತು ಧಾರ್ಮಿಕ ಆಂದೋಲನಗಳಾಗಿ ಭಕ್ತಿ ಚಳವಳಿಗಳ ಪಾತ್ರ, ವಚನ ಚಳವಳಿ, ದಾಸ ಪರಂಪರೆ ಮುಂತಾದ ಆಯಾಮಗಳ ಮುಖಾಂತರ ಅಂದಿನ ದಲಿತರ ಸಾಮಾಜಿಕ ಹಿನ್ನೆಲೆ, ಅವುಗಳ ಪರಿಣಾಮ ಕುರಿತು ಚರ್ಚಿಸಲಾಗಿದೆ. ಹಾಗೆಯೇ ದಲಿತ ವಚನಕಾರರ ಆಶಯ ಮತ್ತು ಅಭಿವ್ಯಕ್ತಿಗಳು, ದೇವಾಲಯ ಸಂಸ್ಕೃತಿ ಮತ್ತು ದಲಿತರು, ಲಿಂಗವಂತ ಒಡೆಯರು, ಲಿಂಗವಂತ ದಲಿತರು, ಮತಾಂತರ ಪ್ರಕ್ರಿಯೆಗಳು ಮುಂತಾದ ವಿಷಯಗಳು ದಲಿತರ ಒಟ್ಟು ಚರಿತ್ರೆಯನ್ನು ಅರ್ಥೈಸಲು ಸಹಾಯಕವಾಗುವ ಆಯಾಮಗಳನ್ನು ಇಲ್ಲಿ ಚರ್ಚೆಗೆ ಒಳಪಡಿಸಲಾಗಿದೆ. ವಚನ ಚಳವಳಿಯ ತರುವಾಯ ಸಮಾಜದ ಬಹುತೇಕ ಕೆಳಜಾತಿಗಳು ಮೇಲ್ಜಾತಿಗೆ ಜೋತುಬಿದ್ದವು. ಈ ಚಳವಳಿಯ ಆಶಯ ಮತ್ತು ಉದ್ದೇಶಗಳಿಗನುಗುಣವಾಗಿ ಮುಂದುವರಿಯಲಿಲ್ಲ. ವೀರಶೈವ ಸಮುದಾಯದಲ್ಲಿದ್ದ ಮೇಲ್ಜಾತಿಗಳು ಕೆಳಜಾತಿ ದಲಿತರ ಮೇಲೆ ಪ್ರಹಾರ ನಡೆಸತೊಡಗಿದವು. ಈ ಸಂದರ್ಭದಲ್ಲಿ ಸಿಡಿದೆದ್ದ ಸಮುದಾಯಗಳು ದಲಿತ ಮತ್ತು ಕೆಳಜಾತಿಗಳೇ ಆಗಿವೆ. ಅವುಗಳ ನಾಯಕರನ್ನು ಸಾಂಸ್ಕೃತಿಕ ನಾಯಕರೆಂದು ಗುರುತಿಸಿದ್ದುಂಟು. ಅವರನ್ನು "ಬುಡಕಟ್ಟು ವೀರರು" ಎಂದು ಕರೆಯುವರು. ಬುಡಕಟ್ಟು ವೀರರು ಹುಟ್ಟಲು ಕಾರಣವಾದ ಅಂಶಗಳು ಕಂಡುಕೊಂಡ ಅಂಶಗಳು ಮತ್ತು ಅಂದಿನ ಸಮಾಜದ ಸಂಕೀರ್ಣ ಸ್ಥಿತಿಯನ್ನು ಅರ್ಥೈಸಿಕೊಳ್ಳಲು ಯತ್ನಿಸಲಾಗಿದೆ. ಮಲೆ ಮಾದೇಶ್ವರ, ಮಂಟೇಸ್ವಾಮಿ, ಜುಂಜಪ್ಪ ಮುಂತಾದ ನಾಯಕರು ಅಂದಿನ ಕೆಳಸಮಾಜದ ಪ್ರತಿನಿಧಿಗಳಾಗಿ ಕಾಣಿಸಿಕೊಳ್ಳುತ್ತಾರೆ. ಹಾಗೆಯೇ ಗ್ರಾಮದೈವಗಳು ಕೂಡ ಕೆಳಜಾತಿಗಳೊಂದಿಗೆ ಅವಿನಾಭಾವ ಸಂಬಂಧ ಹೊಂದಿದ್ದವು ಎಂಬುದಕ್ಕೆ ಅನೇಕ ಆಕರಗಳು ಸಿಗುತ್ತವೆ. ಬುಡಕಟ್ಟು ವೀರರು ಮತ್ತು ಗ್ರಾಮ ದೈವಗಳನ್ನು ಚಾರಿತ್ರಿಕ ನೆಲೆಗಟ್ಟಿನಲ್ಲಿ ಅಧ್ಯಯನ ಮಾಡಲು ಯತ್ನಿಸಲಾಗಿದೆ. ಉತ್ತರ ಕರ್ನಾಟಕ, ದಕ್ಷಿಣ ಕರ್ನಾಟಕ, ತುಳುನಾಡು ಮತ್ತು ಕೊಡಗು ಪ್ರದೇಶದಲ್ಲಿ ಈ ಬಗೆಯ ಕಾವ್ಯಗಳು ಹುಟ್ಟಿಕೊಂಡಿದ್ದು ಗಮನಾರ್ಹ. ಮಧ್ಯಕಾಲೀನ ಸಂದರ್ಭದ ಕರ್ನಾಟಕದುದ್ದಕ್ಕೂ ಸಾಮಾಜಿಕ ಬಿಕ್ಕಟ್ಟುಗಳು ತಲೆದೋರಿ ಸಂಕೀರ್ಣವಾಗುತ್ತ ಹೋಗಿದ್ದನ್ನು ಕಾವ್ಯಗಳು ನೀಡುವ ವಿವರಗಳಿಂದ ವ್ಯಕ್ತವಾಗುತ್ತದೆ. ಈ ಮೂಲಕ ಅಂದಿನ ದಲಿತ ಸಮಾಜ ಮತ್ತು ಚರಿತ್ರೆಯನ್ನು ಅರ್ಥೈಸಿಕೊಳ್ಳಲು ಮತ್ತು ಅಧ್ಯಯನ ಮಾಡಲು ಪ್ರಸ್ತುತ ಅಧ್ಯಯನದಲ್ಲಿ ಪ್ರಯತ್ನಿಸಲಾಗಿದೆ.

ನಾಲ್ಕನೇ ಅಧ್ಯಾಯವು 'ದಲಿತರು ಮತ್ತು ಅರ್ಥವ್ಯವಸ್ಥೆ' ಎನ್ನುವ ಶೀರ್ಷಿಕೆಯನ್ನು ಹೊಂದಿದೆ. ಒಂದು ಸಮಾಜದ ಸಮಗ್ರ ಚಿತ್ರಣವನ್ನು ಗ್ರಹಿಸಬೇಕಾದರೆ ಅರ್ಥವ್ಯವಸ್ಥೆಯನ್ನು ಪೂರಕವಾಗಿ ಅಧ್ಯಯನ ಮಾಡಬೇಕಾಗುತ್ತದೆ. ಅದು ರಾಜ್ಯದ ಸ್ಥಿತಿಗತಿಯನ್ನೇ ನಿರ್ಧರಿಸಬಲ್ಲದು. ಕಾಲದಿಂದ ಕಾಲಕ್ಕೆ ಆಗುವಂತಹ ಬದಲಾವಣೆಗಳನ್ನು ಉತ್ಪಾದನಾ ಅಂಗಗಳ ಮುಖಾಂತರ ಮನಗಾಣಬಹುದು. ರೈತರು, ಜನಸಾಮಾನ್ಯರು, ಕಾರ್ಮಿಕರು, ಬುಡಕಟ್ಟು ಸಮುದಾಯಗಳು, ದಲಿತರು ರಾಜ್ಯದ ಅವಿಭಾಜ್ಯ ಅಂಗವಾಗಿದ್ದು ಅವರು ವ್ಯವಸ್ಥೆಯ ಮೇಲೆ ಪರಿಣಾಮ ಬೀರಬಲ್ಲರು. ಗುಲಾಮ ಪದ್ಧತಿ, ತೊತ್ತು ಪದ್ಧತಿ, ದಲಿತರ ಮಾರಾಟ, ಮಲೆನಾಡು ಪ್ರದೇಶ ಮತ್ತು ದಲಿತ ಮಹಿಳೆ, ಕೆನರಾ ಕರಾವಳಿಯಲ್ಲಿ ಪೋರ್ಚುಗೀಸರು, ಕೊಡಗು ಪ್ರದೇಶ, ಗುಲಾಮರ ವೃತ್ತಿ, ಜೀತಗಾರಿಕೆ, ದಲಿತರ ವೃತ್ತಿಗಳು, ತೆರಿಗೆ, ತೆರಿಗೆ ನಿರಾಕರಣೆ ಸಂದರ್ಭಗಳು, ಭೂಮಾಲೀಕರು ಮತ್ತು ದಲಿತರು, ಜಜ್ಮಾನಿ ಪದ್ಧತಿ ಮುಂತಾದ ವಿಚಾರಗಳು ಈ ಅಧ್ಯಾಯದಲ್ಲಿ ಚರ್ಚೆಗೆ ಒಳಪಟ್ಟಿವೆ. ಪ್ರಾಚೀನ ಕಾಲದಿಂದಲೂ ಗುಲಾಮ ಪದ್ಧತಿ ಚಾಲ್ತಿಯಲ್ಲಿತ್ತು ಎನ್ನುವುದಕ್ಕೆ ಚರಿತ್ರೆ ಮತ್ತು ಕನ್ನಡ ಕಾವ್ಯಗಳು ಆಧಾರ ಒದಗಿಸುತ್ತವೆ. ಕರ್ನಾಟಕ ಪ್ರದೇಶದ ವ್ಯಾಪ್ತಿಯಲ್ಲಿ ಗುಲಾಮರು ಮತ್ತು ದಲಿತರನ್ನು ಮಾರುಕಟ್ಟೆಗಳಲ್ಲಿ ಮಾರಾಟ ಮಾಡಿದ ವಿಚಾರಗಳ ಕುರಿತು ಚರ್ಚಿಸಲು ಯತ್ನಿಸಲಾಗಿದೆ. ಇಂದಿಗೂ ಕೂಡ ಜನರನ್ನು ಮಾರಾಟ ಮಾಡುವ ಪ್ರವೃತ್ತಿ ಬದಲಾಗಿಲ್ಲವೆಂಬುದಕ್ಕೆ ಇತ್ತೀಚೆಗೆ ನಡೆದ ಪ್ರಕರಣಗಳು ಸಾಕ್ಷಿಯಾಗಿವೆ. ಮಧ್ಯಕಾಲೀನ ಸಂದರ್ಭದಲ್ಲಿ ಮಧ್ಯವರ್ತಿಗಳು ಮತ್ತು ಭೂಒಡೆಯರು ಹುಟ್ಟಿಕೊಂಡಿದ್ದರಿಂದ ಕೃಷಿ ಉತ್ಪಾದನೆಯಲ್ಲಿ ಉತ್ಪಾದನಾ ಅಂಗಗಳ ಅವಶ್ಯಕತೆ ಮತ್ತಷ್ಟು ಹೆಚ್ಚಾಯಿತು. ದಲಿತ ವರ್ಗಗಳು ಈ ಉತ್ಪಾದನಾ ಅಂಗಗಳಲ್ಲಿ ಪ್ರಮುಖವಾದವು. ಗುಲಾಮ ಪದ್ಧತಿ ಜೀತಗಾರಿಕೆ ರೂಪಕ್ಕೆ ಬದಲಾವಣೆಗೊಳ್ಳಲು ಅನುವಾಯಿತು. ಕೂಲಿಕಾರ್ಮಿಕರಾಗಿ ಜೀವನದ ನಿರ್ವಹಣೆ ಹಾಗೂ ರಾಜ್ಯಕ್ಕೆ ಸಲ್ಲಿಸುತ್ತಿದ್ದ ವಿವಿಧ ತೆರಿಗೆಗಳನ್ನು ಕುರಿತು ಚರ್ಚಿಸಲಾಗಿದೆ. 'ಬಿಟ್ಟಿ' ಅವುಗಳಲ್ಲಿ ಒಂದು. ಅನೇಕ ವಿದೇಶಿ ಪ್ರವಾಸಿಗರ ಬರವಣಿಗೆಗಳನ್ನು ಬಳಸಿಕೊಂಡು ಅಂದಿನ ಆರ್ಥಿಕ ಪರಿಸ್ಥಿತಿ ಕೆಳಜಾತಿ ಮತ್ತು ದಲಿತ ಜನಾಂಗಗಳ ಮೇಲೆ ಹೇಗೆ ಪರಿಣಾಮ ಬೀರುತ್ತಿತ್ತು ಎಂಬುದನ್ನು ಚರ್ಚಿಸಲು ಯತ್ನಿಸಲಾಗಿದೆ. ಕರಾವಳಿ ಕರ್ನಾಟಕ, ಮಲೆನಾಡು ಪ್ರದೇಶಗಳು ಮತ್ತು ಕೊಡಗಿನ ಭಾಗದಲ್ಲಿ ಈ ಬಗೆಯ ಪ್ರಕ್ರಿಯೆಗಳು ಹೆಚ್ಚಾಗಿ ಕಾಣಿಸಿಕೊಳ್ಳುತ್ತವೆ. ಅವುಗಳನ್ನು ವಿವಿಧ ವಿದ್ವಾಂಸರ ಬರವಣಿಗೆಗಳ ನೆರವಿನಿಂದ ಚರ್ಚಿಸಲಾಗಿದೆ. ಕರಕುಶಲಕರ್ಮಿಗಳು ಹಾಗೂ ಬಾರಾಬಲೂತಿ ಪದ್ಧತಿ ಇಂದಿಗೂ ಗ್ರಾಮೀಣ ಪ್ರದೇಶದಲ್ಲಿ ಜೀವಂತವಾಗಿದೆ. ಇಂತಹ ಹಲವಾರು ವಿಚಾರಗಳನ್ನು ಚರ್ಚಿಸುತ್ತ ಅಂದಿನ ಸಮಾಜದ ದಲಿತರ ಆರ್ಥಿಕ ಪರಿಸ್ಥಿತಿಯ ಬಗ್ಗೆ ಅಧ್ಯಯನ ಮಾಡಲು ಯತ್ನಿಸಲಾಗಿದೆ.

ಐದನೇ ಅಧ್ಯಾಯದಲ್ಲಿ 'ದಲಿತರು ಮತ್ತು ರಾಜ್ಯವ್ಯವಸ್ಥೆ' ಎಂಬ ವಿಷಯ ಕುರಿತು ಚರ್ಚಿಸಲಾಗಿದೆ. ಸಾಮಾಜಿಕ ಮತ್ತು ಆರ್ಥಿಕ ವಿಚಾರದಲ್ಲಿ ಕೆಳಜಾತಿ / ಸಮುದಾಯಗಳನ್ನು ಬಲಿಷ್ಠ ವರ್ಗಗಳು ನಡೆಸಿಕೊಂಡಿರುವ ಮಾದರಿಗಳಿಗಿಂತ ಭಿನ್ನವಾಗಿ ಈ ಅಧ್ಯಾಯದಲ್ಲಿ ಅಭ್ಯಸಿಸಲಾಗಿದೆ. ಸಮಾಜ ಅಥವಾ ರಾಜ್ಯದ ರಕ್ಷಣೆಯ ವಿಚಾರವನ್ನು ಕುರಿತು ಮಾತನಾಡುವಾಗ ಜನಸಾಮಾನ್ಯರು, ಬುಡಕಟ್ಟು ನಾಯಕರು, ದಲಿತ ವರ್ಗದವರನ್ನು ಕೇಂದ್ರವಾಗಿಟ್ಟುಕೊಂಡು ಅವರು ವ್ಯವಸ್ಥೆಯ ಭಾಗವಾಗಿ ಹೋರಾಡಿದ ಹಾಗೂ ಪ್ರಾಣತ್ಯಾಗವನ್ನು ಮಾಡಿದ ವಿವರಗಳು ದಾಖಲಿಸಲಾಗಿದೆ.

ಈ ಬಗೆಯ ವಿಚಾರಗಳು ಮಧ್ಯಕಾಲೀನ ಕಾಲಘಟ್ಟದುದ್ದಕ್ಕೂ ಕಾಣಬರುತ್ತವೆ. *ವೀರಗಲ್ಲು, ಮಾಸ್ತಿಕಲ್ಲು, ಗರುಡ ಪದ್ಧತಿ, ಪೆಣ್ಬುಯಲ್*, ಸತಿ ಪದ್ಧತಿಗಳಲ್ಲಿನ ವಿವಿಧ ಆಯಾಮಗಳು ದಲಿತ ಕೇಂದ್ರಿತ ದೃಷ್ಟಿಕೋನದಿಂದ ಅಧ್ಯಯನ ಮಾಡಲು ಈ ಬಗೆಯ ಆಕರಗಳು/ಘಟನೆಗಳು ಸಹಾಯಕವಾಗಿವೆ. ಮಧ್ಯಕಾಲೀನ ಸಮಾಜದ ಸಾಮಾಜಿಕ ಸಂಘರ್ಷಗಳು ದಿನದಿಂದ ದಿನಕ್ಕೆ ಜಟಿಲವಾಗುತ್ತಿರುವ ಸಂದರ್ಭದಲ್ಲಿ ಅಧಿಕಾರಸ್ಥ ಸಮುದಾಯಗಳು ರಾಜ್ಯದ ರಕ್ಷಣೆಗೆ ಶೂದ್ರ ಮತ್ತು ದಲಿತ ಸಮುದಾಯಗಳನ್ನು ಬಳಸಿಕೊಂಡವು. ಈ ವಿಚಾರಗಳನ್ನು ಇಲ್ಲಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಸೈನ್ಯದ ಸೇವೆ, ತಳವಾರಿಕೆ ವಿಚಾರಗಳ ಕುರಿತು ಚರ್ಚಿಸುವುದರಿಂದ ದಲಿತರಿಗೂ ಮತ್ತು ರಾಜ್ಯಕ್ಕೂ ಆಡಳಿತಾತ್ಮಕ ಸಂಬಂಧಗಳ ಅವಿನಾಭಾವ ಸಂಬಂಧವಿದೆ ಎಂದು ಸಾಬೀತುಪಡಿಸುತ್ತದೆ. ಆದರೆ ಎಷ್ಟೋ ವೀರಗಲ್ಲುಗಳಲ್ಲಿ ಹೋರಾಡಿದವರ ಹೆಸರುಗಳೇ ಇಲ್ಲ. ಅಂತಹ ಸಂದರ್ಭದಲ್ಲಿ ಶಿಲ್ಪ ಅಧ್ಯಯನದ ಆಕರಗಳು ನೆರವಿಗೆ ಬರುತ್ತದೆ. ಕರ್ನಾಟಕ ಚರಿತ್ರೆಯ ಮಧ್ಯಕಾಲೀನೋತ್ತರ ಆಳ್ವಿಕೆಯ ಸಂದರ್ಭದಲ್ಲಿ ಅನೇಕ ಪಾಳೆಯಪಟ್ಟುಗಳು ಆಳ್ವಿಕೆ ನಡೆಸಿವೆ. ಬೇಡ ಸಮುದಾಯಕ್ಕೆ ಸೇರಿದ ಪಾಳೆಯಗಾರರ ಆಳ್ವಿಕೆಯಲ್ಲಿ ದಲಿತರು ರಾಜ್ಯದ ರಕ್ಷಣೆಯ ಪ್ರಮುಖ ಜವಾಬ್ದಾರಿ ವಹಿಸಿಕೊಂಡರು. ಸುರಪುರದ ಸಂಸ್ಥಾನದಲ್ಲಿ ಬೇಡರು, ಮರಾಠಿಯವರು, ಮಾದಿಗರು ಮತ್ತು *ಕೋಟಗಾರರು* ಇದ್ದರು. ದಖನಿಯವರು ಮುಸಲ್ಮಾನರಾದರೆ ಕೋಟಗಾರರು ಹೊಲೆಯ ಜಾತಿಯವರಾಗಿದ್ದರು. ಸುರಪುರದ ಅರಸರು ಇವರನ್ನು ಕೋಟೆಯ ಕಾವಲುಗಾರರನ್ನಾಗಿ ನೇಮಕ ಮಾಡಿಕೊಂಡಿದ್ದರು. ಈ ಬಗ್ಗೆ ಈ ಅಧ್ಯಾಯದಲ್ಲಿ ರಾಜ್ಯದ ಆಡಳಿತ ಕ್ಷೇತ್ರದಲ್ಲಿ ದಲಿತರ ಪಾತ್ರ ಕುರಿತು ವಿವರವಾಗಿ ಚರ್ಚಿಸಲಾಗಿದೆ. ಕೊನೆಯ ಅಧ್ಯಾಯದಲ್ಲಿ ಅಧ್ಯಯನದ ಫಲಿತಗಳನ್ನು ನೀಡಲಾಗಿದೆ.

# ಟಿಪ್ಪಣಿಗಳು

೧. ಆಧುನಿಕ ಭಾರತದ ಚರಿತ್ರೆಯಲ್ಲಿ ದಲಿತ ಎನ್ನುವ ಶಬ್ದ ಅವಿಭಾಜ್ಯ ಅಂಗವಾಗಿರುವುದನ್ನು ನಾವು ಈ ಸಂದರ್ಭದಲ್ಲಿ ಗಮನಿಸಬಹುದು. ವಾಸ್ತವಿಕವಾಗಿ ಈ ಸಮುದಾಯದವರು ಸ್ವತಃ ತಾವು ಅಸ್ಪೃಶ್ಯರು ಎಂದು ಸ್ವಇಚ್ಛೆಯಿಂದ ಗುರುತಿಸಿಕೊಳ್ಳಲಾರರು. ಮೂಲತಃ ವೈದಿಕಶಾಹಿಗಳು ಅಥವಾ ಅವರಿಂದ ಪ್ರೇರಿತರಾದವರು 'ಅಸ್ಪೃಶ್ಯ' ಎಂಬ ಶಬ್ದವನ್ನು ದಲಿತರ ಮೇಲೆ ಹೇರಿದ್ದಾರೆ ಎನ್ನಬಹುದು.

೨. ದೇಸಾಯಿ ಪಿ.ಬಿ., *ವಿಜಯನಗರ ಸಾಮ್ರಾಜ್ಯ*, ೧೯೩೬; ಲಕ್ಷ್ಮಿನಾರಾಯಣ ರಾವ್ ಎನ್. ಮತ್ತು ಪಂಚಮುಖಿ ಆರ್.ಎಸ್., *ಕರ್ನಾಟಕದ ಅರಸು ಮನೆತನಗಳು*, ೧೯೪೬; ಕೃಷ್ಣರಾವ್ ಎಂ.ವಿ., *ಕರ್ನಾಟಕ ಚರಿತ್ರೆ*, ೧೯೫೯; ಸೂರ್ಯನಾಥ್ ಯು. ಕಾಮತ್, *ವಿಜಯನಗರ ಸಾಮ್ರಾಜ್ಯ*, ೧೯೭೩; ನೀಲಕಂಠ ಶಾಸ್ತ್ರಿ ಕೆ.ಎ., *ಎ ಹಿಸ್ಟರಿ ಆಫ್ ಸೌತ್ ಇಂಡಿಯಾ*, ೧೯೮೦; ಗೋಪಾಲ್ ಬಿ.ಆರ್., *ಶ್ರೀ ರಾಮಾನುಜಾಚಾರ್ಯ ಇನ್ ಕರ್ನಾಟಕ*, ೧೯೮೩, ಮುಂತಾದವುಗಳು.

೩. ಮಾರ್ಕ್ಸ್ ವಿಲ್ಕ್ಸ್, *ಹಿಸ್ಟಾರಿಕಲ್ ಸ್ಕೆಚಸ್ ಆಫ್ ಸೌತ್ ಇಂಡಿಯಾ ಇನ್ ಆನ್ ಅಟೆಮ್ಪ್ಟ್ ಟು ಟ್ರೇಸ್ ದಿ ಹಿಸ್ಟರಿ ಆಫ್ ಮೈಸೂರು*, ೧೯೩೦; ಫ್ರಾನ್ಸಿಸ್ ಬುಕಾನನ್, *ಎ ಜರ್ನಿ ಫ್ರಮ್ ಮದ್ರಾಸ್ ಥ್ರೂ ದಿ ಕಂಟ್ರೀಸ್ ಆಫ್ ಮೈಸೂರು ಕೆನರಾ ಆಂಡ್ ಮಲಬಾರ್*, ೧೮೦೭; ರೈಸ್ ಬಿ.ಎಲ್., *ಮೈಸೂರು ಆಂಡ್ ಕೂರ್ಗ್ ಇನ್ಸ್‌ಕ್ರಿಪ್ಷನ್ಸ್*, ೧೯೦೯; ರಾಬರ್ಟ್ ಸಿವೆಲ್, *ಎ ಫರ್‌ಗಾಟನ್ ಎಂಪೈರ್*, ೧೯೦೧; ನಾಗೇಗೌಡ ಎಚ್.ಎಲ್.(ಸಂ), *ಪ್ರವಾಸಿ ಕಂಡ ಇಂಡಿಯಾ ಸಂಪುಟಗಳು*, ೧೯೬೪

೪. ಆಲೂರು ವೆಂಕಟರಾವ್, *ಕರ್ನಾಟಕದ ಗತವೈಭವ*, ೧೯೧೭; ಐಗಳ್ ಎಂ.ಜಿ., *ಚರಿತ್ರೆ ಮತ್ತು ಕಥೆಗಳು*, ೧೯೨೪; ರಾವ್ ಸಿ.ಎಚ್., *ಹಿಸ್ಟರಿ ಆಫ್ ಮೈಸೂರು*, ೧೯೪೩; ಗುಂಡಪ್ಪ ಡಿ.ವಿ., *ವಿಜಯನಗರ ಸ್ಥಾಪನೆ* ೧೯೪೧; ಲಕ್ಷ್ಮಿನಾರಾಯಣ ರಾವ್ ಎನ್., ಪಂಚಮುಖಿ ಆರ್.ಎಸ್., *ಕರ್ನಾಟಕದ ಅರಸು ಮನೆತನಗಳು*, ೧೯೪೬; ದೇಸಾಯಿ ಪಿ.ಬಿ., *ಹಿಸ್ಟರಿ ಆಫ್ ಕರ್ನಾಟಕ*, ೧೯೭೦; ಬಸವರಾಜ ಕೆ.ಆರ್., *ಹಿಸ್ಟರಿ ಆಂಡ್ ಕಲ್ಚರ್ ಆಫ್ ಕರ್ನಾಟಕ*, ೧೯೮೪; ಶ್ರೀನಿವಾಸಮೂರ್ತಿ ಹೆಚ್.ವಿ., ರಾಮಕೃಷ್ಣನ್ ಆರ್., *ಸಮಗ್ರ ಕರ್ನಾಟಕ ಚರಿತ್ರೆ*, ೧೯೯೫; ಸೂರ್ಯನಾಥ್ ಯು. ಕಾಮತ್, *ಎ ಕನ್‌ಸೈಜ್ ಹಿಸ್ಟರಿ ಆಫ್ ಕರ್ನಾಟಕ*, ೨೦೦೧; ಷೇಕ್ ಅಲಿ ಬಿ.(ಸಂ), *ಕರ್ನಾಟಕ ಚರಿತ್ರೆ*, *ಸಂಪುಟಗಳು-೭*, ೧೯೯೭; ಚಿದಾನಂದಮೂರ್ತಿ ಎಂ., *ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ*, ೨೦೦೨; ಕಲಬುರ್ಗಿ ಎಂ.ಎಂ., *ಮಾರ್ಗ-೪*, ೨೦೦೪

೫. ಮಾರ್ಕ್ಸ್‌ವಾದಿ ಚಿಂತನೆಗಳಿಂದ ಪ್ರಭಾವಕ್ಕೊಳಗಾದ ಕೃತಿಗಳಲ್ಲಿ ಪ್ರಮುಖವಾಗಿ ಆರ್.ಎಸ್.ಶರ್ಮ, *ಪ್ರಾಚೀನ ಭಾರತದಲ್ಲಿ ಶೂದ್ರರು*, ೨೦೦೪; ಶಿವಣ್ಣ ಕೆ.ಎಸ್., *ಅಗ್ರೇರಿಯನ್ ಸಿಸ್ಟಂ ಆಫ್ ಕರ್ನಾಟಕ*, ೧೯೮೩; ಐಯ್ಯರ್ ಎಲ್.ಕೆ., *ಮೈಸೂರು ಟ್ರೈಬ್ಸ್ ಆಂಡ್ ಕ್ಯಾಸ್ಟ್ಸ್*, ೧೯೮೮; ಮೋಹನ್‌ಕೃಷ್ಣ ರೈ, *ಪ್ರಭುತ್ವ ಮತ್ತು ಜನತೆ*, ೨೦೦೬;

ಬಸವರಾಜ ಕಲ್ಗುಡಿ, ಅನುಭಾವ: *ಸಾಂಸ್ಕೃತಿಕ ಸಮಸ್ಯೆ ಮತ್ತು ಹುಡುಕಾಟ*, ಮಹಾಸತಿ ಆಚರಣೆ, ೨೦೦೦, ೧೯೮೪; ಅರವಿಂದ ಮಾಲಗತ್ತಿ, *ದಲಿತಯುಗ ಮತ್ತು ಕನ್ನಡ ಸಾಹಿತ್ಯ*, ೧೯೯೯; ಜವರಯ್ಯ ಮ.ನ., ದಲಿತ ವರ್ಗದ ಶರಣರು ಮತ್ತು ಶರಣೆಯರು ಒಂದು ಅಧ್ಯಯನ, ೧೯೯೭; ಸಾಕಿ, ಮೇಕಿಂಗ್ ಹಿಸ್ಟರಿ, ೧೯೯೮.

೬. ಚಿದಾನಂದಮೂರ್ತಿ ಎಂ., *ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ*, ೧೯೮೫; ವಿವಿಧ ಲೇಖಕರು, *ಕನ್ನಡ ಸಾಹಿತ್ಯದಲ್ಲಿ ಅಸ್ಪೃಶ್ಯತೆಯ ಪರಿಕಲ್ಪನೆ*, ೧೯೯೩; ಹಿರೇಮಠ ಎಸ್.ಎಸ್., *ದಲಿತ ಸಂಸ್ಕೃತಿ*, ೨೦೦೦

೭. ಕಲಬುರ್ಗಿ ಎಂ.ಎಂ., *ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ*, ೧೯೯೦; ನರಸಿಂಹಾಚಾರ್ ಡಿ.ಎಲ್.(ಸಂ), *ಶಿವಕೋಟ್ಯಾಚಾರ್ಯ ವಿರಚಿತ ವಡ್ಡಾರಾಧನೆ*, ೧೯೯೮; ಕುಲಕರ್ಣಿ ಬಿ.ಎಸ್.(ಸಂ), *ಸಮಯ ಪರೀಕ್ಷೆ*, ೧೯೫೮; ನಾರಾಯಣಶಾಸ್ತ್ರಿ ಹ.ವೆ., *ಕರ್ನಾಟಕ ಕಾದಂಬರಿ*, ೧೯೭೭; ಕಲಬುರ್ಗಿ ಎಂ.ಎಂ.(ಸಂ), *ಬಸವಣ್ಣನವರ ವಚನ ಸಂಪುಟ*, ೧೯೯೩; ಕಲಬುರ್ಗಿ ಎಂ.ಎಂ.(ಸಂ), *ಹರಿಹರನ ರಗಳೆಗಳು*, ೧೯೯೯; ತಳವಾರ ಎನ್.ಎಂ., *ನಂಜುಂಡ ಕವಿಯ ರಾಮನಾಥ ಚರಿತೆ*, ೨೦೦೨

೮. ಪರಮಶಿವಯ್ಯ ಜೀ.ಶಂ., *ಕರ್ನಾಟಕದ ಜನಪದ ಕಾವ್ಯ ಸಂಪ್ರದಾಯಗಳು*, ೧೯೭೯; ಲಕ್ಕಪ್ಪಗೌಡ ಎಚ್.ಜೆ.(ಸಂ), *ಕರ್ನಾಟಕದ ಬುಡಕಟ್ಟುಗಳು*, ೧೯೯೮; ವಿವೇಕ ರೈ ಬಿ.ಎ., *ತುಳು ಜನಪದ ಸಾಹಿತ್ಯ*, ೧೯೮೫; ಶಂಕರನಾರಾಯಣ ತೀ.ನಂ., *ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು*, ೧೯೮೨; ಬೋರಲಿಂಗಯ್ಯ ಹಿ.ಚಿ.(ಸಂ), *ಮಂಟೇಸ್ವಾಮಿ ಮಹಾಕಾವ್ಯ*, ೧೯೯೭; ಕೇಶವನ್ ಪ್ರಸಾದ್ ಕೆ.(ಸಂ), *ಮಲೆ ಮಾದೇಶ್ವರ ಮಹಾಕಾವ್ಯ*, ೧೯೯೭; ಮೊಗಳ್ಳಿ ಗಣೇಶ್, *ಮೌಖಿಕ ಕಥನ*, ೨೦೦೬; ವೆಂಕಟೇಶ್ ಇಂದ್ವಾಡಿ(ಸಂ), *ಗೋಣೆ ಬಸಪ್ಪನ ಕಾವ್ಯ*, ೨೦೦೬ ಮುಂತಾದ ಕೃತಿಗಳು.

೯. ಸಿದ್ಧಲಿಂಗಯ್ಯ, *ಗ್ರಾಮ ದೇವತೆಗಳು*, ೧೯೯೭; ಬೋರಲಿಂಗಯ್ಯ ಹಿ.ಚಿ., *ಉಜ್ಜನಿ ಚೌಡಮ್ಮ*, ೧೯೮೦; ಮಂಜುನಾಥ ಬೇವಿನಕಟ್ಟಿ, *ಮಾತಂಗಿ*, ೧೯೯೬

೧೦. *ಕನ್ನಡ ವಿಶ್ವಕೋಶ*, ಮೈಸೂರು ವಿಶ್ವವಿದ್ಯಾನಿಲಯ, ೧೯೮೨; *ವಿಷಯ ವಿಶ್ವಕೋಶ*, ಮೈಸೂರು ವಿಶ್ವವಿದ್ಯಾನಿಲಯ, ೨೦೦೬; ಸೂರ್ಯನಾಥ್ ಯು. ಕಾಮತ್(ಸಂ), *ಕರ್ನಾಟಕ ರಾಜ್ಯ ಗ್ಯಾಝೆಟಿಯರ್*, ೧೯೯೨; ವೆಂಕಟ ರಂಗೋ ಕಟ್ಟಿ (ಭಾಷಾ), *ಮುಂಬೈ ಕರ್ನಾಟಕ ಗ್ಯಾಝೆಟಿಯರ್*, ೧೮೮೩; ಹಯವದನರಾವ್ ಸಿ.(ಸಂ), *ಮೈಸೂರು ಗ್ಯಾಝೆಟಿಯರ್*, ೧೯೮೪; ನಾಗರಾಜ ಎಂ.ಜಿ., ಕೃಷ್ಣಮೂರ್ತಿ ಪಿ.ವಿ.(ಸಂ), *ಇತಿಹಾಸ ದರ್ಶನ*, ೧೯೯೯, ಮುಂತಾದವುಗಳು.

೧೧. ಕಾಲಾಧಾರಿತ ಹಂತಗಳನ್ನು ಹಿಂದೂ, ಮುಸ್ಲಿಂ, ಬ್ರಿಟಿಷ್ ಎಂದು ಸಾಮ್ರಾಜ್ಯಶಾಹಿ ಹಾಗೂ ರಾಷ್ಟ್ರೀಯವಾದಿ ಚರಿತ್ರೆಕಾರರು ಗುರುತಿಸಿದ್ದಾರೆ. ಆದರೆ ಈ ಬಗೆಯ ವಿಂಗಡಣೆ ಇತ್ತೀಚಿನ ಚರಿತ್ರೆಕಾರರಿಂದ ಟೀಕೆಗೆ ಒಳಗಾಯಿತು. ೧೯೬೭ರಲ್ಲಿ ನಡೆದ ನಡೆದ ಭಾರತೀಯ ಇತಿಹಾಸ ಕಾಂಗ್ರೆಸ್ ಅಧಿವೇಶನದಲ್ಲಿ 'ದಿ ಮಿಡಿವಲ್ ಫ್ಯಾಕ್ಟರ್ ಇನ್ ಇಂಡಿಯನ್ ಹಿಸ್ಟರಿ' ಎನ್ನುವ ವಿಷಯವನ್ನು ಕುರಿತು ಮಾತನಾಡುವಾಗ ನಿರಂಜನ್‌ರೇ ಅವರು 'ಮಿಡಿವಲಿಸಂ' ಎಂಬುದನ್ನು ಮೂರು ಹಂತಗಳಲ್ಲಿ ಗುರುತಿಸುತ್ತಾರೆ. ಕ್ರಿ.ಶ. ೭ನೇ ಶತಮಾನದಿಂದ ೧೨ನೇ ಶತಮಾನದವರೆಗೆ ಪ್ರಥಮ ಹಂತ(ಹರ್ಷನ ಸಾಮ್ರಾಜ್ಯದ ಪತನದಿಂದ ದೆಹಲಿ ಸುಲ್ತಾನರ ಆರಂಭ ಕಾಲದವರೆಗೆ)ವೆಂದು ಗುರುತಿಸುತ್ತಾರೆ. ೧೨ನೇ ಶತಮಾನದಿಂದ ಕ್ರಿ.ಶ. ೧೫೨೫ರವರೆಗೆ ದ್ವಿತೀಯ ಹಂತ (ಮುಸ್ಲಿಂ ದೊರೆಗಳ ಸ್ಥಾಪನೆಯಿಂದ ಮೊಘಲ್ ಸಾಮ್ರಾಜ್ಯ ಉದಯದವರೆಗೆ)ವೆಂದು, ೧೬ನೇ ಶತಮಾನದ ಪ್ರಥಮಾರ್ಧದಿಂದ ೧೮ನೇ ಶತಮಾನದವರೆಗೆ ತೃತೀಯ ಹಂತ(ಮೊಘಲ ಸಾಮ್ರಾಜ್ಯದ ಉದಯದಿಂದ ಬ್ರಿಟಿಷ್ ಸಾಮ್ರಾಜ್ಯ ಸ್ಥಾಪನೆಯ ಕಾಲದವರೆಗೆ)ವೆಂದು ಗುರುತಿಸುತ್ತಾರೆ.

# ಚಾರಿತ್ರಿಕ ಹಿನ್ನೆಲೆ

ಭಾರತೀಯ ಸಾಮಾಜಿಕ ರಚನೆ ಸಂಕೀರ್ಣ ಸ್ವರೂಪದ್ದು. ಇದರ ಚಾರಿತ್ರಿಕ ವಿವರಗಳನ್ನು ಕುರಿತು ಅರ್ಥೈಸುವುದು ಕಷ್ಟಸಾಧ್ಯ. ಈ ಚಾರಿತ್ರಿಕ ಪ್ರಕ್ರಿಯೆಯು ಅನೇಕ ಶತಮಾನಗಳು ಕಂಡರೂ ಸಮಾಜವು ದಿನದಿಂದ ದಿನಕ್ಕೆ ಜಟಿಲಗೊಳ್ಳುತ್ತಿದೆ. ಪ್ರಾಚೀನ ಸಮಾಜದ ವೈವಿಧ್ಯಮಯವಾದ ಆಯಾಮಗಳನ್ನು ಚರ್ಚಿಸಲು ಮುಂದಾದಾಗ ಪ್ರಾಚೀನ ಸಾಹಿತ್ಯದ ಮೊರೆ ಹೋಗಬೇಕಾಗುತ್ತದೆ. ಅಲ್ಲಿ ಮುಖ್ಯವಾಗಿ ವರ್ಣ ಮತ್ತು ಜಾತಿಗಳು ಪ್ರಮುಖ ಪಾತ್ರ ವಹಿಸಿವೆ. ಇವು ಭಾರತೀಯ ವ್ಯವಸ್ಥೆಯಲ್ಲಿ ಹೆಚ್ಚು ಪ್ರಭಾವ ಬೀರಿದ ಕ್ಷೇತ್ರಗಳೆಂದರೆ ತಪ್ಪಾಗಲಾರದು. ಇಂದಿಗೂ ಕೂಡ ಸಮಾಜದ ಮೇಲೆ ಇವುಗಳು ಒಂದಲ್ಲಾ ಒಂದು ರೀತಿಯಲ್ಲಿ ಪ್ರಭಾವ ಬೀರಿ ಇಡೀ ವ್ಯವಸ್ಥೆಯನ್ನೇ ನಿಯಂತ್ರಿಸುವುದನ್ನು ಗಮನಿಸಬಹುದು. ಸಾಮಾಜಿಕ ಶ್ರೇಣೀಕರಣವು ಕಾಲಕ್ರಮೇಣ ಗಟ್ಟಿಗೊಳ್ಳುತ್ತಾ ಮೇಲು ಕೀಳುಗಳೆಂಬ ಪರಿಕಲ್ಪನೆಗಳು ಉದ್ಭವಿಸಿದವು. ಇದರ ಪರಿಣಾಮವಾಗಿ ವರ್ಣ, ಜಾತಿ, ವರ್ಗ, ಅಸ್ಪೃಶ್ಯತೆಯಂತಹ ಕ್ರೂರ ಪದ್ಧತಿಗಳು ಮುಂದುವರಿಯಲು ಕಾರಣವಾಯಿತು. ಪ್ರಾಚೀನ ಕಾಲದಿಂದಲೂ ಜಾತಿಯು ಸಮಾಜದಲ್ಲಿ ಮುಖ್ಯ ಪಾತ್ರ ವಹಿಸುತ್ತಿತ್ತು. ಇದಕ್ಕೆ ಚರಿತ್ರೆಯಲ್ಲಿ ದೊರಕುವ ವಿವರಗಳೇ ಮುಖ್ಯ ಸಾಕ್ಷಿ. ಇದರಿಂದ ಸಮಾಜದ ಬಲಾಢ್ಯ ಜಾತಿಗಳು ಉನ್ನತ ಸ್ಥಾನಮಾನ ದೊರಕಿಸಿಕೊಂಡರೆ ಕೆಳಜಾತಿಗಳು ಜಾತಿಯ ಆರ್ಭಟಕ್ಕೆ ಸಿಕ್ಕಿ ನಲುಗಿ ಹೋದವು. ಇದಕ್ಕೆ ಸುಮಾರು ಎರಡು ಸಾವಿರ ವರ್ಷಗಳ ಚರಿತ್ರೆಯಿದೆ. ಜಾತಿಯು ಸಮಾಜದಲ್ಲಿ ನಿರ್ಣಾಯಕ ಪಾತ್ರ ವಹಿಸುವುದರ ಜೊತೆಗೆ ಸ್ಥಾನಮಾನಗಳನ್ನು ಹಾಗೆಯೇ ಮುಂದುವರಿಸಲು ಸಹಾಯಕವಾಯಿತು. ಉಚ್ಚ-ನೀಚ ಎಂಬ ಪರಿಕಲ್ಪನೆಗಳು ಗಟ್ಟಿಯಾಗಿ ಮುಂದುವರಿಯಲು ಅನುವಾಯಿತು. ಮುಂದುವರಿದು ಗುಲಾಮ ಪದ್ಧತಿ, ಅಸ್ಪೃಶ್ಯತೆಯಂತಹ ಕ್ರೂರ ಪದ್ಧತಿಗಳು ಹುಟ್ಟಿಕೊಳ್ಳಲು ಕಾರಣವಾಯಿತು. ಈ ಬಗೆಯ ಪ್ರಕ್ರಿಯೆಗಳನ್ನು ಭಾರತದಾದ್ಯಂತ ಕಾಣಬಹುದು. ಇದಕ್ಕೆ ಕರ್ನಾಟಕವು ಹೊರತಾಗಿರಲಿಲ್ಲ. ಈ ಹಿನ್ನೆಲೆಯಲ್ಲಿ ವರ್ಣ ಮತ್ತು ಜಾತಿ ಪರಿಕಲ್ಪನೆಗಳನ್ನು ಕುರಿತು ಅರ್ಥಮಾಡಿಕೊಳ್ಳಲು ಇಲ್ಲಿ ಯತ್ನಿಸಲಾಗಿದೆ.

ಕರ್ನಾಟಕದ ಚರಿತ್ರೆಯು ಕೂಡ ಮೇಲಿನ ವಿವರಣೆಯಿಂದ ಹೊರತಾಗಿಲ್ಲ. ಅಸ್ಪೃಶ್ಯತೆ ದಲಿತ ವಿಚಾರಗಳು ಇಡೀ ನಾಡಿನಾದ್ಯಂತ ಗತಕಾಲದಿಂದಲೂ ಪ್ರಭಾವ ಬೀರಿವೆ. ಇವು ಇಂದಿಗೂ ಕೂಡ ಆವರಿಸಿಕೊಂಡಿದೆ. ಪ್ರಾಚೀನ ಕಾಲದಲ್ಲಿ ಉಂಟಾದ ವರ್ಣ ಮತ್ತು ಜಾತಿ ಸಂಕರಗಳಿಂದ ಹಲವು ಬಗೆಯ ಸಮಸ್ಯೆಗಳು ಕಾಣಿಸಿಕೊಂಡವು. ಕಾರಣ, ಜಾತಿ ಮತ್ತು ಉಪಜಾತಿಗಳಾಗಿ ಪರಿವರ್ತನೆ ಹೊಂದಿದವು. ಈ ಅವಧಿಯಲ್ಲಿ ವಿವಿಧ ವರ್ಣ, ಜಾತಿ, ಬುಡಕಟ್ಟುಗಳು ಪ್ರಮುಖ ಪಾತ್ರ ವಹಿಸಿವೆ. ಈ ಹಿನ್ನೆಲೆಯಲ್ಲಿ ಅಸ್ಪೃಶ್ಯತೆಯ ವಿಚಾರವನ್ನು ಅರ್ಥ

ಮಾಡಿಕೊಳ್ಳಲು ವೈದಿಕ ಸಾಹಿತ್ಯದ ಮೊರೆ ಹೋಗಬೇಕಾಗುತ್ತದೆ. ವೈದಿಕ ಪರಂಪರೆಗಳು, ವರ್ಣ ಮತ್ತು ಜಾತಿ, ವರ್ಣ ಸಂಕಲ, ಬೌದ್ಧ ಮತ್ತು ಜೈನ ಪರಂಪರೆಗಳು, ಹದಿನೆಂಟು ಜಾತಿಗಳು, ಕರ್ನಾಟಕದ ಕೆಲವು ಅಸ್ಪೃಶ್ಯ ಜಾತಿಗಳು, ಅಸ್ಪೃಶ್ಯತೆ ಮತ್ತು ದಲಿತ ಹಾಗೂ ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ ಕುರಿತು ಪ್ರಸ್ತುತ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಇವೆಲ್ಲ ಹಿನ್ನೆಲೆಗಳ ಆಧಾರದ ಮೇಲೆ ಈ ಅಧ್ಯಾಯವನ್ನು ರೂಪಿಸಲು ಈ ಕೆಳಕಂಡ ಕೃತಿಗಳ ಸಹಾಯವನ್ನು ಪಡೆದುಕೊಂಡಿದ್ದೇನೆ.

ಅಸ್ಪೃಶ್ಯತೆಯ ವಿಚಾರವನ್ನು ಕುರಿತು ಅಖಿಲ ಭಾರತ ಮಟ್ಟದಲ್ಲಿ ಅಧ್ಯಯನಗಳು ನಡೆದಿವೆ. ಪ್ರಸ್ತುತ ವಿಚಾರವು ಜಾತಿ ಮತ್ತು ಬುಡಕಟ್ಟುಗಳು ಸೇರಿದಂತೆ ನಡೆಸಿರುವ ಅಧ್ಯಯನಗಳಲ್ಲಿ ವಿಶ್ಲೇಷಣೆಗೊಂಡಿವೆ. ಇವೆರಡು ವಿಷಯಗಳು ಒಂದಕ್ಕೊಂದು ಪೂರಕ, ಮತ್ತು ಸಂಬಂಧವುಳ್ಳವುಗಳಾಗಿದ್ದರಿಂದ ಪ್ರತ್ಯೇಕಿಸಿ ನೋಡುವುದು ಕಷ್ಟಸಾಧ್ಯ. ಡಾ.ಬಿ.ಆರ್.ಅಂಬೇಡ್ಕರ್ ಅವರ *ಅಸ್ಪೃಶ್ಯರು* (೧೯೭೩), *ಡಾ.ಬಾಬಾಸಾಹೇಬ್ ಅಂಬೇಡ್ಕರ್ ಬರಹಗಳು ಮತ್ತು ಭಾಷಣಗಳು*, ಸಂಪುಟ-೫ (೧೯೯೭), ಈ ಜಾತಿ ಮತ್ತು ವರ್ಣಕ್ಕೆ ಸಂಬಂಧಿಸಿದ ವಿಚಾರವನ್ನು ಕುರಿತು ಸಮಗ್ರವಾಗಿ ಚರ್ಚಿಸುತ್ತವೆ. ಆರ್.ಎಸ್.ಶರ್ಮ ಅವರ *ಪ್ರಾಚೀನ ಭಾರತದಲ್ಲಿ ಶೂದ್ರರು* (೨೦೦೨) ಕೃತಿಯು ಪ್ರಾಚೀನ ಭಾರತದ ಶೂದ್ರ ಮತ್ತು ಅಸ್ಪೃಶ್ಯರ ಕುರಿತು ವಿಶ್ಲೇಷಣೆಗೆ ಒಳಪಟ್ಟಿದೆ. ಜಿ.ಎಸ್.ಘುರ್ಯೆ ಅವರ *ಕ್ಯಾಸ್ಟ್ ಆಂಡ್ ರೇಸ್ ಇನ್ ಇಂಡಿಯಾ* (೧೯೯೦), ಪಿ.ವಿ. ಕಾಣೆ ಅವರ *ಧರ್ಮಶಾಸ್ತ್ರದ ಇತಿಹಾಸ*, ಸಂಪುಟ-೧-೨ (೨೦೦೩), ಲೂಯಿಸ್ ಡ್ಯೂಮಾಂಟ್ ಅವರ *ಹೋಮೋ ಹೈರಾರ್ಕೀಸ್* (೧೯೭೦) ಮುಂತಾದ ಕೃತಿಗಳು ಈ ವಿಷಯದ ಮೇಲೆ ಒಳನೋಟಗಳನ್ನು ಬೀರುತ್ತವೆ. ಎಡ್ಗರ್ ಥರ್‍ಸ್ಟನ್ ಮತ್ತು ಕೆ.ರಂಗಾಚಾರಿ ಅವರ *ಕಾಸ್ಟ್ಸ್ ಅಂಡ್ ಟ್ರೈಬ್ಸ್ ಆಫ್ ಸದರನ್ ಇಂಡಿಯಾ* (೧೯೮೯), ಎಲ್.ಕೆ.ಅನಂತಕೃಷ್ಣ ಅಯ್ಯರ್ ಮತ್ತು ಹೆಚ್.ವಿ. ನಂಜುಂಡಯ್ಯ ಅವರ *ಮೈಸೂರು ಕ್ಯಾಸ್ಟ್ಸ್ ಆಂಡ್ ಟ್ರೈಬ್ಸ್* (೧೯೮೮), ಸೈಯದ್ ಸಿರಾಜ್ ಉಲ್ ಹಾಸನ್ ಅವರ *ಕ್ಯಾಸ್ಟ್ಸ್ ಆಂಡ್ ಟ್ರೈಬ್ಸ್ ಆಫ್ ಹೆಚ್.ಇ.ಹೆಚ್. ನಿಜಾಮಸ್ ಡಾಮಿನಿಯನ್ಸ್* (೧೯೮೯), ಕೆ.ಎಸ್.ಸಿಂಗ್ ಅವರ *ದಿ ಷೆಡ್ಯೂಲ್ಡ್ ಕ್ಯಾಸ್ಟ್ಸ್* (೧೯೯೩), ಕೆ.ಎಸ್.ಸಿಂಗ್ ಸಂಪಾದಕತ್ವದಲ್ಲಿ *ಪೀಪಲ್ ಆಫ್ ಇಂಡಿಯಾ ಕರ್ನಾಟಕ ಭಾಗ-೧,೨* (೨೦೦೩) ಮುಂತಾದವು ಜಾತಿ ಮತ್ತು ಬುಡಕಟ್ಟುಗಳನ್ನು ಕುರಿತು ಹೇಳುವಾಗ ದಲಿತರ ಚಾರಿತ್ರಿಕ ಹಿನ್ನೆಲೆಗಳನ್ನು ಒದಗಿಸುತ್ತವೆ. ಆಲಿವರ್ ಮಂಡಲ್‌ಸನ್ ಮತ್ತು ಮಾರಿಕಾ ವಿಜನಿ ಅವರ *ದಿ ಅನ್‌ಟಚಬಲ್ಸ್* (೨೦೦೦), ಲತಾ ಮುರಗಕರ್ ಅವರ *ದಲಿತ್ ಪ್ಯಾಂಥರ್ ಮೂವ್‌ಮೆಂಟ್ ಇನ್ ಮಹಾರಾಷ್ಟ್ರ* (೧೯೯೧) ಮತ್ತು ಗೇಲ್ ಒಮ್ವೆವಿಟ್ ಅವರ *ದಲಿತ್ ವಿಜನ್* (೧೯೯೫), ಎಂಬ ಕೃತಿಗಳನ್ನು ಈ ಅಧ್ಯಾಯದಲ್ಲಿ ಬಳಸಿಕೊಳ್ಳಲಾಗಿದೆ.

ಎಂ.ಚಿದಾನಂದಮೂರ್ತಿ ಅವರ *ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ* (೧೯೮೫), ಅರವಿಂದ ಮಾಲಗತ್ತಿ ಅವರ *ದಲಿತ ಯುಗ ಮತ್ತು ಕನ್ನಡ ಸಾಹಿತ್ಯ* (೧೯೯೦), ಮ.ನ.ಜವರಯ್ಯ ಅವರ *ದಲಿತ ವರ್ಗದ ಶರಣರು ಮತ್ತು ಶರಣೆಯರು* (೧೯೯೭), ಎಸ್.ಎಸ್.ಹಿರೇಮಠ ಅವರ *ದಲಿತ ಸಂಸ್ಕೃತಿ* (೨೦೦೧) ಪ್ರಮುಖವಾದವುಗಳು. ಇದರ ಜೊತೆಗೆ ಧರ್ಮದ ಹಿನ್ನೆಲೆಯಲ್ಲಿ ವರ್ಣಕ್ಕೆ ಸಂಬಂಧಿಸಿದ ಕಲ್ಪನೆಗಳನ್ನು ಅರ್ಥ

ಮಾಡಿಕೊಳ್ಳಲು ರಾಜಾರಾಮ ಹೆಗಡೆ ಅವರ *ಲೌಕಿಕ-ಅಲೌಕಿಕ* (೨೦೦೧), ತಾಳ್ತಜೆ ವಸಂತ ಕುಮಾರ್ ಅವರ *ಕರ್ನಾಟಕದಲ್ಲಿ ಬೌದ್ಧ ಧರ್ಮ* (೧೯೮೮) ಮತ್ತು ಲಕ್ಷ್ಮಣ್ ತೆಲಗಾವಿ ಅವರ *ಹಿಂದುಳಿದ ವರ್ಗಗಳ ಮತ್ತು ದಲಿತ ಚಳವಳಿಗಳು* (೧೯೯೭) ಮುಂತಾದ ಕೃತಿಗಳ ನೆರವನ್ನು ಪಡೆಯಲಾಗಿದೆ. ಇದರ ಜೊತೆಗೆ ಶಾಸನಗಳು, ಗ್ಯಾಝೆಟಿಯರ್‌ಗಳು, ನಿಘಂಟುಗಳು, ವಿಶ್ವಕೋಶಗಳು ಮುಂತಾದ ಆಕರ ಸಾಮಗ್ರಿಗಳನ್ನು ಪ್ರಸ್ತುತ ಅಧ್ಯಾಯದಲ್ಲಿ ಬಳಸಿಕೊಳ್ಳಲಾಗಿದೆ.

## ೨.೧ ವೈದಿಕ ಸಾಹಿತ್ಯ

ಭಾರತೀಯ ಸಮಾಜದ ಆರಂಭದ ರೂಪುರೇಷೆಗಳನ್ನು ತಿಳಿದುಕೊಳ್ಳಬೇಕಾದರೆ ವೇದಗಳೇ ಮುಖ್ಯ ಆಕರ. ವೈದಿಕ ಸಾಹಿತ್ಯದಲ್ಲಿ ಸಮಾಜವು ಪಾಲನೆ ಮಾಡಬೇಕಾದ ನೀತಿ ನಿಯಮಗಳು, ಕಟ್ಟಳೆಗಳು ಎಲ್ಲವೂ ಸೇರಿಕೊಂಡಿವೆ. ಇಂದು ಜಾತಿ ವರ್ಗವನ್ನು ಕುರಿತು ಚರ್ಚಿಸುವಾಗ ಅದರ ಮೂಲ ಬೇರುಗಳು ವೇದಗಳಲ್ಲಿ ಕಾಣಿಸಿಕೊಳ್ಳುತ್ತವೆ. ಈ ಪರಿಕಲ್ಪನೆಯು ಒಂದೇ ಬಾರಿಗೆ ಅಸ್ತಿತ್ವಕ್ಕೆ ಬಂದಿದ್ದಲ್ಲ. ಕಾಲಕ್ರಮೇಣ ವರ್ಣ, ವೃತ್ತಿಗಳ ಮೂಲದಿಂದ ಜಾತಿ, ಜಾತಿಯ ಶ್ರೇಣೀಕರಣ ಹೀಗೆ ಬದಲಾಗತೊಡಗಿತು. ಆ ಸಂದರ್ಭದಲ್ಲಿ ವಿವಿಧ ಧರ್ಮಶಾಸ್ತ್ರಕಾರರು ಕೂಡ ಸಮಾಜವು ಪಾಲನೆ ಮಾಡಬೇಕಾದ ನಿಯಮಗಳನ್ನು ದಾಖಲಿಸಿದರು. ಇದರ ಪರಿಣಾಮವಾಗಿ ಶ್ರೇಣೀಕರಣ ಗಟ್ಟಿಗೊಳ್ಳುತ್ತಾ ಉಚ್ಚ ನೀಚ ಎಂಬ ಪರಿಕಲ್ಪನೆ ಬೆಳೆಯತೊಡಗಿತು. ಈ ಹಿನ್ನೆಲೆಯಲ್ಲಿ ದಾಸ, ಗುಲಾಮ, ಅಸ್ಪೃಶ್ಯತೆಯಂತಹ ಸಂಗತಿ ಸಮಾಜದಲ್ಲಿ ನಿಧಾನವಾಗಿ ಬೇರೂರಲು ಅನುವಾಯಿತು. ಪ್ರಸ್ತುತ ವಿಷಯಕ್ಕೆ ಸಂಬಂಧಿಸಿದಂತೆ ವೈದಿಕ ಸಾಹಿತ್ಯವು ಯಾವ ಬಗೆಯ ವಿವರಣೆಗಳನ್ನು ನೀಡುತ್ತದೆ ಎಂಬುದನ್ನು ನೋಡಲಾಗಿದೆ.

ಪ್ರಾಚೀನ ವೈದಿಕ ಸಾಹಿತ್ಯದ ರೂಪುರೇಷೆಯು ಕ್ರಿ.ಪೂ.೧೫೦೦ ಸುಮಾರಿಗೆ ರಚಿತವಾದ ಋಗ್ವೇದದಿಂದ ಪ್ರಾರಂಭಗೊಳ್ಳುತ್ತದೆ. ತದನಂತರ ಬ್ರಾಹ್ಮಣಕಗಳು, ಆರಣ್ಯಕಗಳು ಮತ್ತು ಉಪನಿಷತ್‌ಗಳು ಸೇರ್ಪಡೆಯಾಗುತ್ತವೆ. ಬ್ರಾಹ್ಮಣಕಗಳು ಗದ್ಯರೂಪದಲ್ಲಿದ್ದು ವೇದಗಳಲ್ಲಿ ಬರುವ ಯಜ್ಞ ಭಾಗಗಳಿಗೆ ವಿವರಣ ಗ್ರಂಥಗಳಾಗಿವೆ. ಆರಣ್ಯಕಗಳು ಬ್ರಾಹ್ಮಣಕಗಳಿಗೆ ಅನುಬಂಧಗಳಂತಿವೆ. ಇವುಗಳಲ್ಲಿನ ವಿಷಯಗಳು ಗೌಪ್ಯವಾಗಿರಬೇಕೆಂಬ ದೃಷ್ಟಿಯಿಂದ ಇವುಗಳನ್ನು ಅರಣ್ಯಗಳಲ್ಲಿಯೇ ಕಲಿಸುತ್ತಿದ್ದ ಕಾರಣ ಇವುಗಳಿಗೆ ಆರಣ್ಯಕಗಳೆಂಬ ಹೆಸರು ಬಂತು. ಉಪನಿಷತ್‌ಗಳು ವೇದಸಾಹಿತ್ಯದ ಕಡೆಯ ಪ್ರಬಂಧಗಳು. ಇವುಗಳಲ್ಲಿ ಭಾರತೀಯ ತತ್ವಜ್ಞಾನದ ಸಾರವೇ ಅಡಗಿದೆ ಎಂದು ಹೇಳಲಾಗಿದೆ. ವೇದಾಂತಗಳ ಹೆಸರೇ ಸೂಚಿಸುವಂತೆ ವೇದಗಳಿಗೆ ಅಂಗಗಳು. ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ್ಯ, ಕಲ್ಪ ಇವು ಆರು ವೇದಾಂಗಗಳು. ಇವೆಲ್ಲವನ್ನು ಒಟ್ಟುಗೂಡಿಸಿ ವೇದ ಅಥವಾ ವೈದಿಕ ಸಾಹಿತ್ಯ ಎಂದು ಕರೆಯಲಾಗಿದೆ.[೧] ವೈದಿಕ ಸಾಹಿತ್ಯವು ಒಂದೇ ಬಾರಿಗೆ ನಿರ್ಮಾಣವಾದದ್ದಲ್ಲ. ಹಲವು ಶತಮಾನಗಳನ್ನೇ ಕಂಡಿವೆ. ಈ ಅವಧಿಯಲ್ಲಿ ರಚಿತವಾದ ವೈದಿಕ ಗ್ರಂಥಗಳು ಸಾಮಾಜಿಕ ರೂಪುರೇಷೆ ಕುರಿತು ಸಮಗ್ರವಾಗಿ ಚರ್ಚಿಸುತ್ತವೆ.

## ೨.೧.೧ ವರ್ಣ ಮತ್ತು ಜಾತಿ

ಪ್ರಾಚೀನ ಕಾಲದ ವರ್ಣ ಮತ್ತು ಜಾತಿಯನ್ನು ಕುರಿತು ಅರ್ಥೈಸುವುದು ಕಷ್ಟವೇ ಸರಿ. ಏಕೆಂದರೆ ಅದು ತುಂಬಾ ಸಂಕೀರ್ಣವಾದ ವಿಷಯ. ಸಂದರ್ಭಾನುಸಾರ ಬೇರೆ ಬೇರೆ ವರ್ಣಗಳ ಮಿಶ್ರಣದಿಂದ ಹುಟ್ಟಿದವರು ಪ್ರತ್ಯೇಕ ಜಾತಿಗಳಾಗಿ ಮಾರ್ಪಾಡಾದದ್ದು. ಹಾಗೆಯೇ ವರ್ಣಗಳ ಸಂಕರ. ಕ್ರಿ.ಪೂ.೧೫೦೦ರಿಂದ ಕ್ರಿ.ಪೂ.೧೦೦೦ದ ನಡುವೆ ವಾಯುವ್ಯ ಭಾರತದಲ್ಲಿ ವಾಸ ಮಾಡುತ್ತಿದ್ದ ಜನರ ದೈಹಿಕ ಚಹರೆಗಳನ್ನು ಕುರಿತು ಋಗ್ವೇದವು ಕೆಲವು ವಿವರಗಳನ್ನು ತಿಳಿಸುತ್ತದೆ. ಶರೀರ ಛಾಯೆಗೆ ವರ್ಣ ಎಂಬ ಶಬ್ದ ಬಳಸಲಾಗಿದೆ. ಆರ್ಯರು ಗೌರವ ವರ್ಣದವರಾಗಿದ್ದು ಸ್ಥಳೀಯರು ಶ್ಯಾಮವರ್ಣವಿದ್ದಂತೆ ತೋರುತ್ತದೆ. ಸಾಮಾಜಿಕ ಹಂತಗಳನ್ನು ಗುರುತಿಸುವುದಕ್ಕೆ ವರ್ಣವು ಒಂದು ಸೂಚಕವಾಗಿ ಬಳಕೆಯಾಗಿದ್ದರಬಹುದಾದರೂ ಬುಡಕಟ್ಟು ಭೇದಗಳಲ್ಲಿ ಗುರುತಿಸುವಲ್ಲಿ ಬಳಸಿರುವ ಸಾಧ್ಯತೆಯಿದೆ. ಆರ್ಯರು ತಾವು ಗೆದ್ದ ದಾಸರು ಮತ್ತು ದಸ್ಯುಗಳನ್ನು ಗುಲಾಮರು ಹಾಗೂ ಶೂದ್ರರಂತೆ ನೋಡಿಕೊಳ್ಳತೊಡಗಿದರು. ಗೆದ್ದು ಗಳಿಸಿದ ಸಂಪತ್ತಿನಲ್ಲಿ ಸಿಂಹಪಾಲನ್ನು ಬಣಗಳು, ರಾಜರೂ ಮತ್ತು ಪುರೋಹಿತರು ವಶಪಡಿಸಿಕೊಂಡ ಕಾರಣ ಅವರು ಸಾಮಾನ್ಯ ಜನರಿಗಿಂತ ಬಲಿಷ್ಠರಾಗಿ ಬೆಳೆದು ಬಣಗಳ ಒಳಗೆ ಭೇದಗಳು ಹುಟ್ಟಿಕೊಂಡವು.[೨]

ಪ್ರಾಚೀನ ಬುಡಕಟ್ಟುಗಳೆಲ್ಲದರಂತೆ ಋಗ್ವೇದದ ಆರ್ಯರಲ್ಲಿ ಅಂತಸ್ತುಗಳು ಇದ್ದಿರಬಹುದು. ಆದರೆ ಭಿನ್ನ ಸಾಮಾಜಿಕ ವರ್ಗಗಳಿರಲಿಲ್ಲ. ಆದರೂ ಅತಿ ಪ್ರಾಚೀನ ಕಾಲದಲ್ಲಿ ಯೋಧರು, ಪುರೋಹಿತರಲ್ಲದೆ ಹಲವು ರೀತಿಯ ಕೆಲಸ ನಿರ್ವಾಹಕವೂ, ಕುಶಲಕರ್ಮಿಗಳು ಇದ್ದರು. ಚಾತುರ್ವರ್ಣದ ಮೂಲಕಲ್ಪನೆ ಇರುವುದು ಋಗ್ವೇದದ ಹತ್ತನೆ ಮಂಡಲಕ್ಕೆ ನಂತರದಲ್ಲಿ ಸೇರ್ಪಡೆಗೊಂಡ ಪುರುಷ ಸೂಕ್ತದಲ್ಲಿ ಮಾರ್ಕಂಡೇಯ ವಿಲಕ್ಷಣ ಪುರಾಣಗಳಲ್ಲಿ, ಧರ್ಮಶಾಸ್ತ್ರಗಳಲ್ಲಿ ಕಂಡುಬರುತ್ತದೆ.[೩] ಆರಂಭದಲ್ಲಿ ವ್ಯಕ್ತಿಯ ದೈಹಿಕ ಚಹರೆಗಳ ಕುರಿತು ವರ್ಣದಿಂದ ಗುರುತಿಸುವ ಪರಿಪಾಟ ಕಾಲಕ್ರಮೇಣ ಉತ್ತಮ-ಅಧಮ ಎಂಬ ಪರಿಕಲ್ಪನೆ ಬೆಳೆಯಲು ಸಹಕಾರಿಯಾಯಿತು.

ಋಗ್ವೇದದಲ್ಲಿ ಬ್ರಾಹ್ಮಣ, ಕ್ಷತ್ರಿಯ ವರ್ಣಗಳ ಉಲ್ಲೇಖವಿದೆ. ಋಗ್ವೇದಕ್ಕೆ ಬಳಿಕ ಸೇರ್ಪಡೆಯಾಯಿತೆನ್ನಲಾದ ಪುರುಷಸೂಕ್ತದಲ್ಲಿ ವೈಶ್ಯ, ಶೂದ್ರ ವರ್ಣಗಳ ಉಲ್ಲೇಖವಿದೆ. ನಂತರ ಕಾಲದಲ್ಲಿ *ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ* ಇವುಗಳನ್ನು ಸಾಂಪ್ರದಾಯಿಕ ವರ್ಣಗಳೆಂದು ಭಾವಿಸಲಾಯಿತು. ಋಗ್ವೇದದಲ್ಲಿ ವರ್ಣ ಎಂಬ ಪದವು ಬಣ್ಣ ಎಂಬರ್ಥದಲ್ಲಿ *ಆರ್ಯ* ಮತ್ತು *ದಾಸ* ವರ್ಗಗಳನ್ನು ಬೇರ್ಪಡಿಸಿ ಹೇಳುವುದಕ್ಕೆ ಬಳಕೆಯಾಗಿದೆ. ಆರ್ಯರ ವರ್ಣ `ಬಣ್ಣವು ದಸ್ಯು ದಾಸಗಳ ವರ್ಣ ಬಣ್ಣಕ್ಕಿಂತ ಉತ್ಕೃಷ್ಟವೆಂಬ ಸೂಚನೆಗಳು ಅಲ್ಲಿವೆ. ದಾಸ ಅಥವಾ ದಸ್ಯುಗಳು ಅನಾರ್ಯರಾಗಿದ್ದು ಆರ್ಯರು ಸೋಲಿಸಿದ ಮೂಲ ನಿವಾಸಿಗಳಾಗಿರಬಹುದು.[೪]

ಋಗ್ವೇದದಲ್ಲಿ ದಾಸ ಮತ್ತು ದಸ್ಯುಗಳನ್ನು ವೈರಿಗಳೆಂದು ಪರಿಗಣಿಸಲಾಗಿದೆ. ಇದಲ್ಲದೆ ಪಣಿಗಳನ್ನು ಆರ್ಯರ ಶತ್ರುಗಳೆಂದು ವರ್ಣಿಸಲಾಗಿದೆ. ಇವರು ಧನಿಕರಲ್ಲದೆ ಸ್ವಾರ್ಥಿಗಳೂ ಕ್ರೂರಿಗಳೂ ಆಗಿದ್ದರು. ದಾಸರ ಕೋಟೆಗಳಿಂದ ಸುತ್ತುವರೆದಿದ್ದ ನಗರಗಳಲ್ಲಿ ವಾಸಿಸುತ್ತಿದ್ದರೆಂದು, ಕಪ್ಪು ಬಣ್ಣದವರಾಗಿದ್ದರೆಂದು ಬಣ್ಣಿಸಲಾಗಿದೆ.

ದಾಸ ಎಂಬ ಪದ ಕಾಲಾನುಕ್ರಮದಲ್ಲಿ ಗುಲಾಮ ಎಂಬ ಅರ್ಥ ಹೊಂದಿತಾದರೂ ಋಗ್ವೇದ ಕಾಲದಲ್ಲಿ ದಾಸವರ್ಗ ಬಹುಶಃ ಯುದ್ಧದಲ್ಲಿ ಸೆರೆಸಿಕ್ಕ ಜನರಿಗೆ ಅನ್ವಯಿಸುತ್ತಿತ್ತೆನ್ನಬಹುದು. ದಾಸರಿಗಿಂತ ಕೀಳಾದವರೆಂದು ಭಾವಿಸಲ್ಪಟ್ಟವರು ದಸ್ಯುಗಳು. ಇವರನ್ನು *ಅಕರ್ಮನ, ಅಬ್ರಹ್ಮನ್, ಅಯಜ್ವನ್, ಅವ್ರತ, ಅನ್ಯವ್ರತ* ಎಂದರೆ ಆರ್ಯರಂತೆ ಅಗ್ನಿಯ ಉಪಾಸಕರಾಗಿ ಯಜ್ಞಯಾಗಾದಿ ಕರ್ಮಗಳನ್ನು ಮಾಡದೆ ಇರುವ ಅಧಾರ್ಮಿಕರು ಎಂದು ವರ್ಣಿಸಲಾಗಿದೆ.[೫] *ದಸ್* (ವ್ಯರ್ಥ ಅಥವಾ ಹಾಳುಮಾಡು) ಎಂಬ ಧಾತುವಿನಿಂದ ಬಂದ ಪದ-ದಸ್ಯು. ದಾಸರನ್ನು ವೈದಿಕ ಜನರ ಶತ್ರುಗಳೆಂದೂ ಕೆಲವು ಸಂಬಂಧಗಳಲ್ಲಿ ರಾಕ್ಷಸೀ ಪ್ರವೃತ್ತಿಯವರೆಂದೂ ವರ್ಣಿಸಲಾಗಿದೆ. ಆದರೆ ಎಷ್ಟೋ ಮಂತ್ರಗಳು ಅವರನ್ನು ಆರ್ಯರ ಮಾನವ ಶತ್ರುಗಳೆಂದು ಹೇಳಿದೆ. ಅವರು ಕೋಟೆಗಳಿಂದ ಆವೃತವಾದ ಊರುಗಳಲ್ಲಿ ವಾಸಿಸುತ್ತಿದ್ದರು. ಅನೇಕ ಗುಂಪುಗಳಾಗಿ ವಿಂಗಡಿತವಾಗಿದ್ದರು. ದಾಸವರ್ಣದ ಬಗ್ಗೆ ಅನೇಕ ಸಂದರ್ಭಗಳಲ್ಲಿ ಪ್ರಸ್ತಾಪ ಮಾಡಲಾಗಿದೆ. ದಾಸರು ಕಪ್ಪು ಚರ್ಮದವರು, ಮೂಗಿಲ್ಲದವರು, ಚಪ್ಪಟೆ ಮೂಗಿನವರು, ಕೆಟ್ಟ ನಾಲಿಗೆಯವರು ಮುಂತಾದ ವಿಶೇಷಣಗಳು ದಸ್ಯುಗಳನ್ನು ಕುರಿತದ್ದಾಗಿದೆ. ಋಗ್ವೇದದಲ್ಲಿ ದಸ್ಯು ಪದದಷ್ಟು ಹೀನ ಅರ್ಥ ದಾಸ ಪದಕ್ಕೆ ಇಲ್ಲ. ದಾಸ ಎಂಬ ಪದ ಉತ್ತರ ವೈದಿಕ ಸಾಹಿತ್ಯದಲ್ಲಿ ಗುಲಾಮ ಎಂಬ ಪದಕ್ಕೆ ಸಮವಾಗಿ ಕಾಣಬರುವುದು. ಎ.ಸಿ. ದಾಸ ಎಂಬುವವರು ಈ ರೀತಿ ಹೇಳಿದ್ದಾರೆ: "ದಾಸರು ಮತ್ತು ದಸ್ಯುಗಳು ಇಲ್ಲವೆ ಕಾಡು ಜನಗಳಿರಬೇಕು ಇಲ್ಲವೆ ವೇದಗಳ ಕಾಲಕ್ಕೆ ಹೊರತಾದ ಆರ್ಯ ಬುಡಕಟ್ಟಿನ ಜನಾಂಗಗಳಾಗಿರಬೇಕು. ಯುದ್ಧದಲ್ಲಿ ಸೆರೆಯಾಳಾಗಿ ಕೊಂಡೊಯ್ಯಲ್ಪಟ್ಟವರು ಗುಲಾಮರೆಂದು ನಡೆಸಿಕೊಳ್ಳಲ್ಪಟ್ಟು, ಅವರದೇ ಆದ ಶೂದ್ರಜಾತಿಯೆಂಬುದು ಹುಟ್ಟಿಕೊಂಡಿರಬೇಕು.[೬]

ದಾಸ ಎಂಬ ಶಬ್ದ ನಂತರದ ಸಾಹಿತ್ಯದಲ್ಲಿ ತೊತ್ತು ಅಥವಾ ಗುಲಾಮ ಎಂಬ ಅರ್ಥ ಪಡೆದಿದೆ. ಅಂದಮೇಲೆ ಋಗ್ವೇದದ ಕಾಲದಲ್ಲಿ ಆರ್ಯರಿಗೆ ಎದುರಾಗಿ ನಿಂತಂಥ ಈ ದಾಸ ಬುಡಕಟ್ಟಿನ ಜನಾಂಗಗಳು ಕ್ರಮೇಣ ಆರ್ಯರಿಗೆ ಶರಣಾಗತರಾಗಿ ಅವರ ದಾಸರಾಗಿರಬೇಕೆಂಬುದು ವಿದಿತವಾಗುತ್ತದೆ. ಮನುಸ್ಮೃತಿಯಲ್ಲಿ (VII, ೪೧೩) ಶೂದ್ರನು ಬ್ರಾಹ್ಮಣನ ಸೇವೆಗೆಂದೇ ದೇವರಿಂದ ಸೃಷ್ಟಿಸಲ್ಪಟ್ಟವನು ಎಂದು ಹೇಳಲಾಗಿದೆ. ತೃತೀಯ ಸಂಹಿತೆ, ತೈತ್ತರೀಯ ಬ್ರಾಹ್ಮಣಕ ಹಾಗೂ ಇತರೆ ಬ್ರಾಹ್ಮಣಕ ಕೃತಿಗಳಲ್ಲಿ ಕಂಡುಬರುವ ಶೂದ್ರನ ಸ್ಥಾನ ಸ್ಮೃತಿಗಳಲ್ಲಿರುವುದಕ್ಕಿಂತ ಭಿನ್ನವಾಗಿಲ್ಲದುದನ್ನು ನಾವು ಕಾಣುತ್ತೇವೆ. ಆದ್ದರಿಂದ ದಾಸರು ಮತ್ತು ದಸ್ಯುಗಳು ಆರ್ಯರ ಪ್ರಾಬಲ್ಯಕ್ಕೊಳಗಾಗಿ ಕ್ರಮೇಣ ಶೂದ್ರರಾಗಿ ಪರಿವರ್ತಿಸಲ್ಪಟ್ಟರು ಎಂಬ ಅನುಮಾನಕ್ಕೆ ಬರಬಹುದು ಎಂದು ಪಿ.ವಿ.ಕಾಣೆಯವರು ಅಭಿಪ್ರಾಯಪಡುತ್ತಾರೆ.[೭]

ಋಗ್ವೇದದಲ್ಲಿ ಜಾತಿಗಳ ಉಲ್ಲೇಖವಿಲ್ಲವಾದರೂ ಬಡಗಿ, ಚಮ್ಮಾರ, ನಾಯಕ, ವೈದ್ಯ, ಅಕ್ಕಸಾಲಿಗ, ವ್ಯಾಪಾರಿ, ರಥಕಾರ ಮುಂತಾದ ವೃತ್ತಿಕಾರರ ಹೆಸರಿದೆ. ಅವುಗಳಲ್ಲಿ ಯಾವು ಯಾವುವು ಯಾವ ವರ್ಣಕ್ಕೆ ಸೇರಿದ್ದುವೆಂಬುವುದನ್ನು ಹೇಳುವುದು ಅಸಾಧ್ಯ. ಅಥವಾ ಅವು ಒಂದೊಂದು ಪರಸ್ಪರ ಹೊರತಾದ ಗುಂಪುಗಳೇ ಎಂಬುದನ್ನು ಹೇಳುವ ಸ್ಥಿತಿಯಲ್ಲಿಲ್ಲ. ಋಗ್ವೇದದಲ್ಲಿ 'ಜಾತಿ' ಎಂಬ ಶಬ್ದವಿಲ್ಲದಿದ್ದರೂ ನಿರುಕ್ತದಲ್ಲಿದೆ. ಪಾಣಿನಿಯಲ್ಲಿದೆ. ಜಾತಿ ಮತ್ತು ವರ್ಗಗಳ ಬಗೆಗೆ ಪ್ರಾಚೀನ ಕಾಲದಿಂದಲೂ ಭಿನ್ನಾಭಿಪ್ರಾಯ ಮತ್ತು

ಗೊಂದಲಗಳು ಇದ್ದೇ ಇವೆ. ಈಗಾಗಲೇ ಹೇಳಿದಂತೆ ಬಡಗಿ, ಕಮ್ಮಾರ, ರಥಕಾರ ಮುಂತಾದ ವೃತ್ತಿಕಾರ ಗುಂಪುಗಳು ಹೆಸರಿದ್ದರೂ ಅವು ಇಂದಿನ ಅರ್ಥದಲ್ಲಿ 'ಜಾತಿ' ಎಂದು ಕರೆಸಿಕೊಳ್ಳುತ್ತಿವೆ ಎಂಬುದಕ್ಕೆ ಆಧಾರಗಳಿಲ್ಲ. ಮಿಶ್ರಜಾತಿಗಳ ಮಧ್ಯೆ ನಡೆಯುವ ಸಂಬಂಧದಿಂದ ಮತ್ತೆ ಜಾತಿ-ಉಪಜಾತಿಗಳು ಕಾಣಿಸಿಕೊಳ್ಳುತ್ತವೆ. ಹಾಗಾದರೆ ನಂತರ ದಿನಮಾನಗಳಲ್ಲಿ *ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ* ನಿಚ್ಚಳವಾಗಿ ಕಾಣಿಸಿಕೊಳ್ಳುತ್ತವೆ.[೮] ಪ್ರಾರಂಭದಲ್ಲಿ ಶೂದ್ರ ಎನ್ನುವುದು ವರ್ಣವಾಗುವುದರ ಜೊತೆಗೆ, ಜಾತಿ ಆದದ್ದು ಯಾವಾಗ ಎಂಬುದನ್ನು ಹೇಳುವುದು ಕಷ್ಟ. ಇದರ ಪರಿಣಾಮವಾಗಿ ಉಚ್ಚ ನೀಚ ಪರಿಕಲ್ಪನೆಗಳಿಂದ ಮೈಲಿಗೆ ಭಾವನೆ ತಳೆಯಿತು. ಇದರ ರೂಪವೇ ಅಸ್ಪೃಶ್ಯತೆ. ಇದರ ಹುಟ್ಟಿನ ಬಗ್ಗೆ ಸಾಕಷ್ಟು ಭಿನ್ನಾಭಿಪ್ರಾಯಗಳಿವೆ. ಅದರ ಬಗ್ಗೆ ಇಲ್ಲಿ ಚರ್ಚಿಸುವುದಿಲ್ಲ.

'ಅಸ್ಪೃಶ್ಯ' ಎಂದರೆ ಮುಟ್ಟಬಾರದ್ದು ಎಂದರ್ಥ. ಇದು ಆರೋಗ್ಯ ಶಾಸ್ತ್ರದಲ್ಲಿ ಚರ್ಮವ್ಯಾಧಿಗೆ ಸಂಬಂಧಿಸಿದ ಒಂದು ನಿಗಮ. ಅಸ್ಪೃಶ್ಯತೆ ಸರ್ವವ್ಯಾಪಿ, ಅದು ನಮ್ಮ ಶರೀರದಲ್ಲಿಯೂ ಇದೆ. ಕೆಲ ವಿಷಯಗಳಲ್ಲಿ ನಾವು ಅಸ್ಪೃಶ್ಯರೆ. ನಮ್ಮ ಇಂದ್ರಿಯಗಳು ಮಲಿನವಾದಾಗ ಅಸ್ಪೃಶ್ಯವೆನಿಸುತ್ತದೆ. ಅಸ್ಪೃಶ್ಯತೆಯನ್ನು ಧರ್ಮಶಾಸ್ತ್ರದಲ್ಲಿ 'ಸೂತಕ' ಎಂದು ಹೇಳಿದೆ. *ಸೂತಕ* ಐದು ವಿಧ- ಜನನ, ಮರಣ, ರಜಸ್ಸು, ಉಚ್ಚ, ಜಾತಿ ಎಂದು. ಮನೆಯಲ್ಲಿ ಜನನವಾದಾಗ ಅಥವಾ ಸತ್ತಾಗ ಸಂಬಂಧಿಸಿದವರು ಹನ್ನೊಂದು ದಿನ, ಅಸ್ಪೃಶ್ಯರು ರಜಸ್ವಲೆಯಾದ ಸ್ತ್ರೀಯ ಆರುದಿನಗಳವರೆಗೆ ಅಸ್ಪೃಶ್ಯಳು.[೯] ಈ ರೀತಿಯ ನಿರ್ಬಂಧಗಳಿಂದ ಮೈಲಿಗೆಯ ಪರಿಣಾಮ ಅಸ್ಪೃಶ್ಯತೆಯು ಸಮಾಜದಲ್ಲಿ ಗಂಭೀರ ಪರಿಣಾಮಗಳನ್ನು ಉಂಟುಮಾಡಲು ಪ್ರಾರಂಭವಾಯಿತು. ಕಾಲಕ್ರಮೇಣ ಇದನ್ನು ಸಮಾಜದ ಉನ್ನತ ಸ್ತರದಲ್ಲಿದ್ದವರು ಕೆಳಸ್ತರದಲ್ಲಿದ್ದವರಿಗೆ ಅಂಟಿಸಲು ಪ್ರಾರಂಭಿಸಲಾಯಿತು. ಈ ಹಿನ್ನೆಲೆಯಲ್ಲಿ ವರ್ಣ ಮತ್ತು ಜಾತಿ ಪರಿಣಾಮವಾಗಿ ಅಸ್ಪೃಶ್ಯತೆಯು ತಾಂಡವಾಡತೊಡಗಿತು. ಇದು ಮುಂದೆ ವರ್ಣಗಳ ಸಂಕರದಿಂದ ಕೆಲವು ಜಾತಿ ಮತ್ತು ಉಪಜಾತಿಗಳಾಗಿ ರೂಪ ತಳೆಯಲು ಸಾಧ್ಯವಾಯಿತು. ಹಾಗಾದರೆ ವರ್ಣಗಳ ಸಂಕರದಿಂದ ಯಾವ ಬಗೆಯ ಜಾತಿಗಳ ಉದ್ಭವವಾದವು ಎಂಬುದನ್ನು ಮುಂದೆ ಅಧ್ಯಯನ ಮಾಡಲಾಗಿದೆ.

**೨.೧.೨ ವರ್ಣ ಸಂಕರ**

ಸಮಾಜವು ನಾಲ್ಕು ವರ್ಣಗಳಾಗಿ ವಿಭಜನೆಗೊಂಡ ಮೇಲೆ ಹೊಸ ಬಗೆಯ ಸಾಮಾಜಿಕ ವೈರುಧ್ಯಗಳು ಕಾಣಿಸಿಕೊಂಡವು. ಅವುಗಳಲ್ಲಿ ವರ್ಣ ಸಂಕರವೂ ಒಂದು. ಇದರ ಪರಿಣಾಮವಾಗಿ ಹೊಸ ಜಾತಿಗಳ ಉದಯಕ್ಕೆ ನಾಂದಿಯಾಯಿತು. ಇಲ್ಲಿ ಕೂಡ ಧರ್ಮಶಾಸ್ತ್ರಕಾರರು ಅನುಲೋಮ ಮತ್ತು ಪ್ರತಿಲೋಮ ವರ್ಗದವರೆಂದು ವಿಂಗಡಿಸಿದರು. ವರ್ಣ ಸಂಕರದ ಪರಿಣಾಮವಾಗಿ ಚಂಡಾಲ ಎಂಬ ಪ್ರಭೇದವು ಕಾಣಿಸಿಕೊಂಡಿತು. ಹೀಗೆ ವರ್ಣಸಂಕರವು ಹಲವು ಬಗೆಯ ಜಾತಿಗಳನ್ನು ಹುಟ್ಟುಹಾಕಿತು. ಅದರ ಕುರಿತು ಇಲ್ಲಿ ಸ್ಥೂಲವಾಗಿ ಪರಿಚಯಿಸಲಾಗಿದೆ.

ಅಸ್ಪೃಶ್ಯರು ವರ್ಣ ಸಂಕರಕ್ಕೆ ಸೇರಿದವರು. ವರ್ಣ ಸಂಕರವೆಂದರೆ ಬ್ರಾಹ್ಮಣರಾದಿ ವರ್ಣಗಳಲ್ಲಿ ವಿಜಾತಿಯರಾದ ಮಾತಾಪಿತೃಗಳಿಂದ ಹುಟ್ಟಿದವರು. ಅವರನ್ನು ಸಂಕರ ಜಾತಿಗಳೆಂದು ಅಮರಸಿಂಹ ಉಲ್ಲೇಖಿಸಿದ್ದಾನೆ.

ಅವರಲ್ಲಿ ಹತ್ತು ಗುಂಪುಗಳಿವೆ. *ಕರಣ, ಅಂಬಿಷ್ಠ, ಉಗ್ರ, ಮಾಗಧ, ಮಾಹಿಷ್ಯ, ಕ್ಷತಾ, ಸೂತ್, ವೈದೇಹಿಕ, ರಥಕಾರ* ಮತ್ತು *ಚಂಡಾಲ.*

ಕರಣ : ಶೂದ್ರ ಸ್ತ್ರೀಯಲ್ಲಿ ವೈಶ್ಯನಿಂದ ಹುಟ್ಟಿದವನು.

ಅನಿಷ್ಠ : ವೈಶ್ಯ ಸ್ತ್ರೀಯಲ್ಲಿ ಬ್ರಾಹ್ಮಣನಿಂದ ಹುಟ್ಟಿದವನು.

ಉಗ್ರ : ಶೂದ್ರ ಸ್ತ್ರೀಯಲ್ಲಿ ಕ್ಷತ್ರಿಯನಿಂದ ಹುಟ್ಟಿದವನು.

ಮಾಗದ : ಕ್ಷತ್ರಿಯ ಸ್ತ್ರೀಯಲ್ಲಿ ವೈಶ್ಯನಿಂದ ಹುಟ್ಟಿದವನು.

ಮಾಹಿಷ್ಯ : ವೈಶ್ಯ ಸ್ತ್ರೀಯಲ್ಲಿ ಕ್ಷತ್ರಿಯನಿಂದ ಹುಟ್ಟಿದವನು.

ಕ್ಷತ್ತಾ : ಕ್ಷತ್ರಿಯ ಸ್ತ್ರೀಯಲ್ಲಿ ಶೂದ್ರನಿಂದ ಹುಟ್ಟಿದವನು.

ಸೂಚ : ಬ್ರಾಹ್ಮಣ ಸ್ತ್ರೀಯಲ್ಲಿ ಕ್ಷತ್ರಿಯನಿಂದ ಹುಟ್ಟಿದವನು.

ವೈದೇಹಕ : ಬ್ರಾಹ್ಮಣ ಸ್ತ್ರೀಯಲ್ಲಿ ವೈಶ್ಯನಿಂದ ಹುಟ್ಟಿದವನು.

ರಥಾಕಾರ : 'ಕರಣ' ಎಂಬ ಸಂಕರ ಜಾತಿಯ ಸ್ತ್ರೀಯಲ್ಲಿ ಮಾಹಿಷ್ಯನೆಂಬ ಸಂಕರ ಜಾತಿಯ ಪುರುಷನಿಂದ ಹುಟ್ಟಿದವನು[೧೦]

*ಕಿರಾತ, ಶಬರ, ಪುಲಿಂದ, ಮ್ಲೇಚ್ಛ* ಜಾತಿ ಸೇರಿಸಿ ಬೇರೆ ಬೇರೆ ಮ್ಲೇಚ್ಛ ಜಾತಿಯವರೆಂದು ಅಮರಸಿಂಹ ಹೇಳುತ್ತಾನೆ.[೧೧] ಬ್ರಾಹ್ಮಣ ಸ್ತ್ರೀಯಲ್ಲಿ ಶೂದ್ರನಿಂದ ಹುಟ್ಟಿದವನು. ಇವರೆಲ್ಲರೂ ಸಂಕರ ಜಾತಿ ಎನಿಸಿದ್ದಾರೆ. ಸೂತ, ವೈದೇಹಕ ಮತ್ತು ಚಂಡಾಲರು ಬ್ರಾಹ್ಮಣ ಸ್ತ್ರೀಯರಿಗೆ ಅಸವರ್ಣ ಪುರುಷರಿಂದ ಹುಟ್ಟಿದವರು ಎಂಬುದು ಮೇಲಿನ ವಿವರಣೆಯಿಂದ ಸ್ಪಷ್ಟ. ಅಪ್ಪಟ ಬ್ರಾಹ್ಮಣೆಯಾದರೂ ಅವಳನ್ನು ಕೂಡಿದವನು ಶೂದ್ರನಾದ್ದರಿಂದ ಅಂಥವರಿಗೆ ಹುಟ್ಟಿದವನು ಚಂಡಾಲ.[೧೨]

ಇದರಲ್ಲಿ ಹತ್ತು ಬಗೆಯವರಿದ್ದಾರೆ. ಅವರ ಹೆಸರನ್ನು ಅಮರಸಿಂಹ ಈ ಕೆಳಕಂಡಂತೆ ಕೊಟ್ಟಿದ್ದಾನೆ. *ಚಂಡಾಲ, ಪ್ಲವ, ಮಾತಂಗ, ದಿವಾಕೀರ್ತಿ, ಜನಂಗಮ, ನಿಷಾದ, ಶ್ವಪಚ, ಅಂತೇವಾಸಿ, ಚಾಂಡಾಲ* ಮತ್ತು *ಪುಷ್ಕಲಿ* ಎಂದು. ಚಂಡಾಲ ಎಂಬ ಪದವು ಕೋಪಿಷ್ಠ ಎಂಬುದನ್ನು ಸೂಚಿಸುತ್ತದೆ. ಪ್ಲವ ಎಂದರೆ 'ಪ್ಲವತೇ ಉಗ್ರಕರ್ಮಣ' ಜಾತಿ ಪ್ಲವಗ ಎಂದರೆ ಕ್ರೂರ ಕರ್ಮಗಳಲ್ಲಿ ಪ್ರವೃತ್ತಿಯುಳ್ಳವನು. ಮಾತಂಗ ಎಂದರೆ ಗ್ರಾಮ ಮಧ್ಯದಲ್ಲಿ ಇರದವನು. ಇವನಿಗೆ ಊರಿನ ಮಧ್ಯದಲ್ಲಿ ತಂಗಲು ಸ್ಥಳ ಕೊಡುತ್ತಿರಲಿಲ್ಲ. ದಿವಾಕೀರ್ತಿ: ಹಗಲು ಪುಣ್ಯಕಾಲ, ರಾತ್ರಿಯ ಪಾಪಕಾಲ ಎಂಬುದು ಧರ್ಮಶಾಸ್ತ್ರಕಾರರ ಕಲ್ಪನೆ. ಆದ್ದರಿಂದ ಇವರ ಹೆಸರನ್ನು ಹಗಲುಹೊತ್ತು ಹೇಳದಿದ್ದುದರಿಂದ "ದಿವಾ ಆ ಕೀರ್ತಿ ಎಂಬುದು ಇವರಿಗೆ ಅನ್ವರ್ಥಕವಾಗುತ್ತಿತ್ತು. 'ಜನಂಗಮ' ಎಂದರೆ ಜನರಿಂದ ದೂರವಿಡಲ್ಪಟ್ಟವನು, 'ನಿಷಾದ' ಎಂದರೆ ಪಾಪವುಳ್ಳವನು. 'ಶ್ವಪಚ' ಎಂದರೆ ನಾಯಿಯನ್ನು ಬೇಯಿಸಿ ತಿನ್ನುವವನು. 'ಅಂತೇವಾಸಿ' ಎಂದರೆ ಗ್ರಾಮದ ಕಡೆಯಲ್ಲಿ ವಾಸ ಮಾಡುವನು. 'ಚಾಂಡಾಲ'

ಜಾತಿಸಂಕರದಿಂದ ಹುಟ್ಟಿದವನು. 'ಪುಸ್ಕಲಿ' ಎಂದರೆ ಮಹಾತ್ಮರನ್ನು ಮುಟ್ಟಿ ಅವರನ್ನು ಕೆಡಿಸುವವನು ಎಂದರ್ಥ.[೧೩] ಚಂಡಾಲರ ಮತ್ತು ಶ್ವಪಚರ ವಾಸಸ್ಥಾನವು ಹಳ್ಳಿಯಿಂದ ಹೊರಗಿರಬೇಕು. ಅವರನ್ನು ಅಪಾತ್ರರನ್ನಾಗಿಸಬೇಕು. (ಅಂದರೆ ಏನನ್ನು ಸ್ವೀಕರಿಸಲು ಅನರ್ಹರು ಎಂದು ಪರಿಗಣಿಸಬೇಕು) ಅವರ ಸಂಪತ್ತೆಂದರೆ ನಾಯಿಗಳು, ಕತ್ತೆಗಳು. ಸತ್ತವರ ಬಟ್ಟೆಗಳು ಅವರ ಉಡುಪು, ಅವರ ಊಟ ಚೂರಾದ ಮಡಿಕೆ ಕುಡಿಕೆಗಳಲ್ಲಿ, ಕಪ್ಪು ಕಬ್ಬಿಣವೇ ಅವರ ಆಭರಣಗಳು. ಅವರು ಸದಾ ಕಾಲವೂ ಒಂದೆಡೆಯಿಂದ ಇನ್ನೊಂದೆಡೆಗೆ ಅಲೆದಾಡುತ್ತಿರಬೇಕು. ಅವರಿಗೆ ಆರ್ಯರಲ್ಲದವರು ಒಡೆದ ಪಾತ್ರೆಗಳಲ್ಲಿ ಆಹಾರ ಕೊಡಬೇಕು. ರಾತ್ರಿಯ ವೇಳೆಗಳಲ್ಲಿ ಅವರು ಹಳ್ಳಿಗಳಲ್ಲಿ ಮತ್ತು ಪಟ್ಟಣಗಳಲ್ಲಿ ಸಂಚರಿಸಕೂಡದು ಎಂದು ಮನು ಹೇಳುತ್ತಾನೆ.

ದ್ವಿಜ ಜಾತಿಗೆ ಸೇರಿದವನೊಬ್ಬನನ್ನು ಬೇರೊಬ್ಬ ದ್ವಿಜರ ಜಾತಿಯವನು ಮಾತ್ರವೇ ಮುಟ್ಟಬಹುದೆಂದಿರುವಾಗ ಮತ್ತು ಅವನು ಚಂಡಾಲ ಅಥವಾ ಬೇರೆ ಯಾವುದಾದರೂ ಕೀಳುಜಾತಿಗೆ ಸೇರಿದವರನ್ನು ಮುಟ್ಟಿಸಿಕೊಳ್ಳಬಾರದೆಂದಿರುವಾಗ ಈ ಚಂಡಾಲ ಅಥವಾ ಇತರ ಕೀಳು ಜಾತಿಯವರು ಯಾರಾದರೂ ಉದ್ದೇಶಪೂರ್ವಕವಾಗಿ ದ್ವಿಜರನ್ನು ಮೈಲಿಗೆಮಾಡಿದರೆ ಅಂತಹವರನ್ನು ಮರಣ ದಂಡನೆಗೆ ಗುರಿಮಾಡಬೇಕು ಎಂದು ವಿಷ್ಣು ಧರ್ಮಶಾಸ್ತ್ರಕಾರ ಹೇಳುತ್ತಾನೆ. ಈ ಮೇಲಿನ ಅಂಶಗಳನ್ನು ಗಮನಿಸಿದರೆ ಉದ್ದೇಶಪೂರ್ವಕವಾಗಿ ಬರೆದು ಇನ್ನೊಬ್ಬರ ಮೇಲೆ ವಿಧಿಸಲಾಗಿದೆ ಎಂಬುದನ್ನು ಸುಲಭವಾಗಿ ಅರ್ಥೈಸಿಕೊಳ್ಳಬಹುದಾಗಿದೆ.[೧೪] ವೇದ ಋಕ್ಕುಗಳಲ್ಲಿ ಎಲ್ಲಿಯೂ ಕೂಡ ಬ್ರಾಹ್ಮಣ ಮೊದಲಾದವರಿಗಿಂತ ಶೂದ್ರನು ಹೀನನೆಂದು ಹೇಳಿಲ್ಲ. ಎಲ್ಲರೂ ಸಹೋದರರು, ಯಾರು ಹಿರಿಯರಲ್ಲ, ಯಾರು ಕಿರಿಯರಲ್ಲ. ಚಾತುರ್ವರ್ಣ ಎಂದರೆ *ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ* ವರ್ಣನೆ ಅವರವರ ಗುಣ ಕರ್ಮಗಳನ್ನು ಸ್ವಭಾವಗಳನ್ನು ಅನುಪಾಲಿಸಿ ಮಾರ್ಪಟ್ಟಿದೆ. ಹುಟ್ಟಿದಾಗ ಯಾರು ವರ್ಣ, ಜಾತಿ, ಸಿದ್ಧಾಂತಗಳನ್ನು ತಂದಿರುವುದಿಲ್ಲ. ನಿಸರ್ಗ ನಿಯಮದಂತೆ ಎಲ್ಲರೂ ಹುಟ್ಟುವಾಗ ಶೂದ್ರರೆ, ಅನಂತರ ಉಪನಯವಾದಿ ಸಂಸ್ಕಾರವನ್ನು ಪಡೆದು ದ್ವಿಜರೆನಿಸುತ್ತಾರೆ. ವೇದವನ್ನು ಅಧ್ಯಯನ ಮಾಡಿ ವಿಪ್ರರು ಬ್ರಹ್ಮಜ್ಞಾನವನ್ನು ಪಡೆದು ಬ್ರಾಹ್ಮಣರು ಆಗುತ್ತಾರೆ. ಸತ್ಯ ಧರ್ಮಚರಣದಿಂದ ಶೂದ್ರನು ಕ್ರಮವಾಗಿ ವೈಶ್ಯನೂ, ಕ್ಷತ್ರಿಯನೂ, ಕಡೆಗೆ ಬ್ರಾಹ್ಮಣನೂ ಆಗಬಹುದು. ಏಕೆಂದರೆ ವರ್ಣಗಳು ಗುಣಕರ್ಮಗಳ ಆಧಾರದ ಮೇಲೆ ಏರ್ಪಟ್ಟವು ಎಂದು ಅಭಿಪ್ರಾಯಪಡಲಾಗಿದೆ.[೧೫] ಈ ರೀತಿಯ ಸಾಮಾಜಿಕ ಕಟ್ಟಳೆ ಮತ್ತು ನಿರ್ಬಂಧಗಳನ್ನು ವಿವಿಧ ಧರ್ಮಶಾಸ್ತ್ರಕಾರರು ಉಲ್ಲೇಖಿಸಿರುವುದನ್ನು ಗಮನಿಸಬಹುದು.

## ೨.೨ ಬೌದ್ಧ ಮತ್ತು ಜೈನ ಪರಂಪರೆಗಳು

ವೈದಿಕ ಸಂಸ್ಕೃತಿಯು ಸಮಾಜದ ನಾಲ್ಕು ವರ್ಣಗಳ ಜೊತೆಗೆ ಜಾತಿ ಮತ್ತು ಉಪಜಾತಿಗಳಾಗಿ ವಿಂಗಡಣೆಯಾಗುವುದಕ್ಕೆ ಕಾರಣವಾಯಿತು ಎಂಬುದನ್ನು ಮೇಲಿನ ವಿವರಣೆಗಳಿಂದ ಗಮನಿಸಲಾಗಿದೆ. ಈಗ ಭಾರತದಲ್ಲಿ ಹುಟ್ಟಿ ಬೆಳೆದ ಬೌದ್ಧ ಮತ್ತು ಜೈನಧರ್ಮಗಳು ಜಾತಿ ಮತ್ತು ಅಸ್ಪೃಶ್ಯತೆಯ ಕುರಿತು ಏನು ಹೇಳುತ್ತವೆ ಎಂಬುದನ್ನು ಅಧ್ಯಯನ ಮಾಡಲು ಮುಂದುವರಿಯಬಹುದು. ಕರ್ನಾಟಕದ ಚರಿತ್ರೆಯಲ್ಲಿ

ಬೌದ್ಧಧರ್ಮಕ್ಕೆ ಒಂದು ವಿಶಿಷ್ಟ ಸ್ಥಾನವಿದೆ. ಪ್ರಾಚೀನ ಕಾಲದ ಬೌದ್ಧಧರ್ಮವು ಸಮಾಜದಲ್ಲಿ ವಹಿಸಿದ ಪಾತ್ರ ಹಲವು ಸಮುದಾಯಗಳಿಗೆ ಬಿಡುಗಡೆಯ ನೆಲೆಗಳನ್ನು ಒದಗಿಸಿರುವುದು ವಿದಿತವಾಗಿದೆ.

ಬೌದ್ಧ ಸಂಘದ ಚೌಕಟ್ಟು ಸರಳವಾದುದು. ದರೋಡೆಕೋರರು, ಮತಿಭ್ರಾಂತರು, ಸಾಂಕ್ರಾಮಿಕ ರೋಗಿಗಳು, ಜೀತದ ಆಳುಗಳು, ಸೈನಿಕರು ಇಂಥ ಕೆಳವರ್ಗಗಳನ್ನು ಹೊರತುಪಡಿಸಿ ಸಮಾಜದ ಯಾವುದೇ ಸ್ತರದವರೂ ಸಂಘಕ್ಕೆ ಸೇರಬಹುದಿತ್ತು. ಅತ್ಯಂತ ಕಿರಿಯರನ್ನು *ಶ್ರಮಣೇತರರು* ಎಂದು ಕರೆಯಲಾಗುತ್ತಿತ್ತು. ಬೌದ್ಧಧರ್ಮಕ್ಕೆ ಶಿಷ್ಯವರ್ಗವಾದ ಅಂತೇವಾಸಿಕರ ಉಲ್ಲೇಖವೂ ಇದೆ. ಸಮಾಜದ ವಿಭಿನ್ನ ಸ್ತರಗಳಿಂದ ಈ ರೀತಿ ಬಂದ ವ್ಯಕ್ತಿಗಳು ಬೌದ್ಧ ಸಂಘಗಳಿಗೆ ದಾನಮಾಡಿ ಪುಣ್ಯ ಸಂಪಾದಿಸುವ ಮೂಲಕ ಅದರ ಪ್ರಭಾವದಲ್ಲಿ ಬಂದದ್ದು ಕಂಡುಬರುತ್ತದೆ. ಇಂಥ ದಾನಿಗಳು ಹಾಗೂ ಸಂಸಾರಸ್ಥ ಅಂತೇವಾಸಿಕ ವರ್ಗದವರು ಬೌದ್ಧ ಸಂಘಗಳಲ್ಲಿ ಅವುಗಳ ಆಂತರಿಕ ರಚನೆಗಿಂತ ಹೆಚ್ಚು ಮಹತ್ವ ಗಳಿಸಿಕೊಂಡು ಬದಲಾವಣೆಗೆ ಚಾಲನೆ ನೀಡಿದಂತೆ ತೋರುತ್ತದೆ.[೧೧] ಸಂಘದ ಪರಿಕಲ್ಪನೆ ರೂಪಾಂತರ ನಂತರ ಉಪದೇಶಗಳನ್ನು ಕೇಳಲು ಹಲವು ಜನಸಮುದಾಯಗಳು ಮುಂದೆ ಬಂದವು. ದಿನದಿಂದ ದಿನಕ್ಕೆ ಸಂಘವು ಬೆಳೆಯಲಾರಂಭಿಸಿತು. ಸಂಘಕ್ಕೆ ಯಾವುದೇ ಜಾತಿ, ವರ್ಗ, ವೃತ್ತಿ ಅಥವಾ ಸಮಾಜದ ಭೇದವಿಲ್ಲದೆ ಸೇರಲು ಅವಕಾಶ ಕಲ್ಪಿಸಿದ ಬುದ್ಧನ ಉಪದೇಶ ಹೀಗಿತ್ತು: ಓ ಶಿಷ್ಯರೇ ಗಂಗಾ, ಯಮುನಾ, ಮಹೀಯಾವೆಲ್ಲ ದೊಡ್ಡ ನದಿಗಳಿದ್ದರೂ ಸಾಗರಕ್ಕೆ ಸೇರಿದೊಡನೆಯೇ ತಮ್ಮ ಪ್ರತ್ಯೇಕತೆ, ವೈಶಿಷ್ಟ್ಯಗಳನ್ನು ಕಳೆದುಕೊಂಡು ಒಂದೇ ಮಹಾಸಾಗರವಾಗಿ ಪರಿವರ್ತಿತಗೊಳ್ಳುತ್ತವೆ. ಅಂತೆಯೇ ಈ ನಾಲ್ಕು ವರ್ಣಗಳ *ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ* ಜನ ಗುರೂಪದೇಶದಂತೆ ನಡೆಯಲು ನಿರ್ಣಯಿಸಿ ಗೃಹತ್ಯಾಗ ಮಾಡಿದೊಡನೆಯೇ ತಮ್ಮ ಮೊದಲನೆ ಉಪಾಧಿಗಳನ್ನು ಕಳೆದುಕೊಂಡು ಬಿಕ್ಕುಗಳಾಗಿ ಬೌದ್ಧರಾಗುತ್ತಾರೆ. ಹಾಗಾಗಿ ಸಂಘದಲ್ಲಿ ಅಂತಸ್ತುಗಳಾಗಲಿ, ತರತಮ ಭಾವಗಳಾಗಲಿ ಎಳ್ಳಷ್ಟು ಇರಲಿಲ್ಲ.[೧೨] ಬುದ್ಧನ ಸಂಘದಲ್ಲಿ ಸಾಮಾಜಿಕ ಅಂತಸ್ತುಗಳ ದೃಷ್ಟಿಯಿಂದ ಭೇದವೇನೂ ಇರಲಿಲ್ಲ. ಆತನ ಉಪದೇಶಗಳಾದರೂ, ಎಲ್ಲಾ ಜನರ ಕಲ್ಯಾಣಕ್ಕಾಗಿ, ಎಲ್ಲರ ಸಂತೋಷಕ್ಕಾಗಿ ಮತ್ತು ದೇವತೆಗಳ ಮತ್ತು ಮಾನವರ ಒಟ್ಟಾರೆ ಹಿತಕ್ಕಾಗಿಯೆ ಆಗಿತ್ತು. ಹಾಗಾಗಿ ಸಹಜವಾಗಿಯೇ ಬುದ್ಧನ ಸಂಘದಲ್ಲಿ ಎಲ್ಲಾ ವರ್ಗಗಳ ಜನರು ಸೇರಿದ್ದರು. ಈ ಬಗ್ಗೆ ರ್‍ಹಿಸ್ ಡೇವಿಡ್ಸ್ ಅವರು ಒಂದು ಅಭ್ಯಾಸಪೂರ್ಣ ಪಟ್ಟಿಯನ್ನು ಕೊಡುತ್ತಾರೆ.

ಗೌತಮನ ಶಿಷ್ಯರಲ್ಲಿ ವಿನಯದ ವಿಚಾರದಲ್ಲಿ ಅನಂತರದ ಮುಖ್ಯಸ್ಥನೆಂದೇ ಹೇಳಲಾಗುವ ಉಪಾಲಿಯು ಪೂರ್ವಾಶ್ರಮದಲ್ಲಿ ಒಬ್ಬ ಕ್ಷೌರಿಕನಾಗಿದ್ದ. ಅಂತೆಯೇ ಥೇರಗಾಥದಲ್ಲಿ ಸೇರ್ಪಡೆಗೊಂಡವನಾದ ಸುಗೀತ ಇನ್ನೊಬ್ಬ ಭಿಕ್ಷು ಪುಕ್ಕಸನು ಕೆಳಜಾತಿಯನಾಗಿದ್ದ. ನಂದನು ಒಬ್ಬ ಪಶುಪಾಲಕನಾಗಿದ್ದ. ಪಂಥಕರಿಬ್ಬರು ಉಚ್ಚಸ್ತರದ ಹೆಣ್ಣುಮಕ್ಕಳೊಬ್ಬರ ಮತ್ತು ಸೇವಕನೊಬ್ಬನ ಸಂಪರ್ಕದಿಂದ ಜನಿಸಿದರು. ಪುನ್ನ ಮತ್ತು ಪುನ್ನಿಕರು ಭೃತ್ಯವರ್ಗದ ಬಾಲಿಕೆಯರು. ಸುಮಂಗಲಮತ ಎಂಬಾಕೆ ಸಾಮಾನ್ಯ ಕೂಲಿಯಾಳುಗಳ ಮನೆತನದವಳು. ಸಂಭ ಎಂಬಾತ ಒಬ್ಬ ಕಮ್ಮಾರನ ಮಗನಾಗಿದ್ದ. ಆ ಸಮಯದಲ್ಲಿ ಬುದ್ಧನನ್ನು ಒಬ್ಬ ಸಮಾಜ ಸುಧಾರಕನಾಗಿಯೂ ಆತ ಜಾತಿ-ಮತ-ಪಂಥಗಳ ಸಂಕೋಲೆಯಿಂದ ಸಾಮಾನ್ಯ ಜನರನ್ನು ಪಾರುಮಾಡಿ ಅವರಿಗೆ ತಾನು ಸ್ಥಾಪಿಸಿದ

ಆಧ್ಯಾತ್ಮಿಕ ರಾಜ್ಯದಲ್ಲಿ ಸ್ಥಾನ ಕಲ್ಪಿಸಿದನೆಂದು ಹೇಳುವಷ್ಟರ ಮಟ್ಟಿಗೆ ಸಮಾಜದಲ್ಲಿ ಬೆಳೆಯಿತು.[೧೮] ಆದರೂ ಸಮಾಜದ ಉನ್ನತ ಸ್ತರದವರ ಪರವಾಗಿ ಸಂಘಗಳು ಕೆಲಸ ಮಾಡಿದವು ಎಂದು ಟೀಕೆಗಳಿಗೆ ಗುರಿಯಾಯಿತು.

ಬೌದ್ಧಧರ್ಮವು ಸ್ವತಂತ್ರವಾಗಿಯೇ ಒಡಮೂಡಿದ ವಿಚಾರಧಾರೆ. ಜೀವನ ಪದ್ಧತಿಯ ವಿಶಿಷ್ಟ ಅನುಶಾಸನ. ಸ್ತ್ರೀಸಾಮಾನ್ಯರನ್ನು ಒಳಗೊಂಡು ಸಮಾಜದ ಎಲ್ಲಾ ಘಟಕಗಳಿಗೂ ಪ್ರಾತಿನಿಧ್ಯವಿರುವ ಸಂಘದ ಪರಿಕಲ್ಪನೆಯಲ್ಲಿ ಅದರ ಸಮಾನತೆ ಕಾಣಿಸುತ್ತದೆ. *ವರ್ಣ* ಮತ್ತು *ಆಶ್ರಮ* ಈ ಎರಡು ಪರಿಕಲ್ಪನೆಗಳು ಬೌದ್ಧಧರ್ಮದಲ್ಲಿರಲಿಲ್ಲ. ಹಾಗಾಗಿಯೇ ಸಂಘಕ್ಕೆ ಎಲ್ಲರೂ ಸೇರುವುದು ಸಾಧ್ಯವಾಯಿತು. ಮುನಿಪರಂಪರೆ ಅಥವಾ ಶ್ರವಣ ಪರಂಪರೆಯ ವಿಶಿಷ್ಟ ಉತ್ತರಾಧಿಕಾರಿಯಾಗಿ ಬೌದ್ಧಧರ್ಮ ವಿಕಾಸಗೊಂಡಿತು.[೧೯] ಲೌಕಿಕ ವಿಚಾರಗಳನ್ನು ಕುರಿತು ಬೌದ್ಧಧರ್ಮವು ಜಾತಿಯಿಂದಾಗಲಿ, ಗೋತ್ರದಿಂದಾಗಲಿ ಜಟೆಯಿಂದಾಗಲಿ ಒಬ್ಬನು ಬ್ರಾಹ್ಮಣನಾಗಲಾರ. ಯಾರಲ್ಲಿ ಧರ್ಮ ಮತ್ತು ಸತ್ಯಗಳಿವೆಯೋ ಅವನೇ ಶುಚಿ, ಅವನೇ ಬ್ರಾಹ್ಮಣ ಎಂದು ಧರ್ಮವು ಹೇಳುತ್ತದೆ. ಭಾರತೀಯ ಸಮಾಜ ಸಂಸ್ಕೃತಿಗಳಿಗೆ ಬೌದ್ಧಧರ್ಮದ ಕೊಡುಗೆ ಅಪಾರವಾದದ್ದು. ಪರಂಪರೆಯಿಂದ ಇಲ್ಲಿ ಬೆಳೆದು ಬಂದ ಜಾತಿಪದ್ಧತಿಯ ನಿವಾರಣೆಗಾಗಿ ನಡೆದ ಮೊದಲ ಪ್ರಯತ್ನವನ್ನು ಕಾಣಬಹುದು.[೨೦] ಋಷಿಮುನಿಗಳ ಪರಂಪರೆಯನ್ನನುಸರಿಸಿ ಶ್ರಮಣರು ತಮ್ಮ ಸಂಘಗಳಲ್ಲಿ ಜಾತಿ ಭೇದಕ್ಕೆ ಆಸ್ಪದ ಕೊಡಲಿಲ್ಲ. ಹರಿಕೇಶಿಬಲನು ಚಾಂಡಾಲನಿದ್ದು ನಿರ್ಗ್ರಂಥರ (ಜೈನರ) ಸಂಘದನ್ವಯ ಎಂದು ತಿಳಿದುಬರುತ್ತದೆ. ಬುದ್ಧನ ಭಿಕ್ಷು ಸಂಘದಲ್ಲಿಯಂತೂ ಶ್ವಪಾಚ ಎಂಬ ಚಂಡಾಲ, ಸುನೀತ ಎಂಬ *ಭಂಗಿ* ಇದರಂತೆಯೇ ಅಸ್ಪೃಶ್ಯ ವರ್ಗದಲ್ಲಿ ಹುಟ್ಟಿದ ದೊಡ್ಡ ಸಾಧುಗಳಾಗಿ ಹೋದರು. ಆದರೆ ಇದಕ್ಕೆ ವ್ಯತಿರಿಕ್ತವಾಗಿ ಜೈನಸಂಘವು ಒಂದು ಕಡೆ ಜಾತಿ-ಭೇದವನ್ನು ಸ್ವೀಕರಿಸಿತು. ಕಾಲಕ್ರಮೇಣ ಕ್ರಿ.ಶ. ಆರಂಭದ ದಶಕಗಳಲ್ಲಿ ಮತ್ತು ಶತಮಾನಗಳಲ್ಲಿ ಜೈನ ಮತ್ತು ಬೌದ್ಧ ಸಂಘಗಳು ಪರಕೀಯ ಜನರನ್ನು ಹಿಂದು ಸಮಾಜದಲ್ಲಿ ಸೇರಿಸಿಕೊಳ್ಳಲು ಮಹತ್ವದ ಕೆಲಸವನ್ನು ಮಾಡಿವೆ. *ಗ್ರೀಕ, ಶಕ, ಹೂಣ, ಮಾಲವ, ಗುರ್ಜರ* ಮೊದಲಾದ ಹೊರಗಿನ ಜಾತಿಗಳು ಹಿಂದೂಸ್ತಾನಕ್ಕೆ ಬಂದವು. ಈ ಧರ್ಮಗಳು ನೇರ ಪ್ರವೇಶ ಪಡೆದವು. ಹಾಗೆಯೇ ಇಷ್ಟ ಬಂದರೆ ಬ್ರಾಹ್ಮಣ, ಕ್ಷತ್ರಿಯ ಇಲ್ಲದೆ ವೈಶ್ಯರಾಗುತ್ತಿದ್ದರು.[೨೧] ಈ ರೀತಿಯಾಗಿ ಅನ್ಯ ಜನರು ಬಂದು ಸೇರುತಿದ್ದರೂ ಅಸ್ಪೃಶ್ಯರ ಪರಿಸ್ಥಿತಿಯು ಸುಧಾರಿಸಲಿಲ್ಲ. ಜೈನ ಮತ್ತು ಬೌದ್ಧ ಶ್ರಮಣರು ಅವರನ್ನು ಕಡೆಗಣಿಸಿದರು ಮತ್ತು ಅದರಿಂದಾಗಿ ಉತ್ತರೋತ್ತರವಾಗಿ ಅಸ್ಪೃಶ್ಯರ ಬಗ್ಗೆ ಅಸಹ್ಯವು ಹೆಚ್ಚುತ್ತಾ ನಡೆಯಿತು. ನಿಷ್ಕಾರಣವಾಗಿ ಅವರಿಗೆ ಕಾಟವಾಗತೊಡಗಿತು. ಮತ್ತು ಮೆಲ್ಲಮೆಲ್ಲನೆ ಅದರ ಪರಿಣಾಮವನ್ನು ಇಡಿಯಾಗಿ ಸಮಾಜವು ಮತ್ತು ಸ್ವಂತ ಜೈನ ಮತ್ತು ಬೌದ್ಧರು ಭೋಗಿಸಬೇಕಾಯಿತು. ಜಾತಿ ಭೇದವು ದೃಢವಾಗುತ್ತ ಹೋದ ಮೇಲೆ ಇವರು ಎಲ್ಲಾ ಜಾತಿಯವರ ಭಿಕ್ಷೆಯನ್ನು ಸ್ವೀಕರಿಸುತ್ತಾರೆ ಎಂದು ಜೈನ ಮತ್ತು ಬೌದ್ಧರು ನಿಂದ್ಯರೆನ್ನಿಸತೊಡಗಿದರು. ಜೈನ ಸಂಘಗಳಲ್ಲಿ ಅಸ್ಪೃಶ್ಯರನ್ನು ಸೇರಿಸಿಕೊಳ್ಳುವುದು ನಿಷಿದ್ಧವಿದ್ದರೂ ಶೂದ್ರನನ್ನು ಸೇರಿಸಿಕೊಳ್ಳುತ್ತಿದ್ದರೆಂದು ತೋರುತ್ತದೆ. ಬೌದ್ಧಸಂಘದಲ್ಲಿಯಂತೂ ಕೊನೆಯವರೆಗೂ ಜಾತಿಭೇದಕ್ಕೆ ಪುಟು ಇದ್ದಿರಲಿಲ್ಲ. ಆದರೆ ಸಮಾಜದಲ್ಲಿ ಜಾತಿಭೇದವು ಬಲಗೊಂಡಿತು. ಮತ್ತು ಶಂಬೂಕನ ಕತೆಯಂತಹ ಕತೆಗಳನ್ನು ಹುಟ್ಟಿಸಿ ಪುರಾಣಗಳಲ್ಲಿ ಸೇರಿಸುವುದು ಬ್ರಾಹ್ಮಣರಿಗೆ ಶಕ್ಯವಾಯಿತು. ಬರಬರುತ್ತ

ಬೌದ್ಧಶ್ರವಣರು ಹೇಳಹೆಸರಿಲ್ಲದಂತಾದರು. ಜೈನ ಶ್ರವಣರು ಹೇಗೂ ಜೀವವನ್ನು ಹಿಡಿದು ಉಳಿದುಕೊಂಡರು.[೨೫]

ಬೌದ್ಧಯುಗಕ್ಕೆ ಅಥವಾ ಸ್ವಲ್ಪ ಈಚಿನ ಕಾಲಕ್ಕೆ ಸೇರುವ ಧರ್ಮಗ್ರಂಥಗಳಲ್ಲಿ ಕೆಳಜಾತಿ ಮತ್ತು ಚಂಡಾಲರಿಗೆ ಸಂಬಂಧಿಸಿದ ಹಲವು ಉಲ್ಲೇಖಗಳು ಸಿಗುತ್ತವೆ. ಗೌತಮನ ಪ್ರಕಾರ ಬ್ರಾಹ್ಮಣನನ್ನು ಕೊಂದವನು ಊರ ಹೊರಗೆ ವಾಸಿಸಬೇಕು, ಅವನು ಚಂಡಾಲ ಸಮಾನ ಭಿಕ್ಷೆಗೆ ಮಾತ್ರ ಊರೊಳಕ್ಕೆ ಬರಬೇಕು ಮತ್ತು ಮೊದಲ ಮೂರು ವರ್ಣಗಳ ಜನ ಎದುರಿಗೆ ಬಂದರೆ ದಾರಿ ಬಿಟ್ಟುಕೊಡಬೇಕು. ಚಂಡಾಲನನ್ನು ಯಾರು ಮುಟ್ಟಕೂಡದು. ಅಕಸ್ಮಾತ್ ಮುಟ್ಟಿದರೆ ಸಚೇಲ ಸ್ನಾನವನ್ನು ಮಾಡಬೇಕು. ಅವನ ಮನೆಯಲ್ಲಿ ಬ್ರಾಹ್ಮಣ ಒಂದು ವೇಳೆ ತಿಳಿಯದೆ ಉಂಡರೂ ಅವನು ಸಮಾಜ ಬಹಿಷ್ಕೃತನಾಗುತ್ತಾನೆ. ತಿಳಿದೂ ಊಟ ಮಾಡಿದ್ದರೆ ಅವನು ಚಂಡಾಲನೇ ಆಗುತ್ತಾನೆ. ಗೃಹಸ್ಥನ ಮನೆಯಲ್ಲಿ ಎಲ್ಲರ ಊಟವಾದ ಮೇಲೆ ನಾಯಿ ಕಾಗೆಗಳಿಗೆ ಆಹಾರ ಎಸೆಯುವಾಗ ಚಂಡಾಲರಿಗೂ ಎಸೆಯಬೇಕು. ಚಂಡಾಲರು ಅಪಪಾತ್ರರು-ಅವರು ಬಳಸಿದ ಪಾತ್ರೆಗಳನ್ನು ಯಾರು ಬಳಸಕೂಡದು. ಕೌಟಿಲ್ಯನ ಪ್ರಕಾರ ಚಂಡಾಲರು ಊರಹೊರಗೆ ಮಾತ್ರವಲ್ಲ, ಸ್ಮಶಾನದ ಆಚೆ ವಾಸಿಸಬೇಕು. ಅತ್ರಿ ಪ್ರಕಾರ ಚಂಡಾಲ ಕಸಗುಡಿಸಲಿಕ್ಕೆ ಊರೊಳಕ್ಕೆ ಬೆಳಿಗ್ಗೆ ಮಾತ್ರ ಬರಬೇಕು. ಕೊರಳಲ್ಲಿ ಒಂದು ಮಣ್ಣಿನ ಮಡಿಕೆ ಕಟ್ಟಿಕೊಂಡಿರಬೇಕು[೨೬] ಈ ರೀತಿಯ ಕಟ್ಟಳೆ ಮತ್ತು ನಿಯಮಗಳನ್ನು ಬೌದ್ಧಧರ್ಮಗ್ರಂಥಗಳಲ್ಲಿ ಕಾಣಬಹುದಾಗಿದೆ. ಹಾಗೆಯೇ ಜಾತಕ ಕಥೆಗಳು ಸಹ ಅಂದಿನ ಲೌಕಿಕ ಜೀವನ ರೂಢಿ-ಸಂಪ್ರದಾಯಗಳನ್ನು ತಿಳಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ಈ ಮುಖಾಂತರ ಒಂದು ತೀರ್ಮಾನಕ್ಕೆ ಬರಬಹುದಾಗಿದೆ. ಅಸ್ಪೃಶ್ಯರು ಅಥವಾ ಚಂಡಾಲರು ಸಮಾಜದ ಕಠೋರ ನೀತಿಗೆ ಒಳಗಾಗಿರುವುದರ ಜೊತೆಗೆ ಚಂಡಾಲರನ್ನು ಸಮಾಜ ಯಾವ ರೀತಿ ನಡೆಸಿಕೊಳ್ಳುತ್ತಿತ್ತು ಎಂಬುದನ್ನು ಈ ಗ್ರಂಥಗಳು ತಿಳಿಸುತ್ತವೆ. ಪರೋಕ್ಷವಾಗಿ ಜಾತಕ ಕಥೆಗಳು ಕೂಡ ಜನಸಾಮಾನ್ಯರ ಕುರಿತು ತಿಳಿಯಪಡಿಸುತ್ತವೆ. ಇದಕ್ಕೆ ಉತ್ತಮ ಉದಾಹರಣೆ ಎಂದರೆ ಶಂಭೂಕ ಕಥೆ. ಶಂಬೂಕನೆಂಬ ಶೂದ್ರ ಅರಣ್ಯದಲ್ಲಿ ತಪಸ್ಸನ್ನು ಆಚರಿಸುತ್ತಿದ್ದಾಗ ಬ್ರಾಹ್ಮಣನ ಮಗನೊಬ್ಬ ಮರಣ ಹೊಂದಿದ. ರಾಮನಿಗೆ ಈ ಸುದ್ದಿ ತಿಳಿದು ಶಂಬೂಕನ ಶಿರಚ್ಛೇದನ ಮಾಡಿದನು. ಬ್ರಾಹ್ಮಣನ ಮಗನಿಗೆ ಮರುಜೀವ ಬಂದಿತು. ಈ ಕಥೆಯು ಭವಭೂತಿಯ ಉತ್ತರರಾಮ ಚರಿತದಲ್ಲಿ ಕೂಡ ಕಾಣಿಸಿಕೊಂಡಿದೆ.

ಕ್ರಿ.ಪೂ.೬ನೇ ಶತಮಾನದಲ್ಲಿ ಭಾರತದಲ್ಲಿ ಹುಟ್ಟಿಕೊಂಡ ಎರಡು ಪ್ರಮುಖ ಧರ್ಮಗಳಲ್ಲಿ ಜೈನಧರ್ಮವೂ ಒಂದು. ಈ ಧರ್ಮವು ಸಮುದಾಯಗಳೊಂದಿಗೆ ಆರಂಭಿಸಿದ ರೂಢಿ ಸಂಪ್ರದಾಯಗಳು ಇತರೆ ಧರ್ಮಗಳಲ್ಲಿ ಇದ್ದಂತೆ ಕಂಡುಬರುತ್ತದೆ. ಪ್ರಾಚೀನ ಭಾರತದ ಎರಡು ಮುಖ್ಯ ಧರ್ಮ ಪರಂಪರೆಗಳಲ್ಲಿ ಬ್ರಾಹ್ಮಣ ಮತ್ತು ಶ್ರಮಣ ಪರಂಪರೆಗಳಲ್ಲಿ ಜೈನ ಧರ್ಮವು ಶ್ರಮಣ ಪರಂಪರೆಗೆ ಸೇರಿದುದಾಗಿದೆ. ಕಾಲಕ್ರಮೇಣ ಜೈನ ಪರಂಪರೆಯಲ್ಲಿ ಕಾಲಕಾಲಕ್ಕೆ ತೀರ್ಥಂಕರರೂ ಕೇವಲಿಗಳೂ, ಶ್ರುತ ಕೇವಲಿಗಳೂ, ಆಚಾರ್ಯರೂ ಜನಿಸುತ್ತ ಹೋದರು. ಅವರೆಲ್ಲರೂ ಪುರಾತನ ಜ್ಞಾನದಲ್ಲಿ ತಮ್ಮ ತಮ್ಮ ಸಮಯದ ಜ್ಞಾನವನ್ನು ಸೇರಿಸಿ ಸತ್ಯವನ್ನೇ ಜನತೆಗೆ ಬೋಧಿಸುತ್ತಾ ಬಂದರು. ಆದರೆ ಧರ್ಮಕ್ಷೇತ್ರದಲ್ಲಿ ನೇತಾರರೊಡನೆ ಸಮನಾಗಿ ಹೆಜ್ಜೆಯನ್ನು ಹಾಕಿ, ಪ್ರಗತಿ ಮಾರ್ಗದಲ್ಲಿ ಸಾಗುವುದು ಸಾಮಾನ್ಯ ಜನತೆಗೆ ಕೆಲವು ಸಲ ಸಾಧ್ಯವಾಗುವುದಿಲ್ಲ. ಆದ್ದರಿಂದ

ಧರ್ಮಾನುಯಾಯಿಗಳಲ್ಲಿ ಬೇರೆ ಬೇರೆ ಸಂಘ ಸಂಪ್ರದಾಯಗಳು ಉಂಟಾಗುತ್ತದೆ. ಇವು ದೇಶ ಹಾಗೂ ಕಾಲಭೇದಗಳಿಂದ ಬೆಳೆಯುತ್ತವೆ. ಆಯಾ ಕಾಲದ ರಾಜ ಮಹಾರಾಜರು ಅವುಗಳನ್ನು ಪೋಷಿಸುತ್ತಾರೆ.[೨೪]

ಜೈನರ ಕಥಾ ಸಾಹಿತ್ಯವು ಕೂಡ ಅಪರೂಪದ ಚಾರಿತ್ರಿಕ ವಿವರಗಳನ್ನು ಒದಗಿಸಿದೆ. ಜೈನ ಧರ್ಮದ ಸಾಹಿತ್ಯವು ಹಲವು ಜಾತಿ ಮತ್ತು ಬುಡಕಟ್ಟುಗಳನ್ನು ಹೆಸರಿಸುತ್ತದೆ. ಅವರಲ್ಲಿ ಪುಲಿಂದರು, ಮಾತಂಗರು ಪ್ರಮುಖರು. ಪುಲಿಂದರು ಬುಂದೇಲಖಂಡದ ಪಡುವಣ ಕಡೆಯ ಎಲ್ಲೆ ಕಟ್ಟಿನವರಾದ ಪುಲಿಂದರು ಅನಾರ್ಯ ಜನಾಂಗ. ಸತ್ತ ಹಸುವಿನ ಮಾಂಸ ತಿನ್ನುವ ಪುಲಿಂದರು ಕಾಡು ಹಾಗೂ ಬೆಟ್ಟವಾಸಿಗಳಾದ ಜನಾಂಗವೆಂದು ನಿಷೇಧ ಭಾಷ್ಯ ಹೇಳಿದೆ. ಪುಲಿಂದರಿರುವ ಹಳ್ಳಿ ಪುಲಿಂದಪಲ್ಲಿ, ಪುಲಿಂದಕೊಟ್ಟ. ಕಾಡಿನ ಮೂಲಕ ದಾಟಿ ಹೋಗುವ ಮಾರಾಟಗಾರ ಗುಂಪುಗಳನ್ನು ದೋಚುವ ಇವರು ದರೋಡೆಕೋರರು ಎಂದು ಬಿಂಬಿಸಲಾಗುತ್ತದೆ. ಅದೇ ರೀತಿಯಾಗಿ ಮಾತಂಗರಿಗೆ ಮಾಯಾ ಮಂತ್ರಗಳ ಮೇಲೆ ಹಿಡಿತವಿತ್ತು. ಇಬ್ಬರು ವಿದ್ಯಾಧರರು ಮಾಂತ್ರಿಕ ಶಕ್ತಿಯನ್ನು ಕಲಿಯುವ ಸಲುವಾಗಿಯೇ ಕೆಳಜಾತಿಯ ಮಾತಂಗಿಯರನ್ನು, ಅದೂ ಅಂಗವಾನೆಯರನ್ನು ಮದುವೆಯಾದ ಕಥಾನಕವನ್ನು ಹೇಮ ಚಂದ್ರಾಚಾರ್ಯನ ಪರಿಶಿಷ್ಟ ವರ್ಗದಲ್ಲಿ ಹೇಳಿದೆ. ಹಾಗೆಯೇ ಶಬರರು, ಬರ್ಬರು, ಭಿಲ್ಲರು, ಬೋಟಿಕರು ಮುಂತಾದ ಜನಾಂಗಗಳ ಕುರಿತು ಜೈನ ಕಥೆಗಳಲ್ಲಿ ಸಿಗುತ್ತದೆ.[೨೫]

ಈ ಮೇಲಿನ ವಿವರಣೆಗಳಿಂದ ಬೌದ್ಧ ಮತ್ತು ಜೈನಧರ್ಮಗಳು ಕೆಳಜಾತಿ ಜನಾಂಗಗಳ ಬಗೆಗೆ ವ್ಯಕ್ತಪಡಿಸಿದ ನಿಲುವುಗಳನ್ನು ಗಮನಿಸಬಹುದಾಗಿದೆ. ಆದರೆ ವೈದಿಕ ಧರ್ಮಕ್ಕೆ ಪ್ರತಿಯಾಗಿ ಇವೆರಡು ಧರ್ಮಗಳಲ್ಲಿ ಬಿಡುಗಡೆಯ ನೆಲೆಗಳನ್ನು ಗುರುತಿಸಬಹುದಾಗಿದೆ.

## ೨.೩ ಹದಿನೆಂಟು ಜಾತಿಗಳು

ಸಾಹಿತ್ಯ, ಚರಿತ್ರೆ ಮತ್ತು ಶಾಸನಗಳಲ್ಲಿ *ಹದಿನೆಂಟು ಜಾತಿ ಕುಲ* ಎಂಬ ಶಬ್ದಗಳು ಪದೇ ಪದೇ ಕಾಣಿಸಿಕೊಳ್ಳುತ್ತವೆ. ಅಂದಿನ ಸಾಮಾಜಿಕ ಪರಿಸ್ಥಿತಿಯಲ್ಲಿ ಈ ಹದಿನೆಂಟು ಜಾತಿಗಳ ಮಹತ್ವವೇನು? ಹದಿನೆಂಟು ಎಂಬ ಶಬ್ದವನ್ನು ಬಳಸಿರುವ ಉದ್ದೇಶಗಳಾದರು ಏನು? ಮುಂತಾದ ವಿಚಾರಗಳು ಗಮನ ಸೆಳೆಯುತ್ತವೆ. ಸಮಾಜದಲ್ಲಿ ಬ್ರಾಹ್ಮಣ ಮೊದಲಾಗಿ, ಹೊಲೆಯ-ಮಾದಿಗ ಕಡೆಯಾಗಿ ಎನ್ನುವ ಮಾತುಗಳು ಪುನರಾವರ್ತನೆಯಾಗುತ್ತವೆ. ಸಭೆ, ಸಮಾರಂಭಗಳಲ್ಲಿ ಎಲ್ಲಾ ಜಾತಿಯವರನ್ನು ಕುರಿತು ಹೇಳುವಾಗ ಸಂಕ್ಷಿಪ್ತವಾಗಿ ಹದಿನೆಂಟು ಜಾತಿಗಳು ಸೇರಿದ್ದವು ಎಂದು ಪ್ರಸ್ತಾಪಿಸಿರುವುದನ್ನು ನೋಡುತ್ತೇವೆ. ಅಂದರೆ ಎಲ್ಲಾ ಜಾತಿಯವರು ಇದ್ದರು. ಎಂದರ್ಥ.

ಈ ಹದಿನೆಂಟು ಜಾತಿ ಜನರ ವೃತ್ತಿಗಳನ್ನು ಹದಿನೆಂಟು ಕಾಯಕವೆಂದಿದ್ದಾನೆ ಕನ್ನಡಿ ಕಾಯಕದ ಅಮ್ಮಿದೇವ. ಇಬ್ಬರು ವಚನಕಾರರು ಆ ಹದಿನೆಂಟು ಜಾತಿಗಳ ಪಟ್ಟಿ ಕೊಟ್ಟಿದ್ದಾರೆ. ಆ ಜಾತಿಗಳು ಸೊಡ್ಡಳ ಬಾಚರಸನ ಪ್ರಕಾರ ಪ್ರತಿ ವ್ಯಕ್ತಿಯಲ್ಲಿಯೂ ಇವೆ.

೧. ಬ್ರಾಹ್ಮಣ - (ಶಿಖಿ)

೨. ಕ್ಷತ್ರಿಯ - (ನಯನ)

೩. ಬಣಜಿಗ - (ನಾಸಿಕ)

೪. ಒಕ್ಕಲಿಗ - (ಅಧರ, ತುಟಿ)

೫. ಗೊಲ್ಲ - (ಕರ್ಣ)

೬. ಕುಂಬಾರ - (ಕೊರಳು)

೭. ಪಂಚಾಳ - (ಬಾಹು)

೮. ಉಪ್ಪಾರ - (ಅಂಗೈ)

೯. ನಾಯಿಂದ - (ನಖ, ಉಗುರು)

೧೦. ಡೊಂಬ - (ಒಡಲು)

೧೧. ಅಗಸ - (ಬೆನ್ನು)

೧೨. ಜೇಡ - (ಚರ್ಮ)

೧೩. ಕಬ್ಬಿಲ - (ಪೃಷ್ಠ, ಕುಂಡೆ)

೧೪. ಹೊಲೆಯ - (ಒಳದೊಡೆ)

೧೫. ಈಳಿಗ - (ಮಣಿಕಾಲು)

೧೬. ಸಮಗಾರ - (ಕಣಕಾಲು)

೧೭. ಮಾಚ್ಚಿಗ - (ಮೇಗಾಲು)

೧೮. ಶುದ್ಧ ಮಾದಿಗ - (ಅಂಗಾಲು)[೨೬]

ಸಾಹಿತ್ಯ ಮೂಲಗಳು ಮತ್ತು ಶಾಸನಗಳು ಪ್ರಾಚೀನ ಕರ್ನಾಟಕದ ಸಾಮಾಜಿಕ ಚೌಕಟ್ಟಿನ ವಿಷಯವನ್ನು ವಿಶ್ಲೇಷಿಸುವಾಗ ೧೮ ಸಾಂಪ್ರದಾಯಿಕ ಜಾತಿ (ಹದಿನೆಂಟು ಜಾತಿ ಅಥವಾ ಸಮಯ ಅಥವಾ ಅಷ್ಟಾದಶ ಪ್ರಕೃತಿ)ಗಳನ್ನು ಹೆಸರಿಸುತ್ತವೆ. ಧಾರವಾಡ ಜಿಲ್ಲೆಯ ಲಕ್ಷ್ಮೇಶ್ವರದಲ್ಲಿ ಬಾದಾಮಿ ಚಾಲುಕ್ಯರ ಕಾಲದ ಎಂಟನೆಯ ಶತಮಾನದ ಶಾಸನದಲ್ಲಿ ದೊರೆತಿರುವ ಉಲ್ಲೇಖವೇ ಈ ವಿಷಯದಲ್ಲಿ ಲಭ್ಯವಾಗಿರುವ ಅತ್ಯಂತ ಪ್ರಾಚೀನ ಉಲ್ಲೇಖ. ಹನ್ನೆರಡನೆಯ ಶತಮಾನದ ವಚನಕಾರರಾದ ಸೊಡ್ಡಳ ಬಾಚರಸ, ಮಾದಾರ ಚೆನ್ನಯ್ಯ ಮತ್ತು ಜೇಡರ ದಾಸಿಮಯ್ಯ ಅವರು ೧೮ ಜಾತಿಗಳ ವಿಷಯವನ್ನು ಹೇಳುತ್ತಾರೆ. ಸಾಮಾನ್ಯವಾಗಿ ವೈದಿಕ ಸಂಪ್ರದಾಯದ ನಾಲ್ಕು ವರ್ಣಗಳು ಮತ್ತು ಬೇರೆ ಹದಿನಾಲ್ಕು ಜಾತಿಗಳ ಹೆಸರುಗಳು ಸಾಹಿತ್ಯ ಕೃತಿಗಳಲ್ಲಿ ಉಲ್ಲೇಖವಾಗಿವೆ. ಆದರೆ ನಂತರ ಕಾಲದಲ್ಲಿ ಹದಿನೇಳನೆಯ ಶತಮಾನದ ಒಂದು ಸಾಹಿತ್ಯ ಕೃತಿಯಲ್ಲಿ ಹದಿನೆಂಟು ಜಾತಿಗಳಲ್ಲಿ ಲಿಂಗಾಯತ ಜಾತಿಯೂ ಸೇರಿದೆ. ಸರಿಸುಮಾರು ಕ್ರಿ.ಪೂ.೬೦೦ರಲ್ಲಿಯೇ ಕರ್ನಾಟಕದಲ್ಲಿ ಆರ್ಯೀಕರಣ ಆರಂಭವಾಗಿ ವೈದಿಕ ಸಂಪ್ರದಾಯದ ನಾಲ್ಕು ವರ್ಣಗಳನ್ನೊಳಗೊಂಡ ಸಾಮಾಜೀಕರಣ ಸ್ಥಾಪಿತವಾಗಿದ್ದರೂ

ಕರ್ನಾಟಕದ ಅನೇಕ ಜಾತಿಗಳು ಬುಡಕಟ್ಟು ಮೂಲದವು. ಉಲ್ಲೇಖಿತ ೧೮ ಜಾತಿಗಳಲ್ಲಿ ಬ್ರಾಹ್ಮಣರ ಹೆಸರು ಎಲ್ಲಕ್ಕೂ ಮೊದಲು ಬರುತ್ತದೆ. *ಯಜ್ಞ* (ಪುರೋಹಿತನಾಗಿ ಯಜ್ಞ ಮಾಡಿಸುವುದು), *ಯಾಜನ* (ಯಜ್ಞ ಕರ್ಮಗಳ ಪ್ರೇರೇಪಣೆ ಮಾಡುವುದು), *ಅಧ್ಯಯನ* (ಅಭ್ಯಾಸ ಮಾಡುವುದು), *ಅಧ್ಯಾಪನ* (ಇತರರಿಗೆ ಬೋಧಿಸುವುದು), ದಾನ ಕೊಡುವುದು, ದಾನ ಸ್ವೀಕರಿಸುವುದು.[೨೬]

ಕೃಷಿಕರೆಲ್ಲರೂ ಶೂದ್ರರೆಂದು ಒಬ್ಬ ವಚನಕಾರ ಹೇಳುತ್ತಾನೆ. ನಂತರ ಒಕ್ಕಲಿಗ ಎಂಬುದು ಒಂದು ಜಾತಿಯೆಂದು ಹೇಳಲಾಗಿದೆ. ಸಾಂಪ್ರದಾಯಿಕ ಪಟ್ಟಿಯಲ್ಲಿ ಉಲ್ಲೇಖಿತವಾದ ಇತರ ಜಾತಿಗಳು ಹೀಗಿವೆ. ಪಾಂಚಾಲರು (ಕಮ್ಮಾರರು, ಬಡಗಿಗಳು, ಶಿಲ್ಪಿಗಳು), ಅಗಸ (ಬಟ್ಟೆ ಒಗೆಯುವವನು), ನಾಯಿಂದ (ಹಜಾಮ), ಜೇಡ ಅಥವಾ ದೇವ (ನೇಯ್ಗೆ), ಚಿಪ್ಪಿಗ (ಬಟ್ಟೆ ಹೊಲಿಯುವವನು), ತೆಲ್ಲಿಗ (ಎಣ್ಣೆ ಮಾಡುವವ-ಗಾಣಿಗ), ಕುಂಬಾರ (ಮಡಕೆ ಮಾಡುವವನು), ಮೋಚಿ (ಪಾದರಕ್ಷೆ ಮಾಡುವವನು-ಚಮ್ಮಾರ), ಮೇದ (ಬುಟ್ಟಿ ಹೆಣೆಯುವವನು), ಗೊಲ್ಲ (ದನ ಕಾಯುವವನು), ತಂಬುಳಿಗ (ವೀಳ್ಯದೆಲೆ ವ್ಯಾಪಾರ ಮಾಡುವವನು), ದೊಂಬ (ದೊಂಬರಾಟ ಆಡುವವನು), ಉಪ್ಪಾರ (ಕಲ್ಲು ಕುಟ್ಟಿಗ) ಮತ್ತು ಹೊಲೆಯ.

ಈ ಹದಿನೆಂಟು ಜಾತಿಯ ಪಟ್ಟಿಗೆ ಸಾಹಿತ್ಯ ಆಕರಗಳೆ ಮುಖ್ಯ ಆಧಾರ. ವಾಸ್ತವವಾಗಿ ಹದಿನೆಂಟು ಜಾತಿಗಳು ಇರಲಿಲ್ಲ. ಕೆಲವು ಜಾತಿಗಳಿಗಿಂತ ಉಳಿದ ಕೆಲವು ಜಾತಿಗಳು ಶ್ರೇಷ್ಠ ಎಂಬ ನಂಬಿಕೆ ಪ್ರಾಚೀನ ಕಾಲದಿಂದ ರಕ್ತಗತವಾಗಿ ಬಂದಿದೆ.[೨೮] ನಾಲ್ಕು ವರ್ಣಗಳ ಬಗ್ಗೆ ಎಲ್ಲೋ ಕೆಲವು ಕಡೆ ಮಾತ್ರ ಉಲ್ಲೇಖಿಸುವ ಶಾಸನಗಳು ೧೮ ಜಾತಿಗಳನ್ನು ಕೆಲವು ಕಡೆ ೧೦೧ ಕುಲಗಳನ್ನು ಹೇಳುತ್ತವೆ. ೧೮ ಜಾತಿಗಳು ಇಲ್ಲಿ ಮುಖ್ಯವಾದವು. ಬ್ರಹ್ಮನ ತಲೆ, ಭುಜ, ತೊಡೆ, ಕಾಲುಗಳಿಂದ ನಾಲ್ಕು ವರ್ಣಗಳು ಹುಟ್ಟಿದವೆಂಬ ವೈದಿಕರ ಪ್ರಖ್ಯಾತ ಹೇಳಿಕೆಗೆ ಅನುಗುಣವಾಗಿ ವಚನಕಾರರು ತಮ್ಮ ೧೮ ಜಾತಿಗಳು ದೇಹದಲ್ಲಿಯೇ ಇವೆ ಎಂದು ಹೇಳುತ್ತಾರೆ. ಆಯಾ ಕಾಲಕ್ಕೆ ಅನುಗುಣವಾಗಿ, ಧರ್ಮ ಮತ್ತು ಜಾತಿಗಳು ಚರಿತ್ರೆಯಲ್ಲಿ ಪೈಪೋಟಿ ನಡೆಸಿರುವುದು ಕಾಣಬಹುದು. ಕರ್ನಾಟಕದ ಚರಿತ್ರೆಯು ಸಹ ಇದಕ್ಕೆ ಹೊರತಾಗಿಲ್ಲ. ಈ ಕುರಿತಂತೆ ಶಾಸನಗಳು ಸಹ ಹದಿನೆಂಟು ಜಾತಿ ಕುಲಗಳೆಂದು ಪ್ರಸ್ತಾಪಿಸುತ್ತದೆ. ಕುಲ, ನಾಡು, ಜಾತಿ ವಿಚಾರವಾಗಿ ಹದಿನೆಂಟು ಸಂಖ್ಯೆ ಇದ್ದಿರಲಾರದು. ಒಟ್ಟಾರೆಯಾಗಿ ಸಮಾಜದ ಎಲ್ಲಾ ಜನಸಮುದಾಯಗಳನ್ನು ವರ್ಗೀಕರಿಸಿ ಏಕಪ್ರಕಾರವಾಗಿ ಹೇಳುವಾಗ 'ಹದಿನೆಂಟು ಜಾತಿ' ಎಂದು ಬಳಕೆ ಮಾಡಿರುವುದು ಗಮನಿಸಬಹುದು.[೨೯] ವಿಜಯನಗರ ಕಾಲದ ಕ್ರಿ.ಶ.೧೩೬೮ರ ಬುಕ್ಕರಾಯನ ಕಾಲದ ಒಂದು ಶಾಸನವು ಜೈನರಿಗೆ ಮತ್ತು ವೈಷ್ಣವರಿಗೆ ಘರ್ಷಣೆ ಉಂಟಾದಾಗ ಇವರಿಬ್ಬರ ಜಗಳ ನಡೆದ ಸಂದರ್ಭದಲ್ಲಿ ಪಂಚಾಯಿತಿ ಕಟ್ಟೆಯಲ್ಲಿ ಜಾಂಬವ ಕುಲದವರಿಗೂ ಪ್ರಾತಿನಿಧ್ಯವಿತ್ತು. ಹದಿನೆಂಟು ಕುಲಗಳಲ್ಲಿ ಒಂದಾದ ಜಾಂಬವಕುಲವನ್ನು ಮಾದಿಗ ಶಬ್ದಕ್ಕೆ ಪರ್ಯಾಯವಾಗಿ ಬಳಸಲಾಗಿದೆ.[೩೦] ಈ ಮೇಲೆ ಗಮನಿಸಿದಂತೆ ಕರ್ನಾಟಕದ ಚರಿತ್ರೆಯಲ್ಲಿ ಹದಿನೆಂಟು ಜಾತಿಗಳು ಶಾಸನ ಸಾಹಿತ್ಯ ಇತರೆ ಆಕರಗಳಲ್ಲಿ ಪದೇ ಪದೇ ಕಾಣಿಸಿಕೊಳ್ಳುತ್ತದೆ.

## ೨.೪ ಕರ್ನಾಟಕದ ಕೆಲವು ಪ್ರಮುಖ ಅಸ್ಪೃಶ್ಯ ಜಾತಿಗಳು

ಮಧ್ಯಕಾಲೀನ ಕರ್ನಾಟಕ ಚರಿತ್ರೆಯಲ್ಲಿ ಕಂಡುಬರುವ ಕೆಲವು ಪ್ರಮುಖ ಅಸ್ಪೃಶ್ಯ ಜಾತಿಗಳ ಸರಳ ಪರಿಚಯವನ್ನು ಮಾಡಲು ಇಲ್ಲಿ ಪ್ರಯತ್ನಿಸಲಾಗಿದೆ. ಚರಿತ್ರೆಯಲ್ಲಿ ಹಿಂದೆ ಬಳಕೆಯಾಗುತ್ತಿದ್ದ ಮತ್ತು ಇಂದಿಗೂ ಬಳಕೆಯಾಗುತ್ತಿರುವ ಪದಗಳ ಸಂಕ್ಷಿಪ್ತ ಪರಿಚಯ ಈ ಮುಂದಿನಂತಿದೆ.

**ಹೊಲೆಯ**

ಹಳಗನ್ನಡದ *ಪೊಲೆಯ* ತಮಿಳಿನ *ಪುಲೈಯನ್*, ಮಲೆಯಾಳಂನ *ಪುಲಯನ್*, ಇವುಗಳ ಮೂಲ 'ಪೊಲೆ' (ಹೊಲೆ). ಪೊಲೆ ಎಂದರೆ ಅಶುದ್ಧ, ಕೊಳಕು ಎಂದರ್ಥ. ಪೊಲೆಯ ಎಂದರೆ ಕೊಳಕಾಗಿರುವನು ಎಂದಾಗಬಹುದು ಅಥವಾ ಮುಟ್ಟಿದರೆ ಮೈಲಿಗೆಯನ್ನು ಉಂಟುಮಾಡುವವನು ಎಂದಾಗಬಹುದು[೩೧]. ಮೂಲತಃ ಕಾರ್ಮಿಕರಾದ ಹೊಲೆಯರು ತೆಲುಗಿನ ಮಾಲರು, ತಮಿಳಿನ ಪರಿಯರು ಸಮಾನರೆಂದು ಗುರುತಿಸಲಾಗಿದೆ. 'ಹೊಲೆಯ' ಎಂಬ ಶಬ್ದ 'ಹೊಲ'ದಿಂದ ಬಂದಿದೆ. ಹೊಲೆಯ ಎಂದರೆ ಹೊಲದಲ್ಲಿ ತೊಡಗಿಕೊಂಡಿರುವವನು ಎಂದರ್ಥ. ಬಲಗೈ ಪಂಗಡಕ್ಕೆ ಸೇರಿದ ಇವರು ಹದಿನೆಂಟು ಜಾತಿಗಳಲ್ಲಿ ಒಂದು ಮತ್ತು ಕೊನೆಯ ಸ್ಥಾನ ಪಡೆದುಕೊಂಡಿರುವವರು.[೩೨] ಮರಾಠಿ ಹೊಲೆಯರಿಗೆ ಹುಲಸಾರರೆಂತಲೂ ಕರೆಯುತ್ತಾರೆ.[೩೩] ಪ್ರಾಚೀನ ಕಾಲದಿಂದಲೂ ಹೊಲೆಯರು ಹೊಲದೊಂದಿಗೆ ಅವಿನಾಭಾವ ಸಂಬಂಧವನ್ನು ಇಟ್ಟುಕೊಂಡು ಬಂದಿದ್ದಾರೆ. ಚರಿತ್ರೆಯಲ್ಲಿ ಕೂಲಿಕಾರರಾಗಿಯೇ ಕಾಣಿಸಿಕೊಳ್ಳುತ್ತಾರೆ. ಆದುದರಿಂದ ಹೊಲದಿಂದಲೇ 'ಹೊಲೆಯ' ಎಂಬ ಶಬ್ದ ಹುಟ್ಟಿಕೊಂಡಿರಬಹುದೆಂದು ಅಭಿಪ್ರಾಯಪಡಲಾಗಿದೆ.

**ಮಾದಿಗ**

'ಮಾದಿಗ' ಎಂಬ ಶಬ್ದದ ನಿಷ್ಪತ್ತಿ ಭಿನ್ನಾಪ್ರಾಯದಿಂದ ಕೂಡಿದೆ. ಮಾದಿಗರು ಈ ನಾಡಿನ ಮೂಲ ನಿವಾಸಿಗಳೆಂದು, *ಮಾತಂಗ* ಶಬ್ದದಿಂದ ಹುಟ್ಟಿರುವಂತೆ ಕಾಣುತ್ತದೆ. ಮಾತಂಗರು ಚರ್ಮದ ಕೆಲಸ ಮಾಡುವವರು ಹಾಗೂ ಹೊಲೆಯರ ನಂತರದ ಸ್ಥಾನವನ್ನು ಪಡೆದುಕೊಂಡಿರುವವರು. ಮಾತಂಗಿಯ ಸಂಸ್ಕೃತ ರೂಪಾಂತರ ಕಾಳಿ.[೩೪] ಚಕ್ಕಲಿಯನ್ ಎಂದು ತಮಿಳು ಪ್ರಾಂತ್ಯದಲ್ಲಿ ಕರಸಿಕೊಂಡರೆ, ಎಡಗೈ ಗುಂಪಿನವರೆಂದು ಗುರುತಿಸಿಕೊಂಡಿದ್ದಾರೆ. ಕನ್ನಡ ಮತ್ತು ತೆಲುಗು ಭಾಷೆಯನ್ನು ಮಾತನಾಡುತ್ತಾರೆ. ತುಮಕೂರು, ಬೆಂಗಳೂರು, ಕೋಲಾರ, ಚಿತ್ರದುರ್ಗದಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ.[೩೫] ಮಾದಿಗರಲ್ಲಿ ಹಲವು ಉಪಪಂಗಡಗಳಿವೆ.

**ಆದಿ ಕರ್ನಾಟಕ**

೨೦ನೇ ಶತಮಾನದ ಆರಂಭದಲ್ಲಿ ಈ ಪದವನ್ನು ಬಳಸಲಾಯಿತು. ಆದಿದ್ರಾವಿಡ, ಆದಿ ಆಂಧ್ರ, ಆದಿ ಕರ್ನಾಟಕ ಮುಂತಾದವುಗಳು ಇದೇ ಸಂದರ್ಭದಲ್ಲಿ ಹುಟ್ಟಿಕೊಂಡವು. ಮೂಲತಃ ಈ ನಾಡಿನ ಮೂಲನಿವಾಸಿಗಳೆಂಬ ಅರ್ಥಕ್ಕೆ ಬಳಸಿರುವಂತಿದೆ. ಕರ್ನಾಟಕದಲ್ಲಿ ಮಾದಿಗರು ತಾವೇ ಈ ನಾಡಿನ ಮೂಲನಿವಾಸಿಗಳು. ವಿಶ್ವದ ಸೃಷ್ಟಿಗಿಂತ ಆರು ತಿಂಗಳ ಮೊದಲೆ ತಾವು ಹುಟ್ಟಿದ ನಂತರ ಮಾದಿಗರು ಹುಟ್ಟಿದರೆಂದು, ಪದ್ಮಾವತಿ

ಜಾತಿಯವರೆಂದು, ಚಮ್ಮಾರರೆಂದು (ಚರ್ಮಕಾರರು), ತಮಿಳಿನ ಚಕ್ಕಲಿಯನ್‌ರಿಗೆ ಸಮಾನರೆಂದು ಗುರುತಿಸಲಾಗಿದೆ.[೨೬] ಈ ಪದವು ಇತ್ತೀಚಿನದಾದರೂ ಮೂಲದಲ್ಲಿ ಅದು ಅಸ್ಪೃಶ್ಯರನ್ನು ಪ್ರತಿನಿಧಿಸುತ್ತದೆ.

**ಬೇಗಾರ**

ಚರಿತ್ರೆಕಾರರು ಈ ಶಬ್ದ ಮೂಲತಃ ಬಿಟ್ಟಿ ಕೆಲಸದಿಂದ ಬಂದಿರಬಹುದೆಂದು ಊಹಿಸುತ್ತಾರೆ. ಬಹುಶಃ ಊರಿನ ಬಿಟ್ಟಿ ಕೆಲಸಗಳನ್ನು ಮಾಡುವವರು ಹಾಗೂ ಸಾರ್ವಜನಿಕ ಕೆಲಸಗಳಿಗೆ ಸ್ಪಂದಿಸಲು ಅಸ್ಪೃಶ್ಯರನ್ನು ನೇಮಿಸಿಕೊಳ್ಳಲಾಗುತ್ತಿತ್ತು. ಆದುದರಿಂದ ಅವರಿಗೆ ಬೇಗಾರರೆಂದು ಕರೆದಿರಬಹುದು. ಒತ್ತಾಯಪೂರ್ವಕ ಹೇರಲ್ಪಟ್ಟ ಪ್ರತಿಫಲವಿಲ್ಲದಿರುವ ಬಿಟ್ಟಿ ಕಾರ್ಯಗಳಿಗೆ *ಬೇಗಾರ್*[೨೭] ಎಂದು ಹೆಸರಿತ್ತು. ಹೊಲೆಯರು ಮತ್ತು ಮಾದಿಗರು ಕೃಷಿ ಜೀತದಾಳುಗಳಾಗಿ, ಬಿಟ್ಟಿಕಾರ್ಯಗಳನ್ನು ಮಾಡುತ್ತಿದ್ದರಿಂದ ಅವರನ್ನು ಈ ಹೆಸರಿನಿಂದ ಕರೆದಿರುವ ಸಾಧ್ಯತೆಗಳು ಹೆಚ್ಚಾಗಿವೆ.

**ಕಪ್ಪುಜನ**

ಈ ಪದ ಬಳಕೆಯ ನಿರ್ದಿಷ್ಟತೆಯನ್ನು ಗುರುತಿಸುವುದು ಕಷ್ಟಸಾಧ್ಯ. ಸಾಮಾನ್ಯವಾಗಿ ಬಹುತೇಕ ಬುಡಕಟ್ಟು ಸಮುದಾಯಗಳು ಮತ್ತು ಅಸ್ಪೃಶ್ಯರು ಹೆಚ್ಚಿನವರು ಕಪ್ಪು ಬಣ್ಣದವರಾಗಿದ್ದು ಉಳಿದವರು ಆ ಹೆಸರಿನಿಂದ ಕರೆದಿರುವ ಸಂಭವವಿದೆ. ಅಸ್ಪೃಶ್ಯರು ಈ ನಾಡಿನ ಮೂಲನಿವಾಸಿಗಳೆಂದು ಮೌಖಿಕ ಆಕರಗಳು ತಿಳಿಸುತ್ತವೆ. ವಿಜಯನಗರ ಆಳ್ವಿಕೆಯ ಸಂದರ್ಭದಲ್ಲಿ ಕಪ್ಪುಜನರನ್ನು ಮಾರಾಟ ಮಾಡುತ್ತಿದ್ದರು.[೨೮] ಅವರಲ್ಲಿ ಬಹುತೇಕರು ಅಸ್ಪೃಶ್ಯರು. ಅಂದರೆ ಅಸ್ಪೃಶ್ಯರಿಗೆ ಪರ್ಯಾಯವಾಗಿ 'ಕಪ್ಪುಜನ'ರೆಂದು ಕರೆಯುವ ಪದ್ಧತಿ ಬೆಳೆಯತೊಡಗಿತು. ಹಾಗೆಯೇ ದಲಿತರ ಪಂಗಡವಾದ ಚಲುವಾದಿಗಳು ಅಥವಾ ಕುಳವಾಡಿಗಳು ಬಲಗೈ ಗುಂಪಿನ ಹದಿನೆಂಟು ಜಾತಿಗೆ ಸೇರಿದವರು. ಚಲವಾದಿಯಾಗಿ ಹದಿನೆಂಟು ಫಣಗಳ ಸಭೆ ಸೇರಿಸುವವನು ಆತ. ಚಲವಾದಿ ಎಲ್ಲ ಫಣಗಳ ಚಿಹ್ನೆಗಳಿಗೆ ಸಂಕೇತವಾದ ಗಂಟೆ, ಸೌಟುಗಳ ರಕ್ಷಕ, ಹಿತ್ತಾಳೆಯ ಗಂಟೆ ಸೌಟುಗಳನ್ನು ಅದೇ ಲೋಹದಲ್ಲಿ ಮಾಡಿದ ಸರಪಳಿಯಿಂದ ಸೇರಿಸುತ್ತಾರೆ. ಅವನ ಸೌಟಿನಲ್ಲಿ ಒಕ್ಕಲಿಗರ ನೇಗಿಲು, ಬಣಜಿಗರ ತಕ್ಕಡಿ, ಕುರುಬರ ಕತ್ತರಿ, ಒಡ್ಡರ ಗುದ್ದಲಿ, ಕ್ಷೌರಿಕರ ಕತ್ತಿ, ಕುಂಬಾರರ ಚಕ್ರ ಇತ್ಯಾದಿ ಕೆತ್ತಲಾಗಿರುತ್ತದೆ. ಸೌಟಿನ ಬುಡದಲ್ಲಿ ಕತ್ತೆಯ ಚಿತ್ರವೂ ಒಬ್ಬ ಬಸವಿಯ ಚಿತ್ರವೂ ಇರುತ್ತದೆ. ಯಾವುದೇ ಸಾವು ಆದಾಗ ಹೆಣವನ್ನು ಹೂಳಲು ಅವನಿಂದ ಭೂಮಿಯನ್ನು ಕೊಂಡುಕೊಳ್ಳಬೇಕು. ಇದನ್ನು 'ನೆಲಹಾಗ'ವೆಂದು ದಕ್ಷಿಣ ಕರ್ನಾಟಕದಲ್ಲಿ ಕರೆಯುತ್ತಾರೆ (ನೆಲಹಾಗದ ಉಲ್ಲೇಖ ಹರಿಶ್ಚಂದ್ರ ಸಾಂಗತ್ಯ ಮತ್ತು ತುರಂಗ ಭಾರತಗಳಲ್ಲಿ ಇದೆ). ಭೂಮಿಯೆಲ್ಲವೂ ಮೊದಲು ಕುಳವಾಡಿಗೆ ಸೇರಿತ್ತು ಎಂದು ಜನರು ನಂಬುತ್ತಾರೆ[೨೯] ಪ್ರಾಚೀನ ಕಾಲದಲ್ಲಿ ಭೂಮಿಯು ದಲಿತರಿಗೆ ಸೇರಿತ್ತು ಎಂದು ಭಾವಿಸಲಾಗಿದೆ. ಆದರೆ ಅಂದು ಯಾವುದೇ ರೀತಿಯ ದಾಖಲೆಗಳನ್ನು ಸೃಷ್ಟಿಸಲು ಅವಕಾಶವಿಲ್ಲದ ಕಾರಣ ಅವರಿಂದ ಕ್ರಮೇಣ ಭೂಮಿಯನ್ನು ಬಿಡಿಸಿಕೊಂಡಿರುವ ಸಾಧ್ಯತೆಗಳು ಹೆಚ್ಚಾಗಿವೆ. ೧೮೯೨ರಲ್ಲಿ ತಮಿಳುನಾಡಿನ ಜಾಗೃತ ಅಸ್ಪೃಶ್ಯರು ತಮ್ಮನ್ನು ಆದಿದ್ರಾವಿಡರೆಂದು ಘೋಷಿಸಿಕೊಂಡರಲ್ಲದೆ ಆದಿದ್ರಾವಿಡ ಮಹಾಜನ ಸಭಾ ಕಟ್ಟಿಕೊಂಡರು. ಈ ಒಂದು ಆಧಾರದ ಮೇಲೆ ನಾಲ್ವಡಿ ಕೃಷ್ಣರಾಜ ಒಡೆಯರು

೧೯೫೫ರ ಅಕ್ಟೋಬರ್ ೨೩ರಂದು ಹೊಲೆಯ ಮತ್ತು ಪಂಚಮ ಎಂಬ ಜಾತಿಸೂಚಕ ಪದಗಳಿಗೆ ಬದಲಾಗಿ *ಆದಿಕರ್ನಾಟಕ* ಎಂಬ ಪದದ ಮೂಲಕ ನಿರ್ದೇಶಿಸುವ ಹಾಗೆ ಸರ್ಕಾರಿ ಆದೇಶ ಹೊರಡಿಸಿದರು.

**ದೋಹರ**

ದೋಹರ ಅಥವಾ ಡೋಹರರು ಉತ್ತರ ಕರ್ನಾಟಕದಲ್ಲಿ ಹೆಚ್ಚಿಗೆ ಕಂಡುಬರುತ್ತಾರೆ. ಇವರು ಮದ್ಯ ಮಾಂಸಗಳನ್ನು ಉಪಯೋಗಿಸುತ್ತಾರೆ. ಇವರು ಮೊದಲು ಮುಸಲ್ಮಾನರಾಗಿದ್ದರೆಂದು ಹೇಳುತ್ತಾರೆ. ಮುಖ್ಯವಾಗಿ ತೊಗಲಿಂದ ಚರ್ಮ ತಯಾರಿಸುವರು.[೪೦]

**ಸಂಬೋಳಿ**

ಮಧ್ಯಕಾಲೀನ ಕರ್ನಾಟಕದಲ್ಲಿ ಹೊಲೆಯರನ್ನು ಸಂಬೋಳಿಗಳೆಂದು ಕರೆಯುತ್ತಿದ್ದರು. *ಸಂಬೋಳಿ* ಪದದ ಮೊದಲ ಉಲ್ಲೇಖ ಕನ್ನಡದಲ್ಲಿ ಮೊದಲನೆಯ ನಾಗವರ್ಮನ (ಸು.೯೯೦) 'ಕರ್ನಾಟಕ ಕಾದಂಬರಿ'ಯಲ್ಲಿ ಕಾಣಿಸಿಕೊಳ್ಳುತ್ತದೆ. ಬಸವಣ್ಣನ ಸಮಕಾಲೀನನಾಗಿ ಸಂಬೋಳಿ ನಾಗಿದೇವ ಎಂಬ ಹೆಸರಿನ ದಲಿತ ಶಿವಭಕ್ತನಿದ್ದ. ಹರಿಜನರು ಸವರ್ಣೀಯರ ಊರೊಳಕ್ಕೆ ಬರುವಾಗ *ಸಂಬೋಳಿ* ಎಂದು ಕೂಗುತ್ತ ಕೋಲಿನಿಂದ ನೆಲವನ್ನು ಕುಟ್ಟುತ್ತ ಬರಬೇಕಿತ್ತು. ಆ ಕಾರಣ ಅವರನ್ನು ಸಂಬೋಳಿಗಳೆಂದು, ಅವರ ಕೋಲನ್ನು ಸಂಬಳಿಗೋಲೆಂದು ಕರೆಯುತ್ತಿದ್ದರು. ಹೀಗೆ ಸದ್ದುಮಾಡುವ ಪದ್ಧತಿಯನ್ನು ಫಾಹಿಯಾನನು ಉಲ್ಲೇಖಿಸಿದ್ದಾನೆ. ಹೇಮಚಂದ್ರನು ಚಂಡಾಲರು ಮತ್ತು ದೊಂಬರು ನೆಲಕ್ಕೆ ಕುಟ್ಟುವ ಕೋಲುಗಳನ್ನು *ಝುಂಝುರಿ* ಎಂದು *ಖಿಖ್ಖಿರಿ* ಎಂದು ಕರೆಯುತ್ತಾನೆ. ಇದು ಮರಾಠಿಯ ಸಂಭಾಳ (=ಎಚ್ಚರ) ಎಂಬುದಕ್ಕೆ ಸಂಬಂಧಿಸಿದ ಜ್ಞಾತಿಪದವಿರುವ ಸಾಧ್ಯತೆಗಳಿವೆ. 'ನಾವು ಬರುತ್ತಿದ್ದೇವೆ, ಎಚ್ಚರ, ದೂರವಿರಿ' ಎಂಬುದರ ಸೂಚನೆಯೇ ಸಂಬೋಳಿ ಎಂಬ ಕೂಗು. ಉತ್ತರ ಕರ್ನಾಟಕದ ಜಾತ್ರೆಗಳಲ್ಲಿ ಹಿಂದೆ (ಸಂಬಾಲ್ ಸಂಬಾಲ್=ದೂರ ಹೋಗಿ, ದಾರಿ ಬಿಡಿ) ಎಂದು ಕೂಗಿಕೊಂಡು ಸನ್ಯಾಸಿಗಳು ಬರುತ್ತಿದ್ದನ್ನು ಎಂ.ಚಿದಾನಂದಮೂರ್ತಿಯವರು[೪೧] ಹೇಳುತ್ತಾರೆ. ಇಂದಿಗೂ ಕೂಡ ಗ್ರಾಮೀಣ ಪ್ರದೇಶದಲ್ಲಿ ದಲಿತರು ಮೇಲ್ಜಾತಿಗಳ ಕೇರಿಗಳಿಗೆ ನಿರ್ಭಯವಾಗಿ ಬರುವುದಿಲ್ಲ.

**ಅಸ್ಪೃಶ್ಯ**

ಇದು ಪ್ರಾಚೀನ ಕಾಲದಿಂದಲೂ ಚಾಲ್ತಿಯಲ್ಲಿದೆ. *ಅಸ್ಪೃಶ್ಯ* ಎಂಬ ಪದವನ್ನು ಮೊದಲು ಬಳಸಿದವನು ಕಾತ್ಯಾಯನ. ಈ ಪದವು ಎರಡು ಕಡೆ (ಒಂದು ಸೂತ್ರದಲ್ಲಿ ಮತ್ತು ಒಂದು ಸ್ಮೃತಿಯಲ್ಲಿ) ಕಂಡುಬರುತ್ತದೆ. ಅದೇ ರೀತಿ ಅಂತ್ಯ ಪದ ಕೂಡಾ. ಅಂತ್ಯ ಪದವು ಆರು ಕಡೆಗಳಲ್ಲಿ (ಎರಡು ಸೂತ್ರಗಳಲ್ಲಿ ನಾಲ್ಕು ಸ್ಮೃತಿಗಳಲ್ಲಿ) ಕಂಡುಬಂದರೂ ಎಲ್ಲೂ ಅವರ್‍ಯಾರು ಎಂಬ ಬಗೆಗೆ ವಿವರಣೆ ಇಲ್ಲದಾಗಿದೆ. ಆದರೆ ಈ ವರ್ಗದಲ್ಲಿ ಯಾವ ಯಾವ ಜಾತಿಗಳು ಸೇರಿವೆ ಎಂಬುದನ್ನು ಯಾರು ಸೂಚಿಸಿಲ್ಲ. ಅಂತ್ಯಜರ ಬಗೆಗೆ ಧರ್ಮಸೂತ್ರವ್ಯಾವೂ ವಿವರ ನೀಡದೆ ಸ್ಮೃತಿಗಳಲ್ಲಿ[೪೨] ವಿವರಣೆಯಿದೆ. ವರ್ಣ ಸಂಕರದಿಂದ ಜನಿಸಿದವರನ್ನು ಮನು ಚಾತುರ್ವಣ್ಯದ ಹೊರಗೆ ಇಟ್ಟಿದ್ದಾನೆ. ಕರ್ನಾಟಕದ ಚರಿತ್ರೆಯಲ್ಲಿ ಈ ಪದವನ್ನು ಉಲ್ಲೇಖ ಮಾಡಿರುವುದನ್ನು ಗಮನಿಸಬಹುದು. ಆದರೆ ಈ ಪದವು ಮುಟ್ಟಬಾರದ, ಮುಟ್ಟಲಾಗದ, ಮುಟ್ಟಬಾರದವನು, ಹೊಲೆಯ ಎಂಬರ್ಥಗಳನ್ನು ಸೂಚಿಸುತ್ತದೆ,

ತಿಳಿಸುತ್ತದೆ.[೪೩] ಸಾಮಾನ್ಯವಾಗಿ ಹೊಲೆಯ-ಮಾದಿಗರಿಗೆ ಪರ್ಯಾಯವಾಗಿ ಈ ಪದವನ್ನು ಉಪಯೋಗಿಸುವುದು ಕಾಣಬಹುದು. ಆದರೆ ಈ ಪದದ ಉತ್ಪತ್ತಿ ಮತ್ತು ಮಾರ್ಪಾಟಿನ ಬಗೆಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಏಕೆಂದರೆ ಭಾಷ್ಯಕಾರರು ಇದನ್ನು ವಿಭಿನ್ನ ನೆಲೆಗಳಲ್ಲಿ ಅರ್ಥೈಸಿರುವುದು.

**ಸಮಗಾರ**

*ಸಮಗಾರ, ಮಚಿಗಾರ, ಡೋಹರ* ಎಂಬ ತ್ರಿಮತಸ್ಥ ಚರ್ಮಕಾರರು. ಸಮಗಾರರು ಮತ್ತು ಮೋಚಿಗಳು ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಉತ್ತರ ಕರ್ನಾಟಕದ ಅಸ್ಪೃಶ್ಯ ಜಾತಿಗಳಲ್ಲಿ ಡೋಹ, ಸಮಗಾರ, ಮೋಚಿಗಾರ ಎಲ್ಲಾ ಕ್ಷೇತ್ರಗಳಲ್ಲಿ ತೀರಾ ಹಿಂದುಳಿದಿರುವುದನ್ನು ಗಮನಿಸಬಹುದು. ಚರ್ಮೋದ್ಯೋಗವನ್ನು ಅವಲಂಬಿಸಿದ್ದರಿಂದ ಇವರನ್ನು ಚಮ್ಮಾರರೆಂದು ಸಂಬೋಧಿಸಲಾಗುತ್ತದೆ. ಇವರಲ್ಲಿ ಅನೇಕ ಪರ್ಯಾಯ ಜಾತಿಗಳಿವೆ.[೪೪] ಮದ್ರಾಸ್ ಜನಗಣತಿ ವರದಿ (೧೯೦೧) ಪ್ರಕಾರ ಇವರು ಮರಾಠಿ ಜಾತಿಯ ಚರ್ಮಕಾರರು ಮತ್ತು ಬಣ್ಣದ ಕೆಲಸಗಾರರು. ಮೈಸೂರು ಜನಗಣತಿ ವರದಿಯ ಪ್ರಕಾರ ಚರ್ಮದ ಕೆಲಸಗಾರರು. ಪಾದರಕ್ಷೆಗಳನ್ನು ತಯಾರಿಸುವವರು. ಇವರು ಮರಾಠಿ ಪ್ರಾಂತ್ಯದಿಂದ ವಲಸೆ ಬಂದಿರಬಹುದೆಂದು ಹೇಳಲಾಗಿದೆ. ಮೈಸೂರು ಪ್ರಾಂತ್ಯಕ್ಕೆ ಖಾಸಿಂಖಾನ್, ಔರಂಗಜೇಬ್ ಕಾಲಾವಧಿಯಲ್ಲಿ ಬಂದಿರಬಹುದು. 'ಮೋಚಿ' ಎಂಬ ಶಬ್ದ ಪ್ರತ್ಯೇಕವಾಗಿ ಎರಡು ಅರ್ಥಗಳನ್ನು ಒಳಗೊಂಡಿರುವಂತಿದೆ. ಮೈಸೂರು ಮತ್ತು ಮರಾಠ ಪ್ರಾಂತ್ಯಗಳಲ್ಲಿ ಇವರನ್ನು ಭಿನ್ನ ನೆಲೆಯಲ್ಲಿ ಅರ್ಥೈಸಲಾಗಿದೆ. ಮರಾಠಿ ಭಾಷಾ ಪ್ರಾಂತ್ಯದಲ್ಲಿ ಚರ್ಮಕಾರರು, ತೆಲುಗು ಭಾಷಾ ಪ್ರಾಂತ್ಯದಲ್ಲಿ ರಾಜು, ಚಿತ್ರಗಾರ ಎಂಬ ಹೆಸರುಗಳು ಕಂಡುಬರುವುದರಿಂದ ಮೂಲತಃ ಬಣ್ಣದ ಕೆಲಸ ಮಾಡುವವರು ಎಂದು ಅರ್ಥೈಸಬಹುದಾಗಿದೆ. ಪ್ರಾಚೀನ ಕಾಲದಿಂದಲೂ ಚರ್ಮದ ಕೆಲಸದಲ್ಲಿ ತೊಡಗಿಕೊಂಡಿರುವವರೆಲ್ಲಾ ಅಸ್ಪೃಶ್ಯರೆನಿಸಿಕೊಂಡಿರುವುದು ಗಮನಿಸಬಹುದಾದ ವಿಷಯ.[೪೫]

**ದಕ್ಕಲರು**

ಇವರನ್ನು ದೊಕ್ಕಲಾರು ಎಂದು ಸಹ ಕರೆಯುತ್ತಾರೆ. ಹೊಲೆಯ-ಮಾದಿಗರಿಗಿಂತ ಕೆಳಗಿನ ಜಾತಿಯವರೆಂದು ಹೇಳಲಾಗಿದೆ. ಇವರು ಸಂಚಾರಿಗಳು. ಊರಿಗೆ ಬಂದರೆ ಮಾದಿಗರು ಇವರಿಗೆ ಊಟಕ್ಕೆ ಹಾಕುತ್ತಾರೆ. ಕೇಳಗರು, ಬೀಳಗರು, ನಿಜಚುಕ್ಕರು, ಚಪ್ಪಲಿಚೇರಕರು, ಸರೋಬ ಚಂಡಾಳಿಯವರು ಎನ್ನುವವರು ಇನ್ನೂ ಕೀಳು ಜಾತಿಯವರು. ಸರೋಬ ಚಂಡಾಳಿಯವರಿಗೆ ಕೊರವರೆಂಬ[೪೬] ಹೆಸರೂ ಇದೆ. ಇವರು ಇತರೆ ಮೇಲ್ಜಾತಿಯವರ ಮನೆಮಠಗಳ ಸಮೀಪಕ್ಕೂ ಹೋಗುವಂತಿಲ್ಲ. ಮಾದಿಗರ ಕೇರಿಗೂ ಕಾಲಿಡುವಂತಿಲ್ಲ. ಮಾದಿಗರಿಂದ ಊಟೋಪಚಾರ ಪಡೆಯಬಹುದು. ಕೃಷ್ಣದೇವರಾಯನ ಕಾಲದಿಂದಲೂ ಕರ್ನಾಟಕದಲ್ಲಿ ನೆಲೆಸಿರುವುದಾಗಿ ಹೇಳಿಕೊಳ್ಳುತ್ತಾರೆ. ಕರ್ನಾಟಕದಲ್ಲಿ ಕಂಡುಬರುವ ದಕ್ಕಲರನ್ನು ಆಂಧ್ರದ ತೆಲಂಗಾಣ ವಿಭಾಗದಲ್ಲಿ ದಕ್ಕಲ, ದೊಕ್ಕಲರ ಎಂದು ಕರೆಯುತ್ತಾರೆ. ಕರ್ನಾಟಕದಲ್ಲಿ *ದಕ್ಕಲಿಗ, ದಕ್ಕಲ, ದಕ್ಕಾಲ, ದಕ್ಕಾಲ್ಲಾರ, ಡಕ್ಕಲೇರ್, ದೊಕ್ಕಲ* ಇತ್ಯಾದಿ ಹೆಸರುಗಳಿಂದ ಕರೆಯುತ್ತಾರೆ. 'ದಕ್ಕಲಮಾನಿ'ಯಿಂದ ಇವರಿಗೆ 'ದಕ್ಕಲ' ಎಂಬ ಹೆಸರು ಬಂದಿರುವುದಾಗಿ ತಿಳಿಸುತ್ತಾರೆ.[೪೭]

**ಡೊಂಬರು**

*ಡೊಂಬ* ಎಂಬ ಪದಕ್ಕೆ ಪರ್ಯಾಯವಾಗಿ ದೊಂಬ, ದೊವರ ಶಬ್ದಗಳು ಬಳಕೆಯಲ್ಲಿವೆ. ಕರ್ನಾಟಕದಲ್ಲಿ ಇವರನ್ನು ದೊಂಬರು ಎಂದು ಕರೆಯಲಾಗುತ್ತಿದೆ. ಮೂಲತಃ ದಕ್ಷಿಣ ಭಾರತದವರು. ಬಂಗಾಳ, ಬಿಹಾರ, ಒರಿಸ್ಸಾಗಳಲ್ಲಿ ಕಾಣಸುತ್ತಾರೆ. ದೊಂಬರನ್ನು ಚಂಡಾಲ, ಪರಿಯರ ಜೊತೆ ಹೋಲಿಸಲಾಗುತ್ತಿದೆ. *ಪಾಣ, ಪೈದಿ* ಮುಂತಾದ ಗುಂಪುಗಳನ್ನು ದೊಂಬರಿಗೆ ಸಮಾನ ಅಲೆಮಾರಿ ಗುಂಪುಗಳೆಂದು ಗುರುತಿಸಲಾಗಿದೆ. ೧೯೭೨ರಲ್ಲಿ ಎಲ್.ಜಿ.ಹಾವನೂರು ವರದಿಯ ಪ್ರಕಾರ ಇವರನ್ನು ಪರಿಷ್ಕೃತ ಜಾತಿ ಪಟ್ಟಿಗೆ ಸೇರಿಸಲಾಗಿದೆ.[೪೯]

**ಮೇರರು**

ಮುಗೇರ, ಮೇರ, ಹಸಲ, ಕೂಸಾಳು, ದಿಕ್ಕರು, ಮುಂತಾದ ಹೆಸರುಗಳಿಂದ ಕರೆಯಲಾಗುವ ಇವರು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ. ತುಳುನಾಡಿನಾದ್ಯಂತ ಈ ಜನ ವಾಸಿಸುತ್ತಾರೆ. ಆದರೆ ಮೇರ, ಮುಗೇರ ಶಬ್ದಗಳು ಒಂದೇ ಎಂದು ಹೇಳಲು ಸಾಕಷ್ಟು ಆಧಾರಗಳು ಸಾಲದು ಎಂದು ವಿದ್ವಾಂಸರ ಅಭಿಪ್ರಾಯ. ಜೈನರ ಆಳ್ವಿಕೆಯಲ್ಲಿ ತುಳುನಾಡಿನ ಕಾಡುಗಳಲ್ಲಿ ನೆಲೆಸಿದ್ದ ತೀರ ಹಿಂದುಳಿದ ಹೊಲೆಯ ಜನಾಂಗ ಯೋಧರಾಗಿದ್ದರು, ಹೊಲೆಯರ ಕೆಳವರ್ಗದ *ಕೊರಗ, ಪಾಗಾರ, ನಲಿಕೆ, ಮೇರರು* ಮುಂತಾದ ವರ್ಗಗಳನ್ನು ಪ್ರಾಚೀನ ಸಂಸ್ಕೃತಿಯ ಪಳೆಯುಳಿಕೆಗಳನ್ನು ಕಾಣಬಹುದು. ಆರಂಭ ಅರಸರಾದ ಆಳುಪರ ಸೇನೆಗಳಲ್ಲಿ ಹೊಲೆಯರು ಯೋಧರಾಗಿ ಕೆಲಸ ಮಾಡಿದ ಬಗೆಗೆ ಶಾಸನಾಧಾರ[೫೦]ಗಳಿರುವುದನ್ನು ಗಮನಿಸಬಹುದು. ಮೇರರು ತುಳುನಾಡಿನ ಪ್ರದೇಶದಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ. ಇ.ಥರ್ಸ್ಟನ್ ಅವರು ಮೇರರನ್ನು ಹೊಲೆಯ ಜನಾಂಗದ ಒಂದು ಉಪಪಂಗಡವೆಂದು ಹೇಳುತ್ತಾರೆ. ದಕ್ಷಿಣ ಕನ್ನಡ ಜಿಲ್ಲೆಯ ಕುಂದಾಪುರ ಮತ್ತು ಉಡುಪಿ ತಾಲೂಕುಗಳ ಕನ್ನಡ ಪ್ರದೇಶದಲ್ಲಿ ವಾಸಿಸುವ ಪಾಣಾರ, ಉಪ್ಪಾರ, ಬತ್ತಾಡ, ಹಸ್ಲ, ಮೇರ ಮುಂತಾದ ಹರಿಜನ ವರ್ಗಗಳಿವೆ.[೫೧] ತುಳುನಾಡಿನ ಪ್ರದೇಶದಲ್ಲಿ *ಮನ್ಸ, ಮೇರ, ಮುಂಡಾಲ* (ಬಾಕುಡ) ಇತ್ಯಾದಿ ಉಪಪಂಗಡಗಳಿವೆ. ಇವುಗಳು ಪರಿಶಿಷ್ಟ ಜಾತಿಗಳಾಗಿವೆಯೇ ಹೊರತು ಪರಸ್ಪರ ಸಂಬಂಧಗಳನ್ನು ಹೊಂದಿಲ್ಲ. ಮೇರರು ಮೂಲತಃ ಶ್ರಮಜೀವಿಗಳು. ಇವರ ಪ್ರಧಾನ ಕಸುಬು ಬೀಳಲ ಬುಟ್ಟಿ ಹೆಣೆದು ಮಾರುವುದು, ಕೊಜೆಂಟಿ, ಎಲಿಬೂರು, ಚೆನ್ನಬೂರು, ಮಾದೇರಿಬೂರು ಮೊದಲಾದ ಬೀಳಲುಗಳಿಂದ ವಿವಿಧ ಗಾತ್ರದ ಬುಟ್ಟಿಗಳು, ತೊಟ್ಟಿಲುಗಳು, ಗೆರಸೆ, ಕಳಸಿಗೆ, ಪೆಟ್ಟಿಗೆ ಮುಂತಾದವುಗಳನ್ನು ಸಿದ್ಧಗೊಳಿಸಿ ಮಾರಾಟ ಮಾಡುತ್ತಾರೆ. ಜೈನರ ಆಳ್ವಿಕೆಯಲ್ಲಿ ತುಳುನಾಡಿನ ಕಾಡುಗಳಲ್ಲಿ ನೆಲೆಸಿದ್ದ ತೀರ ಹಿಂದುಳಿದ ಹೊಲೆಯ ಜನಾಂಗದ ಯೋಧರಾಗಿದ್ದರೆಂದು ಬಿ.ಎ.ವಿವೇಕ ರೈ ಅವರು ಅಭಿಪ್ರಾಯಪಡುತ್ತಾರೆ.[೫೨] ತುಳುನಾಡಿನ ಅರಸರಾದ ಆಳುಪರ ಸೇನೆಗಳಲ್ಲಿ ಹೊಲೆಯರ ಯೋಧರಾಗಿ ಕೆಲಸ ಮಾಡಿದರೆಂದು ತಿಳಿಸುತ್ತಾರೆ.

**ಕೊರಗ**

ಕೊರಗ ಎಂಬ ಶಬ್ದದ ಅರ್ಥ ಭಿನ್ನಾಭಿಪ್ರಾಯದಿಂದ ಕೂಡಿದೆ. ಕ್ಯಾಂಪ್‌ಬೆಲ್ ಅವರು ಕೊರಗರನ್ನು ಕೊರದೇ ಅಥವಾ 'ಕೊರವರ್' ಎಂದು ದಾಖಲಿಸಿದ್ದಾರೆ. ಬುಕಾನನ್ ಅವರು ಕೊರರ್ ಇಲ್ಲವೆ *ಕೊರವರ್*

ಎಂದು ಉಲ್ಲೇಖಿಸಿದ್ದಾರೆ. ಲೂಯಿಸ್‌ರು 'ಕೊರ'ದಿಂದ ಕೊರಗ ಪದ ನಿಷ್ಪನ್ನವಾಗಿರುವ ಸಾಧ್ಯತೆಗಳನ್ನು ತಿಳಿಸಿದ್ದಾರೆ. ಕೊರ ಅಂದರೆ ಸೂರ್ಯ. ಸೂರ್ಯ ಕೊರಗರ ಆರಾಧ್ಯ ದೈವ. ಕೊರಗ ಪದವು 'ಕುರುವರ್' ಪದದಿಂದ ನಿಷ್ಪನ್ನವಾಗಿರುವುದು. ಕುರುವರ್ ಅಂದರೆ ಬೆಟ್ಟದಲ್ಲಿ ವಾಸಿಸುವವರು ಎಂದರ್ಥ.[illegible] ಕೊರಗರಲ್ಲಿ ಸುಮಾರು ಇಪ್ಪತ್ತೆರಡು ಉಪಪಂಗಡಗಳಿವೆ ಎಂದು ಹೇಳಲಾಗಿದೆ. ಕೊರಗರಲ್ಲಿ ಐದು ಒಳಪಂಗಡಗಳಿವೆ. *ಸೊಪ್ಪು ಕೊರಗರು, ಚಿಪ್ಪಿ ಕೊರಗರು, ಅಂಡೆ ಕೊರಗರು, ಮುಂಡು ಕೊರಗರು, ಬಾಪುಡ ಕೊರಗರು.* ಮೈಗೆ ಸೊಪ್ಪಿನ ಉಡುಗೆ ತೊಡುವವರನ್ನು ಸೊಪ್ಪಿನ ಕೊರಗರೆಂದು, ಮೊಣಕಾಲಿನವರೆಗೆ ಪಂಚೆ ತೊಡುವವರನ್ನು ಮುಂಡು ಕೊರಗರೆಂದು ಕರೆಯಲಾಯಿತು. ಕೊರಳಿಗೆ ಒಂದು ಬಗೆಯ 'ಅಂಕೆ'ಯನ್ನು ಕಟ್ಟಿಕೊಂಡಿರುವವರನ್ನು ಅಂಡೆ ಕೊರಗರೆಂದು ಕರೆಯಲಾಗಿದೆ. ಚಿಪ್ಪಿ ಕೊರಗರು ನೀರು ಕುಡಿಯುವ ಬದಲಿಗೆ ತೆಂಗಿನ ಚಿಪ್ಪನ್ನು ಕಟ್ಟಿಕೊಳ್ಳುವವರಾಗಿದ್ದವರು ಎಂದು ಹೇಳಲಾಗುತ್ತದೆ. ಬಾಕುಡ ಕೊರಗರ ಬಗ್ಗೆ ಸ್ಪಷ್ಟ ಮಾಹಿತಿಗಳಿಲ್ಲ. ಆದರೆ ದಕ್ಷಿಣ ಕನ್ನಡ ಜಿಲ್ಲೆಯ ಹೊಲೆಯ ಉಪಜಾತಿಯ ಹೆಸರು ಬಾಕುಡ ಎಂದಿರುವುದು.[illegible] ಚಿಂತಾರ್ಹವಾಗಿರುವುದು. ಕೊರಗರು ಮುಖ್ಯವಾಗಿ ಕರಾವಳಿ ಕರ್ನಾಟಕ, ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆ ಉದ್ದಕ್ಕೂ ನೆಲೆಸಿದ್ದಾರೆ. ಕೊರಗರ ಅತ್ಯಂತ ಮುಖ್ಯ ದೈವ ಕೊರಗ ತನಿಯ. ಈತನೇ ಕೊರಗರ ಸಾಂಸ್ಕೃತಿಕ ನಾಯಕ.

**ಹರಿಜನ**

'ಹರಿಜನ' ಎಂಬ ಪದವು ಅಸ್ಪೃಶ್ಯರಿಗೆ ಬಳಸಲಾಗುವ ಪದ. ಈ ಶಬ್ದವನ್ನು ಯಾರು, ಯಾವಾಗ ಬಳಸಿದರು ಎಂಬುದು ಭಿನ್ನಾಭಿಪ್ರಾಯದಿಂದ ಕೂಡಿದೆ. ಗುಜರಾತಿನ ಬ್ರಾಹ್ಮಣ ಸಂತ ನರಸಿಂಹ ಮೆಹ್ತಾರವರಿಂದ ಬಳಕೆಯಾಗಿದೆ ಎಂದು ಹೇಳಲಾಗಿದೆ. ತದನಂತರ ಈ ಶಬ್ದವನ್ನು ಗಾಂಧೀಜಿಯವರು ಪ್ರಸಿದ್ಧಿ ಮಾಡಿದರು. ಇದರಿಂದ ಅಸ್ಪೃಶ್ಯರನ್ನು ಹರಿಜನರೆಂದು ಕರೆಯುವ ರೂಢಿ ಮುಂದುವರಿಯಿತು. ೧೯೩೨ರಲ್ಲಿ 'ಹರಿಜನ' ಎಂದರೆ *ದೇವರ ಮಕ್ಕಳು* ಎಂಬ ಅರ್ಥ ನೀಡಿ ಪ್ರಚಾರ ಮಾಡಿದರು. ೧೯೩೫ರಲ್ಲಿ ಸೈಮನ್ ಕಮಿಷನ್ *ಪರಿಶಿಷ್ಟ ಜಾತಿಗಳು* ಎಂದು ಕರೆಯಿತು. ಆದರೆ ಅಸ್ಪೃಶ್ಯರಿಗೆ ಹರಿಜನ ಎಂಬ ಪದವನ್ನು ನೀಡಿದ ಗಾಂಧೀಜಿಯವರ ಪ್ರಯೋಗಕ್ಕೆ ಬಿ.ಆರ್.ಅಂಬೇಡ್ಕರ್ ತೀಕ್ಷ್ಣವಾಗಿ ಪ್ರತಿಕ್ರಿಯಿಸಿ ಆ ಪದವನ್ನು ಬಳಸುವುದರ ವಿರುದ್ಧ ವಿರೋಧ ವ್ಯಕ್ತಪಡಿಸಿದರು.[illegible] ಇಂದಿಗೂ ಕೂಡ ಗ್ರಾಮೀಣ ಪರಿಸರದಲ್ಲಿ ದಲಿತರಿಗೆ ಹರಿಜನರೆಂದು ಕರೆಯುವ ರೂಢಿ ಇದೆ.

**ಪಂಚಮ**

ದಲಿತರಿಗೆ ಪಂಚಮರೆಂದು ಕರೆಯುವ ರೂಢಿ ಸಂಸ್ಕೃತ ವಿದ್ವಾಂಸರಿಂದ ಮುಂದುವರಿದಿದೆ. 'ಪಂಚಮ' ಎಂದರೆ ಸಂಸ್ಕೃತದಲ್ಲಿ ಐದನೆಯ ಎಂದರ್ಥ. ಸಾಮಾಜಿಕ ಹಿನ್ನೆಲೆಯಲ್ಲಿ 'ಐದನೆಯ ವರ್ಗ' ಎಂದು ಅರ್ಥೈಸಲಾಯಿತು. *ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ* ವರ್ಗಗಳಿಂದ ದೂರವಿಟ್ಟು ನೋಡುವ ಹವ್ಯಾಸ ಬೆಳೆಯಿತು. ದಲಿತರನ್ನು ನಾಲ್ಕು ವರ್ಣಗಳ ಆಚೆ ಇಟ್ಟು ನೋಡಲಾಗುತ್ತಿತ್ತು. ಆದರೆ ದಲಿತರು ಈ ಹೆಸರುಗಳಿಂದ ಕರೆಸಿಕೊಳ್ಳಲು ಇಚ್ಛಿಸುವುದಿಲ್ಲ.[illegible] ಆದರೂ ಸಹ ಪಂಚಮ ಎಂಬ ಶಬ್ದ ಎಂದಿನಿಂದ ಅಸ್ಪೃಶ್ಯರಿಗೆ

ಅನ್ವಯವಾಗುವಂತೆ ಕರೆಯಲಾಯಿತು ಎಂಬುದು ಅಸ್ಪಷ್ಟ. ಅಸ್ಪೃಶ್ಯರಿಗೆ ಮಾತ್ರ ಈ ಶಬ್ದ ಅನ್ವಯವಾಗುವಂತೆ ಉಪಯೋಗಿಸಲಾಯಿತೋ ಅಥವಾ ಇತರೆ ಅರ್ಥದಲ್ಲಿ ಬಳಸಿರುವ ಸಾಧ್ಯತೆಗಳಿವೆಯೋ ಎಂಬುದರ ಕುರಿತು ಅಧ್ಯಯನಗಳು ನಡೆಯಬೇಕಾಗಿದೆ.

'ಅಂತ್ಯಜ' ಎಂಬ ಶಬ್ದವು ಕೂಡ ಭಿನ್ನಾಭಿಪ್ರಾಯದಿಂದ ಕೂಡಿದೆ. ಸಾಮಾನ್ಯವಾಗಿ ಅಸ್ಪೃಶ್ಯರಿಗೆ ಅಂತ್ಯಜರೆಂದು ಕರೆದಿರುವ ಅರ್ಥಗಳು ಚರಿತ್ರೆಯಲ್ಲಿ ಸಿಗುತ್ತವೆ. ಅಂತ್ಯಜ ಎಂದರೆ ಸಾಮಾಜಿಕ ಶ್ರೇಣೀಕರಣದಲ್ಲಿ ಕೊನೆಯಲ್ಲಿ ಹುಟ್ಟಿದವರು ಎಂದರ್ಥ. ಅಸ್ಪೃಶ್ಯರು ಊರ ಹೊರಗಿನ ಪ್ರದೇಶದಲ್ಲಿ ವಾಸಿಸುತ್ತಿರಬೇಕೆಂದು ಈ ಶಬ್ದವು ಸೂಚ್ಯವಾಗಿ ತಿಳಿಸುವಂತಿದೆ. ಅಂದರೆ ಊರಿನ ಕೊನೆಯ ಭಾಗದಲ್ಲಿ, ಅಂತ್ಯ ಭಾಗದಲ್ಲಿ ವಾಸಿಸುತ್ತಿದ್ದರಿಂದ ಇವರಿಗೆ ಅಂತ್ಯಜರೆಂದು ಕರೆದಿರುವ ಸಂದರ್ಭಗಳು ಹೆಚ್ಚಾಗಿವೆ. ಹಾಗೆಯೇ ಸಾಮಾಜಿಕ ಶ್ರೇಣೀಕರಣದಲ್ಲಿ (ನಾಲ್ಕು ವರ್ಣಗಳನ್ನು ಹೊರತುಪಡಿಸಿ) ಕೊನೆಯಲ್ಲಿದ್ದುದರಿಂದ ಇವರನ್ನು ಅಂತ್ಯಜರೆಂದು ಕರೆದಿರುವ ಸಂಭವವಿದೆ.

**ದಲಿತ**

ಕರ್ನಾಟಕದಲ್ಲಿ ದಲಿತ ಪದ ಬಳಕೆಗೆ ಬರಲು ಮಹಾರಾಷ್ಟ್ರದ ದಲಿತ ಚಳವಳಿ ಕಾರಣ. ಬುದ್ದಣ್ಣ ಹಿಂಗಮಿರೆ ೧೯೭೩ರಲ್ಲಿ 'ದಲಿತ ಪತ್ರಿಕೆ' ಆರಂಭಿಸಿದರು. ಮುಂದೆ ಕೃಷ್ಣಪ್ಪ ನೇತೃತ್ವದಲ್ಲಿ ದಲಿತ ಸಂಘರ್ಷ ಸಮಿತಿ, ೧೯೭೪ರಲ್ಲಿ ಕರ್ನಾಟಕ ದಲಿತ ಸಂಘರ್ಷ ಸಮಿತಿ ಹುಟ್ಟಿತು. ಮಹಾರಾಷ್ಟ್ರದ ದಲಿತ ಪದಕ್ಕೆ ಬದಲಾಗಿ ಬೌದ್ಧ ಶಬ್ದವನ್ನು ಬಳಸಲು ಪ್ರಯತ್ನ ನಡೆಯಿತು. ಆದರೆ ಈ ದಲಿತರು ಯಾರು ಎಂಬ ಪ್ರಶ್ನೆಗೆ ನಿಖರವಾಗಿ ಒಂದು ಸಿದ್ಧಾಂತಕ್ಕೆ ಬರದಿರಲು ಭಿನ್ನಾಭಿಪ್ರಾಯಗಳೇ ಹೆಚ್ಚಾಗಿ ಕಾಣಿಸಿಕೊಂಡಿವೆ. ಮಾರ್ಕ್ಸ್‌ವಾದಿಗಳು, ಅಂಬೇಡ್ಕರ್‌ವಾದಿಗಳು, ಲೋಹಿಯಾವಾದಿಗಳು ಭಿನ್ನ ಬಗೆಯನ್ನು ನಿರೂಪಿಸುತ್ತಾರೆ. ಕರ್ನಾಟಕದ ದಲಿತ ಸಾಹಿತ್ಯ ಮತ್ತು ಚರಿತ್ರೆಗೆ ಸಾಹಿತ್ಯ ಮತ್ತು ಸಾಹಿತ್ಯೇತರ ಪ್ರೇರಣೆಗಳಾಗಿರುವುದನ್ನು ಗಮನಿಸಬಹುದಾಗಿದೆ.

ಹಿಂದಿಯ ಮಾರ್ಕ್ಸ್‌ವಾದಿಗಳ ಪ್ರಭಾವ, ಕೇರಳದ ಮಾರ್ಕ್ಸ್‌ವಾದಿ ಲೇಖಕರ ಸಾಹಿತ್ಯ, ಅಂತಾರಾಷ್ಟ್ರೀಯ ಕಪ್ಪು ಸಾಹಿತ್ಯ, ಗೆರಿಲ್ಲಾ ಸಾಹಿತ್ಯ ಪ್ರಭಾವ ಬೀರಿದೆ ಎಂದರೆ ತಪ್ಪಾಗಲಾರದು. ಇದರ ಜೊತೆಗೆ ಎಡಪಂಥೀಯ ಸಿದ್ಧಾಂತಗಳು, ಮತಾಂತರ ಪ್ರಸಂಗಗಳು, ಉಪಸಂಸ್ಕೃತಿಗಳ ಅಧ್ಯಯನ, ದುಃಖ ದುಮ್ಮಾನ ಮೂಲಸ್ಫೋಟ, ಭೂ ಆಕ್ರಮಣ ಹೋರಾಟ, ವೆಂಕಟಪ್ಪ ಆಯೋಗದ ವರದಿ, ಗಾಂಧಿ ಚಲನಚಿತ್ರ ಬಹಿಷ್ಕಾರ, ಖೋಟಾ ಜಾತಿಪತ್ರ, ಬೆತ್ತಲೆಸೇವೆ, ದೇವದಾಸಿ, ಕುದುರೆ ಮೋತಿಪ್ರಕರಣ, ಕಂಬಾಲಪಲ್ಲಿ ಪ್ರಕರಣ ಮುಂತಾದ ವಿಚಾರಗಳ ದಲಿತ ಸಾಹಿತ್ಯ ಮತ್ತು ಚರಿತ್ರೆಯ ಮೇಲೆ ಸಾಹಿತ್ಯೇತರ ಪ್ರೇರಣೆಗಳಾಗಿವೆ.[೫೭] ಈ ರೀತಿಯ ವಿಚಾರಗಳನ್ನು ಚರಿತ್ರೆಯೊಂದಿಗೆ ತಳುಕುಹಾಕಿ ನೋಡಿದಾಗ ಇದೇ ಬಗೆಯ ಪ್ರಕರಣಗಳು ಚರಿತ್ರೆಯುದ್ದಕ್ಕೂ ಕಾಣಿಸಿಕೊಳ್ಳುತ್ತವೆ. ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕದ ಚರಿತ್ರೆಯು ಇದಕ್ಕೆ ಸಾಕ್ಷಿಯಾಗಿದೆ. ದಲಿತ ಸಮುದಾಯಗಳು, ಆದಿವಾಸಿಗಳು ಮತ್ತು ಕೆಳಸಮುದಾಯಗಳು ಒಂದಲ್ಲಾ ಒಂದು ರೀತಿಯಿಂದ ಸಮಾಜದಲ್ಲಿ ಅಸ್ತಿತ್ವಕ್ಕಾಗಿ

ಹೋರಾಡಿವೆ; ಶ್ರಮಿಸಿವೆ, ಪ್ರಾಣತ್ಯಾಗವನ್ನು ಕೂಡ ಮಾಡಿವೆ. ದಲಿತರ ಸಾಮಾಜಿಕ ಅಸ್ತಿತ್ವ, ಬದುಕು-ಬವಣೆ ಅಂದಿಗೂ-ಇಂದಿಗೂ ಅವರ ಸಕಾರಾತ್ಮಕ ಬದಲಾವಣೇನು ಕಾಣುವುದಿಲ್ಲ.

'ದಲಿತ' ಎಂಬ ಪದ ಎಂದಿನಿಂದ ಹುಟ್ಟಿಕೊಂಡಿತೋ ಅಂದಿನಿಂದ-ಇಂದಿನವರೆಗೂ ಈ ಶಬ್ದದ ಬಗೆಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಪ್ರಾರಂಭದಲ್ಲಿ ದಲಿತರೆಂದರೆ ಅಸ್ಪೃಶ್ಯರು ಎನ್ನುವುದನ್ನು ಅನುಮೋದಿಸುವ ಪರಿಪಾಟವಿದ್ದುದನ್ನು ಕಾಣಬಹುದು. ಮಹಾರಾಷ್ಟ್ರ ದಲಿತ ಪ್ಯಾಂಥರ್ ಸಮಿತಿಯು ಈ ಪದವನ್ನು ಸ್ವಲ್ಪ ವಿಸ್ತರಿಸಿತು. ಈ ಶಬ್ದದ ಚಲಾವಣೆ ಇತ್ತೀಚಿನದಾದರೂ ಅದರ ಅಂತರಾಳ ಮತ್ತು ಆಶಯ ಮಾತ್ರ ಪ್ರಾಚೀನವಾದುದು. ಕನ್ನಡ ನಿಘಂಟುವಿನಲ್ಲಿ 'ದಲಿತ' ಎಂದರೆ ಒಡೆಯಲ್ಪಟ್ಟ, ಸೀಳಲ್ಪಟ್ಟ, ತುಂಡು ಮಾಡಲ್ಪಟ್ಟ, ನಾಶ ಮಾಡಲ್ಪಟ್ಟ, ಪುಡಿ ಮಾಡಲ್ಪಟ್ಟ, ಅರೆಯಲ್ಪಟ್ಟ, ಅರಳಿಸಲ್ಪಟ್ಟ, ವಿಕಾಸ ಎಂಬರ್ಥಗಳನ್ನು ಕೊಡಲಾಗಿದೆ.[೫೮] ದಲಿತರು ಅಂದರೆ ಯಾರು ಎಂಬ ಪ್ರಶ್ನೆಗೆ ಅರವಿಂದ ಮಾಲಗತ್ತಿಯವರ ವ್ಯಾಖ್ಯಾನಗಳನ್ನು ಅವಲೋಕಿಸುವುದು ಸೂಕ್ತವೆನಿಸುತ್ತದೆ. "ಶೋಷಣೆ ಎಂಬ ಪದಕ್ಕೆ ಜಾತಿ ಭೇದವಿಲ್ಲ; ಆರ್ಥಿಕ, ಸಾಮಾಜಿಕ, ರಾಜಕೀಯ ರಂಗದಲ್ಲೆಲ್ಲಾ ಶೋಷಣೆಗೆ ಒಳಗಾದ ಎಲ್ಲಾ ಜನರು ದಲಿತರು. ಪಂಚಮರು ಅಥವಾ ಬಹಿಷ್ಕೃತರು ಎಂದು ಕರೆಸಿಕೊಳ್ಳುವ ಅಸ್ಪೃಶ್ಯರೆಲ್ಲರೂ ದಲಿತರು. ಅಸ್ಪೃಶ್ಯರು ಸೇರಿದಂತೆ ಅಸ್ಪೃಶ್ಯತೆಯ ನೋವನ್ನು ಅನುಭವಿಸದಿದ್ದರೂ ಅಸ್ಪೃಶ್ಯರ ಹಾಗೆ ಆರ್ಥಿಕ, ಸಾಮಾಜಿಕ, ರಾಜಕೀಯ ರಂಗದಲ್ಲಿ ಶೋಷಣೆಗೆ ಒಳಗಾದ ಜನರು ಸೇರಿ ದಲಿತರಾಗುತ್ತಾರೆ. 'ದಲಿತ' ಎಂದರೆ ಅಸ್ಪೃಶ್ಯ ಹಾಗೂ ಸಣ್ಣ ಪ್ರಮಾಣದಲ್ಲಿ ಅಸ್ಪೃಶ್ಯತೆಯ ಅನುಭವವಿಲ್ಲದಿದ್ದರೂ ಅತ್ಯಂತ ವೇದನೆಗೆ ಒಳಗಾದ ಚದುರಿಹೋಗಿರುವ ಜನಾಂಗದ ಪ್ರತಿನಿಧಿಗಳು. ಪ್ರಗತಿಪರ ದಲಿತ ಹೋರಾಟಗಳೊಂದಿಗೆ ತಮ್ಮನ್ನು ಗುರುತಿಸಿಕೊಂಡವರು."[೫೯]

ಪರಿಶಿಷ್ಟ ಜಾತಿ-ಪಂಗಡ, ನವಬೌದ್ಧರು, ಕೃಷಿಕಾರ್ಮಿಕರು, ಭೂರಹಿತ ಮತ್ತು ಬಡರೈತರು ಹಾಗೂ ಮಹಿಳೆಯರು ಧರ್ಮದ ಹೆಸರಿನಲ್ಲಿ ರಾಜಕೀಯವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ ಶೋಷಣೆಗೆ ಒಳಗಾದವರು ದಲಿತರೆಂದೆನಿಸಿಕೊಳ್ಳುತ್ತಾರೆ[೬೦]. ಕರ್ನಾಟಕದ ಮಟ್ಟಿಗೆ 'ದಲಿತ' ಶಬ್ದದಿಂದ ಗುರುತಿಸಲ್ಪಡುವ ಜನಾಂಗವಾಗಲಿ, ಸಂಸ್ಕೃತಿಯಾಗಲಿ, ಸಾಹಿತ್ಯವಾಗಲಿ ಇತ್ತೀಚಿನ ವರ್ಷಗಳಲ್ಲಿ ಪ್ರಸಿದ್ಧಿ ಪಡೆದುದು ದಲಿತ ಸಂಘರ್ಷ ಸಮಿತಿಯ ಚಟುವಟಿಕೆಗಳಿಂದ ಎಂಬುದಂತೂ ನಿಜ. ದಲಿತ ಎಂಬುದು ಮಂತ್ರವಾಗಿ, ಶಕ್ತಿಯಾಗಿ ಪ್ರವಹಿಸತೊಡಗಿದುದನ್ನು ನಿರಾಕರಿಸುವಂತಿಲ್ಲ. 'ದಲಿತ' ಎಂದರೆ ಹಿಂಸೆಗೆ ಒಳಗಾದ, ದಮನಕ್ಕೆ ಒಳಗಾದ, ಶೋಷಣೆಗೆ ಒಳಗಾದ ಎಂಬುದರಿಂದ ಮೊದಲ್ಗೊಂಡು ಅದೊಂದು ಜೀವನ ಪದ್ಧತಿಯೆನ್ನುವವರೆಗೆ ಅದರ ಅರ್ಥಗಳನ್ನು ವಿಸ್ತರಿಸಲಾಗಿದೆ. ಚಾರಿತ್ರಿಕ ನೆಲೆಯಲ್ಲಿ 'ದಲ' ಎಂಬ ಸಂಸ್ಕೃತ ಶಬ್ದದಿಂದ ಬಂದುದು. ದಲನಕ್ಕೆ ಒಳಗಾದವರು ದಲಿತರು. *ದಲ* ಎಂದರೆ ಚೂರು, ತುಂಡು, ಭಾಗ, ಸೈನ್ಯ, ಕತ್ತಿಯ ಬಲೆ, ಸೈನ್ಯ ಬಲದಿಂದ ಕತ್ತಿಯ ಅಲಗಿನಿಂದ ಚೂರು ಚೂರಾದವರು, ಛಿದ್ರವಾದರು, ದಲನದ ಕ್ರಿಯೆಗೆ ಈಡಾದವರು. ಯಾರು ಶೋಷಿತರೋ ಅವರೇ ದಲಿತರು. ದಲಿತ ಪ್ಯಾಂಥರ್ಸ್ ಸಮಿತಿಯ ಈ ಪದವನ್ನು ಸ್ವಲ್ಪ ಹಿಗ್ಗಿಸಿ ೧೯೭೩ರ ಪ್ರಣಾಳಿಕೆಯಲ್ಲಿ ಪರಿಶಿಷ್ಟ ಪಂಗಡ, ನವಬೌದ್ಧರು, ಶ್ರಮಜೀವಿಗಳು ಭೂರಹಿತ ರೈತರು, ಕೃಷಿ ಕಾರ್ಮಿಕರು, ಮಹಿಳೆಯರು ಇವರೆಲ್ಲ ಧರ್ಮದ

ಹೆಸರಿನಲ್ಲಿ ರಾಜಕೀಯವಾಗಿ, ಆರ್ಥಿಕವಾಗಿ ಶೋಷಣೆಗೆ ಒಳಗಾದವರೇ ದಲಿತರು ಎಂದು ಒಮ್ವೆವಿಟ್[೬೧] ಅವರ ಅಭಿಪ್ರಾಯ.

ಅಸ್ಪೃಶ್ಯರನ್ನು ಗುರುತಿಸಲು ಪ್ರಥಮ ಬಾರಿಗೆ ಮರಾಠಿಯ 'ದಲಿತ' ಎಂಬ ಶಬ್ದವನ್ನು ಬಳಸಲಾಯಿತು. ಇದು ಮೂಲತಃ ಸಂಸ್ಕೃತ ಶಬ್ದ. ೧೮೩೧ರಲ್ಲಿ ರಚಿಸಲ್ಪಟ್ಟ ನಿಘಂಟುವಿನಲ್ಲಿ (ಮಾಲ್ಸ್‌ವರ್ತ್ಸ್ ಮರಾಠಿ-ಇಂಗ್ಲಿಷ್ ಡಿಕ್ಷನರಿ, ೧೮೩೧) ಈ ಕೆಳಗಿನ ಅರ್ಥಗಳನ್ನು ನೀಡಲಾಗಿದೆ. ಅಂದರೆ 'ದಲಿತ' ಎಂಬ ಪದದ ಅರ್ಥ ತಲಭಾಗ, ಮುರಿದುಹೋದ ತುಂಡು ತುಂಡಾಗಿರುವ ಎಂಬರ್ಥದಲ್ಲಿ ಬಳಕೆಯಾಗಿದೆ. ಇದನ್ನು ೧೯ನೇ ಶತಮಾನದ ಸಾಮಾಜಿಕ ಸುಧಾರಣೆಕಾರ ಫುಲೆಯವರು ಪ್ರಥಮಬಾರಿಗೆ ಬಳಸಿದರು.[೬೨] 'ದಲಿತ' ಎಂಬ ಪದವನ್ನು *ತುಳಿತಕ್ಕೊಳಪಟ್ಟ ವರ್ಗಗಳು* (ಡಿಪ್ರೆಸ್ಡ್ ಕ್ಲಾಸಸ್) ಎಂಬರ್ಥದಲ್ಲಿ ಹಿಂದಿ ಮತ್ತು ಮರಾಠಿ ಭಾಷೆಯಲ್ಲಿ ಬಳಸಲಾಯಿತು. ವಸಾಹತುಕಾಲೀನ ಆಡಳಿತ ವ್ಯವಸ್ಥೆಯಲ್ಲಿ ಬ್ರಿಟಿಷರು ಈ ವರ್ಗಗಳನ್ನು 'ಪರಿಶಿಷ್ಟ ಜಾತಿಗಳು' ಎಂದು ಕರೆದರು. ಅಂಬೇಡ್ಕರ್ ಅವರು ಈ ಪದವನ್ನು ಮರಾಠಿ ಭಾಷೆಯಲ್ಲಿ ಬಳಸಿದರು.[೬೩] ಅವರು ಈ ಪದವನ್ನು ಪರಿಶಿಷ್ಟ ಜಾತಿಗಳ ಸಮುದಾಯಕ್ಕೆ ಸೇರಿದವರನ್ನು ಕುರಿತು ಬಳಸಿದರು. ಪ್ರಾರಂಭದಲ್ಲಿ ಈ ಪದವು ಮಹಾರಾಷ್ಟ್ರದ 'ಮಹರ್' ಜನಾಂಗಕ್ಕೆ ಅನ್ವಯಿಸುವಂತೆ ಬಳಸಲಾಗಿತ್ತು. ಕಾಲಕ್ರಮೇಣ ಎಲ್ಲಾ ಅಸ್ಪೃಶ್ಯ ಜಾತಿಗಳನ್ನು ಈ ಹೆಸರಿನಿಂದ ಕರೆಯಲು ಪ್ರಾರಂಭಿಸಲಾಯಿತು.[೬೪]

ಭಾರತೀಯ ಸಾಮಾಜಿಕ ಸ್ತರವಿನ್ಯಾಸದಲ್ಲಿ ಅತ್ಯಂತ ತಳಮಟ್ಟದಲ್ಲಿ ಇರುವವರನ್ನು ಅಸ್ಪೃಶ್ಯರು ಎಂದು ಕರೆಯಲಾಗಿದೆ. ಭಾರತದ ಒಟ್ಟು ಜನಸಂಖ್ಯೆಯಲ್ಲಿ ಶೇ.೧೬ರಷ್ಟು ಸಂಖ್ಯೆ ಇವರದು. ಇವರನ್ನು ಚರಿತ್ರೆಯಲ್ಲಿ ವಿವಿಧ ಹೆಸರುಗಳಿಂದ ಕರೆಯಲಾಗುತ್ತಿತ್ತು. ಅಸ್ಪೃಶ್ಯರು, ಹರಿಜನರು (ಗುಜರಾತಿನ ಬ್ರಾಹ್ಮಣ ಸಂತ ನರಸಿಂಹ ಮೆಹ್ತಾರವರಿಂದ ಬಳಸಲಾದ ಈ ಶಬ್ದವನ್ನು ಗಾಂಧೀಜಿಯವರು ಪ್ರಸಿದ್ಧಿ ಮಾಡಿದರು), *ಹೊರ ಜಾತಿಗಳು* (ಎಕ್ಸ್ಟೀರಿಯರ್ ಕ್ಯಾಸ್ಟ್ಸ್, ಜೆ.ಎಚ್. ಹಟನ್ ಅವರಿಂದ ಬಳಕೆಯಾದ ಪದ), 'ತುಳಿತಕ್ಕೊಳಗಾದ ವರ್ಗಗಳು' (ಬ್ರಿಟಿಷ್ ಅಧಿಕಾರಿಗಳಿಂದ ಉಪಯೋಗಿಸಲಾದ ಶಬ್ದ) ಮುಂತಾದವುಗಳು. ಪ್ರಾಚೀನ ಕಾಲದಲ್ಲಿ ಇವರನ್ನು ಮ್ಲೇಚ್ಛ, ಚಂಡಾಲ (ಮನುವಿನಿಂದ ಉಪಯೋಗಿಸಲಾದ ಶಬ್ದಗಳು) *ಪಂಚಮ, ಅವರ್ಣ ನಿಷಾದ, ಪುಲಸ್ಕಾ, ಅಂತ್ಯಜ* ಮುಂತಾದ ಹೆಸರುಗಳಿಂದ ಕರೆಯಲ್ಪಡುತ್ತಿದ್ದರು.[೬೫]

ದಲಿತ (ಅಪ್ರೆಸ್ಡ್ ಅಥವಾ ಬ್ರೋಕೆನ್) ಎಂಬ ಪದವನ್ನು *ತುಳಿತಕ್ಕೊಳಪಟ್ಟ ವರ್ಗಗಳು* (ಡಿಪ್ರೆಸ್ಡ್ ಕ್ಲಾಸಸ್) ಎಂಬರ್ಥ ಬರುವಂತೆ ಹಿಂದಿ ಮತ್ತು ಮರಾಠಿ ಭಾಷೆಗೆ ರೂಪಾಂತರಿಸಲಾಯಿತು. ಬಿ.ಆರ್. ಅಂಬೇಡ್ಕರ್ ಅವರು ಈ ಪದವನ್ನು ಮರಾಠಿ ಭಾಷೆಯಲ್ಲಿ ಬಳಸಿದರು. ೧೯೩೦ರ ವೇಳೆಗೆ ಪೂನಾದ ಪತ್ರಿಕೆಯೊಂದರಲ್ಲಿ 'ದಲಿತ ಬಂಧು' (ಫ್ರೆಂಡ್ಸ್ ಆಫ್ ದಲಿತ್ಸ್) ಎಂಬ ಶೀರ್ಷಿಕೆಯಡಿಯಲ್ಲಿ ಪ್ರಕಟಿಸಿತು. ಈ ಪದವನ್ನು ಅಂಬೇಡ್ಕರ್ ಅವರು *ಚಿಂದಿಮಕ್ಕಳು* ಎಂಬರ್ಥದಲ್ಲಿ 'ದಲಿತ' ಎಂಬ ಪದ ಹೊಸ ಪದವನ್ನು ಇಂಗ್ಲಿಷ್‌ಗೆ ಭಾಷಾಂತರ ಮಾಡಿದರು.[೬೬] ಕರ್ನಾಟಕದ ಸಾಹಿತ್ಯ ಚರಿತ್ರೆಯನ್ನು ಅವಲೋಕಿಸಿದಾಗ ದಲಿತ ಸಾಹಿತ್ಯದ ಬಗೆಗೆ ಗಮನ ಹರಿಯುತ್ತದೆ. ಕನ್ನಡ ಪ್ರಾಚೀನ ಪಠ್ಯಗಳು ಈ ಪದವನ್ನು ಅಂದಿನ ಸಾಮಾಜಿಕ ಸನ್ನಿವೇಶದಲ್ಲಿ ಯಾವ

ಅರ್ಥದಲ್ಲಿ ಬಳಸಲಾಗಿದೆ ಎಂಬುದನ್ನು ಗಮನಿಸಬಹುದು. ದಲಿತ (ದಳಿತ) ಎಂಬ ಪದವು ಒಡೆದ, ಸೀಳಿದ; ಅರಳಿದ, ವಿಕಸಿತವಾದ; ಹಿಂದುಳಿದುದು, ಯಾವ ವರ್ಗವು ಇಂದಿನ ಪ್ರಚಲಿತ ವ್ಯವಸ್ಥೆಯಿಂದ ಅತ್ಯಂತ ದಲಿತವಾಗಿಯೋ..... ಅದೇ ವರ್ಗವು ಜಾಗೃತಿಯನ್ನು ಪಡೆದುಕೊಳ್ಳಬಲ್ಲದು, ದಮನಕ್ಕೆ ಒಳಗಾದವನು[೧೫] ದಲಿತ ಎಂದು ಅರಿಯಲಾಗಿದೆ. ಪಂಪಭಾರತದಲ್ಲಿ ಈ ಕುರಿತಂತೆ ಉಲ್ಲೇಖವಿರುವುದನ್ನು ಗಮನಿಸಬಹುದು.

ಕರ್ನಾಟಕದಲ್ಲಿ *ಹೊಲೆಯ, ಮಾದಿಗ, ಸಮಗಾರ, ಡೊಂಬ* ಮುಂತಾದ ಹೆಸರುಗಳು ಅಸ್ಪೃಶ್ಯರನ್ನು ಪ್ರತಿನಿಧಿಸುವ ಪದಗಳು. ಹಾಗೆಯೇ ಭಾರತದ ಇತರೆ ಪ್ರದೇಶಗಳಲ್ಲಿ ದಲಿತರನ್ನು ಬೇರೆ ಬೇರೆ ಹೆಸರುಗಳಿಂದ ಕರೆಯಲಾಗುತ್ತಿದೆ. ಆಂಧ್ರಪ್ರದೇಶದಲ್ಲಿ *ಆದಿ ಆಂಧ್ರ, ಮಾದಿಗ, ಮಾಲ* ಎಂಬ ಹೆಸರುಗಳಿಂದ ದಲಿತರನ್ನು ಗುರುತಿಸಲಾಗುತ್ತದೆ. ಅದೇ ರೀತಿಯಾಗಿ ತಮಿಳುನಾಡಿನಲ್ಲಿ *ಆದಿ ದ್ರಾವಿಡ, ಪರಿಯನ್, ಅಂಡೆ ಕೊರಗ* ಎಂಬ ಹೆಸರುಗಳಿಂದ ಕರೆಯಲಾಗುತ್ತಿದೆ. ಮಹಾರಾಷ್ಟ್ರದಲ್ಲಿ *ಮಹರ್, ಮಾಂಗ್, ಚಾಂಬರ್* ಎಂಬ ವಿವಿಧ ಹೆಸರುಗಳಿಂದ ದಲಿತರನ್ನು ಕರೆಯಲಾಗುತ್ತಿದೆ. *ದನಕ್, ಬಲೈ* ಎಂದು ರಾಜಸ್ಥಾನದಲ್ಲಿ; *ಪುಲಯ* ಎಂದು ಕೇರಳದಲ್ಲಿ; *ಬಾರಿ, ರಾಜಬನ್ಸಿ, ನಾಮಶೂದ್ರ* ಎಂದು ಬಂಗಾಳದಲ್ಲಿ; *ವಂಕರ್* ಎಂದು ಗುಜರಾತಿನಲ್ಲಿ; *ದುಸಾದ್* ಎಂದು ಬಿಹಾರದಲ್ಲಿ; *ಚೌರ* ಎಂದು ಹಿಮಾಚಲ ಪ್ರದೇಶದಲ್ಲಿ ಮತ್ತು ಒಟ್ಟಾರೆಯಾಗಿ ಉತ್ತರ ಭಾರತದಲ್ಲಿ *ರೇಗಾರ್* ಎಂಬ ಹೆಸರಿನಿಂದ ದಲಿತರನ್ನು[೧೬] ಗುರುತಿಸುತ್ತಾರೆ. ಈ ಮೇಲಿನ ವಿವಿಧ ಹೆಸರುಗಳಿಂದ ದಲಿತರನ್ನು ಗುರುತಿಸಲಾಗುತ್ತಿದೆ. ಹೆಸರುಗಳು ಬೇರೆ ಬೇರೆಯಾದರೂ ಅವರು ಸಾಂಪ್ರದಾಯಿಕವಾಗಿ ನಡೆಸಿಕೊಂಡು ಬರುತ್ತಿರುವ ವೃತ್ತಿಗಳು, ಸಾಮಾಜಿಕ ಸ್ಥಾನಮಾನ ಮುಂತಾದ ವಿಷಯಗಳಲ್ಲಿ ಯಾವುದೇ ವ್ಯತ್ಯಾಸವನ್ನು ಕಾಣಲಾಗುವುದಿಲ್ಲ. ಈ ಹಿನ್ನೆಲೆಯಲ್ಲಿ ಭಾರತದಾದ್ಯಂತ ಅವರು ಅನುಭವಿಸುತ್ತಿರುವ ನೋವು-ನಲಿವುಗಳು ಏಕರೂಪವಾಗಿ ಕಾಣಿಸಿಕೊಳ್ಳುತ್ತವೆ ಎಂದರೆ ತಪ್ಪಾಗಲಾರದು.

ದಲಿತರನ್ನು ಚರಿತ್ರೆಯಲ್ಲಿ ಬೇರೆ ಬೇರೆ ಹೆಸರುಗಳಿಂದ ಕರೆದಿರುವ ಬಗೆಗೆ ಆಧಾರಗಳಿವೆ. *ಅಸ್ಪೃಶ್ಯ, ಚಾಂಡಾಲ, ಅಂತ್ಯಜ, ಅಂತ್ಯವಸಾಯಿ, ದಸ್ಯು, ಬಹಿಷ್ಕೃತ, ಆದಿಮ ಜನಾಂಗ, ಪ್ಲವ, ಮಾತಂಗ, ದಿವಾಕೀರ್ತಿ, ನಿಷಾದ, ಶ್ವಪಚ, ಅಂತೇವಾಸಿ, ಪುಲ್ಕಸಾ, ದೊಂಬ, ಕೊರಗ, ಮೇರ, ಹೊರಹಿನವರು, ತಿರುಕುಲತ್ತರ್, ಪಂಚಮರು, ಹಿರಿಯ ಭಕ್ತ-ಕುಲ, ಆದಿದ್ರಾವಿಡ, ಆದಿ ಕರ್ನಾಟಕ, ದೋಹರ, ದಕ್ಕಲು, ಕಾಟಕ, ಕಪ್ಪುಜನ, ಅನಾಮಿಕ, ಹೊಲೆಯ, ಸಮಗಾರ, ಸಂಬೋಳಿ, ಬೇಗಾರ, ಮಾದಿಗ, ಹರಿಜನ, ಜಾತಿಬಾಹಿರರು* ಮುಂತಾದವು ಭಾರತೀಯ ಚರಿತ್ರೆಯ(ಕರ್ನಾಟಕವು ಸೇರಿದಂತೆ)ಲ್ಲಿ ಹೆಚ್ಚು ಕಡಿಮೆ ಈ ಮೂಲದ ಹೆಸರುಗಳು ಹೆಚ್ಚಾಗಿ ಕಾಣಿಸಿಕೊಂಡಿರುವುದನ್ನು ಗಮನಿಸಬಹುದು. ಕರ್ನಾಟಕದ ಚರಿತ್ರೆ, ಶಾಸನ ಮತ್ತು ಕಾವ್ಯಗಳನ್ನಾಧರಿಸಿ ಹೇಳುವಾಗ ಕೆಲವೊಂದು ಸಂದರ್ಭದಲ್ಲಿ ಜಾತಿ, ವಂಶ, ಕುಲ ವಿಷಯಗಳನ್ನು ಒಂದೇ ಅರ್ಥದಲ್ಲಿ, ಹಾಗೆಯೇ ಭಿನ್ನಭಿನ್ನವಾಗಿ ಬಳಸಿರುವ ವಿವರಗಳು ಲಭ್ಯವಾಗುತ್ತವೆ. ಇದು ಅಂದಿನ ಸಾಮಾಜಿಕ ಮತ್ತು ಆರ್ಥಿಕ ಹಿನ್ನೆಲೆಯನ್ನಾಧರಿಸಿದ ಪರಿಸ್ಥಿತಿಗಳಿಂದ ಈ ಬಗೆಯ ಭಿನ್ನತೆಗಳನ್ನು ಸೂಚಿಸಿರುವುದು ಗಮನಿಸಬಹುದು. ಕರ್ನಾಟಕದ ಚರಿತ್ರೆಯಲ್ಲಿ ಬಳಸಲಾಗಿರುವ ಕೆಲವು ಅಸ್ಪೃಶ್ಯ ಜಾತಿಗಳ ಸ್ಥೂಲವಾದ ಪರಿಚಯವನ್ನು ಈ

ಕೆಳಗಿನಂತೆ ನೋಡಬಹುದು. ಕೆಲವೊಮ್ಮೆ 'ಅಸ್ಪೃಶ್ಯ' ಎಂದು ಪರಿಗಣಿಸಲಾದ ಪಟ್ಟಿಯಲ್ಲಿ ಶೂದ್ರ ಜಾತಿಗಳು ಸೇರಿಕೊಂಡಿರುವ ವಿವರಗಳು ಚರಿತ್ರೆಯಲ್ಲಿ ದೊರಕುತ್ತವೆ.

## ೨.೫ ಅಸ್ಪೃಶ್ಯತೆ ಮತ್ತು ದಲಿತ

ಅಸ್ಪೃಶ್ಯತೆ ಎಂಬುದು ಮಾನವ ಸಮಾಜಕ್ಕೆ ಕಾಡುತ್ತಿರುವ ಭಯಂಕರ ರೋಗ. ಅದರ ಹುಟ್ಟು ಮತ್ತು ಬೆಳವಣಿಗೆ ಕುರಿತು ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದ್ದು ಸಾಮಾಜಿಕ ಸಂಕೋಲೆಯನ್ನು ನಿರ್ಮಿಸಿದ್ದು ಸತ್ಯ. ಪ್ರಾಚೀನ ಕಾಲದಿಂದಲೂ ವರ್ಣ, ಜಾತಿ, ಅಸ್ಪೃಶ್ಯತೆ ಪ್ರಭಾವ ಬೀರಿರುವಷ್ಟು ಕ್ಷೇತ್ರ ಮತ್ಯಾವುದು ಇರಲಾರದು. ಈಗಾಗಲೇ ಧರ್ಮಶಾಸ್ತ್ರಗಳು ಅಸ್ಪೃಶ್ಯತೆಯ ವಿಚಾರ ಕುರಿತು ಏನು ಹೇಳಿವೆ ಎಂಬುದನ್ನು ಗಮನಿಸಲಾಗಿದೆ. ಭಾರತೀಯ ಚರಿತ್ರೆಯಲ್ಲಿ ಕೆಲವೇ ಸಮುದಾಯಗಳನ್ನು 'ಅಸ್ಪೃಶ್ಯ' ಸಮುದಾಯಗಳೆಂದು ಗುರುತಿಸಿದ್ದು ಯಾರು? ಯಾಕಾಗಿ ಈ ರೀತಿಯ ವಿಂಗಡಣೆ ಅವರಿಗೆ ಸಾಧ್ಯವಾಯಿತು. ಜಗತ್ತಿನ ಬೇರೆ ಯಾವುದೇ ಭಾಗದಲ್ಲಿ ಇರಲಾರದ ಈ ಪದ್ಧತಿಯು ಭಾರತದಲ್ಲಿ ಮಾತ್ರ ಕಾಣಿಸಿಕೊಂಡು ಇಂದಿಗೂ ಮುಂದುವರಿಯುತ್ತಿರುವ, ಮುಂದೆಯೂ ಸಹ ನೆಲೆನಿಲ್ಲುವ ಎಲ್ಲಾ ಲಕ್ಷಣಗಳನ್ನು ಆವರಿಸಿಕೊಂಡಿದೆ. ಪ್ರಾರಂಭದಲ್ಲಿ ಯಾವುದೇ ಜಾತಿಗಳು ಇರಲಾರದೆ ಕೇವಲ ವೃತ್ತಿಗಳು ಮಾತ್ರ ಅಸ್ತಿತ್ವದಲ್ಲಿದ್ದವು ಎಂಬುದು ಋಗ್ವೇದ ಸಾಹಿತ್ಯದಲ್ಲಿ ಕಾಣಬಹುದು. ನಂತರದಲ್ಲಿ *ಬ್ರಾಹ್ಮಣ, ಕ್ಷತ್ರಿಯ, ವೈಶ್ಯ* ಮತ್ತು *ಶೂದ್ರ* ಎಂಬುದಾಗಿ ಕೆಲವು ವರ್ಗಗಳ ಹಿತಾಸಕ್ತಿಗೆ ಅನುಗುಣವಾಗಿ ವಿಂಗಡಿಸಿಕೊಳ್ಳಲಾಯಿತು. ಕರ್ನಾಟಕಕ್ಕೆ ಅನ್ವಯಿಸಿ ಹೇಳುವುದಾದರೆ ಅಸ್ಪೃಶ್ಯ ಜಾತಿಗಳೆಂದು ಕರೆಸಿಕೊಂಡಿರುವ ಹಲವು ಪರಿಶಿಷ್ಟ ಜಾತಿಗಳನ್ನು ಪ್ರಾಚೀನ ಕಾಲದಿಂದಲೂ ದೂರ ಇಡಲಾಗಿದೆ. ನೋವು, ಅಪಮಾನ, ದಣಿವು, ಬಹಿಷ್ಕಾರ, ಎಲ್ಲಾ ರೀತಿಯ ಸಂಕೋಲೆಗಳಿಂದ ಬಿಗಿಗೊಳಿಸಿ ಅವರನ್ನು ಹತ್ತಿಕ್ಕಲಾಗಿದೆ. ಚರಿತ್ರೆ, ಶಾಸನ, ಸಾಹಿತ್ಯ ಮುಂತಾದ ಆಕರಗಳಲ್ಲಿ ಅವರ ಪ್ರಸ್ತಾಪವೇ ಒಟ್ಟು ಸಮುದಾಯಗಳ ಹೀನ ಸ್ಥಿತಿಯನ್ನು ನೆನಪಿಸುವಂತಿದೆ. ಇದರಿಂದಾಗಿ ಅಸ್ಪೃಶ್ಯತೆಯು ಒಂದು ಘೋರವಾದ ದಮನ ನೀತಿಯಾಗಿದ್ದು ಕೆಲವೇ ಸಮಾಜಗಳಿಗೆ ಮಾರಕವಾಗಿ ಪರಿಣಮಿಸಿದೆ. ಈ ಹಿನ್ನೆಲೆಯಲ್ಲಿ ಇತ್ತೀಚಿನ ದಿನಮಾನಗಳಲ್ಲಿ ಬಹುತೇಕ ದಲಿತ ಬುದ್ಧಿಜೀವಿಗಳು 'ಅಸ್ಪೃಶ್ಯತೆ' ಎಂಬ ಶಬ್ದ ತಮ್ಮ ಮೇಲೆ ಭಯಂಕರ ಪರಿಣಾಮ ಬೀರುತ್ತಿದ್ದು ಅದರ ಬದಲಿಗೆ 'ದಲಿತ' ಎನ್ನುವ ಶಬ್ದವೇ ನಮಗೆ ಮಾನಸಿಕ ನೆಮ್ಮದಿ ಮತ್ತು ಬಿಡುಗಡೆಯ ಆಶಯಗಳಿವೆ ಎಂದು ಪ್ರತಿಪಾದಿಸಿದರು. ವಿಚಿತ್ರವೆಂದರೆ ಎರಡೂ 'ಸಂಸ್ಕೃತ' ಶಬ್ದಗಳೇ. ಒಂದು ಸಂಕೋಲೆಯನ್ನು ಪ್ರತಿಪಾದಿಸಿದರೆ ಮತ್ತೊಂದು ಬಿಡುಗಡೆಯ ನೆಲೆಗಳನ್ನು ಪ್ರತಿನಿಧಿಸುತ್ತದೆ ಎಂದು ಹೇಳಿದರೆ ತಪ್ಪಾಗಲಾರದು. 'ದಲಿತ' ಎಂಬ ಶಬ್ದದ ಹುಟ್ಟು ಮತ್ತು ಬೆಳವಣಿಗೆಯ ಕುರಿತು ಈ ಹಿಂದೆ ಚರ್ಚಿಸಲಾಗಿದೆ. ಈ ಪದವು ಅಸ್ಪೃಶ್ಯತೆ ಎಂಬ ಪದಕ್ಕೆ ಪರ್ಯಾಯವಾಗಿ ಹುಟ್ಟಿಕೊಂಡರೂ ಕಾಲಕ್ರಮೇಣ ಅದನ್ನು ವಿಸ್ತಾರಗೊಳಿಸಿದರು. 'ದಲಿತ' ಎಂಬ ವ್ಯಾಪ್ತಿಯೊಳಗೆ ಅನೇಕ ಸ್ಪೃಶ್ಯ ಸಮುದಾಯಗಳನ್ನು ಸೇರಿಸಿ ಪ್ರಸಿದ್ಧಿ ಮಾಡಿದರು. ಆದುದರಿಂದ ಇದರ ಕುರಿತು ಇಂದಿಗೂ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಆದರೆ ಮೂಲತಃ 'ಅಸ್ಪೃಶ್ಯರಿಗೆ' ಮಾತ್ರ ಅನ್ವಯಿಸಿ ಕರೆಯಲು ಶಬ್ದವನ್ನು ಹುಟ್ಟು ಹಾಕಿದರು. ಮಾದಿಗ, ಹೊಲೆಯ, ದೊಂಬ ಮುಂತಾದ ಶಬ್ದಗಳಿಂದ ತಮ್ಮನ್ನು ಗುರುತಿಸಿಕೊಳ್ಳಲು ಇಷ್ಟಪಡದೆ

ದಲಿತರು ಎಂಬ ಹೆಸರಿನಿಂದ ಗುರುತಿಸಿಕೊಳ್ಳುತ್ತಾರೆ. ಹೀಗೆ ಗುರುತಿಸಿಕೊಳ್ಳುವಾಗ ಮಾದಿಗ ಎಂಬ ಶಬ್ದವು ಮೇಲ್ಜಾತಿಗಳಲ್ಲಿ ಅಸಹ್ಯ ಮತ್ತು ಕೀಳುಭಾವನೆಯಿಂದ ನೋಡುವ ಪರಿಪಾಟವೆ ಹೆಚ್ಚು. ಈ ಬಗೆಯ ಮಾನಸಿಕ ಯಾತನೆಗಳಿಂದ ಬಿಡುಗಡೆಗೊಳ್ಳಲು 'ದಲಿತ' ಎಂಬ ಶಬ್ದದಿಂದ ಗುರುತಿಸಿಕೊಳ್ಳಲು ಇಚ್ಛಿಸುತ್ತಾರೆ. ಆದುದರಿಂದ ಇವೆರಡು ಸಂಸ್ಕೃತ ಹಿನ್ನೆಲೆಯಿಂದ ಬಂದಿದ್ದರೂ 'ದಲಿತ' ಎಂದು ಹೇಳುವುದರಲ್ಲಿ ಹಲವು ಬಗೆಯ ಪರಿಹಾರದ ರೂಪಗಳು ಇವೆ. ಅಸ್ಪೃಶ್ಯ ಎಂಬುದು ಮೂಲತಃ ಸಂಸ್ಕೃತ ವಿದ್ವಾಂಸರು ಹುಟ್ಟುಹಾಕಿ ಉದ್ದೇಶಪೂರ್ವಕವಾಗಿ ಇನ್ನೊಬ್ಬರ ಮೇಲೆ ಹೇರಲ್ಪಟ್ಟಿದ್ದಾರೆ. ಸ್ವತಃ ಅಸ್ಪೃಶ್ಯರೇ ಈ ಶಬ್ದವನ್ನು ಸೃಷ್ಟಿಸಿಕೊಂಡಿಲ್ಲ. ಇದರ ಜೊತೆಗೆ ಯಾರು ಅಸ್ಪೃಶ್ಯರು ಎನ್ನುವ ಬಗೆಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿರುವುದನ್ನು ಗಮನಿಸಬಹುದು.

ವಿಭಿನ್ನ ಬಗೆಯ ದೃಷ್ಟಿಕೋನದಿಂದ ಇವೆರಡು ಶಬ್ದಗಳನ್ನು ಗಮನಿಸಿದಾಗ ದಲಿತ ಎನ್ನುವುದು ಹಲವು ಸಮುದಾಯಗಳಲ್ಲಿ ಭಿನ್ನ ಬಗೆಯಲ್ಲಿ ನಿರ್ವಚಿತವಾಯಿತು. ಅಸ್ಪೃಶ್ಯತೆಯು ಜಾತಿ ವ್ಯವಸ್ಥೆಯ ಅವಿಭಾಜ್ಯ ಅಂಗವೆಂಬುದು ಅಂಬೇಡ್ಕರ್ ಅವರ ದೃಢವಾದ ನಿಲುವಾಗಿತ್ತು. ಇದನ್ನು ಸಮಾಜದ ರಾಜಕೀಯ, ಆರ್ಥಿಕ, ಸಾಮಾಜಿಕ ಹಿನ್ನೆಲೆಯಲ್ಲಿ ಅನ್ವಯಿಸಿ ವಿಶ್ಲೇಷಿಸಲು ಯತ್ನಿಸಿದರು. ಉಳಿದ ಬಹುತೇಕ ಚಿಂತಕರು ಇದನ್ನು ಅನುಕಂಪದ ಆಧಾರದ ಮೆಲೆ ನಿಶ್ಚಯಿಸಿ ಸುಮ್ಮನಾಗುತ್ತಾರೆ.

## ೨.೬ ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

ಕರ್ನಾಟಕದ ಚರಿತ್ರೆಯು ಇತ್ತೀಚಿನ ದಿನಮಾನಗಳಲ್ಲಿ ಹೊಸ ಬಗೆಯ ಸಂಶೋಧನೆಗೆ ಒಳಪಡುತ್ತಿದೆ. ಈಗಾಗಲೇ ಅಧ್ಯಯನಕ್ಕೆ ಒಳಪಡದೇ ಇರುವ ಕ್ಷೇತ್ರಗಳತ್ತ ತನ್ನ ವ್ಯಾಪ್ತಿಯನ್ನು ವಿಸ್ತರಿಸಿಕೊಳ್ಳುತ್ತಿದೆ. ಈ ನಿಟ್ಟಿನಲ್ಲಿ ಬಹುತೇಕ ವಿದ್ವಾಂಸರು ಕರ್ನಾಟಕದ ಸಂಸ್ಕೃತಿಯನ್ನು ಕುರಿತು ಅಧ್ಯಯನ ನಡೆಸಿದ್ದಾರೆ ಹಾಗೂ ನಡೆಸುತ್ತಿದ್ದಾರೆ. ಪ್ರಸ್ತುತ ವಿಷಯವಾದ ದಲಿತರ ಕುರಿತು ನಡೆದಿರುವ ಅಧ್ಯಯನಗಳು ಕನ್ನಡದಲ್ಲಿ ತುಂಬಾ ಕಡಿಮೆಯೆಂದು ಹೇಳಿದರೆ ತಪ್ಪಾಗಲಾರದು. ಈ ಕುರಿತು ಅಖಿಲ ಭಾರತ ಮಟ್ಟದಲ್ಲಿ ಹೆಚ್ಚಿನ ಅಧ್ಯಯನಗಳು ನಡೆದಿವೆ. ಅಸ್ಪೃಶ್ಯತೆ, ದಲಿತತ್ವ, ಜಾತಿ ಮತ್ತು ಬುಡಕಟ್ಟುಗಳು, ರೈತರು, ಕೃಷಿ ಕಾರ್ಮಿಕರು, ಜನಸಾಮಾನ್ಯರು ಚರಿತ್ರೆಯ ಬರವಣಿಗೆಗಳಲ್ಲಿ ಹೆಚ್ಚಿನ ವಿವರಗಳನ್ನು ನಿರೀಕ್ಷಿಸುವುದು ಕಷ್ಟಸಾಧ್ಯವಾಗಿದೆ. ಸಂಬಂಧಿಸಿದ ವಿಚಾರವನ್ನು ಕುರಿತು ಸಾಹಿತ್ಯ, ಜನಪದ, ಸಮಾಜಶಾಸ್ತ್ರೀಯ, ಮಾನವಶಾಸ್ತ್ರದ ನೆಲೆಯಲ್ಲಿ ಅಧ್ಯಯನಗಳು ನಡೆದಿರುವುದನ್ನು ಗಮನಿಸಬಹುದು. ಆದರೆ ಅವು ಬಹುತೇಕ ಗತಕಾಲದ ಮನುಷ್ಯನ ಶಾರೀರಕ ವಿಚಾರಗಳತ್ತ ಹೆಚ್ಚಿನ ಗಮನವನ್ನು ಕೇಂದ್ರೀಕರಿಸುವುದು ವೇದ್ಯವಾಗುತ್ತದೆ. ಇದಕ್ಕೆ ಅಪವಾದವೆಂಬಂತೆ ಎಂ.ಚಿದಾನಂದಮೂರ್ತಿಯವರ ಅಧ್ಯಯನವೇ ಮೊದಲನೆಯದು. ತದನಂತರ ಅಸ್ಪೃಶ್ಯತೆಯ ಕುರಿತು ಹೆಚ್ಚಿನ ಬರವಣಿಗೆ ಅಥವಾ ಅಧ್ಯಯನಗಳು ನಿರೀಕ್ಷಿತ ಮಟ್ಟದಲ್ಲಿ ನಡೆಯಲಿಲ್ಲ.

"ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ" ಎನ್ನುವ ಶೀರ್ಷಿಕೆಯಡಿಯಲ್ಲಿ ನಡೆದಿರುವ ಅಧ್ಯಯನವು ಕನ್ನಡದ ಬರವಣಿಗೆಗಳಲ್ಲಿ ಗಮನಾರ್ಹವಾಗಿದೆ. ಸುಮಾರು ಹತ್ತನೇ ಶತಮಾನದಿಂದ ಹದಿನೆಂಟನೇ ಶತಮಾನದವರೆಗೆ

ಬಹುತೇಕ ಆಕರಗಳನ್ನು ಬಳಸಿಕೊಂಡು ಚರ್ಚಿಸುತ್ತಾ ಹೋಗುತ್ತಾರೆ. ಕರ್ನಾಟಕದ ಪ್ರಮುಖ ಅಸ್ಪೃಶ್ಯ ಜಾತಿಗಳು, ವರ್ಣ ಮತ್ತು ಜಾತಿ, ಶಾಸನಗಳಲ್ಲಿ ದಲಿತರು, ಸಾಮಾಜಿಕ ಸ್ತರವಿನ್ಯಾಸದಲ್ಲಿ ದಲಿತರ ದೈನಂದಿನ ಜೀವನ, ವಸತಿ, ಆಹಾರ ಪದ್ಧತಿ, ವಚನ ಆಂದೋಲನ ಮತ್ತು ಪರಿಣಾಮ, ರಗಳೆಗಳಲ್ಲಿ ಅಸ್ಪೃಶ್ಯತೆಯ ವಿಚಾರಗಳು ಮುಂತಾದ ಸಂಗತಿಗಳು ಈ ಕೃತಿಯಲ್ಲಿ ಅಡಕವಾಗಿದೆ. ಆದರೆ ಮಧ್ಯಕಾಲೀನ ಕನ್ನಡ ಸಾಹಿತ್ಯದಲ್ಲಿ ಪ್ರಸ್ತಾಪವಾಗಿರುವ ಬಹುತೇಕ ವಿಚಾರಗಳನ್ನು ಅರ್ಥೈಸಿರುವುದು ಗಮನ ಸೆಳೆಯುತ್ತದೆ. ಆದರೆ ಅವರು ವಚನ ಆಂದೋಲನದ ಕಾಲಘಟ್ಟಕ್ಕೆ ಹೆಚ್ಚಿನ ಒತ್ತು ಕೊಟ್ಟು ವಚನಗಳ ಮುಖಾಂತರವೇ ಪ್ರಸ್ತಾಪಿಸಿರುವುದು ವೇದ್ಯವಾಗುತ್ತದೆ. ಸಮಕಾಲೀನ ಸಂದರ್ಭದ ವಿಚಾರಗಳನ್ನು ಅರ್ಥೈಸಲು ಸಾಹಿತ್ಯ ಮತ್ತು ಶಾಸನಗಳನ್ನು ಮುಖ್ಯ ಆಕರಗಳನ್ನಾಗಿ ಪರಿಗಣಿಸಿ ಅಧ್ಯಯನ ನಡೆಸಿದ್ದಾರೆ. ಆದರೆ ಶಾಸನಗಳಲ್ಲಿ ದಲಿತ ಚರಿತ್ರೆಯನ್ನು ಅಧ್ಯಯನ ಮಾಡುವವರಿಗೆ ಹೆಚ್ಚಿನ ವಿಚಾರ ಅಪೇಕ್ಷಿಸಲು ಸಾಧ್ಯವಾಗಲಾರದು ಎಂಬುದು ಹಲವು ವಿದ್ವಾಂಸರ ಅಭಿಪ್ರಾಯವಾಗಿರಬಹುದು. ಇದಕ್ಕೆ ಚಿದಾನಂದಮೂರ್ತಿಯವರು ಹೊರತಾಗಿಲ್ಲ. ಆದರೆ ಸುಮಾರು ಒಂದುನೂರ ಐವತ್ತಕ್ಕೂ ಹೆಚ್ಚು ಶಾಸನಗಳು ಅಸ್ಪೃಶ್ಯತೆಯ ವಿಚಾರವನ್ನು ಕುರಿತು ಬೆಳಕು ಚೆಲ್ಲುತ್ತವೆ. ಪ್ರಾಚೀನ ಮತ್ತು ಮಧ್ಯಕಾಲೀನ ಸಂದರ್ಭದ ಸಾಹಿತ್ಯದಲ್ಲಿ ಪ್ರಸ್ತಾಪ ಮತ್ತು ಚರ್ಚೆಯಾಗಿರುವ ವಿಚಾರಗಳನ್ನು ಒಂದೆಡೆ ಕಲೆಹಾಕಿ ದಲಿತರ ಚರಿತ್ರೆಯನ್ನು ಕಟ್ಟಿಕೊಟ್ಟಿರುವುದು ಕರ್ನಾಟಕದ ಮಟ್ಟಿಗೆ ಪ್ರಥಮ ಅಧ್ಯಯನವಾಗಿದೆ. ಆ ಮೂಲಕ ಮುಂದಿನ ಸಂಶೋಧನೆಗೆ ಈ ಕೃತಿ ಅನುವು ಮಾಡಿಕೊಟ್ಟಿರುವುದು ಗಮನಾರ್ಹವಾಗಿದೆ.

ಅಸ್ಪೃಶ್ಯತೆಯ ವಿಚಾರವನ್ನು ಕುರಿತು ಕರ್ನಾಟಕ ಸಾಹಿತ್ಯ ಅಕಾಡೆಮಿ ಹೊರ ತಂದಿರುವ "ಕನ್ನಡ ಸಾಹಿತ್ಯದಲ್ಲಿ ಅಸ್ಪೃಶ್ಯತೆಯ ಪರಿಕಲ್ಪನೆ" ಎಂಬ ಕೃತಿಯು ಮೌಲಿಕ ವಿಚಾರಗಳನ್ನು ತಿಳಿಯಪಡಿಸುತ್ತದೆ. ಇದರಲ್ಲಿ ಒಟ್ಟು ಒಂಬತ್ತು ಅಧ್ಯಾಯಗಳು ಒಳಗೊಂಡಿದ್ದು ಕಾಲಘಟ್ಟದ ಮೂಲಕ ಅಸ್ಪೃಶ್ಯತೆ/ದಲಿತ ವಿಚಾರಗಳನ್ನು ಕುರಿತು ಚರ್ಚಿಸಲಾಗಿದೆ. ಪ್ರಾಚೀನ ಕಾಲದಿಂದ ಆಧುನಿಕ ಯುಗದವರೆಗೆ ವಿಭಿನ್ನವಾಗಿ ಲೇಖನಗಳು ವಿಸ್ತಾರ ಚರ್ಚೆಗೆ ಅನುವು ಮಾಡಿಕೊಟ್ಟಿದೆ. ಆಶಯ ಲೇಖನ, ಶಾಸನಗಳಲ್ಲಿ ಅಸ್ಪೃಶ್ಯತೆಯ ಪರಿಕಲ್ಪನೆ, ಪ್ರಾಚೀನ ಸಾಹಿತ್ಯದಲ್ಲಿ ಅಸ್ಪೃಶ್ಯತೆಯ ಪರಿಕಲ್ಪನೆ, ಮಧ್ಯಕಾಲೀನ ಸಾಹಿತ್ಯದಲ್ಲಿ ಅಸ್ಪೃಶ್ಯತೆ; ಒಂದು ಸಾಮಾಜಿಕ ಸಂವಾದ. ಜಾತಿ ಮತ್ತು ಅಸ್ಪೃಶ್ಯತೆ, ದಲಿತ ಬಂಡಾಯ ಸಾಹಿತ್ಯದಲ್ಲಿ ಅಸ್ಪೃಶ್ಯತೆಯ ಸಮಸ್ಯೆ, ಜನಪದ ಸಾಹಿತ್ಯದಲ್ಲಿ ಅಸ್ಪೃಶ್ಯತೆ ಮತ್ತು ಸಮಾಜ ಎಂಬ ಲೇಖನಗಳು ಗಮನ ಸೆಳೆಯುತ್ತವೆ. ಅಸ್ಪೃಶ್ಯತೆಯು ಒಂದು ಸಾಮಾಜಿಕ ಅನಿಷ್ಟವೆಂಬ ಎಚ್ಚರ ನಮಗಿರುವುದು ನಿಜವಾದರೂ ಅದು ನಮ್ಮ ಸಮಾಜದ ಅವಿಭಾಜ್ಯ ಭಾಗವೆಂಬಂತೆ ಬೆಳೆದು ಬಂದ ದುರಂತವೂ ನಿಜವಾದುದು. ಇನ್ನೊಬ್ಬ ಮನುಷ್ಯನನ್ನು ಮುಟ್ಟದ ಮನುಷ್ಯ ರೂಢಿಗಳನ್ನು ರೂಪಿಸಿದ ಈ ಸಾಮಾಜಿಕ ವ್ಯವಸ್ಥೆಯಲ್ಲಿ ಅಸ್ಪೃಶ್ಯತೆಯ ಅನುಭವ ಮತ್ತು ಆಯಾಮಗಳು ಹಲವು. ಇಂತಹ ವಿಚಿತ್ರಕಾರಕ ಆಯಾಮಗಳನ್ನು ಕುರಿತು ಚರ್ಚಿಸಿ, ಅದು ಸಮಾಜದಲ್ಲಿ ಎಂತಹ ಪರಿಣಾಮ ಬೀರಿದೆ ಎಂದು ಸಾಹಿತ್ಯದ ಮೂಲಕ ಅಧ್ಯಯನ ನಡೆಸಿದ್ದಾರೆ. ಭಾರತೀಯ ಚರಿತ್ರೆಯಲ್ಲಿ ಜಾತಿ ಮತ್ತು ವರ್ಣ ಬೀರಿದಷ್ಟು ಪ್ರಭಾವ ಮತ್ಯಾವ ಕ್ಷೇತ್ರವು ಬೀರಿರಲಾರದು ಎನ್ನುವಷ್ಟು ಮಟ್ಟಿಗೆ ಅದರ ಬೇರುಗಳು ಆಳವಾಗಿ ತಳವೂರಿದೆ. ಅದು ಇಂದಿಗೂ ಸಮಾಜದ

ಮೇಲೆ ಪೂರ್ವನಿರ್ಧಾರಿತ ಫಲಿತಾಂಶಗಳನ್ನು ಹೊರಸೂಚಿಸುವಲ್ಲಿ ಸಹಕಾರಿಯಾಗಿದೆ. ಹೆಚ್ಚಿನದಾಗಿ ಆಧುನಿಕ ಕನ್ನಡ ಸಾಹಿತ್ಯದ ನಿಲುವುಗಳನ್ನು ಅಧ್ಯಯನ ಮಾಡಿದಂತಿದೆ. ಪ್ರಾಚೀನ ಕಾಲಕ್ಕೆ ಸಂಬಂಧಿಸಿದ ನಾಲ್ಕು ಲೇಖನಗಳು ಗಮನ ಸೆಳೆಯುತ್ತವೆ.

ಈ ವಿಚಾರಕ್ಕೆ ಸಂಬಂಧಿಸಿದಂತೆ ಮ.ನ.ಜವರಯ್ಯನವರ "ದಲಿತ ವರ್ಗದ ಶರಣರು ಮತ್ತು ಶರಣೆಯರು ಒಂದು ಅಧ್ಯಯನ" ಎಂಬ ಕೃತಿಯು ೧೨ನೇ ಶತಮಾನದ ದಲಿತ ವರ್ಗಕ್ಕೆ ಸೇರಿದ ಶರಣ-ಶರಣೆಯರನ್ನು ಕುರಿತ ಅಧ್ಯಯನವಾಗಿದೆ. ಲೇಖಕರೇ ಹೇಳುವಂತೆ ಇದರಲ್ಲಿ ಮುಖ್ಯವಾಗಿ ಆಂದೋಲನದ ಆದ್ಯ ಪ್ರವರ್ತಕರಾದ ಅನಧಿಕೃತ ಆಚಾರ್ಯ ಪುರುಷರೂ ಎನಿಸಿರುವ ಅಸ್ಪೃಶ್ಯರು ಹಾಗೂ ಶೂದ್ರರೇ ಮೊದಲಾದ ಶರಣರನ್ನು ಆಯ್ಕೆ ಮಾಡಿಕೊಂಡು ಅದಕ್ಕೊಂದು ಸ್ಪಷ್ಟವಾದ ಚೌಕಟ್ಟನ್ನು ನಿರ್ಮಿಸಿಕೊಂಡ ಅಧ್ಯಯನ ನಡೆದಿದೆ. ಶೀರ್ಷಿಕೆ ಹೇಳುವಂತೆ ಇದಕ್ಕೆ ವಚನಗಳನ್ನು ಮುಖ್ಯ ಆಕರಗಳನ್ನಾಗಿ ಸ್ವೀಕರಿಸಲಾಗಿದೆ. ದಲಿತ ವರ್ಗದ ಹತ್ತು ಜನ ಶರಣ ಜೀವನ ಚರಿತ್ರೆಯಲ್ಲಿ ಮಾದಾರ ಚನ್ನಯ್ಯ, ಡೋಹರ ಕಕ್ಕಯ್ಯ, ಕೆಂಬಾವಿ ಭೋಗಯ್ಯ, ತೆಲುಗು ಬೊಮ್ಮಯ್ಯ, ಮಾರುಡಿಗೆ ನಾಚಯ್ಯ, ಮಾದಾರ ಧೂಳಯ್ಯ, ಮಡಿವಾಳ ಮಾಚಯ್ಯ, ಮೇದರ ಕೇತಯ್ಯ, ಗಾಳದ ಕನ್ನಯ್ಯ, ಉರಿಲಿಂಗಪೆದ್ದಿ ಮತ್ತು ಹತ್ತು ಜನ ಶರಣೆಯ ಜೀವನ ಚರಿತ್ರೆಯಲ್ಲಿ ವರದಾನಿ ಗುಡ್ಡವ್ವೆ, ದುಗ್ಗಳೆ, ಕಾಳವ್ವೆ, ಕೇತಲದೇವಿ, ಸತ್ಯಕ್ಕ, ಲಿಂಗಮ್ಮ, ಆಯ್ದಕ್ಕಿ ಲಕ್ಕಮ್ಮ, ಗೊಗ್ಗವ್ವೆ, ಕಾಲಕಣ್ಣಿಯ ಕಾಮಮ್ಮ, ಕದಿರೆ ರೆಮ್ಮವ್ವೆ ಮುಂತಾದ ಶರಣೆಯರ ಕುರಿತು ಪ್ರಸ್ತುತ ಕೃತಿಯಲ್ಲಿ ಅಧ್ಯಯನ ಮಾಡಲಾಗಿದೆ. ಇಲ್ಲಿ ಹನ್ನೆರಡು ಮತ್ತು ಹದಿಮೂರನೆ ಶತಮಾನದ ಕರ್ನಾಟಕದ ಸಾಮಾಜಿಕ ವಿಚಾರಗಳು ಗಮನ ಸೆಳೆಯುತ್ತವೆ. ಕುಲಭೇದ-ಲಿಂಗಭೇದದ ವಿಚಾರ, ದಲಿತರ ಜೀವನ ಸಂಸ್ಕೃತಿ, ದಲಿತೇತರ ಜೀವನ ಸಂಸ್ಕೃತಿ, ಹೊಲೆಯ, ಬ್ರಾಹ್ಮಣ, ಹೆಣ್ಣು-ಗಂಡು, ಮೇಲು-ಕೀಳು, ಸೇವಕ-ಒಡೆಯ ಅಂದಿನ ಸಮಾಜದ ಮೇಲೆ ಆಗಿರುವ ಪರಿಣಾಮಗಳನ್ನು ಕುರಿತು ವಾಸ್ತವಿಕ ನೆಲೆಗಟ್ಟಿನಲ್ಲಿ ಅರಿಯಲು ಯತ್ನಿಸಿದೆ. ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ಅಸ್ಪೃಶ್ಯತೆಯು ಮಾಡಿರುವ ಸ್ವರೂಪ, ಕಾರಣ, ಪರಿಣಾಮ, ತಲ್ಲಣ, ಜಾತಿ-ವರ್ಗ, ವರ್ಣ ಮತ್ತು ಅಸ್ಪೃಶ್ಯತೆ ಮುಂತಾದ ವಿಚಾರಗಳನ್ನು ಅರವಿಂದ ಮಾಲಗತ್ತಿಯವರು "ದಲಿತಯುಗ ಮತ್ತು ಕನ್ನಡ ಸಾಹಿತ್ಯ" ಕೃತಿಯಲ್ಲಿ ವಿಮರ್ಶಾ ರೂಪದಲ್ಲಿ ತೆರೆದಿಟ್ಟಿದ್ದಾರೆ. ಪ್ರಾಚೀನ ಮತ್ತು ಮಧ್ಯಕಾಲೀನ ಕನ್ನಡ ಸಾಹಿತ್ಯದಲ್ಲಿ ಅಧಿಕೃತವಾಗಿ ಜೈನ ಮತ್ತು ವೀರಶೈವ ಸಾಹಿತ್ಯವೇ ಪ್ರಧಾನವಾಗಿ ಕಾಣಿಸಿಕೊಳ್ಳುತ್ತದೆ. ಈ ಅವಧಿಯಲ್ಲಿ ಧರ್ಮ, ಮತ, ಜನಾಂಗ, ವರ್ಣ, ಕುಲ, ಜಾತಿ ಮುಂತಾದವುಗಳು ಜೀವನದ ಒಂದು ಭಾಗವೆಂಬಂತೆ ಹಾಸು ಹೊಕ್ಕಾಗಿವೆ. ಅವು ಸಮಾಜದಲ್ಲಿ ಎಷ್ಟರ ಮಟ್ಟಿಗೆ ಬೇರು ಬಿಟ್ಟಿವೆ ಎಂದರೆ ಅವುಗಳನ್ನು ನಾಶಪಡಿಸಲು ಸಾಧ್ಯವಿಲ್ಲವೆನ್ನುವ ತನಕ ಮುಂದುವರಿಯುತ್ತವೆ.

ಕರ್ನಾಟಕದ ಜಾತಿ ಮತ್ತು ಬುಡಕಟ್ಟುಗಳ ಬಗೆಗೆ ಕೆಲವು ವಿದ್ವಾಂಸರು ಅಧ್ಯಯನ ನಡೆಸಿದ್ದಾರೆ. ಆದರೆ ಅವು ಇಂಗ್ಲಿಷ್‌ನಲ್ಲಿ ಪ್ರಕಟವಾಗಿರುವ ಕೆಲವು ಕೃತಿಗಳನ್ನು ಬಿಟ್ಟರೆ ಕನ್ನಡದ ಮಟ್ಟಿಗೆ ಹೆಚ್ಚಿನ ಕೃತಿಗಳು ಪ್ರಕಟವಾಗಿಲ್ಲ. ಇಂಗ್ಲಿಷ್‌ನಲ್ಲಿ ಪ್ರಕಟವಾಗಿರುವ ಕೃತಿಗಳಲ್ಲಿ ಎಚ್.ವಿ. ನಂಜುಂಡಯ್ಯ ಮತ್ತು ಎಲ್.ಕೆ.

ಅನಂತಕೃಷ್ಣ ಅಯ್ಯರ್ ಅವರ ನಾಲ್ಕು ಸಂಪುಟಗಳ *ದಿ ಮೈಸೂರು ಟ್ರೈಬ್ಸ್ ಅಂಡ್ ಕ್ಯಾಸ್ಟ್ಸ್* ಎಂಬ ಕೃತಿ ತುಂಬಾ ಮುಖ್ಯವಾದುದು. ಕರ್ನಾಟಕದಲ್ಲಿ ಮಾನವ ವಿಜ್ಞಾನದ ಕ್ಷೇತ್ರಗಳಲ್ಲಿ ಈ ಕೃತಿ ಆಧಾರ ಗ್ರಂಥವಾಗಿದೆ. ಈ ಇಬ್ಬರು ವಿದ್ವಾಂಸರೂ ಮೈಸೂರು ರಾಜ್ಯದ ಎಲ್ಲಾ ಭಾಗಗಳಲ್ಲಿಯೂ ಸುತ್ತಿ, ಪ್ರತಿಯೊಂದು ಬುಡಕಟ್ಟಿನ ಹಾಗೂ ಜಾತಿಯ ಸಂಸ್ಕೃತಿಯಲ್ಲಿಯೂ ಪರಿಣತರಾದವರನ್ನು ಭೇಟಿ ಮಾಡಿ, ಅವರಿಂದ ವಿಷಯಗಳನ್ನು ಸಂಗ್ರಹಿಸಿ ಈ ಕೃತಿಯನ್ನು ರಚಿಸಿದ್ದಾರೆ. ಪ್ರತಿಯೊಂದು ಬುಡಕಟ್ಟಿನ ಅಥವಾ ಜಾತಿಯ ಜನ ವಾಸಿಸುವ ಪ್ರದೇಶ, ಸಾಂಪ್ರದಾಯಿಕ ಚರಿತ್ರೆ, ಜೀವನ ವಿಧಾನಗಳ ಕುರಿತು ಹೆಚ್ಚಿನ ಮಾಹಿತಿ ಲಭ್ಯವಾಗುತ್ತದೆ. ಈ ಕೃತಿಯಲ್ಲಿ ದಲಿತರ ಪ್ರಮುಖ ಜಾತಿಗಳ ಬಗೆಗೆ ಅಧ್ಯಯನ ನಡೆದಿದೆ.

ಎಡ್ಗರ್ ಥರ್ಸ್‌ಟನ್ ಮತ್ತು ಕೆ.ರಂಗಾಚಾರಿ *ಕ್ಯಾಸ್ಟ್ಸ್ ಅಂಡ್ ಟ್ರೈಬ್ಸ್ ಆಫ್ ಸದರನ್ ಇಂಡಿಯಾ* (೧೯೮೭) ಕೃತಿಯಲ್ಲಿ ಇತರೆ ಜಾತಿ ಜನಾಂಗಗಳ ವಿವರ ಕೊಡುವಾಗ ದಲಿತರ ಕುರಿತು ಸಂಕ್ಷಿಪ್ತವಾಗಿ ಹೇಳಿದ್ದಾರೆ. ಹಾಗೆಯೇ ಅನಂತಕೃಷ್ಣ ಅಯ್ಯರ್ ಎಲ್.ಕೆ. ಮತ್ತು ಎಚ್.ವಿ. ನಂಜುಂಡಯ್ಯ ಅವರ *ಮೈಸೂರು ಕ್ಯಾಸ್ಟ್ಸ್ ಅಂಡ್ ಟ್ರೈಬ್ಸ್* (೧೯೮೮), ಸೈಯದ್ ಸಿರಾಜ್ ಉಲ್ ಹಸನ್ ಅವರ *ಕ್ಯಾಸ್ಟ್ಸ್ ಅಂಡ್ ಟ್ರೈಬ್ಸ್ ಆಫ್ ಹೆಚ್.ಇ.ಹೆಚ್. ನಿಜಾಮಾಸ್ ಡಾಮಿನಿಯನ್ಸ್* (೧೯೮೯), ಕೆ.ಎಸ್.ಸಿಂಗ್ ಅವರ *ದಿ ಷೆಡ್ಯೂಲ್ಡ್ ಕ್ಯಾಸ್ಟ್ಸ್* (೧೯೯೩), ಇದೇ ಲೇಖಕರ ಸಂಪಾದಕತ್ವದಲ್ಲಿ *ಪೀಪಲ್ ಆಫ್ ಇಂಡಿಯಾ ಕರ್ನಾಟಕ, ಸಂಪುಟ-xxvi, ಭಾಗ-೧, ೨* (೨೦೦೩), ಡಾ.ಬಿ.ಆರ್. ಅಂಬೇಡ್ಕರ್ ಅವರ *ಅಸ್ಪೃಶ್ಯರು, ; ಡಾ. ಬಾಬಾಸಾಹೇಬ್ ಅಂಬೇಡ್ಕರ್ ಬರಹಗಳು ಮತ್ತು ಭಾಷಣಗಳು, ಸಂಪುಟ-೫* (೧೯೯೭), ಅವರ ಕೃತಿಗಳು ಪ್ರಸ್ತುತ ವಿಚಾರವನ್ನು ಕುರಿತು ಸಮಗ್ರವಾಗಿ ಚರ್ಚಿಸುತ್ತವೆ. ಜಿ.ಎಸ್.ಘುರ್ಯೆ ಅವರ *ಕ್ಯಾಸ್ಟ್ಸ್ ಅಂಡ್ ರೇಸ್ ಇನ್ ಇಂಡಿಯಾ* (೧೯೯೦), ಪಿ.ವಿ. ಕಾಣೆ *ಧರ್ಮಶಾಸ್ತ್ರದ ಇತಿಹಾಸ, ಸಂಪುಟ-೧, ಭಾಗ-೨* (೨೦೦೩), ಲೂಯಿಸ್ ಡ್ಯುಮಾಂಟ್ ಅವರ *ಹೋಮೋ ಹೈರಾರ್ಕಿಸ್* (೧೯೭೦), ಆರ್.ಎಸ್.ಶರ್ಮ ಅವರ *ಪ್ರಾಚೀನ ಭಾರತದಲ್ಲಿ ಶೂದ್ರರು* (೨೦೦೨). ಎಚ್.ಜೆ. ಲಕ್ಕಪ್ಪಗೌಡ ಅವರ ಸಂಪಾದನೆಯಲ್ಲಿ ಪ್ರಕಟವಾದ *ಕರ್ನಾಟಕದ ಬುಡಕಟ್ಟುಗಳು* ಎನ್ನುವ ಕೃತಿಯಲ್ಲಿ ಸಹ ಅಧ್ಯಯನ ಕಂಡುಬರುತ್ತದೆ. ತುಳುನಾಡಿನ ದಲಿತರ ವಿಚಾರಗಳ ಕುರಿತು ಬಿ.ಎ. ವಿವೇಕ ರೈ ಅವರು *ತುಳು ಜಾನಪದ ಸಾಹಿತ್ಯ* (೧೯೮೫) ಮತ್ತು ವಿಜಯ್ ಪೂಣಚ್ಚ ತಂಬಂಡ ಅವರು *ಪಳಮೆ* (೨೦೦೫)ಯಲ್ಲಿ ಅಧ್ಯಯನ ನಡೆಸಿದ್ದಾರೆ. ಕರ್ನಾಟಕದ ಪ್ರತಿಯೊಂದು ಜಿಲ್ಲಾ ಗ್ಯಾಝೆಟಿಯರ್‌ಗಳಲ್ಲಿ ಸಹ ದಲಿತರ ಕುರಿತು ಸಂಕ್ಷಿಪ್ತ ಪ್ರಸ್ತಾಪದ ಅಧ್ಯಯನಗಳನ್ನು ಗಮನಿಸಬಹುದು.

ದಲಿತ/ಅಸ್ಪೃಶ್ಯತೆ ವಿಚಾರಗಳ ಕುರಿತು ಎಂ.ಎಂ.ಕಲಬುರ್ಗಿ ಅವರ *ಮಾರ್ಗ-೨* ಎಂಬ ಕೃತಿಯು ಜನಪದ ನೆಲೆಯಲ್ಲಿ ಹೆಚ್ಚಿನ ವಿವರಗಳನ್ನು ಒದಗಿಸಲು ಸಹಾಯಕವಾಗಿದೆ. ಹಾಗೆಯೇ ಎಸ್.ಎಸ್.ಹಿರೇಮಠ ಅವರ *ಕರ್ನಾಟಕ ದಲಿತ ಸಂಸ್ಕೃತಿ ಭಾಗ-೨ ಜಾತ್ರೆಗಳು, ೧೯೯೩; ದಲಿತ ಸಂಸ್ಕೃತಿ, ೨೦೦೧; ಹರಿಹರನು ಚಿತ್ರಿಸಿದ ದಲಿತ ಶರಣರು, ಸಮಾಜ ಸಂಸ್ಕೃತಿ ಸಂಘರ್ಷ, ೨೦೦೫*, ಕೃತಿಗಳು ಮಧ್ಯಕಾಲೀನ ಕರ್ನಾಟಕದ ದಲಿತ ಚರಿತ್ರೆಯನ್ನು ಹಲವು ಮಗ್ಗುಲುಗಳಲ್ಲಿ ಚರ್ಚಿಸಲು ಉಪಯುಕ್ತವಾಗಿದೆ. ಇನ್ನು ಕೊಡಗಿನಲ್ಲಿ ಕೆಂಬಟ್ಟಿ

ಹೊಲೆಯರಿದ್ದಾರೆ. ಕೊಡಗಿನ ಗದ್ದೆಗಳಲ್ಲಿ ಕೆಂಪು ಬತ್ತವನ್ನು (ಕೆಂಬತ್ತಿ ಬತ್ತ) ಬೆಳೆಯುವುದರಲ್ಲಿ ಅವರು ಪಳಗಿದವರು. ಇದರಿಂದ ಅವರಿಗೆ ಈ ಹೆಸರು ಬಂದಿದೆ. ಕೆಂಬಟ್ಟಿ ಹೊಲೆಯರು ಕೊಡಗಿನ ಮೂಲನಿವಾಸಿಗಳೆಂದು ಮೊಗ್ಲಿಂಗ್ ಹೇಳುತ್ತಾನೆ. ಈ ಕುರಿತು ಹೆಚ್ಚಿನ ವಿವರಗಳನ್ನು ಎಂ.ಜಿ.ನಾಗರಾಜ ಅವರ ಕೃತಿ *ಕೆಂಬಟ್ಟಿ ಹೊಲೆಯರ ಸಂಸ್ಕೃತಿಯಲ್ಲಿ* (೧೯೯೩) ಅಪೇಕ್ಷಿಸಬಹುದಾಗಿದೆ. ಹೊಲೆಯರ ಮತ್ತೊಂದು ಉಪಪಂಗಡವಾದ ಕಪ್ಪೆ ಹೊಲೆಯರ ಸಂಸ್ಕೃತಿ ಕುರಿತು ಕೇಶವನ್ ಪ್ರಸಾದ್ ಅವರ *ಕಪ್ಪೆ ಹೊಲೆಯರ ಸಂಸ್ಕೃತಿ* (೧೯೯೩), ಕೋಟಗಾನಹಳ್ಳಿ ರಾಮಯ್ಯನವರ *ಸಿಂದ್ ಮಾದಿಗರ ಸಂಸ್ಕೃತಿ* (೧೯೯೩), ಉಪಸಂಸ್ಕೃತಿ ಮಾಲೆಯಿಂದ ಪ್ರಕಾಶನ ಕಂಡಿರುವ ಕೆಲವು ಕೃತಿಗಳಲ್ಲಿ ಜಾತಿ ಮತ್ತು ಬುಡಕಟ್ಟುಗಳ ಬಗೆಗೆ ಕೆಲವು ಅಧ್ಯಯನಗಳಲ್ಲಿ ಚಾರಿತ್ರಿಕ ಹಿನ್ನೆಲೆಯನ್ನು ಗಮನಿಸಬಹುದಾಗಿದೆ.

ಈ ಮೇಲಿನ ವಿಷಯಗಳನ್ನು ಒಮ್ಮೆ ಅವಲೋಕಿಸಿದಾಗ ವರ್ಣ, ವೃತ್ತಿ, ಜಾತಿಗಳು ರೂಪಾಂತರವಾಗಿರುವುದು ಸ್ಪಷ್ಟವಾಗುತ್ತದೆ. ಆರಂಭದಲ್ಲಿ ವರ್ಣ ವ್ಯವಸ್ಥೆ ಸಮಾಜದಲ್ಲಿ ಪ್ರಭಾವ ಬೀರಿತು. ಅದು ಮೂಲತಃ ಬಣ್ಣವನ್ನು ಪ್ರತಿನಿಧಿಸುತ್ತಿತ್ತು. ಆದರೆ ಕಾಲಕ್ರಮೇಣ ವರ್ಣ ಎಂಬ ಶಬ್ದವನ್ನು ಶಾರೀರಿಕ ಚಹರೆಯೊಂದಿಗೆ ಸಂಬಂಧ ಕಲ್ಪಿಸಿ ಬಳಸಲು ಪ್ರಾರಂಭವಾಯಿತು. ವರ್ಣಗಳು ಮುಂದೆ ವಿವಿಧ ಜಾತಿಗಳಾಗಿ ವಿಂಗಡಣೆಯಾಗಲು ಕಾರಣವಾದವು. ಹಾಗೆಯೇ ವರ್ಣಗಳ ಮಿಶ್ರಣದಿಂದ ವಿವಿಧ ಮಿಶ್ರ ಜಾತಿಗಳು ಹುಟ್ಟಿಕೊಂಡವು. ಇವುಗಳ ಪರಿಣಾಮವಾಗಿ ಕೆಲವು ಅಸ್ಪೃಶ್ಯ ಜಾತಿಗಳು ಉದಯಿಸಿದವು. ಉತ್ತರ ವೈದಿಕ ಸಾಹಿತ್ಯದ ವೇಳೆಗೆ ವರ್ಣಗಳ ಪರಿಣಾಮ ಸಮಾಜದ ಮೇಲೆ ಪ್ರಭಾವ ಬೀರಲಾರಂಭಿಸಿತು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ವರ್ಣಗಳು ಸಾಮಾಜಿಕ ಜೀವನದಲ್ಲಿ ಯಾವುದೇ ಬಗೆಯ ಸಕಾರಾತ್ಮಕ ಬದಲಾವಣೆಗಳು ಕಾಣಲಾಗುತ್ತಿಲ್ಲ. ಜಾತಿ ವ್ಯವಸ್ಥೆಯನ್ನು ಪ್ರಥಮ ಬಾರಿಗೆ ವಿರೋಧಿಸಿದ ಬೌದ್ಧ ಧರ್ಮವು ಸಮಾನತೆಯ ತತ್ವಕ್ಕೆ ಹೋರಾಡಿತು. ಸಮಾಜದ ಎಲ್ಲಾ ವರ್ಗದವರು ಸಮಾನತೆಯ ಹಾದಿಯಲ್ಲಿ ಮುನ್ನಡೆಯಲು ಪ್ರಚೋದಿಸಿತು. ಈ ಪ್ರಕ್ರಿಯೆಯು ಕೇವಲ ಉತ್ತರ ಭಾರತಕ್ಕೆ ಸೀಮಿತವಾಗಿರಲಿಲ್ಲ. ದಕ್ಷಿಣ ಭಾರತವು ಸಹ ಸಂಬಂಧಿಸಿದ ಸಂಗತಿಗಳಿಂದ ಮುಕ್ತವಾಗಿರಲಿಲ್ಲ. ಪ್ರಾಚೀನ ಸಾಹಿತ್ಯ ಮತ್ತು ಶಾಸನಗಳು ಸಮಾಜವನ್ನು ಕುರಿತು ಚರ್ಚಿಸುವ ಸಂದರ್ಭದಲ್ಲಿ ಜಾತಿಗಳನ್ನು ಪದೇ ಪದೇ ಪ್ರಸ್ತಾಪಿಸುತ್ತವೆ. ಹಾಗೆಯೇ ಅತ್ಯಂತ ಕೆಳಗಿನ ಸ್ತರದಲ್ಲಿದ್ದ ಅಸ್ಪೃಶ್ಯರ ಕುರಿತು ಹೇಳುತ್ತವೆ. ಇದರಿಂದ ಜಾತಿ ವ್ಯವಸ್ಥೆ ಎಂಬ ಕ್ರೂರ ಪದ್ಧತಿಯು ಸ್ಥಾಪಿತ ಮೌಲ್ಯಗಳು ಯಾವುದೇ ಕಾರಣಕ್ಕೂ ಬದಲಾವಣೆಗೆ ಒಳಪಡದೇ ಮುಂದುವರಿಯಲು ಕಾರಣವಾಯಿತು.

ಕರ್ನಾಟಕದ ಸಂದರ್ಭವು ಸಹ ಈ ಮೇಲಿನ ನಿಲುವುಗಳಿಂದ ಮುಕ್ತವಾಗಿರಲಿಲ್ಲ ಎಂಬುದಕ್ಕೆ ಚರಿತ್ರೆ ಪುರಾವೆ ಒದಗಿಸುತ್ತದೆ. ವರ್ಣಗಳು ನಾಲ್ಕೆ ಕಂಡುಬಂದರೂ ಜಾತಿಗಳು ಮಾತ್ರ ಕಾಲಘಟ್ಟದಿಂದ ಕಾಲಘಟ್ಟಕ್ಕೆ ಹೆಚ್ಚಳವಾಗುತ್ತಾ ಬರುತ್ತಿವೆ. ಹದಿನೆಂಟು ಜಾತಿ ಅಥವಾ ಕುಲ ಎಂಬ ಶಬ್ದಗಳು ಸಮಾಜದ ಎಲ್ಲಾ ವರ್ಗದವರನ್ನು ಸೂಚಿಸುತ್ತಿತ್ತು. ಜಾತಿಗಳು ವಾಸ್ತವವಾಗಿ ಹದಿನೆಂಟು ಜಾತಿಗಳಿಗಿಂತ ಹೆಚ್ಚಿನ ಸಂಖ್ಯೆಯಲ್ಲಿದ್ದರೂ ಹದಿನೆಂಟು ಕುಲಗಳೆಂದೇ ಪ್ರಸ್ತಾಪಿಸಲಾಗುತ್ತಿತ್ತು. ಅವುಗಳಲ್ಲಿ ಕೊನೆಯ ಸ್ಥಾನ ಹೊಲೆಯ ಅಥವಾ ಮಾದಿಗ

ಸಮುದಾಯಕ್ಕೆ ಸೇರುತ್ತದೆ. ಯಾವುದೇ ಸಭೆ ಅಥವಾ ಕಾರ್ಯಗಳಲ್ಲಿ ಮಾತ್ರವಲ್ಲದೆ ಸಾಮಾಜಿಕವಾಗಿ ಅವರು ಕೊನೆಯ ಸ್ಥಾನದಲ್ಲಿದ್ದರು ಎಂಬುದು ಸರ್ವವಿದಿತ. ಪ್ರಾಚೀನ ಕಾಲದಿಂದಲೂ ಇವೆರಡು ಸಮುದಾಯಗಳು ಹೆಚ್ಚಿನದಾಗಿ ಶಾಸನ ಮತ್ತು ಕನ್ನಡ ಪಠ್ಯಗಳಲ್ಲಿ ಪ್ರಸ್ತಾಪವಾಗಿವೆ. ಈ ಹಿನ್ನೆಲೆಯಲ್ಲಿ ಕರ್ನಾಟಕದ ಕೆಲವು ಪ್ರಮುಖ ಅಸ್ಪೃಶ್ಯ ಜಾತಿಗಳನ್ನು ಪರಿಚಯಿಸಲಾಗಿದೆ. ಹಿಂದೆ ಬಳಕೆಯಾಗುತ್ತಿದ್ದ ಮತ್ತು ಇಂದಿಗೂ ಬಳಕೆಯಾಗುತ್ತಿರುವ ಪದಗಳ ಸಂಕ್ಷಿಪ್ತ ಪರಿಚಯವನ್ನು ಈ ಅಧ್ಯಾಯದಲ್ಲಿ ಕೊಡಲಾಗಿದೆ. ಅವುಗಳಲ್ಲಿ ಕೊರಗರು, ಮೇರರು, ದೊಂಬರು ಮುಂತಾದವು. ಇತ್ತೀಚಿನ ದಿನಮಾನಗಳಲ್ಲಿ ಅಂದರೆ ೧೯೭೦ರ ದಶಕದ ನಂತರ 'ದಲಿತ' ಎಂಬ ಶಬ್ದ ಹೆಚ್ಚು ಪ್ರಚಾರವಾದ ಬಳಿಕ ಕರ್ನಾಟಕದ ಅಸ್ಪೃಶ್ಯ ಜಾತಿಗಳು ದಲಿತ ಎಂಬ ಶಬ್ದದಿಂದ ಗುರುತಿಸಿಕೊಳ್ಳಲು ಪ್ರಾರಂಭಿಸಿದವು. ಕರ್ನಾಟಕವು ಮಾತ್ರವಲ್ಲದೆ ಭಾರತದಾದ್ಯಂತ ಕೂಡ ಈ ಹೆಸರಿನಿಂದ ಗುರುತಿಸಿಕೊಳ್ಳಲು ಯತ್ನಿಸಿದವು. ಅಸ್ಪೃಶ್ಯ ಮತ್ತು ದಲಿತ ಎಂಬೆರಡು ಶಬ್ದಗಳಲ್ಲಿ ತಾತ್ವಿಕವಾದ ಭಿನ್ನತೆಗಳಿವೆ. ಅಸ್ಪೃಶ್ಯರು ಮೂಲತಃ ತಾವು ಅಸ್ಪೃಶ್ಯರೆಂದು ಹೇಳಿಕೊಳ್ಳಲು ಇಚ್ಛಿಸುವುದಿಲ್ಲ. ಅದು ಮೂಲತಃ ಸಂಸ್ಕೃತ ಶಬ್ದ. ದಲಿತ ಎಂಬ ಶಬ್ದದಲ್ಲಿ ಮಾನಸಿಕವಾದ ಬಿಡುಗಡೆಯ ನೆಲೆಗಳಿವೆ ಎಂದರೆ ತಪ್ಪಾಗಲಾರದು. ಈ ಕುರಿತಂತೆ ಬಿ.ಆರ್. ಅಂಬೇಡ್ಕರ್ ಅವರ ನಿಲುವುಗಳನ್ನು ಗಮನಿಸಬಹುದು. ಸ್ವತಃ ಅಂಬೇಡ್ಕರ್ ಅವರೆ 'ದಲಿತ' ಎಂಬ ಶಬ್ದವನ್ನು ಚಲಾವಣೆಗೆ ತಂದರು. ಆ ಮುಖಾಂತರ ಚರಿತ್ರೆಯಲ್ಲಿ ಕಣ್ಮರೆಯಾದ ದಲಿತರು ತಮ್ಮ ಪೂರ್ವಿಕರ ಮುರಿದುಹೋದ ಚರಿತ್ರೆಯ ಬಗೆಗೆ ಗಮನ ಹರಿಸುವ ಕಾಲ ಒದಗಿ ಬಂದಿದೆ. ಆದುದರಿಂದ ಇದುವರೆಗೆ ನಡೆದ ಅಧ್ಯಯನಗಳನ್ನು ಗಮನಿಸಿದರೆ ದಲಿತರ ಕುರಿತು ಚಾರಿತ್ರಿಕ ದೃಷ್ಟಿಕೋನದಿಂದ ನಡೆದ ಅಧ್ಯಯನಗಳು ತುಂಬಾ ಕಡಿಮೆ. ಈ ಹಿನ್ನೆಲೆಯಲ್ಲಿ ದಲಿತರ ಚಾರಿತ್ರಿಕ ಹಿನ್ನೆಲೆಯನ್ನು ಈ ಅಧ್ಯಾಯದಲ್ಲಿ ಕಾಣಬಹುದಾಗಿದೆ.

# ಟಿಪ್ಪಣಿಗಳು

೧. *ಕನ್ನಡ ವಿಶ್ವಕೋಶ, ಸಂಪುಟ-೧೨,* ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೮೬, ಪು.೫೫೪

೨. ಶರ್ಮ ಆರ್.ಎಸ್.(ಅನು: ಎನ್.ಪಿ. ಶಂಕರನಾರಾಯಣರಾವ್), *ಪ್ರಾಚೀನ ಭಾರತ,* ನವಕರ್ನಾಟಕ, ಬೆಂಗಳೂರು, ೨೦೦೨, ಪು.೭೬-೭೭.

೩. ಶರ್ಮ ಆರ್.ಎಸ್.(ಅನು: ವಿವಿಧ ಲೇಖಕರು), *ಪ್ರಾಚೀನ ಭಾರತದಲ್ಲಿ ಶೂದ್ರರು,* ನವಕರ್ನಾಟಕ, ಬೆಂಗಳೂರು, ೨೦೦೨, ಪು.೨೦.

೪. ಚಿದಾನಂದಮೂರ್ತಿ ಎಂ., *ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ,* ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೫, ಪು.೬.

೫. *ಕನ್ನಡ ವಿಶ್ವಕೋಶ,* ಸಂಪುಟ-೧೨, ಪು.೫೫೪.

೬. ವಿವಿಧ ಲೇಖಕರು, *ವೇದಯುಗ, ಭಾಗ-೧,* ಭಾರತೀಯ ವಿದ್ಯಾಭವನ, ಬೆಂಗಳೂರು, ೨೦೦೬, ಪು.೩೧೫.

೭. *ಬಾಬಾಸಾಹೇಬ್ ಅಂಬೇಡ್ಕರ್ ಬರಹಗಳು ಮತ್ತು ಭಾಷಣಗಳು, ಸಂಪುಟ-೭,* ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೯೬, ಪು.೧೫೦.

೮. ಚಿದಾನಂದಮೂರ್ತಿ ಎಂ., *ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ,* ಪು.೭.

೯. ನಂಜುಂಡಾರಾಧ್ಯ ಎಂ.ಜಿ, *ಹಿಂದೂಧರ್ಮ ಮತ್ತು ಅಸ್ಪೃಶ್ಯತೆ,* ಶ್ರೀ ಜಗದ್ಗುರು ಗಂಗಾಧರ ಧರ್ಮ ಪ್ರಚಾರಕ ಮಂಡಳ ಮೂರುಸಾವಿರಮಠ, ಹುಬ್ಬಳ್ಳಿ, ೧೯೮೨, ಪು.೨೭-೨೮.

೧೦. ಅದೇ ಪು.೩೦.

೧೧. ರಂಗನಾಥ ಶರ್ಮ(ಸಂ), *ಅಮರಸಿಂಹನ ಅಮರಕೋಶ,* ಸುವಿದ್ಯಾ ಪ್ರಕಾಶನ, ಬೆಂಗಳೂರು, ೧೯೯೬, ಪು.೨೧೧-೧೨; (ಹೆಚ್ಚಿನ ವಿವರಗಳಿಗೆ ಇದೇ ಕೃತಿಯನ್ನು ನೋಡಿ, ಪು.೨೧೧-೨೨೧)

೧೨. *ಹಿಂದೂ ಧರ್ಮ ಮತ್ತು ಅಸ್ಪೃಶ್ಯತೆ,* ಪು.೩೧

೧೩. ಅದೇ ಪು.೩೧-೩೨.

೧೪. *ಬಾಬಾಸಾಹೇಬ್ ಅಂಬೇಡ್ಕರ್ ಬರಹಗಳು ಮತ್ತು ಭಾಷಣಗಳು,* ಸಂಪುಟ-೫, ಪು.೧೧೨.

೧೫. ಅದೇ ಪು.೮-೧೦.

೧೬. ತಾಳ್ತಜೆ ವಸಂತಕುಮಾರ್, *ಕರ್ನಾಟಕದಲ್ಲಿ ಬೌದ್ಧಧರ್ಮ,* ವಿನಯ ಪ್ರಕಾಶನ, ಬೆಂಗಳೂರು, ೧೯೮೮, ಪು.೧೮-೧೯.

೧೭. ರಾಜಾರಾಮ ಹೆಗಡೆ, *ಲೌಕಿಕ-ಅಲೌಕಿಕ,* ಆನಂದಕಂದ ಗ್ರಂಥಮಾಲೆ, ಮಲ್ಲಾಡಿಹಳ್ಳಿ, ೨೦೦೧, ಪು.೫೨.

೧೮. *ಕರ್ನಾಟಕದಲ್ಲಿ ಬೌದ್ಧಧರ್ಮ,* ಪು.೧೦೦.

೧೯. ಅದೇ ಪು.೧೦೬.

೨೦. ಅದೇ ಪು.೨೫೩.

೨೧. ಅದೇ ಪು.೨೫೫; ಅಡವಿಯಲ್ಲಿ ವಾಸ ಮಾಡಲು ಶ್ರಮಣ ಋಷಿಮುನಿಗಳಿಗೆ ತಾಪಸ ಇಲ್ಲವೆ ಪರಿವ್ರಾಜಕ ಎನ್ನುತ್ತಿದ್ದರು. ಜನರಿಗೆ ಉಪದೇಶ ನೀಡುತ್ತಿದ್ದರು. ಇವರಲ್ಲಿ ಬೇರೆ ಬೇರೆ ಶ್ರವಣ ಸಂಘಗಳು ಹುಟ್ಟಿಕೊಂಡವು. ಶ್ರಮಣ ಎಂಬ ಸಬ್ದವು ಶಮ್ ಧಾತುವಿನಿಂದ ಬಂದುದು. ಕಷ್ಟ ಪಡುವವ ಎಂದು ಅದರ ಅರ್ಥ. ಇದು ಶಾರೀರಿಕ ಕಷ್ಟವನ್ನು ವಹಿಸಲು ಕೂಲಿಕಾರರ ಮಹತ್ವವು ಬೆಳೆಯುತ್ತಾ ನಡೆದಂತೆ ಕಾಣುತ್ತದೆ. ಶ್ರವಣರು ಸಮಾಜದಲ್ಲಿ ಆಧ್ಯಾತ್ಮಿಕ ಜಾಗೃತಿಯನ್ನು ಹುಟ್ಟಿಸಲು ಶ್ರಮ ವಹಿಸುತ್ತಿದ್ದರು. ಒಂದು ವೇಳೆ ತಪಶ್ಚರ್ಯದಿಂದ ಶರೀರಕ್ಕೂ ಇವರು ಕಷ್ಟವನ್ನು ಕೊಡುತ್ತಿರುವವರಾಗಿದ್ದರಿಂದ ಇವರಿಗೆ *ಶ್ರವಣ* ಎಂಬ ಹೆಸರನ್ನು ಕೊಟ್ಟಿರಬಹುದಾಗಿದೆ. (ಅದೇ.೭೨)

೨೨. ಧರ್ಮಾನಂದ ಕೊಸಾಂಬಿ, (ಅನು: ಆದ್ಯರಂಗಾಚಾರ್ಯ), *ಭಗವಾನ್ ಬುದ್ಧ*, ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೮, ಪು.೨೪೨.

೨೩. *ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ*, ಪು. ೨೫.

೨೪. ಮಿರ್ಜಿ ಅಣ್ಣಾರಾಯ, *ಜೈನಧರ್ಮ*, ಶಾಂತಿ ಸೇವಾ ಸದನ, ಸೇಡಬಾಳ, ೧೯೯೭, ಪು.೩

೨೫. ಹಂಪ ನಾಗಾರಾಜಯ್ಯ (ಸಂ), *ಜೈನ ಕಥಾಕೋಶ*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೧೯೯೭, ಪು.೬೨-೬೫

೨೬. ಚಿದಾನಂದಮೂರ್ತಿ ಎಂ., ಪು.೨೪.

೨೭. ಸೂರ್ಯನಾಥ ಯು.ಕಾಮತ್ (ಸಂ), *ಕರ್ನಾಟಕ ರಾಜ್ಯ ಗ್ಯಾಝೆಟಿಯರ್, ಭಾಗ-೧*, ಕರ್ನಾಟಕ ಸರ್ಕಾರ, ೧೯೮೪, ಪು. ೩೫೦

೨೮. ಅದೇ ಪು. ೩೫೨

೨೯. ಹಿರೇಮಠ ಎಸ್.ಎಸ್., *ದಲಿತ ಸಂಸ್ಕೃತಿ*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧, ಪು.೭೩.

೩೦. *ಎ.ಕ., ಸಂ.೧*, ಕ್ರಿ.ಶ.೧೩೬೮, ಪು.೨೮೬.

೩೧. ಚಿದಾನಂದಮೂರ್ತಿ ಎಂ, *ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ*, ಪು.೨೭

೩೨. ಹಯವದನರಾವ್ ಸಿ., *ಮೈಸೂರು ಗ್ಯಾಝೆಟಿಯರ್*, ಪು.೨೨೮; ಹೊಲೆಯರು ಇತರೆ ಕಸುಬುಗಳಾದ ಹಳ್ಳಿಯ ಕಾವಲುಗಾರರು, ಮುಖ್ಯ ಸಂದೇಶಕಾರರು ಹೌದು. ತಮ್ಮನ್ನು ತಾವು ಚಲುವಾದಿಗಳೆಂದು ಕುಳವಾಡಿಗಳೆಂದು ಕರೆದುಕೊಳ್ಳುತ್ತಾರೆ.

೩೩. *ಮುಂಬೈ ಕರ್ನಾಟಕ ಗ್ಯಾಝೆಟಿಯರ್*, ಪು.೨೧೭; ಇವರಲ್ಲಿ ತೆಲುಗು, ಮರಾಠಿ, ಕನ್ನಡ ಭಾಷಿಕರು ಸೇರಿದ್ದಾರೆ. ಸತ್ತ ದನದ ಮಾಂಸ ತಿನ್ನುವವರು. ಉತ್ತಮಸ್ಥರು ಇವರನ್ನು ಮುಟ್ಟಿಸಿಕೊಳ್ಳುವುದಿಲ್ಲ. ಊರು ಕಾಯುವವರು, ಹೊಲಗಳ ಮೇರೆ ಗೊತ್ತು ಮಾಡುವವರು, ಸರಕಾರಿ ಹೆಣವನ್ನು ಹೊಯ್ಯುವವರು, ಹಲಗೆಗಳನ್ನು ಬಾರಿಸುವವರು, ಕಹಳೆಗಳನ್ನು ಊದುವವರು. ರೈತರಿಗೆ ಮಿಣಿ, ಬಾರು ಮುಂತಾದ ತೊಗಲಿನ ಸಾಮಾನುಗಳನ್ನು ಮಾಡಿಕೊಡುವವರು. ಹೊಲೆಯರು ಇತರೆ ಪಂಗಡಗಳಾದ ಮಾದಿಗರು, ಸಮ್ಮಗಾರರಲ್ಲಿ, ಢೋರರಲ್ಲಿ ಬೋಜನ ಮಾಡುವುದಿಲ್ಲ. ಇವರ ಕುಲದೇವತೆ ದುರುಗಮ್ಮ, ಮುರುಗಮ್ಮ, ಯಲ್ಲಮ್ಮ (ಅದೇ.ಪು..೨೧೭)

೩೪. ಅನಂತಕೃಷ್ಣ ಅಯ್ಯರ್ ಮತ್ತು ನಂಜುಂಡಯ್ಯ, *ಮೈಸೂರು ಟ್ರೈಬ್ಸ್ ಅ್ಯಂಡ್ ಕ್ಯಾಸ್ಟ್ಸ್*, ಪು.೩೩೧; ಇವರು ಎಡಗೈ ಜಾತಿಯವರೆಂದು ಮಾತಂಗಮುನಿ ವಂಶಸ್ಥರೆಂದು, ಜಾಂಬವಋಷಿ ವಂಶಸ್ಥರೆಂದು ಹೇಳಿಕೊಳ್ಳುತ್ತಾರೆ. ಎಚ್.ಎ.ಸ್ಟುಯರ್ಟ್ ಅವರು ಹೇಳುವಂತೆ ಮಾತಂಗ ವಂಶಸ್ಥರು ಕೆನರಾ ಕರಾವಳಿಯಲ್ಲಿ ಆಳ್ವಿಕೆ ನಡೆಸಿದ

ವಂಶಸ್ಥರೆಂದು ನಂಬುತ್ತಾರೆ. ಫ್ಲೀಟರು ಹೇಳುವಂತೆ ಮಾತಂಗರು ಮತ್ತು ಕಳಚೂರಿಗಳ ನಡುವೆ ಸಂಬಂಧ ಕಲ್ಪಿಸುತ್ತಾರೆ. (ಅದೇ.೩೩೧).

೩೫. ಹಯವದನರಾವ್ ಸಿ.(ಸಂ), *ಮೈಸೂರು ಗ್ಯಾಜೆಟಿಯರ್,* ಸಂ.೧, ೧೯೮೪, ಪು. ೨೨೯-೩೦

೩೬. ಅದೇ ಪು. ೧೨೭; ದಕ್ಷಿಣ ಭಾರತದ ಅಸ್ಪೃಶ್ಯರನ್ನು 'ಆದಿದ್ರಾವಿಡ' ಎಂಬ ಪದದ ಮೂಲಕ ಗುರುತಿಸಲಾಗುತ್ತಿದೆ. ಆದಿದ್ರಾವಿಡ, ಆದಿ ಆಂಧ್ರ, ಆದಿ ಕರ್ನಾಟಕ ಮುಂತಾದ ಪದಗಳು ೧೯ನೇ ಶತಮಾನದಲ್ಲಿ ಚಾಲ್ತಿಗೆ ಬಂದವು. ೧೮೫೭ರಲ್ಲಿ ತಮಿಳುನಾಡಿನ ಜಾಗೃತ ಅಸ್ಪೃಶ್ಯರು ತಮ್ಮನ್ನು ಆದಿದ್ರಾವಿಡರೆಂದು ಘೋಷಿಸಿಕೊಂಡರಲ್ಲದೆ ಆದಿದ್ರಾವಿಡ ಮಹಾಜನಸಭಾ ಕಟ್ಟಿಕೊಂಡರು. ತಮಿಳುನಾಡಿನ ಅಸ್ಪೃಶ್ಯರು "ಆದಿದ್ರಾವಿಡ ಮಹಾಜನ ಸಭಾ" ಸಂಘ ಕಟ್ಟಿಕೊಂಡರು. ೧೯೧೭ರಲ್ಲಿ ತಮಿಳುನಾಡಿಗೆ ಭೇಟಿ ನೀಡಿದ್ದ 'ಮಾಂಟೆಗೋ ಚೇಮ್ಸ್‌ಫರ್ಡ್- ಸಮಿತಿಗೆ ತಮ್ಮ ಬೇಡಿಕೆ ಮುಂದಿಟ್ಟು ತಮ್ಮನ್ನು 'ಆದಿದ್ರಾವಿಡ'ರೆಂದು ಕರೆಯಬೇಕೆಂದು ಒತ್ತಾಯಿಸಿತು. ಆದಿದ್ರಾವಿಡವೆಂಬ ಪದ ಆಧುನಿಕ ಕಾಲದಲ್ಲಿ ಬಳಕೆಗೆ ಬಂದರೂ ಅಸ್ಪೃಶ್ಯರನ್ನು ಪ್ರತಿನಿಧಿಸುತ್ತದೆ. ಮಾಲ, ಮಾದಿಗ, ಹೊಲೆಯ, ಪುಲಿಯ, ಮಹರ್, ಮಾಂಗ್ ಮುಂತಾದ ಅಸ್ಪೃಶ್ಯ ಪದಗಳು.

೩೭. ವಿಕ್ಟರ್ ರಿಟರ್ನ್‌ಬರ್ಗ್ (ಸಂ), *ಫ್ಯೂಡಲ್ ಸೊಸೈಟಿ ಆ್ಯಂಡ್ ಇಟ್ಸ್ ಕಲ್ಚರ್,* ಪ್ರೋಗ್ರೆಸ್ ಪಬ್ಲಿಷರ್ಸ್, ಮಾಸ್ಕೊ, ೧೯೮೮, ಪು.೨೩೯. ಚಿದಾನಂದಮೂರ್ತಿಯವರು 'ಬೇಹುಗಾರ' ಎಂಬುದನ್ನು ಗೂಢಚಾರ ಎಂಬರ್ಥದಲ್ಲಿ ಬಳಸುತ್ತಾರೆ; ಬೇಗಾರ ಎಂಬುದು ಒಂದು ಹಿಂದೂಸ್ಥಾನಿ ಪದ. ಇದು ಪ್ರತಿಫಲವಿಲ್ಲದೆ ದುಡಿಯುವ ವ್ಯಕ್ತಿಯನ್ನು ಸೂಚಿಸುತ್ತದೆ. ಬೇಗಾರ್ ಎಂದರೆ ಸರಕಾರಕ್ಕಾಗಿ ಜುಲುಮೆಯಿಂದ ಅಥವಾ ಕಡ್ಡಾಯವಾಗಿ ದುಡಿಯುವ ಕೆಲಸಗಾರ (ಕರ್ನಾಟಕ ರಾಜ್ಯ ಗ್ಯಾಜೆಟಿಯರ್, ಪು. ೩೬೫)

೩೮. ಮಹಾಲಿಂಗಂ ಟಿ.ವಿ, *ಅಡ್ಮಿನಿಸ್ಟ್ರೇಷನ್ ಅಂಡ್ ಸೋಷಿಯಲ್ ಲೈಫ್ ಅಂಡರ್ ವಿಜಯನಗರ,* ಯೂನಿವರ್ಸಿಟಿ ಆಫ್ ಮದ್ರಾಸ್, ೧೯೭೫, ಪು.೧೦-೧೧

೩೯. *ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ,* ಪು.೨೯-೩೦; ಮೈಸೂರು ವಿಭಾಗದಲ್ಲಿ ಈ ಶುಲ್ಕವನ್ನು 'ನೆಲಹಾಗ' ಎಂದು ಕರೆಯುತ್ತಾರೆ. ಕೆಲವೆಡೆಗಳಲ್ಲಿ ಬೆಳ್ಳಿನಾಣ್ಯ ಕೊಡುವುದಾಗಿ ಹೇಳಿ ಶವವನ್ನಿರಿಸಿ ಜಾಗದ ನಾಲ್ಕು ಮೂಲೆಗಳಲ್ಲೂ ಬೆರಣಿಯನ್ನಿಟ್ಟ ನಂತರ ಒಂದಷ್ಟು ಹಣ ನೀಡುತ್ತಾರೆ. ಅಂದರೆ ನಾಲ್ಕು ಬೆಳ್ಳಿ ನಾಣ್ಯಗಳನ್ನು ನೀಡಿ ಆ ಶವದ ಹೂಳುವ ಜಾಗವನ್ನು ಪ್ರಾಚೀನ ಕಾಲದಲ್ಲೆಂದೋ ಧರಿಸುವ ಅಥವಾ ಜಾಗದ ಹಕ್ಕನ್ನು ಪಡೆದುಕೊಳ್ಳುವ ಪದ್ಧತಿ ಇತ್ತೆಂಬುದರ ಸೂಚನೆ ಇಲ್ಲಿ ಸಿಗುತ್ತದೆ (ಧರೆಗೆ ದೊಡ್ಡವರು ಪು.೩೩).

೪೦. *ಮುಂಬೈ ಕರ್ನಾಟಕ ಗ್ಯಾಝೆಟಿಯರ್,* ಪು.೨೧೯; ಢೋರ್ ಅಥವಾ ಡೋಹರರು ಕಕ್ಕಯ್ಯ ಅಥವಾ ಕಂಕಯ್ಯ ಎಂದು ಪರಿಚಿತರಾಗಿದ್ದಾರೆ. ಅವರು ಬೆಳಗಾವಿ ಮತ್ತು ಕಲ್ಬುರ್ಗಿ ಭಾಗಗಳಲ್ಲಿ ಕಂಡುಬರುತ್ತಾರೆ. ಢೋರರು ಮಹಾರಾಷ್ಟ್ರದಿಂದ ವಲಸೆ ಬಂದವರಾಗಿರಬಹುದು. ಏಕೆಂದರೆ ಈಗಲೂ ಕೂಡ ಅವರಲ್ಲಿ ಕೆಲವು ಶಾಖೆಗಳಿಗೆ ಸೇರಿದ ಜನರು ಮರಾಠಿ ಮಾತನಾಡುತ್ತಾರೆ. ಲಿಂಗಾಯತ ಮತವನ್ನು ಅನುಸರಿಸುವ ಢೋರರು ಲಿಂಗವನ್ನು ಧರಿಸಿಕೊಳ್ಳುತ್ತಾರೆ. ವಚನಕಾರನಾದ ಡೋಹರ ಕಕ್ಕಯ್ಯನನ್ನು ಆರಾಧಿಸುತ್ತಾರೆ. ಚರ್ಮ ಹದಮಾಡುವವರು ಕೃಷಿ ಕೂಲಿಕಾರರಾಗಿಯೂ ಕೆಲಸ ಮಾಡುತ್ತಾರೆ(ಕರ್ನಾಟಕ ರಾಜ್ಯ ಗ್ಯಾಝೆಟಿಯರ್, ಪು. ೩೬೬)

೪೧. ಚಿದಾನಂದಮೂರ್ತಿ ಎಂ., *ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ,* ಪು.೩೧-೩೨

೪೨. ಅಂಬೇಡ್ಕರ್ ಬಿ.ಆರ್., *ಅಸ್ಪೃಶ್ಯರು,* ಪಾಪಚ್ಚಿ ಪ್ರಕಾಶನ, ಬೆಂಗಳೂರು, ೧೯೮೮, ಪು.೧೫೩; ಅನುಲೋಮ ಮತ್ತು ಪ್ರತಿಲೋಮ ಎಂಬ ಎರಡು ವರ್ಗಗಳನ್ನು ಕಾಣಬಹುದು. ಉನ್ನತ ವರ್ಗದ ತಂದೆ ಮತ್ತು ಕೆಳವರ್ಗದ ತಾಯಿಯ ಮಕ್ಕಳು ಅನುಲೋಮ ವರ್ಗದವರು. ಕೆಳವರ್ಗದ ತಂದೆ ಮತ್ತು ಉತ್ತಮ ವರ್ಗದ ತಾಯಿಗೆ

ಜನಿಸಿದವರು ಪ್ರತಿಲೋಮರು. ಮನು ಇವರಲ್ಲಿ ಭಿನ್ನತೆಯನ್ನು ಸೂಚಿಸಿದ್ದಾನೆ. ಅನುಲೋಮದವರನ್ನು 'ವರ್ಣಬಾಹ್ಯರು' ಎಂದು ಪ್ರತಿಲೋಮದವರನ್ನು 'ಹೀನ'ರೆಂದು ಕರೆದಿದ್ದಾನೆ. ಆದರೆ ಮನು ಇವರನ್ನು ಅಸ್ಪೃಶ್ಯರೆಂದು ಪರಿಗಣಿಸಿಲ್ಲ. ಮನು ಪ್ರಕಾರ "ಅಂತ್ಯಜರು ಒಂದು ವರ್ಗಕ್ಕೆ ಸೇರಿದರೆ, ಆದರೆ ಅಂತ್ಯಜರು ಅಸ್ಪೃಶ್ಯರು ಎಂದು ಹೇಳಲು ಯಾವುದೇ ಆಧಾರಗಳಿಲ್ಲ. ಮೇಧಾ ತಿಥಿಯು ತನ್ನ ಭಾಷ್ಯದಲ್ಲಿ ಅಂತ್ಯಜರೆಂದರೆ ಮ್ಲೇಚ್ಛರೆಂದು, ಮೇದರು ಎಂದು ಹೇಳಿದ್ದಾನೆ.

೪೩. *ಕನ್ನಡ ನಿಘಂಟು*, ಕನ್ನಡ ಸಾಹಿತ್ಯ ಪರಿಷತ್ತು, ೧೯೭೧, ಪು.೫೦೬.

೪೪. ಲಕ್ಷ್ಮಣ್ ತೆಲಗಾವಿ, *ಹಿಂದುಳಿದ ವರ್ಗಗಳ ಮತ್ತು ದಲಿತ ಚಳುವಳಿಗಳು*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭, ೧೩೮-೪೦; ಈ ಜನಾಂಗದಲ್ಲಿ ಹಲವು ಉಪಜಾತಿಗಳಿವೆ. ಭಾಂಬಿ, ಅಸಾದರು, ಅಸೋಡಿ, ಚಮಾಡಿಯ, ಚಮ್ಮಾರ, ಚಾಂಭಾರ್, ಚಮಗಾರ, ಹರಳಯ್ಯ, ಖಾಲ್ಪ, ಮಾಚಿಗಾರ, ಮೋಚಿಗಾರ, ಮಾದಾರ್, ಮೋಚಿ, ಮೋಜಿ, ಮುಚ್ಚಿ ಮುಂತಾದವುಗಳು (ಅದೇ.ಪು.೧೩೮).

೪೫. ಎಡ್ಗರ್ ಥರ್ಸ್ಟನ್ ಮತ್ತು ಕೆ.ರಂಗಾಚಾರಿ, *ಕ್ಯಾಸ್ಟ್ಸ್ ಆ್ಯಂಡ್ ಟ್ರೈಬ್ಸ್ ಆಫ್ ಸದರನ್ ಇಂಡಿಯಾ, ವ್ಯಾಲ್ಯೂಮ್* -೧, ನವದೆಹಲಿ, ೧೯೮೭, ಪು.೮೨-೮೪.

೪೬. ಬ್ರಾಹ್ಮಣರಲ್ಲಿ ಹಲವು ಉಪ ಪಂಗಡಗಳಿರುವಂತೆ ಅಸ್ಪೃಶ್ಯರಲ್ಲಿ ಹಲವು ಉಪಜಾತಿಗಳಿರುವುದನ್ನು ಈಗಾಗಲೇ ಗಮನಿಸಿದೆ. ಆದರೆ ಚರ್ಮಕ್ಕೆ ಸಂಬಂಧಿಸಿದ ಮುಖ್ಯ ಕಸುಬನ್ನು ಅವಲಂಬಿಸಿರುವುದು ವೇದಗಳ ಕಾಲದಿಂದ ನೋಡಬಹುದು. *ಡೋರರು, ಮಚಗಾರರು, ಸಮಗಾರರು, ಹೊಲೆಯರು, ಮಾದಿಗರು;* ಡೋರರು-ತೊಗಲಿಂದ ಚರ್ಮ ತಯಾರಿಸುವವರು, ಮಚಗಾರರು-ದೇಸಾಯಿ, ಪಟೇಲ, ಗೌಡ ಇಂಥವರಿಗೆ ಮಾತ್ರ ಹೊಸ ಮಚ್ಚೆ ಹೊಲಿದು ಕೊಡುವವರು; ಸಮಗಾರರು-ಸಾಮಾನ್ಯ ಜನತೆಗೆ ಚಪ್ಪಲಿ ಹೊಲಿದು ಕೊಡುವವರು ಹಳೆಯದನ್ನು ರಿಪೇರಿ ಮಾಡುವವರು; ಮಾದಿಗರು-ಸ್ವತಃ ತಾವೇ ಚರ್ಮ ತಯಾರಿಸಿ ಚಪ್ಪಲಿ ಹೊಲಿಯುವವರು; ಹೊಲೆಯರು-ಸತ್ತ ದನದ ಚರ್ಮವನ್ನು ಸುಲಿದು ಡೋರರಿಗೆ ಒಪ್ಪಿಸುವವರು. ಹೀಗೆ ಚರ್ಮದ ಉಪಕಸುಬಿನಿಂದ ವಿವಿಧ ಉಪಜಾತಿಗಳಾಗಿರುವುದನ್ನು ಗಮನಿಸಬಹುದು. (ವಿವಿಧ ಲೇಖಕರು, ಕನ್ನಡ ಸಾಹಿತ್ಯದಲ್ಲಿ ಅಸ್ಪೃಶ್ಯತೆಯ ಪರಿಕಲ್ಪನೆ, ಪು.೬೬).

೪೭. ಚಿದಾನಂದಮೂರ್ತಿ ಎಂ. *ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ,* ಪು.೨೮

೪೮. ಲಕ್ಕಪ್ಪಗೌಡ ಎಚ್.ಜೆ. (ಪ್ರ.ಸಂ), *ಕರ್ನಾಟಕದ ಬುಡಕಟ್ಟುಗಳು, ಸಂ.೨,* ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೨೦೦೦, ಪು.೧೬-೧೭

೪೯. ಅದೇ ಪು.೫೦೦-೦೧; ಅಲೆಮಾರಿಗಳಾಗಿದ್ದ ದೊಂಬರು ಪರಿಸ್ಥಿತಿಯ ಒತ್ತಡದಿಂದಾಗಿ ತಮ್ಮ ಮೂಲ ಕಸುಬನ್ನು ಬಿಟ್ಟು ಖಾಯಂ ಆಗಿ ಒಂದು ಕಡೆ ನೆಲೆನಿಲ್ಲಲು ಕಷ್ಟವಾಗಿದೆ. ಇವರ ವಾಸ ಊರ ಹೊರಗಿನ ಮಾರಿಗುಡಿ. ಇಂದಿಗೂ ಕೂಡ ಗ್ರಾಮೀಣ ಪ್ರದೇಶಗಳಲ್ಲಿ ಆಟವನ್ನು ಪ್ರದರ್ಶಿಸಬೇಕಾದರೆ ಪೂರ್ವದಲ್ಲಿ ಗ್ರಾಮದ ಮುಖಂಡರ ಅನುಮತಿ ಪಡೆಯಬೇಕಾಗುತ್ತದೆ. ವಿಶೇಷವಾಗಿ ವಿಜಯನಗರ ಕಾಲದಲ್ಲಿ ವಿಶೇಷ ಹಬ್ಬಗಳನ್ನು ರಂಜನೀಯ ಆಟಗಳನ್ನು ರಾಜರ ಮುಂದೆ ಪ್ರದರ್ಶಿಸುತ್ತಿದ್ದರು ಎಂಬುದನ್ನು ಗಮನಿಸಬಹುದು. ಡೋಲು ಬಾರಿಸುತ್ತ ಊರಿನ ಬೀದಿಗಳಲ್ಲಿ ಪ್ರದರ್ಶನ ನಡೆಯುವ ಸ್ಥಳದ ಸಮಯವನ್ನು ಜನರಿಗೆ ತಿಳಿಸಿ ಆಹ್ವಾನ ನೀಡುತ್ತಿದ್ದರು. ಬಹುಪಾಲು ಈ ಆಟ ರಾತ್ರಿಯ ಸಮಯದಲ್ಲಿ ನಡೆಯುತ್ತಿತ್ತು. ಆದರೆ ಇತ್ತೀಚಿನ ದಿನಮಾನಗಳಲ್ಲಿ ಈ ರೀತಿಯ ಪ್ರದರ್ಶನ ಕಲೆಗಳು ಕಡಿಮೆಯಾಗಿ ಅವರ ಜೀವನ ಅಸ್ತವ್ಯಸ್ತದಿಂದ ಕೂಡಿದೆ. (ಅದೇ ಪು. ೫೦೬).

೫೦. ಅದೇ ಪು. ೬೪೨-೪೪; ಎಡ್ಗರ್ ಥರ್ಸ್ಟನ್, ಕೆ.ಎಸ್.ಸಿಂಗ್, ವಿವೇಕ್ ರೈ ಬಿ.ಎ, ಚಿನ್ನಪ್ಪಗೌಡ, ಎ.ಪಿ.ಸಾವಡ, ಅಭಯಕುಮಾರ್ ಮುಂತಾದವರು ತುಳುನಾಡಿನ ಮೇರರ ಬಗೆಗೆ ಹೆಚ್ಚಿನ ಅಧ್ಯಯನ ಮಾಡಿರುವುದನ್ನು ಗಮನಿಸಬಹುದು.

೫೧. ಲಕ್ಕಪ್ಪಗೌಡ ಎಚ್.ಜೆ.(ಸಂ), *ಕರ್ನಾಟಕದ ಬುಡಕಟ್ಟುಗಳು*, ಪು.೬೪೩.

೫೨. ಅಭಯಕುಮಾರ್ ಕೌಕ್ರಾಡಿ, *ಮುಗೇರರು-ಜನಾಂಗ ಜಾನಪದ ಅಧ್ಯಯನ*, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು ಮತ್ತು ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿ, ಮಂಗಳೂರು, ೧೯೯೭, ಪು.೬.

೫೩. ಮೈತ್ರಿ ಕೆ.ಎಂ., *ಬುಡಕಟ್ಟು ಕುಲಕಸುಬುಗಳು*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨, ಪು.೧೩೩.

೫೪. ಅದೇ ಪು.೧೩೫; 'ಹರಿಜನ' ಎಂಬ ಪದವನ್ನು ಗಾಂಧೀಜಿ ಹುಟ್ಟುಹಾಕಿದರೆಂಬ ಅಭಿಪ್ರಾಯ ಬಹುತೇಕರಲ್ಲಿದೆ. ಆದರೆ ಇದು ಹರಿದಾಸರು ೧೭ನೇ ಶತಮಾನದಲ್ಲಿ ಕೊಟ್ಟ ಹೆಸರು. ಅದನ್ನು ಮರಳಿ ಬಳಕೆಗೆ ತಂದವರು ಗಾಂಧೀಜಿ. ೧೭ನೇ ಶತಮಾನದಲ್ಲಿ ಮಹಾರಾಷ್ಟ್ರದ ರಾಷ್ಟ್ರೀಯ ಜಾಗೃತಿ ಚಳವಳಿ ಹುಟ್ಟಿ ಶಿವಾಜಿ ಮಹಾರಾಜರಿಂದ ಹಿಂದೂ ಸಾಮ್ರಾಜ್ಯ ಪ್ರತಿಷ್ಠಾಪನೆಯಾಗುವ ಸಂದರ್ಭದಲ್ಲಿ ಹೊಲೆಯ, ಮಾದಿಗ ಚಮ್ಮಾರ, ಬೇಡ ಮುಂತಾದ ಜಾತಿಯ ದಲಿತರು ಹಿಂದೂ ಸಾಮ್ರಾಜ್ಯ ಕಟ್ಟಲು ಎಲ್ಲರ ಜೊತೆಯಲ್ಲಿ ನಿಂತು ಸರಿಸಮವಾಗಿ ಸಮರಾಂಗಣದಲ್ಲಿ ಹೋರಾಡಿದರು. ಇದಕ್ಕೆ ಪ್ರತಿಯಾಗಿ ದಲಿತರನ್ನು ಮೇಲೆತ್ತಬೇಕು ಎಂಬ ಭಾವನೆಯಿಂದ ಹರಿಜನ ಎಂಬ ಹೆಸರು ಕೊಟ್ಟರು (ಅರವಿಂದ ಮಾಲಗತ್ತಿ, ದಲಿತಯುಗ ಮತ್ತು ಕನ್ನಡ ಸಾಹಿತ್ಯ, ಚೇತನ ಬುಕ್ ಹೌಸ್, ಪು.೧೯೩-೯೪)

೫೫. ಮಮ್ತಾಜ್ ಅಲಿಖಾನ್, *ಐಡೆಂಟಿಟಿ ಫಾರ್ಮೇಷನ್ ಆಂಡ್ ಸೆಲ್ಫ್ ಐಡೆಂಟಿಟಿ ಅಮಾಂಗ್ ಹರಿಜನ್ ಎಲೈಟ್*, ಉಪ್ಪಲ್ ಪಬ್ಲಿಷಿಂಗ್ ಹೌಸ್, ನ್ಯೂಡೆಲ್ಲಿ, ೧೯೯೪, ಪು.೫.

೫೬. ಅದೇ ಪು.೧೧; 'ಪಂಚ' ಎನ್ನುವ ಶಬ್ದ ಹಿಂದಿ, ಮರಾಠಿ ಮತ್ತು ಉತ್ತರ ಕರ್ನಾಟಕದಲ್ಲಿ ಟವಲ್ ಎಂಬ ಅರ್ಥದಲ್ಲಿ ಬಳಕೆಯಾಗುತ್ತಿದೆ. (ಶಂಕರ್ ಮೊಕಾಶಿ ಪುಣೇಕರ, *ಹರಿಜನ್ ಕಾಂಟ್ರಿಬ್ಯೂಷನ್ ಟು ಮಿಡೆವಲ್ ಇಂಡಿಯನ್ ಥಾಟ್*, ಪು.೫)

೫೭. ಅದೇ ಪು.೧೧.

೫೮. *ಕನ್ನಡ ವಿಷಯ ವಿಶ್ವಕೋಶ*, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೨೦೦೬, ಪು.೨-೪

೫೯. *ಕನ್ನಡ ನಿಘಂಟು*, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೭೯, ಪು.೩೮೨೮; ದಳಿತ ಎಂಬ ಪದವು 'ಪಂಪಭಾರತ'ದಲ್ಲಿ ಬಳಕೆಯಾಗಿರುವುದನ್ನು ಗಮನಿಸಬಹುದಾಗಿದೆ.

ಶುಭ ತಿಥಿ, ಶುಭ ನಕ್ಷತ್ರಂ
ಶುಭ-ವಾರಂ, ಶುಭ ಮುಹೂರ್ತಮ್ ಎನ್ ಗಣಕರ್
ಇಳಾ ಪ್ರಭ ಬಗೆದನ್
ಉದಿತ ಕಾಯಪ್ರಭೆ ಪರೆದಿರೆ
ದಳಿತ ಶತ್ರುಗೋತ್ರಂ ಪುತ್ರಂ (೧-೧೨೭- ಪಂಪ ಭಾರತ).

೬೦. ಅರವಿಂದ ಮಾಲಗತ್ತಿ (ಸಂ), *ದಲಿತಮಾರ್ಗ*, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು ೨೦೦೨, ಪು.೨೧

೬೧. ಲಕ್ಷ್ಮಣ್ ತೆಲಗಾವಿ, *ಹಿಂದುಳಿದ ವರ್ಗಗಳ ಮತ್ತು ದಲಿತ ಚಳವಳಿಗಳು*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭, ಪು.

೬೨. ಗೇಲ್ ಒಮ್ವೆಟ್, *ದಲಿತ್ ವಿಷನ್*, ಸೇಜ್ ಪಬ್ಲಿಕೇಷನ್, ನ್ಯೂಡೆಲ್ಲಿ, ೧೯೯೫, ಪು.೭೨

೬೩. ಆಲಿವರ್ ಮೆಂಡಲ್‌ಸನ್ ಮತ್ತು ಮಾರಿಕಾ ವಿಚಿಸಿ, *ದಿ ಅನ್‌ಟಚಬಲ್ಸ್*, ಫೌಂಡೇಶನ್ ಬುಕ್ಸ್, ನ್ಯೂಡೆಲ್ಲಿ, ೨೦೦೦, ಪು.೩-೪

೬೪. ಮೈಕಲ್ ಎಸ್.ಎಂ.(ಸಂ), *ದಲಿತ್ಸ್ ಇನ್ ಮಾಡರ್ನ್ ಇಂಡಿಯಾ*, ವಿಸ್ತಾರ್ ಪಬ್ಲಿಕೇಷನ್, ನ್ಯೂಡೆಲ್ಲಿ, ೧೯೯೯, ಪು.೬೮

೬೫. ಲತಾ ಮುರುಗಕರ್, *ದಲಿತ್ ಪ್ಯಾಂಥರ್ ಮೂವ್‌ಮೆಂಟ್ ಇನ್ ಮಹಾರಾಷ್ಟ್ರ*, ಸಂಗಮ್ ಬುಕ್ಸ್, ಬಾಂಬೆ, ೧೯೯೧, ಪು. ೨೫

೬೬. *ದಲಿತ್ಸ್ ಇನ್ ಮಾಡರ್ನ್ ಇಂಡಿಯಾ*, ಪು.೧೩

೬೭. ಅದೇ, ಪು.೧೪

೬೮. ದಿ ಅನ್‌ಟಚಬಲ್ಸ್, ಪು.xi-xvi

# ದಲಿತರು ಮತ್ತು ಸಮಾಜ

ಭಾರತೀಯ ಸಾಮಾಜಿಕ ವ್ಯವಸ್ಥೆಯನ್ನು ಕುರಿತು ಅರ್ಥೈಸುವುದು ಸುಲಭದ ಮಾತಲ್ಲ. ಅದು ಕಾಲದಿಂದ ಕಾಲಕ್ಕೆ ಸಂಕೀರ್ಣಗೊಂಡಿರುವುದು ಮಾತ್ರವಲ್ಲದೆ ಆಂತರಿಕವಾಗಿ ಹಲವು ಸಾಂಸ್ಕೃತಿಕ ವೈರುಧ್ಯಗಳನ್ನು ಸೃಷ್ಟಿಸಿಕೊಂಡಿದೆ. ಅವುಗಳನ್ನು ಚಾರಿತ್ರಿಕ ಕಾಲಘಟ್ಟದಲ್ಲಿ ನಿಂತು ಚರ್ಚಿಸುವುದು ಕಷ್ಟಸಾಧ್ಯ. ಪ್ರಾಚೀನ ಸಮಾಜವು ರೂಪಿಸಿಕೊಂಡಿರುವ ಬಹುತೇಕ ರೂಢಿ-ಸಂಪ್ರದಾಯಗಳು ಇಂದಿಗೂ ಮುಂದುವರಿಯುತ್ತಿವೆ. ಆ ಅವಧಿಯಲ್ಲಿ ವಿವಿಧ ಮತ-ಪಂಥಗಳು, ಸಾಮಾಜಿಕ ಮತ್ತು ಧಾರ್ಮಿಕ ಆಂದೋಲನಗಳು ಮತ್ತು ಧರ್ಮವು ಸಮಾಜದ ಮೇಲೆ ಮಹತ್ತರವಾದ ಪರಿಣಾಮ ಬೀರಿದೆ. ಈ ಹಿನ್ನೆಲೆಯಲ್ಲಿ ಒಂದು ಸಮುದಾಯವನ್ನು ಕುರಿತು ಪ್ರತ್ಯೇಕವಾಗಿ ಚರ್ಚಿಸುವುದು ಚಾರಿತ್ರಿಕ ಅಧ್ಯಯನ ಕ್ರಮದಲ್ಲಿ ಕಷ್ಟ. ಈ ಪ್ರಕ್ರಿಯೆಯೊಳಗೆ ಜನಸಾಮಾನ್ಯರು, ಕಾರ್ಮಿಕರು, ಕೆಳಜಾತಿಗಳು, ಆದಿವಾಸಿಗಳು ಮತ್ತು ದಲಿತರು ವೈರುಧ್ಯಗಳಿಗೆ ಸಿಲುಕಿ ಗಂಭೀರ ಪರಿಣಾಮಗಳನ್ನು ಎದುರಿಸಿದ್ದಾರೆ. ಹಾಗೆಯೇ ವಿವಿಧ ಬಗೆಯ ಸಾಮಾಜಿಕ ತಲ್ಲಣಗಳನ್ನು ಅನುಭವಿಸಿದ್ದಾರೆ. ಈ ಬಗೆಯ ಸಾಮಾಜಿಕ ಪ್ರಕ್ರಿಯೆಗಳಿಂದ ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕವು ಹೊರತಾಗಿರಲಿಲ್ಲ. ವರ್ಣ, ಜಾತಿ, ಮತ ಮತ್ತು ಧರ್ಮಗಳು ಸಮಾಜದಲ್ಲಿ ಪ್ರಮುಖ ಪಾತ್ರ ವಹಿಸುತ್ತಿದ್ದವು. ಸಾಂಪ್ರದಾಯಿಕ ಚರಿತ್ರೆಯಲ್ಲಿ ಈ ಬಗೆಯ ಮೌಲ್ಯಗಳೇ ಪ್ರಧಾನವಾಗಿ ಕಾಣಿಸುತ್ತವೆ. ಜನಸಾಮಾನ್ಯರು ಪ್ರಭುತ್ವದೊಂದಿಗೆ ನಡೆಸಿದ ಯಾವುದೇ ಬಗೆಯ ಪ್ರಕ್ರಿಯೆಗಳನ್ನು ಅರ್ಥೈಸಿಕೊಳ್ಳುವುದು ಸಾಧ್ಯವಾಗಲಾರದು. ಕ್ರಿ.ಶ. ಹತ್ತನೇ ಶತಮಾನದಿಂದ ಹದಿನೆಂಟನೇ ಶತಮಾನದವರೆಗೆ ಕರ್ನಾಟಕವು ವಿವಿಧ ರಾಜವಂಶಗಳ ಆಳ್ವಿಕೆ ನಡೆದಿದೆ. ಆ ಕಾಲಘಟ್ಟದಲ್ಲಿ ಜನಸಾಮಾನ್ಯರು, ಬುಡಕಟ್ಟುಗಳು, ದಲಿತರು ಸಾಮಾಜಿಕ ಆಯಾಮಗಳಲ್ಲಿ ಯಾವುದೇ ಬಗೆಯ ಬದಲಾವಣೆಗಳು ಕಾಣಲಾಗುವುದಿಲ್ಲ. ಹಾಗೆಯೇ ಇಂದಿಗೂ ಕೂಡ ಅವರಲ್ಲಿ ನಿರೀಕ್ಷಿಸಿದ ಪ್ರಮಾಣದಲ್ಲಿ ಬದಲಾವಣೆಗಳು ಕಾಣದೆ ಮತ್ತೊಮ್ಮೆ ಪ್ರಾಚೀನ ಸಮಾಜವನ್ನು ನೆನಪಿಸುವಂತಿದೆ.



ಈ ಹಿನ್ನೆಲೆಯಲ್ಲಿ ಮಧ್ಯಕಾಲೀನ ಕರ್ನಾಟಕದ ದಲಿತರ ಸಾಮಾಜಿಕ ಬದುಕನ್ನು ಕುರಿತು ಚರ್ಚಿಸಲು ಯತ್ನಿಸಲಾಗಿದೆ. ಜಾತಿಯ ಸಂರಚನೆ ಮತ್ತು ದಲಿತರಿಗಿದ್ದ ಸಾಮಾಜಿಕ ಸ್ಥಾನಮಾನ, ಭಕ್ತಿ ಚಳುವಳಿಗಳು, ಸಾಮಾಜಿಕ ಮತ್ತು ಧಾರ್ಮಿಕ ಆಂದೋಲನಗಳಾಗಿ ಭಕ್ತಿ ಚಳವಳಿಗಳು, ರಾಮಾನುಚಾರ್ಯರು ಮತ್ತು ದಲಿತ ವರ್ಗ ಎಂಬ ವಿಚಾರಗಳನ್ನು ಚರ್ಚೆಗೆ ಒಳಪಡಿಸಲಾಗಿದೆ. ಇದರ ಜೊತೆಗೆ ವಚನ ಚಳವಳಿ, ಹರಿದಾಸ ಚಳವಳಿ, ದೇವಾಲಯ ಸಂಸ್ಕೃತಿ ಮತ್ತು ದಲಿತರು, ಲಿಂಗವಂತ ಕುರುಬರು ಮತ್ತು ಲಿಂಗವಂತ ದಲಿತರು, ಮತಾಂತರ ಪ್ರಕ್ರಿಯೆ ಮತ್ತು ದಲಿತರು, ದಲಿತರು ಮತ್ತು ಬ್ರಾಹ್ಮಣರ ಕೆಲವು ಸಂಬಂಧಗಳು ಎಂಬ ವಿಷಯಗಳನ್ನು

ವಿಶ್ಲೇಷಿಸಲು ಯತ್ನಿಸಿದೆ. ಗ್ರಾಮ ದೇವತೆಗಳು, ಬುಡಕಟ್ಟು ಸಮುದಾಯಗಳು, ತುಳುನಾಡು ಮತ್ತು ಕೊಡಗಿನ ಸಾಂಸ್ಕೃತಿಕ ನಾಯಕರು, ಮುಂತಾದ ವಿಚಾರಗಳನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಮೇಲಿನ ಸಂಗತಿಗಳ ಕುರಿತು ಅಖಿಲ ಭಾರತ ಮಟ್ಟದಲ್ಲಿ ಹಲವು ವಿದ್ವಾಂಸರು ಅಧ್ಯಯನ ನಡೆಸಿದ್ದಾರೆ. ಶ್ಯಾಮಚರಣ ದುಬೆ ಅವರ *ಭಾರತೀಯ ಸಮಾಜ* (೧೯೯೦), ಬಿ.ಆರ್.ಅಂಬೇಡ್ಕರ್ ಅವರ *ಅಸ್ಪೃಶ್ಯರು* (೧೯೭೩), ಆರ್.ಎಸ್. ಶರ್ಮ ಅವರ *ಪ್ರಾಚೀನ ಭಾರತದಲ್ಲಿ ಶೂದ್ರರು* (೨೦೦೪), ಡಿ.ಡಿ. ಕೋಸಾಂಬಿ ಅವರ *ಆ್ಯನ್ ಇಂಟ್ರುಡಕ್ಷನ್ ಟು ದಿ ಸ್ಟಡಿ ಆಫ್ ಇಂಡಿಯನ್ ಹಿಸ್ಟರಿ* (೧೯೯೦), ಜಿ.ಎಸ್.ಘುರ್ಯೆ ಅವರ *ಕ್ಯಾಸ್ಟ್ ಅಂಡ್ ರೇಸ್ ಇನ್ ಇಂಡಿಯಾ* (೧೯೯೦) ಮುಂತಾದವರು.

ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕದ ಸಾಮಾಜಿಕ ವಿಷಯಗಳನ್ನು ಕುರಿತು ಹಲವರು ಚರ್ಚಿಸಿದ್ದಾರೆ. ಬಿ.ಷೇಕ್ ಅಲಿ ಅವರ ಸಂಪಾದಕತ್ವದಲ್ಲಿ *ಕರ್ನಾಟಕ ಚರಿತ್ರೆ ಸಂಪುಟಗಳು-೭* (೧೯೯೭), ಕೆ.ಎಸ್. ಶಿವಣ್ಣ ಅವರ *ದಿ ಅಗ್ರೇರಿಯನ್ ಸಿಸ್ಟಮ್ ಆಫ್ ಕರ್ನಾಟಕ* (೧೯೭೫), ಎಂ.ಎಂ. ಕಲಬುರ್ಗಿ ಅವರ *ಮಾರ್ಗ ಸಂಪುಟ-೪* (೨೦೦೪), ಎಂ. ಚಿದಾನಂದಮೂರ್ತಿ ಅವರ *ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ* (೨೦೦೨), ಅರವಿಂದ ಮಾಲಗತ್ತಿ ಅವರ *ದಲಿತಮಾರ್ಗ* (೧೯೯೮), ಮ.ನ. ಜವರಯ್ಯ ಅವರ *ದಲಿತ ವರ್ಗದ ಶರಣರು ಮತ್ತು ಶರಣೆಯರು ಒಂದು ಅಧ್ಯಯನ* (೨೦೦೨), ಎಸ್.ಎಸ್. ಹಿರೇಮಠ ಅವರ *ದಲಿತ ಸಂಸ್ಕೃತಿ* (೨೦೦೧), ಬಸವರಾಜ ಕಲ್ಗುಡಿ ಅವರ *ಅನುಭಾವ : ಸಾಂಸ್ಕೃತಿಕ ಸಮಸ್ಯೆ ಮತ್ತು ಹುಡುಕಾಟ* (೨೦೦೧), ಬಿ.ಎ.ವಿವೇಕ ರೈ ಅವರ *ತುಳು ಜಾನಪದ ಸಾಹಿತ್ಯ* (೧೯೮೫), ಜಿ.ಶಂ.ಪರಮಶಿವಯ್ಯ ಅವರ *ದಕ್ಷಿಣ ಕರ್ನಾಟಕ ಜನಪದ ಮಹಾಕಾವ್ಯಗಳು* (೧೯೭೯), ತಿ.ನಂ.ಶಂಕರನಾರಾಯಣ ಅವರ *ಕಾಡುಗೊಲ್ಲರು ಸಂಪ್ರದಾಯಗಳು ಮತ್ತು ನಂಬಿಕೆಗಳು* (೧೯೮೨), ಇಸ್ಮಾಯಿಲ್ ಕೆ ಅವರ *ಕರ್ನಾಟಕ ಟೆಂಪಲ್ಸ್* (೧೯೮೪), ಹಿ.ಚಿ.ಬೋರಲಿಂಗಯ್ಯ ಅವರ ಸಂಪಾದಕತ್ವದಲ್ಲಿ *ಮಂಟೇಸ್ವಾಮಿ ಮಹಾಕಾವ್ಯ* (೧೯೯೭), ಕೇಶವನ್ ಪ್ರಸಾದ್ ಕೆ. ಅವರ ಸಂಪಾದಕತ್ವದಲ್ಲಿ *ಮಲೆಮಾದೇಶ್ವರ ಮಹಾಕಾವ್ಯ* (೧೯೯೭), ವಿಜಯ್ ಪೂಣಚ್ಚ ತಂಬಂಡ ಅವರ *ಪಳಮೆ* (೨೦೦೪), ಮೊಗಳ್ಳಿ ಗಣೇಶ್ ಅವರ *ಮೌಖಿಕ ಕಥನ* (೨೦೦೬), ಎ.ವಿ.ನಾವಡ ಮತ್ತು ಗಾಯತ್ರಿ ನಾವಡ ಅವರ ಸಂಪಾದಕತ್ವದಲ್ಲಿ *ಸಾವಿರಾರು ಕೀರ್ತನೆಗಳು* (೨೦೦೨), ಅಮೃತ ಸೋಮೇಶ್ವರ ಅವರ ಸಂಪಾದಕತ್ವದಲ್ಲಿ *ತುಳು ಪಾಡ್ದನ ಸಂಪುಟ* (೧೯೯೭), ವೆಂಕಟೇಶ ಇಂದ್ವಾಡಿ ಅವರ ಸಂಪಾದಕತ್ವದಲ್ಲಿ *ಗೋಣಿ ಬಸಪ್ಪನ ಕಾವ್ಯ* (೨೦೦೬), ಮೋಹನ್‌ಕೃಷ್ಣ ರೈ ಅವರ *ಪ್ರಭುತ್ವ ಮತ್ತು ಜನತೆ* (೨೦೦೬), ಚಲುವರಾಜ ಅವರ ಸಂಪಾದಕತ್ವದಲ್ಲಿ *ಜುಂಜಪ್ಪ* (೧೯೯೯), ಮಂಜುನಾಥ ಬೇವಿನಕಟ್ಟಿ ಅವರ ಸಂಪಾದಕತ್ವದಲ್ಲಿ *ಮೈಲಾರಲಿಂಗನ ಕಾವ್ಯ* (೧೯೯೯), ಸಾವುಕಾರ್ ಎಸ್.ಕಾಂಬಳೆ ಅವರ *ಲಿಂಗಾಯತ ಅಸ್ಪೃಶ್ಯರು: ಒಂದು ಅಧ್ಯಯನ* (೨೦೦೩), ಮುಂತಾದವರು ಅಧ್ಯಯನ ನಡೆಸಿದ್ದಾರೆ. ಇವರ ಬರಹಗಳನ್ನು ಧಾರಾಳವಾಗಿ ಬಳಸಿಕೊಂಡಿದ್ದೇನೆ. ಪ್ರಸ್ತುತ ಅಧ್ಯಯನಕ್ಕೆ ಆನುಷಂಗಿಕ ಆಕರಗಳು ಹೆಚ್ಚಿನ ಮಾಹಿತಿಯನ್ನು ಒದಗಿಸಿವೆ. ಜೊತೆಗೆ ಶಾಸನಗಳು, ಪ್ರಾಚೀನ ಕನ್ನಡ ಪಠ್ಯಗಳನ್ನು ಸಂದರ್ಭಾನುಸಾರವಾಗಿ ಬಳಸಿಕೊಳ್ಳಲಾಗಿದೆ. ಬುಡಕಟ್ಟು

ಕಾವ್ಯಗಳು ಸಹ ಮಧ್ಯಕಾಲೀನ ಕರ್ನಾಟಕದ ಸಾಮಾಜಿಕ ಚರಿತ್ರೆಯನ್ನು ಅರ್ಥೈಸಲು ಸಹಾಯಕವಾಗಿವೆ. ಜನಸಾಮಾನ್ಯರು, ಕೆಳಜಾತಿಗಳು, ದಲಿತರು ಮತ್ತು ಬುಡಕಟ್ಟು ವಿಷಯಗಳನ್ನು ಚರ್ಚಿಸಲು ಮುಖ್ಯವಾಗಿ ಇವರ ಬರವಣಿಗೆಗಳಲ್ಲಿ ಬಳಸಿಕೊಳ್ಳಲಾಗಿದೆ. ಈ ಬುಡಕಟ್ಟುಗಳ ಬಗೆಗೆ ಅಧ್ಯಯನ ಮಾಡಿರುವವರ ಕುರಿತು ಪ್ರತ್ಯೇಕವಾಗಿ ಹೆಸರಿಸಲಾಗಿದೆ. ಅವರ ಬರಹಗಳನ್ನು ಸಹ ಈ ಒಂದು ಅಧ್ಯಾಯಕ್ಕೆ ಬಳಸಿಕೊಳ್ಳಲಾಗಿದೆ.

## ೩.೧ ಜಾತಿಯ ಸಂರಚನೆ ಮತ್ತು ದಲಿತರಿಗಿದ್ದ ಸಾಮಾಜಿಕ ಸ್ಥಾನಮಾನ

ಕ್ರಿ.ಶ. ಹತ್ತರಿಂದ ಹದಿನೆಂಟನೆ ಶತಮಾನದವರೆಗೆ ಕರ್ನಾಟಕದ ಚರಿತ್ರೆಯನ್ನು ಕುರಿತು ಅಧ್ಯಯನ ಮಾಡುವಾಗ ಸಮಾಜವು ಸಂಕೀರ್ಣ ಮಾದರಿಯಲ್ಲಿ ಕಾಣಿಸುತ್ತದೆ. ಕೆಲವು ಜನಸಮುದಾಯಗಳು ಸಮಾಜದ ಮುಖ್ಯವಾಹಿನಿಯಲ್ಲಿದ್ದರೆ, ಕೆಳ ಸಮುದಾಯಗಳಲ್ಲಿ ಆಂತರಿಕ ಸಮಸ್ಯೆಗಳು ಉಲ್ಬಣಗೊಂಡಿದ್ದರಿಂದ ಪ್ರಮುಖ ಪಾತ್ರ ವಹಿಸಲು ಸಾಧ್ಯವಾಗಲಿಲ್ಲ. ಬಹುಸಂಖ್ಯಾತ ಜನಸಮುದಾಯಗಳನ್ನು ನಿಯಂತ್ರಿಸುವಲ್ಲಿ ಅಧಿಕಾರಶಾಹಿ ವರ್ಗ ಪ್ರಮುಖ ಪಾತ್ರ ವಹಿಸಿತು. ಇದರ ಪರಿಣಾಮವಾಗಿ ದಿನದಿಂದ ದಿನಕ್ಕೆ ಸಾಮಾಜಿಕ ಸ್ತರವಿನ್ಯಾಸ ಮತ್ತಷ್ಟು ಭದ್ರವಾಗಿ ತಳವೂರಿತು. ಇದಕ್ಕೆ ಅರಸುಮನೆತನಗಳ ಪರೋಕ್ಷ ಬೆಂಬಲವು ಸಕಾಲಕ್ಕೆ ದೊರೆಯಿತು. ಜಾತಿ ಸಮಾಜದಲ್ಲಿ ನಿರ್ಧಾರಕ ಪಾತ್ರ ವಹಿಸಿತು. ಇದು ಸಮಾಜದಲ್ಲಿ ಪ್ರಭಾವ ಬೀರಬಹುದಾದ ಹಾಗೂ ವಿವಿಧ ಸಮುದಾಯಗಳ ಮೇಲೆ ಎಂತಹ ಪರಿಣಾಮ ಬೀರುತ್ತಿತ್ತು ಎಂಬುದನ್ನು ಕಾಣಬಹುದು. ಭಾರತೀಯ ಸಮಾಜವು ಎಂದಿಗೂ ಬದಲಾಗದ ಸಮಾಜ ಎಂಬುದಕ್ಕೆ ಅದು ಜಾತಿ ಆಧಾರಿತ ಸಂರಚನೆಯಿಂದ ಕೂಡಿದೆ. ಇಂದಿಗೂ ಕೂಡ ಜಾತಿ ಆಧಾರಿತ ಭಾವನೆಗಳು ಮುಂದುವರಿಯುತ್ತಿವೆ.

'ಜಾತಿ' ಎನ್ನುವುದು ಗೊಂದಲ ಉಂಟುಮಾಡುವ ಪದ. ಬೇರೆ ಬೇರೆ ಸಂದರ್ಭಗಳಲ್ಲಿ ವಿವಿಧ ಬಗೆಯ ಸಾಮಾಜಿಕ ಅಂತಸ್ತುಗಳನ್ನು ಅದು ಸೂಚಿಸುತ್ತದೆ. ಪ್ರಾಚೀನ ಕಾಲಘಟ್ಟದಿಂದ ಇಂದಿನವರೆಗೂ ಅದು ಸಮಾಜದ ಭಾಗವಾಗಿ ಪ್ರಭಾವ ಬೀರುತ್ತಿದೆ. ಜನಸಮುದಾಯಗಳ ಸಾಮಾಜಿಕ ಅಂತಸ್ತು ಅದರಿಂದ ನಿರ್ಧಾರವಾಗುತ್ತಿತ್ತು. ಸಮಾಜದ ಮೇಲ್‌ಸ್ತರದ ಸಮುದಾಯಗಳಿಗೆ ಇದು ನಿರೀಕ್ಷಿತ ಬದಲಾವಣೆಯಾದರೆ ಕೆಳಸಮುದಾಯಗಳಿಗೆ ಅತ್ಯಂತ ಕ್ರೂರ ಸಂಪ್ರದಾಯಗಳನ್ನು, ಪದ್ಧತಿಗಳನ್ನು ಬೆಳೆಯಲು ಅವಕಾಶ ನೀಡಿದಂತಾಯಿತು. ಇದಕ್ಕಿಂತ ಪೂರ್ವದಲ್ಲಿ ವರ್ಣವ್ಯವಸ್ಥೆ ಸಮಾಜದ ಮೇಲೆ ಪ್ರಭಾವ ಬೀರುತ್ತಿತ್ತು. *ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ* ಎಂದು ಸಮಾಜದಲ್ಲಿ ನಾಲ್ಕು ವರ್ಣಗಳು ವಿಭಜನೆಗೊಂಡಿದ್ದವು.[೧] ಇದರಿಂದ ಹೊರತಾದ ವಿವಿಧ ಸಮುದಾಯಗಳನ್ನೊಳಗೊಂಡ ಮತ್ತೊಂದು ಸಮಾಜವಿತ್ತು. ಅದುವೇ 'ಅಸ್ಪೃಶ್ಯ' ಸಮಾಜ. ಅಸ್ಪೃಶ್ಯ ಎನ್ನುವ ಬಗ್ಗೆ ವಿದ್ವಾಂಸರಲ್ಲಿ ಸಾಕಷ್ಟು ಗೊಂದಲ ಮತ್ತು ಚರ್ಚೆಗಳಿವೆ. ಅದರ ಬಗ್ಗೆ ಹಿಂದಿನ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಶೂದ್ರ ವರ್ಗದಲ್ಲಿ ವಿವಿಧ ಸಮುದಾಯಗಳು ಸೇರಿಕೊಳ್ಳುತ್ತಿದ್ದವು. ಈ ಹಿನ್ನೆಲೆಯಲ್ಲಿ ಕೇವಲ ಒಂದೇ ಜನಸಮುದಾಯಕ್ಕೆ ಇದು ಸೀಮಿತವಾಗಿರಲಿಲ್ಲ. ಅಧ್ಯಯನದ ಅವಧಿಯ ಕಾಲಘಟ್ಟದಲ್ಲಿ ವಿವಿಧ ಬುಡಕಟ್ಟುಗಳು, ಜಾತಿ ಸಮುದಾಯಗಳು ಕ್ರಮೇಣವಾಗಿ ಹಿಂದೂ ಸಮಾಜದ ಸಂಪರ್ಕದಿಂದ ಹೊಸ ಬಗೆಯ ಸಂಪ್ರದಾಯಗಳಿಗೆ ನಾಂದಿಯಾಡಲು ಕಾರಣವಾಯಿತು.

ಮಧ್ಯಕಾಲೀನ ಕರ್ನಾಟಕದ ಆರಂಭ ಕಾಲಘಟ್ಟದಲ್ಲಿ ಜಾತಿ ಸಂಕೀರ್ಣತೆಯ ಸ್ವರೂಪವು ಜಟಿಲತೆಯಿಂದ ಕೂಡಿರುವಂತಹದು. ಮೊದಲನೆಯದು *ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ* ಕೊನೆಯದು ಅಂತ್ಯಜ ಅಥವಾ ಹೊಲೆಯ ಎನ್ನುವ ವಿವರಗಳು ಕಂಡುಬರುತ್ತವೆ. ಇದು ಅಂದಿನ ಶ್ರೇಣೀಕೃತ ಸಮಾಜದ ವ್ಯವಸ್ಥೆಯ ಯಥಾವತ್ತಾದ ಚಿತ್ರಣ. ಕರ್ನಾಟಕದ ಶಾಸನಗಳಲ್ಲಿ ಒಂದೆರಡು ಕಡೆ ವರ್ಣಗಳ (*ಬ್ರಹ್ಮ, ಕ್ಷತ್ರಿಯ, ವೈಶ್ಯ, ಶೂದ್ರ*) ಹೆಸರು ಬಂದಿದೆ. ರಾಜನು ವರ್ಣಾಶ್ರಮ ಧರ್ಮವನ್ನು ಸಂರಕ್ಷಿಸುವುದು ಅವನ ಪವಿತ್ರ ಕರ್ತವ್ಯಗಳಲ್ಲೊಂದು ಎಂದು ಭಾವಿಸಲಾಗಿತ್ತು. ಬ್ರಾಹ್ಮಣರು ತಮ್ಮ ವರ್ಣದ ವೃತ್ತಿಗಳಾದ ಯಜನ, ಯಾಜನ, ಅಧ್ಯಯನ, ಅಧ್ಯಾಪನಾದಿಗಳನ್ನು ಮಾಡಿಕೊಂಡಿದ್ದರೂ ಅವರಲ್ಲಿ ಕ್ಷತ್ರಿಯರಂತೆ ಕತ್ತಿಯನ್ನು ಹಿಡಿದು ರಾಜ್ಯ ಸ್ಥಾಪಿಸಿದವನು ಮಯೂರಶರ್ಮ ಒಬ್ಬ. ಕರ್ನಾಟಕದ ಬೇರೆ ಬೇರೆ ಭಾಗಗಳನ್ನಾಳುತ್ತಿದ್ದ ಹಲವು ರಾಜರು ತಮ್ಮನ್ನು ಕ್ಷತ್ರಿಯರೆಂದು ಕರೆದುಕೊಂಡರು. ವ್ಯಾಪಾರಿಗಳು ವೈಶ್ಯರೆಂದು ಕರೆದುಕೊಂಡರು. ಕೆಳವರ್ಗದ ವೃತ್ತಿಗಳನ್ನು ಅನುಸರಿಸಿದವರು ಶೂದ್ರರೆಂದು ಕರೆಯಿಸಿಕೊಳ್ಳುತ್ತಿದ್ದರು. ಹೀಗೆ *ಬ್ರಹ್ಮ, ಕ್ಷತ್ರಿಯ, ವೈಶ್ಯ, ಶೂದ್ರ* ಎಂಬ ಪದಗಳು ಬಳಕೆಯಾಗುತ್ತಿದ್ದವು. ಕರ್ನಾಟಕದಲ್ಲಿ ಪ್ರಚಲಿತವಾಗಿದ್ದ ಕೆಲವು ಜಾತಿಗಳನ್ನು, ಆಯಾ ಜಾತಿಯವರ ವೃತ್ತಿಗಳನ್ನು ಪ್ರಸ್ತಾಪಿಸುತ್ತವೆ.[೨] ಈ ಅವಧಿಯ ಚಾರಿತ್ರಿಕ ಕಾಲಘಟ್ಟದುದ್ದಕ್ಕೂ ಅನೇಕ ಜಾತಿ ಉಪಜಾತಿಗಳು ಕಂಡುಬರುತ್ತವೆ. ನಾಗರಿಕ ಪ್ರಪಂಚದಿಂದ ದೂರವಿದ್ದ ಹಲವು ಬುಡಕಟ್ಟುಗಳು ಸಹ ಕಾಣಿಸಿಕೊಳ್ಳುತ್ತವೆ.

ಹತ್ತನೆಯ ಶತಮಾನದಿಂದ ಹನ್ನೆರಡನೆಯ ಶತಮಾನದ ಸಮಾಜವು ಸಂಕೀರ್ಣ ಸ್ವರೂಪದಿಂದ ಕೂಡಿರುವಂತಹದು. ಆ ಸಮಯದಲ್ಲಿ ಜಾತಿಗಳಲ್ಲಿ ಅನೇಕ ಉಪಜಾತಿಗಳು ಹುಟ್ಟಿಕೊಂಡಿರುವುದರ ಜೊತೆಗೆ ವಿವಿಧ ಜಾತಿ ಸಮುದಾಯಗಳೊಂದಿಗೆ ಬೆರೆತುಕೊಂಡವು. ಕವಿರಾಜಮಾರ್ಗದಲ್ಲಿ ನಾಲ್ಕು ವರ್ಣಗಳ ಅನುಕ್ರಮ ಶ್ರೇಣಿಯನ್ನು ಹೇಳಲಾಗಿದೆ. ಸಮಾಜದ ಸರ್ವ ಅಧಿಕಾರಗಳು ಮೇಲ್ಜಾತಿಗಳ ಹಿಡಿತದಲ್ಲಿದ್ದವು. ಅನೇಕ ಬುಡಕಟ್ಟುಗಳು ಮತ್ತು ಅಲೆಮಾರಿಗಳು ಮನುಷ್ಯ ವರ್ಗಕ್ಕೆ ಸೇರಿದವರೇ ಅಲ್ಲ ಎನ್ನುವ ರೀತಿಯಲ್ಲಿ ಅವರನ್ನು ಉಪಚರಿಸಲಾಗುತ್ತಿತ್ತು. ಸೊಡ್ಡಳ ಬಾಚರಸ ಎನ್ನುವವನು ಮನುಷ್ಯನ ದೇಹದ ಪ್ರತಿಯೊಂದು ಅಂಗಕ್ಕೂ ಒಂದೊಂದು ಜಾತಿಯನ್ನು ಸಮೀಕರಿಸಿ ಹದಿನೆಂಟು ಜಾತಿಗಳ ಪಟ್ಟಿಯನ್ನು ಕೊಟ್ಟಿದ್ದಾನೆ.[೩] ಆ ಸಮಯದಲ್ಲಿ ವರ್ಣಾಶ್ರಮ ಧರ್ಮ ಸಮಾಜದ ಮೂಲ ಆಧಾರವಾಗಿತ್ತು. ವರ್ಣವ್ಯವಸ್ಥೆಯ ಕೊನೆಯವರಾದ ಶೂದ್ರರು ತಮ್ಮಲ್ಲೆ ಹಲವಾರು ಜಾತಿ, ಉಪಜಾತಿಗಳಾಗಿ ವಿಭಜನೆಗೊಳ್ಳಲು ಪ್ರಾರಂಭವಾದವು. ಇವರು ಇತರೆ ಮೇಲ್ಜಾತಿಗಳಿಗೆ ದುಡಿಯುವ ಒತ್ತಾಯಕ್ಕೆ ಒಳಗಾಗಿದ್ದರು. ಹನ್ನೆರಡನೆಯ ಶತಮಾನದ ನಂತರ ಜಾತಿಯ ವಿಚಾರದಲ್ಲಿ ಅನೇಕ ಜಾತಿಗಳು ಸಂಕರಗೊಳ್ಳುವುದು ಕಂಡುಬರುತ್ತದೆ. ಆ ಸಮಯದಲ್ಲಿ ಹಲವು ಸಮುದಾಯಗಳು ಮೇಲ್ಪನೆಯ ವ್ಯವಸ್ಥೆಯತ್ತ ಮುಖ ಮಾಡಿದವು. ಸಮಾಜದಲ್ಲಿ ತಾಂಡವಾಡುತ್ತಿದ್ದ ಸ್ಪೃಶ್ಯ-ಅಸ್ಪೃಶ್ಯ, ಮೇಲು-ಕೀಳು, ರಾಜ-ಪ್ರಜೆ, ಮೇಲ್ಜಾತಿ-ಕೆಳಜಾತಿ ಮುಂತಾದ ಪದ್ಧತಿಗಳ ವಿರುದ್ಧ ವಿವಿಧ ಪಂಥಗಳು, ಚಳವಳಿಗಳು ಪರಿಣಾಮ ಬೀರಿದ್ದರಿಂದ ಪ್ರತಿಭಟನೆಯ ಧ್ವನಿಗಳು ಈ ಅವಧಿಯಲ್ಲಿ ಕಂಡುಬರುತ್ತವೆ. ಅಖಿಲ ಭಾರತ ಮಟ್ಟದಲ್ಲಿ ಸಹ ಈ ಬಗೆಯ ಚಳುವಳಿಗಳು ನಡೆದಿರುವುದನ್ನು ಗಮನಿಸಬಹುದು. ಇದರ ಪರಿಣಾಮವಾಗಿ

ಕೆಳಜಾತಿಯವರು ಸಮಾಜದಲ್ಲಿ ತಮ್ಮ ಸ್ಥಾನಮಾನಗಳನ್ನು ಹೆಚ್ಚಿಸಿಕೊಳ್ಳಲು ತಗಾದೆ ಮಾಡುತ್ತಿದ್ದರು. ವ್ಯಾಪಾರಿಗಳು, ಕಲ್ಲುಕುಟಿಗರು, ಕಂಚುಗಾರರು, ಅಕ್ಕಸಾಲಿಗರು, ಬಡಗಿಗಳು ಅವರಲ್ಲಿ ಪ್ರಮುಖರು.[೪] ಸಮಾಜ ಕೆಳಗಿನ ಸ್ತರದಲ್ಲಿದ್ದವರು ಮೇಲ್ಜಾತಿಯ ರೂಢಿಸಂಪ್ರದಾಯಗಳನ್ನು ಅಳವಡಿಸಿಕೊಳ್ಳಲು ಯತ್ನಿಸುತ್ತಿದ್ದರು ಎನ್ನುವುದು ಅಧ್ಯಯನದಿಂದ ವೇದ್ಯವಾಗುತ್ತದೆ.

ವಿಜಯನಗರ ಕಾಲದ ಜಾತಿವ್ಯವಸ್ಥೆಯು ಹಿಂದೂ ಸಮಾಜದ ವಿಶಿಷ್ಟ ಲಕ್ಷಣವಾಗಿತ್ತು. ಆ ಸಮಯದಲ್ಲಿ ಪ್ರಾದೇಶಿಕ ಜಾತಿ ಉಪಜಾತಿಗಳು ಇದ್ದವು. ವಿವಿಧ *ಧರ್ಮ, ಜಾತಿ, ಪಂಗಡ* ಆಧಾರಿತ ಜಾತಿ ವರ್ಗಗಳಿದ್ದವು. ಬ್ರಾಹ್ಮಣರು, ಮುಸ್ಲಿಮರು, ಕ್ರಿಶ್ಚಿಯನ್ನರು, ಕರಾವಳಿ ಕರ್ನಾಟಕದಲ್ಲಿ ವಾಸವಾಗಿದ್ದ ಜೈನರು, ಕುಡಿಯರು ಮತ್ತು ಸೋಲಿಗರಂತಹ ವಿವಿಧ ಆದಿವಾಸಿ ಜನರು ಹಾಗೂ ಕೊಡವ ಮತ್ತು ಹಾಲಕ್ಕಿ ಒಕ್ಕಲುಗಳಂತಹ ಜನಸಮುದಾಯದವರು ಇದ್ದರು. ಇಂದಿನ ಉತ್ತರ ಕನ್ನಡ ಪ್ರದೇಶದಲ್ಲಿ ಸಿದ್ದಿಯರಿದ್ದು ಹೀಗೆ ಸಾಮಾಜಿಕವಾಗಿ ಭಿನ್ನತೆ ಕಂಡುಬರುತ್ತಿತ್ತು.[೫] ಹಲವು ಜಾತಿಗಳಲ್ಲಿ ಬಹುಸಂಖ್ಯೆಯ *ಶೂದ್ರರು* ಗೇಣಿದಾರರು ಅಥವಾ ಕೃಷಿಕಾರ್ಮಿಕರು. ರೆಡ್ಡಿಗಳು ಮತ್ತು ಗೌಡರು ಈ ವರ್ಗಕ್ಕೆ ಸೇರುತ್ತಾರೆ. ಉಪಜಾತಿಗಳ ಗಣ್ಯರನ್ನು ಅಮರನಾಯಕರನ್ನಾಗಿ ಗೇಣಿ ರೈತರಾಗಿ ಕಾವಲುಗಾರನಾಗಿ ನೇಮಕ ಮಾಡಲಾಗುತ್ತಿತ್ತು. *ಕುರುಬರು* ಮತ್ತು *ಗೊಲ್ಲರು* ಕುರಿಕಾಯುವ ವೃತ್ತಿಯಲ್ಲಿ ತೊಡಗಿಕೊಂಡಿದ್ದರು. ಕುಂಬಾರರು, ವಡ್ಡರು, ಉಪ್ಪಲಿಗರು, ನಾಯಿಂದರು ಸಮಾಜಕ್ಕೆ ಸೇವೆ ಸಲ್ಲಿಸುತ್ತಿದ್ದರು. ಈ ಅವಧಿಯಲ್ಲಿ ಲಿಂಗಾಯತ ಅಥವಾ ವೀರಶೈವರು ಸಮಾಜಕ್ಕೆ ಸೇವೆ ಸಲ್ಲಿಸುತ್ತಿದ್ದರು. ಈ ಅವಧಿಯಲ್ಲಿ ಲಿಂಗಾಯತ ಅಥವಾ ವೀರಶೈವರು ಸಮುದಾಯ ಸಮಾಜದ ಮುಖ್ಯ ಪಾತ್ರ ವಹಿಸುತ್ತಿದ್ದರು. ಇವರಲ್ಲಿ ಕೂಡ *ಜಂಗಮರು, ಬಂಜಾರರು* (ಶೆಟ್ಟಿ), *ಆರಾಧ್ಯರು, ಸರ್ದಾರ, ನೊಣಬ*[೬] ಪ್ರಮುಖ ಒಳಪಂಗಡಗಳಿದ್ದವು.

ಈ ಅವಧಿಯಲ್ಲಿ ಕರಾವಳಿ ಕರ್ನಾಟಕದ ಪ್ರದೇಶವು ವಿಜಯನಗರ ಅರಸರಿಗೆ ಸಾಮಂತರಾಗಿ ಆಳ್ವಿಕೆ ನಡೆಸುತ್ತಿದ್ದ ಅನೇಕ ಸಾಮಾಜಿಕ ವರ್ಗಗಳಿದ್ದವು. *ಅಗಸರು, ಅಂಡೆಕೊರಗರು, ಕರಿನ್ಯಾರರು* (ಪರಿಯರು ಒಂದು ವರ್ಗ), *ಕುಂಬಾರರು, ಕ್ಷೌರಿಕರು, ದೇವಡಿಗರು* (ದೇವಾಲಯಗಳಲ್ಲಿ ಹೊರ ಸುತ್ತಿನ ಕೆಲಸಗಳನ್ನು ಮಾಡಿಕೊಡುತ್ತಿದ್ದ ಸೇವಕವರ್ಗ), *ಹಳೇ ಪೈಕರು* (ಬಿಲ್ಲವರಂತೆಯೇ) *ಹರಿಚಟ್ಟಿಗಳು* (ಕೋಮಟಿಗಳಿಗೆ ಸಮನಾದ ವರ್ತಕರು), *ಹೊಲೆಯರು, ಬಂಟರು* (ಜಮೀನುದಾರರು), *ಪಾಂಚಾಲರು* (ಕುಶಲಕರ್ಮಿಕರು), *ಸಾಲಿಯಾನರು* (ನೇಯ್ಗೆಯವರು)[೭] ಮುಂತಾದವರಿದ್ದರು.

ಅಸ್ಪೃಶ್ಯರನ್ನು ಐದನೆಯ ವರ್ಗಕ್ಕೆ ನೂಕಲಾಗಿತ್ತು. ಅವರನ್ನು *ಅಂತ್ಯಜರು* ಅಥವಾ *ಹೊಲೆಯರು* ಎಂದು ಕರೆಯುತ್ತಿದ್ದರು. ಅವರು ನಾಗರಿಕ ಸಮಾಜದಿಂದ ಹೊರಗಿದ್ದರು. ಮೇಲ್ಜಾತಿಗಳು ಅವರನ್ನು ದುರುಪಯೋಗಪಡಿಸಿಕೊಳ್ಳುತ್ತಿದ್ದರು ಮತ್ತು ಅಪಮಾನಿಸುತ್ತಿದ್ದರು. ಅತಿ ಸಣ್ಣ ಅಪರಾಧಗಳಿಗೂ ಕ್ರೂರ ಶಿಕ್ಷೆ ನೀಡಲಾಗುತ್ತಿತ್ತು. ಇತರರ ಬಾವಿಗಳಿಂದ ಅವರು ನೀರು ಸೇದಿಕೊಳ್ಳುವ ಹಾಗಿರಲಿಲ್ಲ. ಇತರರ ಮನೆಗಳಿಗೆ ಹೋಗುವಂತಿರಲಿಲ್ಲ. ದೇವಾಲಯಗಳಿಗೆ ಪ್ರವೇಶಿಸಿ ವಿಗ್ರಹವನ್ನು ಪೂಜಿಸುವಂತಿರಲಿಲ್ಲ.[೮] ಅವರ ಮೇಲೆ

ತೆರಿಗೆಗಳನ್ನು ಹಾಕುತ್ತಿದ್ದರು. ಹೊಲಗೇರಿಗಳಲ್ಲಿ ವಾಸ ಮಾಡುತ್ತಿದ್ದ ಅವರನ್ನು ಅಸ್ಪೃಶ್ಯತೆಯ ಭಾವನೆಯಿಂದ ಇತರ ಜನಸಮುದಾಯಗಳು ಉಪಚರಿಸುತ್ತಿದ್ದವು. ಕೆಲವು ಸಾಮಾಜಿಕ ಸುಧಾರಣಾ ಚಳವಳಿಗಳು ಅನುಕಂಪ ತಾಳಿದವೆ ವಿನಃ ಯಾವ ಬದಲಾವಣೆಯು ನಿರೀಕ್ಷಿಸಿದ ಮಟ್ಟದಲ್ಲಿ ಕಂಡುಬರಲಿಲ್ಲ. ಅವರನ್ನು ಪಶುಗಳಿಗಿಂತ ಕೀಳುಮಟ್ಟದಲ್ಲಿ ನೋಡುವುದಲ್ಲದೆ ಗ್ರಾಮ ನೈರ್ಮಲ್ಯದ ದೃಷ್ಟಿಯಲ್ಲಿ ಅವರನ್ನು ಬಳಸಿಕೊಳ್ಳಲಾಗುತ್ತಿತ್ತು. ಬಲವಂತ ದುಡಿಮೆ, ಆರ್ಥಿಕ ಸಂಕಷ್ಟಗಳನ್ನು ಎದುರಿಸಲಾರದೆ ಮಾಲೀಕರ ಅಧೀನದಲ್ಲಿಯೆ ಜೀವನ ಮಾಡುವಂತಹ ಪರಿಸ್ಥಿತಿ ಅಧ್ಯಯನದ ಅವಧಿಯಲ್ಲಿ ಕಂಡುಬರುತ್ತದೆ.[೯] ದಲಿತರಲ್ಲಿಯೇ ಮತ್ತೊಂದು ಪಂಗಡವಾದ ಮಾದಿಗರು ಸಮಾಜದ ಕೊನೆಯ ಸ್ಥಾನದಲ್ಲಿದ್ದವರು. ಮಾಲರು ಮತ್ತು ಮಾದಿಗರು ಈ ಎರಡು ಪಂಗಡಗಳ ವಿವಾಹ ಸಂಪರ್ಕವಿರಲಿಲ್ಲ. ಎರಡಕ್ಕೂ ಬೇರೆ ಬೇರೆ ಮುಖ್ಯಸ್ಥರಿದ್ದರೂ, ಅವರನ್ನು ನಾಗರಿಕ ಅಥವಾ ಯಾವುದೇ ಸೇವೆಗಳಿಗೆ ಸೇರಿಸಿಕೊಳ್ಳುತ್ತಿರಲಿಲ್ಲ. ಆದುದರಿಂದ ಅವರಲ್ಲಿ ಕೆಲವರು ದರೋಡೆ ಕೋರರಾದರು.[೧೦]

ಮಧ್ಯಕಾಲೀನ ಸಮಾಜವು ದಲಿತರ ಅಸ್ತಿತ್ವದ ಬಗೆಗೆ ಹೇಗೆ ಪ್ರತಿಕ್ರಿಯಿಸಿತು ಎಂಬುದು ಕುತೂಹಲಕಾರಿ ಅಂಶ. ಹಲವು ಪಂಥಗಳು, ಧರ್ಮಗಳು, ಆಂದೋಲನಗಳು ವಿವಿಧ ಬಗೆಯಲ್ಲಿ ಪ್ರತಿಕ್ರಿಯಿಸಿವೆ. ಪ್ರಾಚೀನ ಕಾಲದಲ್ಲಿ ಸ್ಪೃಶ್ಯರು, ಅಸ್ಪೃಶ್ಯರು ಎಂಬ ಎರಡು ವರ್ಗಗಳು ಸಮಾಜದಲ್ಲಿ ಆಳವಾಗಿ ಬೇರೂರಿದ್ದವು. ಭಾರತೀಯ ಸಮಾಜದಲ್ಲಿ ಇವುಗಳ ಬದಲಾವಣೆ ಅಂದಿನ ಸಮಾಜಕ್ಕೂ ಅಥವಾ ಇಂದಿಗೂ ಸಾಧ್ಯವಿಲ್ಲದ ಮಾತಾಗಿದೆ. ವಿವಿಧ ಹೆಸರುಗಳಿಂದ ಕರೆಯಲಾಗುತ್ತಿದ್ದ ದಲಿತರು ಅನಾಗರಿಕತೆಯ ಕುರುಹುಗಿಂತಲೂ ನಿಕೃಷ್ಟವಾಗಿ ಸಮಾಜದಲ್ಲಿ ಜೀವನ ನಡೆಸಿದ್ದಾರೆ. ಅವರನ್ನು ಮನುಷ್ಯರಂತೆ ನೋಡಿಕೊಂಡಿರುವ ಸಂಗತಿಗಳೇ ಎದ್ದು ಕಾಣುವುದಿಲ್ಲ. ಹೀಗಿರುವಾಗ ಅವರ ಸಾಮಾಜಿಕ ಅಸ್ತಿತ್ವದ ಬಗೆಗೆ ನಾವು ಅರ್ಥೈಸಿಕೊಳ್ಳಬಹುದಾಗಿದೆ. ಎಷ್ಟೋ ಸಂದರ್ಭದಲ್ಲಿ ದಲಿತರು ಸಮಾಜದಲ್ಲಿ ಕಾಣುವುದಿರಲಿ, ಕಣ್ಣಿಗೂ ಕೂಡ ಬೀಳುವಂತಿರಲಿಲ್ಲ. ಈ ಕುರಿತು ಸಾಹಿತ್ಯದಲ್ಲಿ ಕುತೂಹಲಕಾರಿ ಅಂಶಗಳು ಕಂಡುಬರುತ್ತವೆ. ಅವರು ಎದುರಿಸಬಹುದಾದ ಸಮಸ್ಯೆಗಳೇನು, ಅವರು ಬದುಕನ್ನು ತಳ್ಳುತ್ತಿರಬಹುದಾದ ವಿಧಾನವಾದರೂ ಯಾವುದು, ಬಲಾಢ್ಯ ಜಾತಿಗಳು ಅವರನ್ನು ಹೇಗೆ ಬಳಸಿಕೊಂಡಿವೆ ಮುಂತಾದ ವಿಚಾರಗಳು ಚರಿತ್ರೆಯುದ್ದಕ್ಕೂ ಕಂಡುಬರುತ್ತವೆ.

### ೩.೧.೧. ವಾಸಸ್ಥಾನ

ಜಗತ್ತಿನ ಯಾವುದೇ ಭಾಗದಲ್ಲಿ ಕಂಡುಬರದಂತ ಅನಿಷ್ಟ ಪದ್ಧತಿ ಭಾರತದಲ್ಲಿ ಇತ್ತು. ಅದುವೇ ಅಸ್ಪೃಶ್ಯತೆ. ಅದು ಇಂದಿಗೂ ಕೂಡ ಮುಂದುವರಿಯುತ್ತಿದೆ. ಸಮಾಜದ ಸಾಮಾಜಿಕ ಶ್ರೇಣೀಕರಣದಲ್ಲಿ ಕೊನೆಯ ಸ್ಥಾನದಲ್ಲಿದ್ದ ದಲಿತರು ಚಾರಿತ್ರಿಕ ಕಾಲಘಟ್ಟದ ಸಂದರ್ಭದಲ್ಲಿ ಎಲ್ಲ ಜನಸಮುದಾಯಗಳಂತೆ ಸಮಾನತೆ ಮತ್ತು ಸಹಬಾಳ್ವೆಯಿಂದ ಊರಿನ ಮಧ್ಯೆ ವಾಸಿಸುವಂತಿರಲಿಲ್ಲ. ಇದಕ್ಕೆ ಶಾಸನಗಳು, ಚರಿತ್ರೆ, ಸಾಹಿತ್ಯ ಮುಂತಾದ ಆಕರ ಸಾಮಗ್ರಿಗಳು, ಪುರಾವೆಗಳನ್ನು ಒದಗಿಸುತ್ತವೆ.

ದಲಿತರು ಏಕೆ ಹಳ್ಳಿಗಳಲ್ಲಿ ಹೊರಗಡೆ ವಾಸಿಸುತ್ತಾರೆ ಎಂಬುದು ಬಹುದೊಡ್ಡ ಸಮಸ್ಯೆ. ಇದಕ್ಕೆ ಸಮರ್ಪಕ ಉತ್ತರ ಕಂಡುಹಿಡಿಯುವುದು ಕಷ್ಟಸಾಧ್ಯವಾಗಿದೆ. ಎಂದಿನಿಂದ ಇವರು ಹೊರಗಡೆ ವಾಸಿಸಲು ಪ್ರಾರಂಭಿಸಿದರು, ಚರಿತ್ರೆಯಲ್ಲಿ ಯಾವ ಕಾಲಘಟ್ಟದಿಂದ ಇವರನ್ನು ಹೊರಹಾಕಲಾಯಿತು ಎಂಬುದಕ್ಕೆ ನಿರ್ದಿಷ್ಟ ದಾಖಲೆಗಳಿಲ್ಲ. ಅಂತ್ಯಜರು ಹಳ್ಳಿಗಳಲ್ಲಿ ಹೊರಗಡೆ ವಾಸಿಸಬೇಕೆಂದು ಶಾಸ್ತ್ರಗಳು ಸಾರಿ ಹೇಳಿರುವುದನ್ನು ನೋಡಿದರೆ ಚಾಂಡಾಲರ ಮತ್ತು ಶ್ವಪಚರ ವಾಸಸ್ಥಳವು ಹೊರಗಡೆ ಇರಬೇಕು. ಅವರನ್ನು ಅಪಪಾತ್ರರಾಗಿಸಬೇಕು ಹಾಗೂ ಅವರ ಸಂಪತ್ತೆಂದರೆ ನಾಯಿಗಳು ಮತ್ತು ಕತ್ತೆಗಳು. ಅವರ ಉಡುಗೆ ಮೃತರಾದವರದು. ಅವರು ಒಡೆದ ಮಡಿಕೆಯಲ್ಲಿ ಆಹಾರ ತಿನ್ನಬೇಕು ಇತ್ಯಾದಿ ಕಟ್ಟಳೆಗಳನ್ನು ಶಾಸ್ತ್ರಗಳು ವಿಧಿಸುತ್ತವೆ. ಶಾಸ್ತ್ರ ಸಂಪ್ರದಾಯಗಳು ಅವರ ಜೀವಕ್ರಮವನ್ನು ನಿಯಂತ್ರಿಸಿಕೊಳ್ಳುತ್ತ ಬಂದಿವೆ.[೧೧] ಇಂದಿಗೂ ಕೂಡ ಗ್ರಾಮೀಣ ಪ್ರದೇಶದಲ್ಲಿ ಈ ವಿಷಯದಲ್ಲಿ ಭಿನ್ನತೆಯೇನು ಕಾಣುವುದಿಲ್ಲ. ಈ ಕಾರಣದಿಂದ ಜಾತಿ ಆಧಾರಿತ ಭಾರತೀಯ ಸಮಾಜವು ಎಂದಿಗೂ ಬದಲಾಗುವುದಿಲ್ಲ ಎನ್ನುವುದನ್ನು ಗಮನಿಸಬಹುದು. "ಚಾಂಡಾಲರು ಊರಹೊರಗೆ ವಾಸ ಮಾಡುತ್ತಿದ್ದರೆಂದು, ಮಾಂಸದ ವ್ಯಾಪಾರ ಮಾಡುತ್ತಿದ್ದರೆಂದು ಫಾಹಿಯಾನನು ತಿಳಿಸುತ್ತಾನೆ."[೧೨] ಈ ವಿವರಗಳು ಕೇವಲ ಕೆಲವೇ ಪ್ರದೇಶಗಳಿಗೆ ಮಾತ್ರವಲ್ಲದೆ ಭಾರತದಾದ್ಯಂತ ಕಂಡುಬರುತ್ತವೆ. ಅದರಲ್ಲಿಯೂ ಕರ್ನಾಟಕದ ದಲಿತರ ಪಂಗಡಗಳಾದ ಹೊಲೆಯರು ಮತ್ತು ಮಾದಿಗರು ಊರಿನ ಹೊರಭಾಗದ ಪ್ರದೇಶಗಳಲ್ಲಿ ವಾಸ ಮಾಡುತ್ತಿದ್ದರೆಂದು ಶಾಸನಗಳು ಉಲ್ಲೇಖಿಸುತ್ತವೆ.

ಪ್ರಾಚೀನ ಸಮಾಜದ ಮೇಲೆ ವರ್ಣಗಳು ಪ್ರಭಾವ ಬೀರಿದವು. ಕಾಲಕ್ರಮೇಣ ಇವು ಜಾತಿ ಮತ್ತು ಉಪಜಾತಿಗಳಿಗೆ ಎಡೆಮಾಡಿಕೊಟ್ಟಿತು. ಅಗ್ರ ಪಂಕ್ತಿಯಲ್ಲಿರುವ ಬ್ರಾಹ್ಮಣರು ಅಗ್ರಹಾರಗಳಲ್ಲಿ ಸಕಲ ಸೌಲತ್ತುಗಳೊಂದಿಗೆ ಜೀವ ನಡೆಸುತ್ತಿದ್ದರು. ಇದಕ್ಕೆ ರಾಜಪ್ರಭುತ್ವದ ಸಹಕಾರವು ಇತ್ತು. ಕೊನೆಯ ಸ್ಥಾನದಲ್ಲಿರುವವರು ಶೂದ್ರರು ಮತ್ತು ದಲಿತರು. ವಿವಿಧ ಸಮುದಾಯಗಳು ವಿವಿಧ ಕೇರಿಗಳಲ್ಲಿ ವಾಸ ಮಾಡುತ್ತಿದ್ದರೆ, ದಲಿತರು ಊರ ಹೊರಗಡೆ ಪ್ರತ್ಯೇಕ ಕೇರಿಗಳಲ್ಲಿ ಜೀವನ ನಡೆಸುತ್ತಿದ್ದರು. ಇವರು ವಾಸ ಮಾಡುತ್ತಿದ್ದ ಪ್ರದೇಶವು ಹೊಲೆಯರ ಕೇರಿ, ಮಾದಿಗರ ಕೇರಿ ಎಂದು ಶಾಸನಗಳಲ್ಲಿ ಉಲ್ಲೇಖಗಳಿವೆ. ಸಾಹಿತ್ಯವು *ಪೊಲೆಗೇರಿ, ಹೊಲಗೇರಿ, ಮಾತಂಗರ ಪಳ್ಳಿ, ಪೊಲೆವಟ್ಟು, ಅಂತ್ಯಜರ ಕೇರಿ*[೧೩] ಮುಂತಾದ ಹೆಸರುಗಳಿಂದ ಅವರು ವಾಸಿಸುತ್ತಿದ್ದ ಪ್ರದೇಶವನ್ನು ಉಲ್ಲೇಖಿಸುತ್ತದೆ. ಕೋಲಶಾಂತಯ್ಯನ ಬೆಡಗಿನ ವಚನವೊಂದರಲ್ಲಿ ಊರಿನ ಒಂದು ಹೊಲದಲ್ಲಿ 'ಹೊಲಗೇರಿ'ಯೂ, ಬಲದಲ್ಲಿ ಮಾದಿಗರ ಮನೆಗಳು ಇರುತ್ತಿದ್ದವೆಂಬುದಕ್ಕೆ ಸೂಚನೆಯಿದೆ. ದಲಿತರ ಪ್ರಮುಖ ಪಂಗಡಗಳಾದ ಹೊಲಯರ ಮತ್ತು ಮಾದಿಗರ ಮಧ್ಯೆ ಸ್ಪಷ್ಟವಾದ ಭಿನ್ನತೆಯಿದೆ. ಊರಿನಿಂದ ಅನತಿ ದೂರದಲ್ಲಿ ಹೊಲೆಗೇರಿಯೂ ಇರುತ್ತಿದ್ದಿತು. ಪಕ್ಕದ ಹೊಲವೊಂದನ್ನು ಶಾಸನವು ನಿರ್ದೇಶಿಸಿರುವುದನ್ನು ನೋಡಿದರೆ, ಊರ ಹೊರಗೆ ಹೊಲಗಳ ಪಕ್ಕದಲ್ಲಿ ಹೊಲಗೇರಿಯಿರುತ್ತಿದ್ದಿತು ಎಂಬುದು ಸ್ಪಷ್ಟ.[೧೪] ಊರ ಹೊರಗೆ ವಾಸಿಸುತ್ತಿದ್ದವರು ಹರಿಜನರು. ಹರಿಜನರು ಊರ ಹೊರಗಡೆ ಹೊಲಗೇರಿಯಲ್ಲಿ ವಾಸಿಸುತ್ತಿದ್ದರು. ಸಮಾಜದಲ್ಲಿ ಬಹುಪಾಲು ಕೆಳಜಾತಿಗಳು ಅಸ್ತಿತ್ವವೇ ಇಲ್ಲದ ರೀತಿಯಲ್ಲಿ ಬದುಕುತ್ತಿದ್ದವು. ದಲಿತರು ಎಂದು

ಕರೆಸಿಕೊಂಡವರು ಸಮಾಜದಿಂದ ಬಹಿಷ್ಕೃತರಾದವರಂತೆ ಜೀವಿಸಬೇಕಾಗಿತ್ತು. ಈ ವಿಚಾರದಲ್ಲಿ ಇಂದಿಗೂ ಕೂಡ ಗ್ರಾಮೀಣ ಪ್ರದೇಶದಲ್ಲಿ ದಲಿತರಿಗೆ ಬಹಿಷ್ಕಾರ ಹಾಕಿದ ಘಟನೆಗಳು ದಿನನಿತ್ಯವೂ ಸಂಭವಿಸುತ್ತಲೇ ಇವೆ. ಆದುದರಿಂದ ಪ್ರಾಚೀನ ಕಾಲಕ್ಕೂ ಮತ್ತು ಇಂದಿಗೂ ಯಾವ ವ್ಯತ್ಯಾಸವಿಲ್ಲವೇನೋ ಎಂಬ ಭಾವನೆ ದಲಿತರಲ್ಲಿ ಮೂಡುತ್ತಿದೆ. ಒತ್ತಾಯಪೂರ್ವಕವಾಗಿ ಅವರು ಊರ ಹೊರಗಡೆ ವಾಸಿಸಬೇಕಿತ್ತು. ಕರ್ನಾಟಕದ ಚರಿತ್ರೆಯಲ್ಲಿ ಯಾವ ಅರಸನಾಗಲಿ, ಸಮಾಜದ ಸಹಭಾಗಿತ್ವ ಜೀವನಕ್ಕೆ ಶ್ರಮ ವಹಿಸಲಿಲ್ಲ. ದಲಿತರ ಮನೆಗಳು ಊರಿನಿಂದ ಹೊರಗಡೆ ಇರುತ್ತಿದ್ದವು ಎನ್ನುವುದಕ್ಕೆ ಕ್ರಿ.ಶ. ೧೧೨೫ರ ಶಾಸನವೊಂದರಲ್ಲಿ 'ನೀರು ಸಾಗರಕ್ಕೆ ಹೋದ ಓಣಿಯಿಂ ಪೊಡವಲು ಹೊಲಗೇರಿಯಂ ಪೊಡುಮುಖವಾಗಿ' ಎನ್ನುವ ಮಾಹಿತಿಯಿದೆ. ಹಾಗೆಯೇ ಹತ್ತನೆ ಶತಮಾನದ ಮತ್ತೊಂದು ಶಾಸನದಲ್ಲಿ 'ಕಾಸರಗೋಡು ತಾಲ್ಲೂಕಿನ ತಳಂಗೇರಿ' ಎಂಬ ಊರ ಹೊರಗಡೆ ತೊರೆಯ ದಡದ ಹತ್ತಿರ ಪುತ್ತೂರಿನ ಹೊಲೆಯರ ಕೇರಿ ಇತ್ತು ಎನ್ನುವ ವಿವರಗಳು ಶಾಸನದಲ್ಲಿ ದಾಖಲಾಗಿದೆ.[೧೫]

ಜಾತಿಗಳಲ್ಲಿ ವಿಪ್ರನು ಪ್ರಥಮವಾಗಿ, *ಶ್ವಪಚ* ಅಥವಾ ಅಂತ್ಯಜನು ಕೊನೆಯ ಸ್ಥಾನಕೊಟ್ಟ, ಸಂಪ್ರದಾಯ ವ್ಯವಸ್ಥೆಯನ್ನು ವಚನಗಾರರು ವಿರೋಧಿಸಿದರೆ ಹೊರತು ಸಕಾರಾತ್ಮಕ ಬದಲಾವಣೆ ಕಾಣಲಿಲ್ಲ. ದಲಿತರನ್ನು ಜಾತಿ ಶ್ರೇಣೀಕರಣದಲ್ಲಿ ಕೊನೆಯ ಸ್ಥಾನದಲ್ಲಿಟ್ಟಿದ್ದಲ್ಲದೆ ಅಪಮಾನಕರ ರೀತಿಯಲ್ಲಿ ನೋಡಿ, ಹಲ್ಲೆ, ದೌರ್ಜನ್ಯ, ಶೋಷಣೆ, ಕೊಲೆ-ಸುಲಿಗೆ, ಬಹಿಷ್ಕಾರ ಮುಂತಾದ ಕ್ರೂರ ಪದ್ಧತಿಗಳಿಂದ ಘಾಸಿಗೊಳಿಸಿದರು. ಕೇವಲ ಜಾತಿ ಪಟ್ಟಿಯಲ್ಲಿ ಕೊನೆ ಸ್ಥಾನ ಮಾತ್ರವಲ್ಲದೆ ನಾಗರಿಕ ಪ್ರಪಂಚದಿಂದ ದೂರ ಇಟ್ಟಿತು. ಜಾತಿ ವಾಚಕವಾದ 'ಹೊಲೆಯ' ಎಂಬುದೇ ಅವಹೇಳನದ ಮಾತಾಗಿ ಪರಿಣಮಿಸಿದ್ದಿತು. ಹೊಲೆಯ ಎಂಬುದನ್ನು ನಿಂದಾವಾಚಕವಾಗಿ ಬಳಸುವುದಾದರೆ ಆಗ ಹೊರಕೇರಿಯವರು ಮಾತ್ರ ಹೊಲೆಯರಾಗುವುದಿಲ್ಲ. ದುಷ್ಟ ಕಾರ್ಯಗಳನ್ನು ಮಾಡಿದ ಯಾರೇ ಆಗಲಿ ಹೊಲೆಯರಾಗುತ್ತಾರೆ.[೧೬] ಮಧ್ಯಕಾಲೀನ ಕರ್ನಾಟಕ ಸಂದರ್ಭದಲ್ಲಿ ದಲಿತರನ್ನು *ಹೊಲೆಯರು* ಮತ್ತು *ಮಾದಿಗರು* ಎಂದು ಹೆಚ್ಚಿನದಾಗಿ ಸಂಬೋಧಿಸುತ್ತಿದ್ದರೆಂದು ಚರಿತ್ರೆ ತಿಳಿಸುತ್ತದೆ. ಇದರ ಜೊತೆಗೆ *ಹೊರಗಿನವರು, ಬಹಿಷ್ಕೃತರು, ಅಂತ್ಯಜರು, ಪಂಚಮರು, ಜಾತಿಹೀನರು, ಆದಿಜಾಂಭವ, ಅಸ್ಪೃಶ್ಯರು* ಮುಂತಾದ ಹೆಸರುಗಳಿಂದ ಕರೆಯಲಾಗುತ್ತಿತ್ತು. ಆದರೆ ಇವರು ಯಾರೂ ಊರಿನ ಒಳಗೆ ವಾಸ ಮಾಡಿದ ಪುರಾವೆಗಳು ಚರಿತ್ರೆಯಲ್ಲಿ ದೊರಕುವುದಿಲ್ಲ. ಈ ಹಿನ್ನೆಲೆಯಲ್ಲಿ ಅವರ ಸಾಮಾಜಿಕ ಬದುಕಿನ ಚಿತ್ರಣವನ್ನು ನಾವು ಅರ್ಥೈಸಿಕೊಳ್ಳಬಹುದಾಗಿದೆ. ಹೊಲಗೇರಿಯಿಂದ ಇತರೆ ಜಾತಿಗಳ ಕೇರಿಗೆ ಬರುವಾಗ ಅಥವಾ ಊರಿನ ಬಿಟ್ಟಿ ಕೆಲಸಗಳನ್ನು ಮಾಡುವುದಕ್ಕಾಗಿ, ಅವರಿಗೆ ಅವಶ್ಯಕ ಪದಾರ್ಥಗಳು ಬೇಕೆನಿಸಿದಾಗ ಕೋಲಿನಿಂದ ಸದ್ದು ಮಾಡಿ ಬರುವ ಮುನ್ಸೂಚನೆ ಕೊಡಬೇಕಿತ್ತು. ಅದನ್ನು ಕನ್ನಡ ಕಾವ್ಯಗಳು 'ಸಂಬಳಿಗೋಲು' ಎಂದು ಕರೆದಿವೆ.[೧೭] ಇಂದಿಗೂ ಕೂಡ ಬಹುತೇಕ ಗ್ರಾಮೀಣ ಪರಿಸರದಲ್ಲಿ ಈ ಸಂಗತಿ ಭಿನ್ನವಾಗಿಯೇನು ಕಾಣಿಸುವುದಿಲ್ಲ. ಸಮಾಜದ ಸಾಮಾಜಿಕ ಶ್ರೇಣೀಕರಣದ ಮೇಲಿನ ಮೂರೂ ವರ್ಣಗಳ ಜನತೆ ಇವರನ್ನು ನಡೆಸಿಕೊಂಡಿರುವ ವಿವರಗಳಿಗಿಂತ ಶೂದ್ರರು ಸಹ ಮಧ್ಯಕಾಲೀನ ಕರ್ನಾಟಕದಲ್ಲಿ ದಲಿತರನ್ನು ಸಾಮಾಜಿಕ ಶ್ರೇಣೀಕರಣದ ದೃಷ್ಟಿಯಿಂದ ನಿಕೃಷ್ಟವಾಗಿ ಕಂಡಿರುವುದು ವೇದ್ಯವಾಗುತ್ತದೆ. ಶೂದ್ರರ ಮನಸ್ಸಿನಲ್ಲಿ ತಮಗಿಂತ ಇನ್ನೊಂದು ಜಾತಿ ಕೆಳಗಿನ

ಸ್ಥಾನಮಾನದಲ್ಲಿದೆ ಎಂಬುದು ಖಚಿತವಾಗುವುದರ ಜೊತೆಗೆ ಶೂದ್ರರಿಗೆ ಮತ್ತು ದಲಿತರಿಗೆ ಸಾಮಾಜಿಕ ಬಿಕ್ಕಟ್ಟುಗಳು ಉಂಟಾಗಲು ಆಸ್ಪದ ನೀಡಿದಂತಾಯಿತು. ಅಂದಿನಿಂದ ಶೂದ್ರರ ಮತ್ತು ದಲಿತರ ನಡುವಿನ ವ್ಯತ್ಯಾಸಗಳು ಮುಂದುವರಿಯಲು ಬಲಾಢ್ಯ ಜಾತಿಗಳೂ ಸಹ ಸಹಕರಿಸಿದವು.

**೩.೧.೨. ಸಂಬಳಿಗೋಲು**

ಪ್ರಾಚೀನ ಸಮಾಜವು ರೂಢಿಸಿಕೊಂಡು ಬಂದಿದ್ದ ಕೆಲವು ಅನಿಷ್ಟ ಪದ್ಧತಿಗಳಲ್ಲಿ ಮೈಲಿಗೆಭಾವನೆ ಒಂದು. ಇದು ಮೂಲತಃ ಹುಟ್ಟಿಕೊಂಡಿದ್ದು ವೃತ್ತಿಗಳ ಹಿನ್ನೆಲೆಯಲ್ಲಿ. ಸಮಾಜದ ಮುಂಚೂಣಿಯಲ್ಲಿದ್ದ ಜನ ಕೆಲವು ಜನರನ್ನು ಕೆಳಮಟ್ಟಕ್ಕೆ ತಳ್ಳಿ ಅವರನ್ನು ನೋಡಿಕೊಂಡಿರುವ ದೃಷ್ಟಿಕೋನಗಳು ಈ ರೀತಿಯ ಪದ್ಧತಿಗಳ ಉಗಮಕ್ಕೆ ಕಾರಣವಾಯಿತು. ಅದರಲ್ಲಿ ಅಸ್ಪೃಶ್ಯತೆ ಎಂಬ ಭಯಾನಕ ಪಿಡುಗು ಸಮಾಜದ ಅಭಿವೃದ್ಧಿಗೆ ಕಂಟಕವಾಗಿತ್ತು. ಅವರು ಮೇಲಿನ ಮೂರು ವರ್ಣಗಳ ಜನತೆಗೆ ಊರಿನ ಪ್ರಮುಖ ಬೀದಿಗಳಲ್ಲಿ ಕಾಣುವಂತಿರಲಿಲ್ಲ. ಆಕಸ್ಮಾತ್ ಅವರು ಊರಿನ ಪ್ರಮುಖ ಬೀದಿಗಳಿಗೆ ಬರುವ ಸಂದರ್ಭದಲ್ಲಿ ನಾವು ಬರುತ್ತಿದ್ದೇವೆ ಎಂದು ಹೇಳಬೇಕಾಗಿತ್ತು. ಕೆಟ್ಟ ಜನರಿಗೆ ಚಾಂಡಾಲರೆಂದು ಕರೆಯುವುದು ರೂಢಿ. ಇವರು ಸಾಮಾನ್ಯ ಜನರಿಂದ ಬೇರೆಯಾಗಿ ವಾಸ ಮಾಡುತ್ತಾರೆ. ಇವರು ಊರಿನೊಳಕ್ಕೋ ಅಥವಾ ಅಂಗಡಿ ಬೀದಿಗೊ ಬರುವಾಗ ತಾವು ಬಂದಿದ್ದೇವೆಂದು ತಿಳಿಸಲು ಮರದ ಕೋಲನ್ನು ಬಡಿದು ಶಬ್ದ ಮಾಡುತ್ತಾರೆ. ಈ ಶಬ್ದವನ್ನು ಕೇಳಿದ ಜನರು ಇವರನ್ನು ಮುಟ್ಟಿಸಿಕೊಳ್ಳದೇ ದೂರ ಹೋಗಲಿ ಎಂದು ಹೀಗೆ ಮಾಡುತ್ತಾರೆ.[೧೮] ಕನ್ನಡ ಕಾವ್ಯಗಳಲ್ಲಿ 'ಸಂಬಳಿಗೋಲು' ಎಂಬ ಉಲ್ಲೇಖ ನಾಗವರ್ಮನ 'ಕರ್ನಾಟಕ ಕಾದಂಬರಿ'ಯಲ್ಲಿ ಕಾಣಿಸಿಕೊಂಡಿದೆ. ಜೇಡರ ದಾಸಿಮಯ್ಯ ಅಂತ್ಯಜ ಹಿಡಿದಿದ್ದ ಕೋಲನ್ನು *ಹಿಡಿಗೋಲು* ಎಂದು ಕರೆಯುತ್ತಾನೆ. ಇದನ್ನು *ಕಂಕರಿಗೋಲು* ಎಂದು ಸಹ ಕರೆಯುತ್ತಾರೆ. 'ಹೊಲೆಯರು ಹೊರಗಿಹನೆ ಊರೊಳಗಿಲ್ಲವೆ ಶ್ರೀ ಹರಿಯನು ಬಲ್ಲವರು ಪೇಳಿ.' ಹೊಲೆಯರು ಊರಿನಿಂದ ಹೊರಗಡೆ ಜೀವನ ಮಾಡುತ್ತಿದ್ದರು ಎಂಬುದು ಇದರ ಸಾರಾಂಶ.[೧೯] *ಫಾಹಿಯಾನ್, ಹ್ಯೂಯನ್‌ತ್ಸಾಂಗ್, ಇತ್ಸಿಂಗ್, ಅಲ್‌ಬರೂನಿ* ಮುಂತಾದ ವಿದೇಶಿ ಪ್ರವಾಸಿಗರು ಭಾರತದಲ್ಲಿ ಚಂಡಾಲರಿಗೆ ಊರಿನ ಹೊರಗೆ ಸ್ಥಾನವಿದ್ದಿತೆಂದು, ಅವರು ಊರೊಳಕ್ಕೆ ಬಂದರೆ ತಾವು ಬರುತ್ತಿದ್ದೇವೆ ಎಂದು ಸಂಬಳಿಗೋಲು ಕುಟ್ಟುತ್ತಾ ಬರುತ್ತಿದ್ದರು.[೨೦] ಸಮಾಜವು ಮುಖ್ಯವಾಗಿ ವರ್ಣಗಳಾಗಿ ವಿಭಜಿಸಲ್ಪಟ್ಟಿದ್ದಲ್ಲದೆ (*ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ*) ಹಲವು ಜಾತಿ ಮತ್ತು ಉಪಜಾತಿಗಳಾಗಿ ಮಾರ್ಪಟ್ಟಿತು. ವರ್ಣಗಳಿಂದ ದೂರವಿದ್ದವರು *ಚಾಂಡಾಲರು* ಮತ್ತು *ಮಾತಂಗರು*.[೨೧] ಚಾಂಡಾಲರು ಊರ ಹೊರಗಡೆ ವಾಸಿಸುತ್ತಿದ್ದರು. ಮಾದಿಗರಿಗೆ ಕೂಡ ಪ್ರತ್ಯೇಕ ಕೇರಿಗಳಿದ್ದವು. ಸಮಾಜದಲ್ಲಿ ಅವರು ನಿರ್ವಹಿಸುವ ಶ್ರಮ ಸಂಸ್ಕೃತಿಯಿಂದ ಗೌರವ ಸ್ಥಾನ ದೊರಕುತ್ತಿರಲಿಲ್ಲ. ಮಾದಿಗರು ಸಹ ಸಾಮಾಜಿಕವಾಗಿ ಕೊನೆಯ ಸ್ಥಾನ ಪಡೆದುಕೊಂಡಿದ್ದರು. 'ಮಾದಿಗರ ಕೇರಿ' ಎಂಬ ಹೆಸರಿನಿಂದ ಕರೆಯುತ್ತಿದ್ದರು. ಹಾಗೆಯೇ ಹೊಲೆಯರು 'ಹೊಲಗೇರಿ'ಯಲ್ಲಿ ವಾಸಿಸುತ್ತಿದ್ದರು ಎಂದು ಶಾಸನಗಳು ತಿಳಿಯಪಡಿಸುತ್ತವೆ.[೨೨] ಉಳಿದ ಶೂದ್ರ ಜಾತಿಗಳು ಸಹ ಇವರನ್ನು ನಿಕೃಷ್ಟವಾಗಿ ನೋಡಿದವು

ಎಂದರೆ ತಪ್ಪಾಗಲಾರದು. ಬ್ರಾಹ್ಮಣರು ಇವರನ್ನು ಕಂಡರೆ ಇಪ್ಪತ್ತು ಅಡಿ ದೂರ ಇರುತ್ತಿದ್ದರು. ಇದು ಶುದ್ಧ, ಅಶುದ್ಧ ಕಲ್ಪನೆಯನ್ನು ಗಟ್ಟಿಗೊಳಿಸಲು ಸಹಾಯಕವಾಯಿತು.

ವಿಜಯನಗರ ಕಾಲದಲ್ಲಿ ಚಾಂಡಾಲರು ಒಂದು ಜಾತಿಯಾಗಿ ಪ್ರತ್ಯೇಕವಾದ ಕೇರಿಗಳ ಗುಡಿಸಲುಗಳಲ್ಲಿ ಜೀವನ ನಡೆಸುತ್ತಿದ್ದರು. ಅಸ್ಪೃಶ್ಯರ ಮತ್ತು ಮೇಲ್‌ಜಾತಿಗಳ ಸಮುದಾಯಗಳ ಸಾಮಾಜಿಕ ಸಂಬಂಧಗಳು ಪ್ರತ್ಯೇಕಗೊಳ್ಳಲು ಮೇಲಿನ ಪ್ರಕ್ರಿಯೆಗಳು ಕಾರಣವಾದವು.[೨೩] ಇಂದಿಗೂ ಕೂಡ ಅಸ್ಪೃಶ್ಯರು ಎಂದರೆ ಮೇಲ್‌ಸ್ತರದ ಜನತೆಯಲ್ಲಿ ಮಾನಸಿಕವಾಗಿ ಒಂದು ಕೀಳುಕಲ್ಪನೆ ಮೂಡುತ್ತದೆ. ಈಗಾಗಲೇ ಹೇಳಿದಂತೆ ದಲಿತರನ್ನು ಐದನೆಯ ವರ್ಗಕ್ಕೆ ತಳ್ಳಲಾಗಿತ್ತು. ಮೇಲುಜಾತಿಗಳು ಅವರನ್ನು ತಮ್ಮ ಸ್ವಾರ್ಥಕ್ಕೆ ಉಪಯೋಗಿಸಿಕೊಳ್ಳುತ್ತಿದ್ದರು. ಇತರರ ಬಾವಿಗಳಿಂದ ನೀರು ಸೇದುವಂತಿರಲಿಲ್ಲ. ದೇವಾಲಯಗಳಿಗೆ ಪ್ರವೇಶವಿರಲಿಲ್ಲ. ಅವರಲ್ಲಿ ಎರಡು ಪಂಗಡಗಳಿದ್ದವು. ಮಾಲರು ಮತ್ತು ಮಾದಿಗರು. ಇವರೆಡರ ನಡುವೆ ವಿವಾಹ ಸಂಪರ್ಕವಿರಲಿಲ್ಲ. ಮಾದಿಗರಲ್ಲೇ ಕೆಲವರು ದರೋಡೆಕಾರರಾಗಿದ್ದರು.[೨೪] ಈ ಕಾಲಾವಧಿಯಲ್ಲಿ ನಡೆಯುತ್ತಿದ್ದ ಅನ್ಯಾಯದ ಬಗ್ಗೆ ಕನ್ನಡ ಕಾವ್ಯಗಳು ನಿರೂಪಿಸುವುದರ ಜೊತೆಗೆ ವಿದೇಶಿ ಪ್ರವಾಸಿಗರ ಬರವಣಿಗೆಗಳು ನೆರವಾಗಿವೆ. *ಅನ್ಯಾಯ, ಮೋಸ, ವಂಚನೆ, ಅಸಮಾನತೆ, ದಬ್ಬಾಳಿಕೆ, ಗುಲಾಮಗಿರಿ, ಅಸ್ಪೃಶ್ಯತೆ, ಸೂಳೆಗಾರಿಕೆ, ದೇವದಾಸಿ, ಸತಿಪದ್ಧತಿ ಹಾಗೂ ಬಹಿಷ್ಕಾರ ಪದ್ಧತಿಗಳು* ಕೆಳಜಾತಿಗಳಿಗೆ ಮತ್ತು ದಲಿತರಿಗೆ ಕಂಟಕವಾಗಿದ್ದವು. ಅವುಗಳಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗುತ್ತಿರಲಿಲ್ಲ. ಕನ್ನಡ ಕಾವ್ಯಗಳಲ್ಲಿ ಸಂಬೋಳಿ ನಾಗಿದೇವ ಎಂಬ ಹರಿಜನ ವಚನಕಾರನೇ ಇದ್ದ. ಸಂಬಳಿಗೋಲಿಗೆ *ಕಂಕರಿಗೋಲು* ಎಂಬ ಪರ್ಯಾಯ ಪದವಿದೆ. ಹೇಮಚಂದ್ರನ 'ದೇಶಿನಾಮಾ ಮಾಲಾ'ದಲ್ಲಿ 'ಬಿಕ್ಕಿರಿ'ಯ ಅಸ್ಪೃಶ್ಯರು (ಚಾಂಡಾಲರು) ಹಿಡಿಯುತ್ತಿದ್ದ ಕೋಲು ಎಂದು ಅರ್ಥ ಕೊಡಲಾಗಿದೆ. ಅದು ವಾಸ್ತವವಾಗಿ ಕನ್ನಡದ 'ಕಂಕರಿ'ಯೇ ಆಗಿದೆ. ಇದರ ಜೊತೆಗೆ 'ಖಿಖ್ಖಿರಿ', 'ಝುಂಝುರಿ' ಶಬ್ದವನ್ನು ಉಲ್ಲೇಖ ಮಾಡಿ ಚಾಂಡಾಲರು-ದೊಂಬರು ಬರುವಿಕೆಯನ್ನು ಜನರಿಗೆ ತಿಳಿಸಲು ಸದ್ದು ಮಾಡುತ್ತಿದ್ದ ಕೋಲುಗಳೆಂದಿದ್ದಾನೆ. ತೆಲುಗಿನಲ್ಲಿ 'ಸಂಬಲಿವಾರು' ಎಂದರೆ ಅಸ್ಪೃಶ್ಯರು, ಹೊಲೆಯರು. ಕಲ್ಯಾಣದ ಹೊಲೆಯರು ಜಾತಿ ನಿಯಮಗಳನ್ನು ಮೀರಿ ನಡೆಯುತ್ತಿದ್ದಾರೆಂದು ಸವರ್ಣೀಯರು ಅಹವಾಲು ಸಲ್ಲಿಸುತ್ತಾರೆ. ಇದು ಸಂಬೋಳಿ ನಾಗಿದೇವನನ್ನು ದೃಷ್ಟಿಯಲ್ಲಿಟ್ಟುಕೊಂಡು ಸವರ್ಣೀಯರು ಉಂಟುಮಾಡಿದ ಅಹವಾಲು.[೨೫]

ಸಂಬಳಿಗೋಲು ಪದ್ಧತಿಯು ಪ್ರಾಚೀನ ಕಾಲದಿಂದ ಇತ್ತೀಚಿನವರೆಗೂ ಆಚರಣೆಯಲ್ಲಿತ್ತು. ಕರ್ನಾಟಕವು ಸೇರಿದಂತೆ ಭಾರತವು ಇಂತಹ ನಿಕೃಷ್ಟ ಪದ್ಧತಿಗಳನ್ನು ಮುಂದುವರಿಸಿಕೊಂಡು ಬರಲು ಹಲವಾರು ಕಾರಣಗಳುಂಟು. ಕೇರಳದಲ್ಲಿ ಚೇರುಮಾರ್ ಹೊಲೆಯರು ಬ್ರಾಹ್ಮಣರ ಊರು, ಕೊಳ, ದೇವಾಲಯಗಳ ಹತ್ತಿರ ಸುಳಿಯಕೂಡದು ಎಂದು ಪ್ರತಿಬಂಧಿಸುತ್ತಿದ್ದರು. ಹಾಗೆಯೇ ತಮಿಳುನಾಡಿನ ಪರೈಯರ್ ಹೊಲೆಯರು ಊರೊಳಕ್ಕೆ ಹರ ಬಾರಿಸುತ್ತ ಸದ್ದು ಮಾಡುತ್ತ ಬರುತ್ತಿದ್ದರು. ಇಂತಹ ಯಥಾಸ್ಥಿತಿಯನ್ನೇ ಮುಂದುವರಿಸಿಕೊಂಡು ಬರಲು ಸಂಪ್ರದಾಯವಾದಿಗಳು ನೀತಿನಿಯಮಗಳನ್ನು ರೂಪಿಸುತ್ತಿದ್ದರು. ಈಗಾಗಲೇ ಗಮನಿಸಿದಂತೆ ಊರೊಳಗೆ ವಾಸ ಮಾಡಿದ ಯಾವ

ಕುರುಹುಗಳು ಲಭ್ಯವಿಲ್ಲ.ಇದಕ್ಕೊಂದು ಅಪವಾದವೆಂಬಂತೆ ಮಧ್ಯಕಾಲೀನ ಸಂದರ್ಭದಲ್ಲಿ ಕ್ರಿ.ಶ.೬೮೭ರಲ್ಲಿ ಕಾಶ್ಮೀರ ಪ್ರಾಂತ್ಯದ ರಾಜ ಚಂದ್ರಾಪೀಡ ತನ್ನ ರಾಜಧಾನಿಯಲ್ಲಿ ಅಸ್ಪೃಶ್ಯರು ವಾಸಮಾಡುತ್ತಿದ್ದರೆಂದು ಕಲ್ಹಣನ "ರಾಜತರಂಗಿಣಿ" ತಿಳಿಸುತ್ತದೆ. ಇವರನ್ನು ಚರ್ಮಕಾರರು, ಪಾದರಕ್ಷೆಗಳನ್ನು ತಯಾರು ಮಾಡುವವರು, *ಚರ್ಮಕ್ರಿತ್, ಪದುಕ್ರಿತ್* ಎಂದು ಕರೆಯಲಾಗುತ್ತಿತ್ತು.[೨೬] ಕರ್ನಾಟಕದ ಸಂದರ್ಭದಲ್ಲಿ ಈ ರೀತಿಯ ಅಪರೂಪದ ಘಟನೆಗಳು ಕಾಣಸಿಗುವುದಿಲ್ಲ. ದಲಿತರಲ್ಲಿ ಒಂದು ಜಾತಿಯಾದ ಹೊಲೆಯ ಎಂಬುವರನ್ನು ಕಂಡರೆ ನಾಯರ್‌ಗಳಿಗೆ ಆಗುವುದಿಲ್ಲ. ಅವರ ಉಸಿರು ತಗುಲಿದರೂ ತಮಗೆ ಮೈಲಿಗೆಯಾಯಿತೆಂದು ಭಾವಿಸುತ್ತಾರೆ. ಮೈಲಿಗೆ ಮಾಡಿದ ಹೊಲೆಯನನ್ನು ಕೊಂದೇ ತೀರಬೇಕು. ಹಾಗೆ ಕೊಲ್ಲದೆ ಹೋದ ನಾಯರ್‌ನನ್ನು ರಾಜನು ಕೊಲ್ಲಿಸುತ್ತಾನೆ. ಹೊಲೆಯನನ್ನು ಕ್ಷಮಿಸಿದ ನಾಯರ್‌ನನ್ನು ರಾಜನು ಗುಲಾಮತನಕ್ಕೆ ದೂಡುತ್ತಾನೆ. ಇಷ್ಟಲ್ಲದೆ ಆತ ಬಹಿರಂಗವಾಗಿ ಶಾಸ್ತ್ರಾನುಸಾರ ಶುದ್ಧೀಕರಣ ಮಾಡಿಕೊಳ್ಳಬೇಕು. ಇಂತಹ ಅನಾಹುತ ಆಗಬಾರದೆಂದು ಹೊಲೆಯರು ತಾವೆಲ್ಲಿ ಹೋದರೂ 'ಪೊ ಪೊ' (*ಹೋಗಿ, ಹೋಗಿ*) ಎಂದು ಕೂಗಿಕೊಳ್ಳುತ್ತಾರೆ. ಆಗ ಹೊಲೆಯರು ಹತ್ತಿರದಲ್ಲೆಲ್ಲೊ ನಾಯರ್‌ಗಳು ಇದ್ದಾರೆ ಎಂದರಿತು ದಾರಿ ಬಿಟ್ಟುಹೋಗುತ್ತಾರೆ. ಆ ಸಂದರ್ಭದಲ್ಲಿ ಹೊಲೆಯರು ಊರೊಳಗೆ ಬರುವಂತಿಲ್ಲ. ಅವರಿಗೆ ಸಾಮಾನು ಬೇಕಾದರೆ ಊರ ಹೊರಗೆ ನಿಂತು ಕೇಳಿ ತೆಗೆದುಕೊಳ್ಳಬೇಕು.[೨೭] ತಮ್ಮಲ್ಲೇ ಅನೇಕ ದುರ್ಗುಣಗಳನ್ನಿಟ್ಟುಕೊಂಡು ಸಮಾಜದ ಒಂದು ಗುಂಪನ್ನು ಹೊಲೆಯರೆಂದು ಹಳಿಯುವುದು ಯಾವ ನ್ಯಾಯ ಎಂದು ದಾಸರು ವಿಚಾರ ಮುಖಾಂತರ ಗಮನ ಸೆಳೆದಿದ್ದಾರೆ. 'ಹೊಲೆಯ ಹೊರಗಿಹನೆ ಊರೊಳಗಿಲ್ಲವೆ! ಶ್ರೀ ಹರಿಯನು ಬಲ್ಲವರು ಪೇಳಿ'. ಈಗಾಗಲೇ ಗಮನಿಸಿದಂತೆ ಅನೇಕ ವಿದೇಶಿ ಪ್ರವಾಸಿಗರು ದಾಖಲಿಸಿರುವಂತೆ ದಲಿತರು ಆ ಸಂದರ್ಭದಲ್ಲಿ ಊರೊಳಗೆ ವಾಸ ಮಾಡಿದ ಯಾವ ಕುರುಹುಗಳು ಲಭ್ಯವಿಲ್ಲ. ಶ್ರೀರಾಮಾನುಜರು ಅಂತ್ಯಜರಿಗೆ *ತಿರುಕ್ಕುಲತ್ತಾರ್* ಎಂದು ಹೆಸರಿಟ್ಟು ಕೆಲವು ಹಕ್ಕುಗಳನ್ನು ಕೊಟ್ಟರು. ಹೊಲೆಯ, ಮಾದಿಗ ಎಂಬ ಜಾತಿಸೂಚಕಗಳನ್ನು ಸೂಚಿಸುವ ಹೆಸರುಗಳವರೂ ಇದ್ದರು. (ಹೊಲೆಯರ ಹುಳ್ಳ, ಮಾದಿಗರ ಹಂತ ಮುಂತಾದವರು. ಮಾತಂಗಿಯನ್ನು 'ಮಾದಿಗಿತ್ತಿ' ಎಂದು ಕರೆದಿದ್ದಾನೆ. ಅಸ್ಪೃಶ್ಯತಾ ನಿವಾರಣೆ ಬಗೆಗೆ ಕಾನೂನುಗಳಿದ್ದರೂ ಇವತ್ತಿಗೆ ಹೊಲಗೇರಿ ಎಂಬುದಿದೆ. ಮತ್ತೆ ಕೆಲವು ಕಡೆ ಹೊಲೇರಹಟ್ಟಿ, ಮಾದಿಗರಹಟ್ಟಿ ಮುಂತಾದ ಹೆಸರುಗಳಿಂದ ಕರೆಯಲಾಗಿದೆ. ಊರು ಅಂದಮೇಲೆ ಹೊಲಗೇರಿ, 'ಅವನು ಊರು ಹೊಲಗೇರಿ ಒಂದು ಮಾಡಿಬಿಟ್ಟ'[೨೮] ಎಂಬ ನಾಣ್ಣುಡಿಗಳು ಇಂದಿಗೂ ಬಳಕೆಯಲ್ಲಿವೆ. ಚಾರಿತ್ರಿಕ ಕಾಲಘಟ್ಟದಲ್ಲಿ ಅವರನ್ನು ನಡೆಸಿಕೊಳ್ಳುತ್ತಿದ್ದ ಕ್ರಮವನ್ನು ಕುರಿತು ಕವಿಗಳು, ಸಂತರು, ಸುಧಾರಕರು ಮುಂತಾದವರ ಹೃದಯ ಮಿಡಿದಿದೆ.

### ೩.೧.೩. ಆಹಾರ ಪದ್ಧತಿ

ಮಾನವನಿಗೆ ಆಹಾರ ಮೂಲಭೂತ ಬೇಡಿಕೆ. ಈ ಬೇಡಿಕೆಯನ್ನು ಈಡೇರಿಸಿಕೊಳ್ಳಲು ತನಗೆ ಇಷ್ಟಬಂದ ಆಹಾರವನ್ನೆ ಸೇವಿಸುತ್ತಿದ್ದ. ಆದಿಕಾಲದಲ್ಲಿ ಬಹುತೇಕ ಬುಡಕಟ್ಟು ಸಮುದಾಯಗಳು ಗೆಡ್ಡೆ ಗೆಣಸು ಮತ್ತು ಪ್ರಾಣಿಗಳ ಬೇಟೆಯಿಂದ ಜೀವನ ನಡೆಸುತ್ತಿದ್ದವು. ಕಾಲಕ್ರಮೇಣ ನವನಾಗರಿಕತೆ ಬೆಳೆದಂತೆಲ್ಲ ಬುಡಕಟ್ಟುಗಳು

ಜಾತಿಗಳಾಗಿ ಮಾರ್ಪಾಡಾಗಿ ದೈನಂದಿನ ಚಟುವಟಿಕೆಗಳು ಬದಲಾಗತೊಡಗಿದವು. ಆಹಾರ ಪದ್ಧತಿಯು ವಿವಿಧ ಸಮುದಾಯಗಳ ಸಾಮಾಜಿಕ ಶ್ರೇಣೀಕರಣ ಪದ್ಧತಿಯನ್ನು ನಿರ್ಧರಿಸುವಷ್ಟರ ಮಟ್ಟಿಗೆ ಬದಲಾಗತೊಡಗಿತು. ಕರ್ನಾಟಕದ ಪ್ರದೇಶವು ಇದಕ್ಕೆ ಹೊರತಾಗಲಿಲ್ಲ. ವಿವಿಧ ಜಾತಿಗಳು ಸಹ ಇದರಿಂದ ಪರೋಕ್ಷವಾಗಿ ಪ್ರಭಾವಕ್ಕೆ ಒಳಗಾಗಿ ಮಾಂಸಾಹಾರಿ ಪದ್ಧತಿಯನ್ನು ಕೈಬಿಟ್ಟು ಸಸ್ಯಾಹಾರಿ ಪದ್ಧತಿಗೆ ಒಗ್ಗಿಕೊಂಡವು. ಕ್ರಿ.ಶ. ೫ನೇ ಶತಮಾನದ ವೇಳೆಗೆ ದಲಿತರು ಮಾಂಸದ ವ್ಯಾಪಾರದಲ್ಲಿ ತೊಡಗಿಕೊಂಡಿದ್ದರು ಎಂದು ಫಾಹಿಯಾನನು ತಿಳಿಸುತ್ತಾನೆ.[೩೯] ಬಹುತೇಕ ಕೆಳಜಾತಿಗಳು ಮತ್ತು ದಲಿತರು ಮಾಂಸದ ಆಹಾರ ಪದ್ಧತಿಯೊಂದಿಗೆ ಒಡನಾಟ ಇಟ್ಟುಕೊಂಡಿದ್ದಾರೆ. ಸಮಾಜದ ಬ್ರಾಹ್ಮಣರು ಸೇರಿದಂತೆ ಎಲ್ಲ ವರ್ಗದವರು ಮಾಂಸ ಭಕ್ಷಣೆ ಮಾಡುತ್ತಿದ್ದರೆಂದು ವಚನಗಳ ಆಧಾರದಿಂದ ತಿಳಿಯಬಹುದಾಗಿದೆ. ಹೊಲೆಯ ಜಾತಿಯ ಮೇಲಿನ ಶೂದ್ರ ಜಾತಿಯವರು ಗೋಮಾಂಸವನ್ನು ಬಿಟ್ಟು ಉಳಿದೆಲ್ಲ ಮಾಂಸವನ್ನು ತಿನ್ನುವ ಬ್ರಾಹ್ಮಣರಿಗೆ ಊರಲ್ಲಿರಲು ಅವಕಾಶ ಕೊಟ್ಟು ಗೋಮಾಂಸ ತಿನ್ನುವ ಹೊಲೆಯರನ್ನು ಮಾತ್ರ ಊರ ಹೊರಗೆ ಇಟ್ಟುದನ್ನು ವಚನಕಾರರು ಪ್ರತಿಭಟಿಸಿದ್ದಾರೆ.[೪೦] ಈ ಬಗೆಯ ಬದಲಾವಣೆಗೆ ಹಲವು ಬಗೆಯ ಕಾರಣಗಳಿವೆ. ದಲಿತರ ಆಹಾರ ಪಾನೀಯಗಳಲ್ಲಿ ಮುಖ್ಯವಾಗಿ ಉಲ್ಲೇಖವಾಗಿರುವುದು ಮಾಂಸ ಮತ್ತು ಹೆಂಡ. ಇಲ್ಲಿಯೂ ಕೂಡ ಸತ್ತ ಪ್ರಾಣಿಗಳ ಮಾಂಸ ತಿನ್ನುವವರು, ಬದುಕಿದ ಪ್ರಾಣಿಗಳ ಮಾಂಸವನ್ನು ತಿನ್ನುವ ಪ್ರಕ್ರಿಯೆಯಲ್ಲಿ ಶ್ರೇಣೀಕರಣ ಕಂಡುಬರುತ್ತದೆ. ತೊಗಲ ಚೀಲದಲ್ಲಿ ನೀರು ಕುಡಿಯುವುದು, ಮಾಂಸವನ್ನು ತಿನ್ನುವುದು ಹೊಲೆಯರ ನಡತೆಯನ್ನುತ್ತಾನೆ ಬ್ರಹ್ಮಶಿವ. ಧರ್ಮಾಮೃತದಲ್ಲಿ 'ಕಳ್ಳಸಿಗಗೇರಿ' (*ಹೆಂಡ ಇಳಿಸುವವರ ಬೀದಿ*)ಯನ್ನು ವರ್ಣಿಸಲಾಗಿದೆ. ನಯಸೇನನ ಕಾಲದಲ್ಲಿ ಹೆಂಡ ಮಾಂಸಗಳನ್ನು ಬಿಟ್ಟರೆ ಬದುಕಿನಲ್ಲಿ ಉಳಿಯುವ ಸ್ವಾರಸ್ಯವಾದರೂ ಏನು? ಎಂದು ಜನಸಾಮಾನ್ಯರು ಹೇಳಿಕೊಳ್ಳುತ್ತಾರೆ.[೪೧]

ಮಾದಿಗರು ಮಾಂಸ ಆಹಾರದ ಜೊತೆಗೆ ಪಾನಪ್ರಿಯರು. ಪುರುಷರೊಂದಿಗೆ ಸ್ತ್ರೀಯರು ಸಹ ನೀರಾ ಸೇವಿಸುವುದು ಸರ್ವೆಸಾಮಾನ್ಯ. ಕೋಣ, ಸತ್ತದನದ ಮಾಂಸವೆಂದರೆ ಇವರಿಗೆ ಇಷ್ಟವಾದ ಆಹಾರ. ಇವರು ನಾಯಿಂದರ, ಅಗಸರ ಮನೆಗಳಲ್ಲಿ ಊಟ ಮಾಡುವುದಿಲ್ಲ. ಜೊತೆಗೆ ಇತರೆ ಯಾವುದೇ ಜಾತಿ ಸಮುದಾಯಗಳು ಮಾದಿಗರ ಮನೆಗಳಲ್ಲಿ ಬೋಜನ ಮಾಡುವುದಿಲ್ಲ.[೪೨] ಈ ಕುರಿತಂತೆ ದಲಿತ ವಚನಕಾರರು ಮಡಿ, ಮೈಲಿಗೆ, ಆಹಾರದ ವಿಷಯವಾಗಿ ತಮ್ಮ ವಚನಗಳಲ್ಲಿ ವಾಸ್ತವಿಕ ಪರಿಸ್ಥಿತಿಯನ್ನು ವ್ಯಕ್ತಪಡಿಸುತ್ತಾರೆ. ದಲಿತರು ಕುಡಿಯುತ್ತಿದ್ದ ಕೆಲವು ಪ್ರಮುಖ ಮಧ್ಯಗಳು ಹೀಗಿವೆ; *ಸಿರಿಸಿಂಬಿ, ತಂಪುಗ, ಬಖ್ಖುರಿ, ಗಂಗಾಸಾಗರ, ಸುರಾಳ, ಸೋಮ ವರವಾಣಿ, ಮಾಳವೋದರಿ, ಮರವಟ್ಟಿಗೆ* ಪ್ರಮುಖವಾದವುಗಳು.[೪೩]

ಬಹುತೇಕ ಬಡುಕಟ್ಟು ಸಮುದಾಯಗಳು ಮಾಂಸವನ್ನು ಮುಖ್ಯ ಆಹಾರವಾಗಿ ಸ್ವೀಕರಿಸಿದ್ದಾರೆ. ಮಾದಿಗರು ಸೇರಿದಂತೆ ದೊಂಬರು, ಮೇರರು, ಕೊರಚರು, ಯರವರು ಮುಂತಾದ ಬುಡಕಟ್ಟು ಸಮುದಾಯಗಳು ಇಂದಿಗೂ ಮಾಂಸವನ್ನು ಸೇವಿಸುತ್ತಾರೆ. ಕೇವಲ ಅಸ್ಪೃಶ್ಯರು ಮಾತ್ರವಲ್ಲದೆ ಕೆಳಜಾತಿಗಳು ಸಹ ಮಾಂಸವನ್ನು ಆಹಾರವಾಗಿ ಸೇವಿಸುತ್ತಾರೆ. ಚಿತ್ರದುರ್ಗ ಪರಿಸರದ ನಾಯಕ ಸಮುದಾಯಕ್ಕೆ ಸೇರಿದವರು ದನದ ಮಾಂಸವನ್ನು ಇಂದಿಗೂ

ಸೇವಿಸುತ್ತಾರೆ. ಮಧ್ಯಕಾಲೀನ ಸಂದರ್ಭದಲ್ಲಿ ಆಹಾರ ಪದ್ಧತಿಯು ಸಮುದಾಯದ ಸಾಮಾಜಿಕ ಸ್ತರವಿನ್ಯಾಸ ನಿರ್ಣಯಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತಿತ್ತು. ಆಹಾರ ಕುರಿತಂತೆ ಅಂದಿನ ಸಮಾಜದ ವಾಸ್ತವ ಸ್ಥಿತಿಗತಿಗಳನ್ನು ಶಾಸನಗಳಿಂದ ಸ್ವಲ್ಪಮಟ್ಟಿಗೆ ಅರಿಯಬಹುದಾಗಿದೆ. ಕ್ರಿ.ಶ. ೧೩೬೩ರ ಒಂದು ಶಾಸನವು ಆಹಾರದ ಬಗ್ಗೆ ಗಮನ ಸೆಳೆಯುತ್ತದೆ. ರಾಜರು, ಸಾಮಂತರು ಮತ್ತು ಶ್ರೀಮಂತರು ಅಕ್ಕಿಯನ್ನು ಆಹಾರಕ್ಕೆ ಉಪಯೋಗಿಸುತ್ತಿದ್ದರೆ, ಜನಸಾಮಾನ್ಯರು ರಾಗಿಯನ್ನು ಆಹಾರಕ್ಕೆ ಉಪಯೋಗಿಸುತ್ತಿದ್ದರು. ಇದು ಶ್ರೀಮಂತರ ಮತ್ತು ಬಡವರ ನಡುವೆ ಅಂತರವನ್ನು ಸೂಚಿಸುತ್ತದೆ.[೪೪] ಮಧ್ಯಕಾಲೀನ ಕಾಲಘಟ್ಟದಲ್ಲಿ ಅನೇಕ ಮತ ಸಂಪ್ರದಾಯಗಳು ಆಹಾರದ ವಿಷಯವಾಗಿ ತಮ್ಮ ಮೂಲ ಆಹಾರ ಪದ್ಧತಿಯನ್ನು ತಿರಸ್ಕರಿಸಿವೆ. ಕೆಲವು ಸಮುದಾಯಗಳು ಅದೇ ಮೂಲ ಪ್ರವೃತ್ತಿಯನ್ನು ಮುಂದುವರಿಸಿಕೊಂಡು ಬಂದಿವೆ. ಉದಾಹರಣೆಗೆ ವೀರಶೈವ ಧರ್ಮವು, ದಲಿತ ಮತ್ತು ಹಿಂದುಳಿದ ಜನಸಮುದಾಯಗಳ ಆಹಾರ ಪದ್ಧತಿಯನ್ನು ಸೌಮ್ಯವಾಗಿ ವಿರೋಧಿಸುವಲ್ಲಿ ಇತರೆ ಧರ್ಮಗಳ ಪ್ರಭಾವ ಇರಬಹುದೆ ಅಥವಾ ವೈದಿಕ, ಜೈನ, ವೀರಶೈವ ಧರ್ಮಗಳು ಮಾಂಸ ಮದ್ಯಗಳ ವಿರುದ್ಧ ಮಾತನಾಡಿದವು.

ಸಾಮಾಜಿಕ ವಿಷಯದ ಆಹಾರ ಪದ್ಧತಿಯ ಬಗೆಗೆ ವಿಜಯನಗರ ಕಾಲಾವಧಿಯ ಕನಕದಾಸರ ಕೃತಿ 'ರಾಮಧಾನ್ಯ ಚರಿತೆ' ಪ್ರಸ್ತಾಪಿಸುತ್ತದೆ. ಕನಕದಾಸರು ಮಾಡಿದ ಸಮಾಜವಿಮರ್ಶೆಯ ದೃಷ್ಟಿಯಿಂದ ನರದೇಲಗ ಅಥವಾ ರಾಗಿಯು ವಿಜಯನಗರ ಸಮಾಜದ ದಲಿತ, ದಮನಿತ ವರ್ಗಗಳನ್ನು ಪ್ರತಿನಿಧಿಸುತ್ತದೆ. ಶ್ರೀಮಂತರು ಮತ್ತು ಮೇಲ್ಜಾತಿಗಳಿಗೆ ಸೇರಿದವರು ತಮ್ಮ ದಿನನಿತ್ಯದ ಆಹಾರದಲ್ಲಿ ಅಕ್ಕಿಯನ್ನು ಬಳಸುತ್ತಿದ್ದರು. ಅದು ಸಾಮಾನ್ಯ ಮನುಷ್ಯನ ಕೈಯೊಳಗೆ ಬರುತ್ತಿರಲಿಲ್ಲ. ರಾಗಿ ಮತ್ತು ಇತರ ಧಾನ್ಯಗಳು ಬಡವರ, ದಲಿತರ, ಕೆಳಜಾತಿಯ ಜನಗಳ ಆಹಾರವೆಂದು ಪರಿಗಣಿಸಲಾಗುತ್ತಿದ್ದಿತು. ಸಮಾಜದ ಗಣ್ಯ ಜನರಿಗೆ ಈ ಧಾನ್ಯಗಳು ರುಚಿಸುತ್ತಿರಲಿಲ್ಲ. ಅನಾದಿ ಕಾಲದಿಂದಲೂ ದಕ್ಷಿಣ ಕರ್ನಾಟಕವು ರಾಗಿಯ ವಲಯವಾಗಿದೆ. ರಾಗಿಯು ಬಡವರ ಅಮೂಲ್ಯ ಆಹಾರವಾಗಿದೆ. ರಾಗಿಯು ಮುಖ್ಯವಾಗಿ ಬಡವರಿಗೆ ಮತ್ತು ಗ್ರಾಮೀಣ ಜನತೆಗೆ ಮೀಸಲಾದದ್ದು ಎಂಬ ಪರಿಕಲ್ಪನೆಯು ವ್ಯಾಪಕವಾಗಿದ್ದದ್ದನ್ನು ಸೂಚಿಸುತ್ತದೆ. 'ಅಕ್ಕಿ ತಿನ್ನುವವರು ಹಕ್ಕಿಯಂತಾಗುತ್ತಾರೆ. ರಾಗಿ ತಿನ್ನುವವರು ರೋಗ ಮುಕ್ತರಾಗುತ್ತಾರೆ' ಎಂಬ ಗಾದೆ ಮಾತು ಪ್ರಚಲಿತದಲ್ಲಿರುವುದನ್ನು ಕಾಣಬಹುದು.[೪೫] ಮಾದಿಗ ಸಮುದಾಯದ ಒಂದು ಶಾಖೆಯಾದ ಸಿಂದ್ ಮಾದಿಗರು ಮಾದಿಗರನ್ನೇ ಆಶ್ರಯಿಸಿ ಭಿಕ್ಷೆ ಬೇಡುತ್ತಿದ್ದುದರಿಂದ ಪ್ರಧಾನವಾಗಿ ಮಾದಿಗರ ಆಹಾರ ಪದ್ಧತಿಯೇ ಸಿಂದ್ ಮಾದಿಗರ ಆಹಾರ ಪದ್ಧತಿಯಾಗಿದೆ. ಗ್ರಾಮದೇವತೆಗಳ ಆರಾಧನೆಯಲ್ಲಿ ಕೋಣನ ಬಲಿ ಕಡ್ಡಾಯವಾದ್ದರಿಂದ ಮತ್ತು ಮಾದಿಗರು ಬಲಿ ನಿರ್ವಾಹಕರಾದ್ದರಿಂದ ಅವರಿಗೆ ಬಲಿಕೋಣದ ಪ್ರಧಾನಪಾಲು ಸಂದಾಯವಾಗುತ್ತಿತ್ತು ಹಾಗೂ ಹಿಂದೆ ಸತ್ತದನಗಳ ವಾರುಸದಾರರು ಇವರೆ ಆದ್ದರಿಂದ ತಿನ್ನಲು ಯೋಗ್ಯವಾದ ಸತ್ತ ದನದ ಮಾಂಸವೂ ಇವರ ಮುಖ್ಯ ಆಹಾರವಾಗಿತ್ತು. ಹೀಗೆ ಯಥೇಚ್ಛವಾಗಿ ದೊರೆಯುತ್ತಿದ್ದ ದನದ ಮಾಂಸದ ರುಚಿಗೆ ಒಗ್ಗಿಹೋಗಿದ್ದರಿಂದಲೇ ಬ್ರಾಹ್ಮಣರಾದಿಯಾಗಿ ಸಮಾಜದ ಉಳಿದ ಜನರು ಗೋಮಾಂಸ ಭಕ್ಷಣೆ ತೊರೆದರೂ ಇವರು ಮಾತ್ರ ಬಿಡವೆ

ಉಳಿಸಿಕೊಂಡರು. ಗೋಮಾಂಸ ಭಕ್ಷಣೆ ಈ ಸಮುದಾಯವನ್ನು ಸಾಮಾಜಿಕವಾಗಿ ಕೀಳಾಗಿ ಕಾಣಲು ಒಂದು ಅಸ್ತ್ರವಾದರೂ ಲೆಕ್ಕಿಸದೆ ತಮ್ಮ ಪೂರ್ವ ಕಾಲದ ಆಹಾರ ಪದ್ಧತಿಯನ್ನು ಮುಂದುವರಿಸುತ್ತಲೇ ಬಂದಿದ್ದಾರೆ.[೩೬] ಇಂದಿಗೂ ಕೂಡ ದಲಿತರು, ಕೆಳಜಾತಿಗಳು ಮಾಂಸವನ್ನು ಮುಖ್ಯ ಆಹಾರವನ್ನಾಗಿ ಸೇವಿಸುತ್ತಾರೆ. ವಿವಿಧ ಧರ್ಮ ಮತ್ತು ಜಾತಿಗಳು ಇದನ್ನು ತಿರಸ್ಕರಿಸಿದರೂ ದಲಿತರು ಮಾತ್ರ ಮುಂದುವರಿಸಿಕೊಂಡು ಬಂದರು. ಅವರಿಗೆ ಸಾಮಾಜಿಕ ಶ್ರೇಣೀಕರಣಕ್ಕಿಂತ ದೈನಂದಿನ ಜೀವನಕ್ಕೆ ಆಹಾರ ಮುಖ್ಯವಾಗಿತ್ತು. ಈಗಾಗಲೇ ಅವರು ಸಮಾಜದ ವಕ್ರದೃಷ್ಟಿಗೆ ಬಿದ್ದಿದ್ದರು. ಇತರೆ ಸಮುದಾಯಗಳು ಈ ಆಹಾರ ಪದ್ಧತಿಯಿಂದ ದೂರವಿದ್ದಂತೆ ತೋರಿಸಿಕೊಂಡು ಸಮಾಜದ ಮುಖ್ಯವಾಹಿನಿಗೆ ಬರಲು ಯತ್ನಿಸಿದರು.

ಸಮಾಜವನ್ನು ಸಾಂಪ್ರದಾಯಿಕವಾಗಿ ನಾಲ್ಕು ವರ್ಗಗಳಾಗಿ ಒಡೆದಿದ್ದು ಮತ್ತೆ ಮತ್ತೆ ವಿಭಜನೆಗೊಂಡು ಹದಿನೆಂಟು ವರ್ಗಗಳಾಗಿ ಅಥವಾ ಪಂಗಡಗಳಾಗಿ ಒಡೆಯಿತು. ಇವರಲ್ಲಿ ಚಂಡಾಲರದು ಅತ್ಯಂತ ಕೆಳಗಿನ ವರ್ಗ. ಅವರು ಅಸ್ಪೃಶ್ಯರು. ಹಳ್ಳಿಗಳ ಹೊರವಲಯದಲ್ಲಿ ಸವರ್ಣೀಯ ಹಿಂದೂಗಳಿಂದ ಪ್ರತ್ಯೇಕವಾಗಿ ವಾಸ ಮಾಡುತ್ತಿದ್ದರು. ಮಾದಿಗರು ಅಸ್ಪೃಶ್ಯರ ಇನ್ನೊಂದು ವರ್ಗ. ಸಮಾಜದಲ್ಲಿ ಈ ಜನರ ಸ್ಥಾನಮಾನ ತುಂಬಾ ಕೆಳಮಟ್ಟದ್ದಾಗಿತ್ತು.[೩೭] ಗಮನಿಸಬೇಕಾದ ಸಂಗತಿಯೆಂದರೆ ಅಸ್ಪೃಶ್ಯರಿಗಿಂತ ಹೀನಾಯ ರೀತಿಯಲ್ಲಿ ಬದುಕುವ ಕೆಲವು ಸಮುದಾಯಗಳಿವೆ. ಅಂದರೆ ಕ್ರೂರ ವ್ಯವಸ್ಥೆಗೆ ಬಲಿಯಾಗಿರುವವರು ಅಸ್ಪೃಶ್ಯರು ಮಾತ್ರವಲ್ಲ, ಇವರಿಗಿಂತಲೂ ನಿಕೃಷ್ಟವಾದ ಸ್ಥಿತಿಯಲ್ಲಿರುವ ಜನವರ್ಗದವರು ಇದ್ದಾರೆ. ಅಸ್ಪೃಶ್ಯರು ಶಾರೀರಿಕವಾದ ಸ್ಪರ್ಶದಿಂದ ಮಾತ್ರ ಮೈಲಿಗೆಯನ್ನು ಉಂಟುಮಾಡುತ್ತಾರೆ. ಇವರಲ್ಲದೆ ನಿರ್ದಿಷ್ಟ ದೂರದಿಂದ ಈಚೆ, ಹತ್ತಿರಕ್ಕೆ ಬಂದರೆ ಮೈಲಿಗೆಯನ್ನು ಉಂಟುಮಾಡುವ ಜನರಿದ್ದಾರೆ. ಅವರು ದೂರಶೌಚಕಾರಿಗಳು. ಇದಲ್ಲದೆ ಇವರಿಗಿಂತಲೂ ನಿಕೃಷ್ಟರಿದ್ದಾರೆ. ಅಂಥವರು ಕಣ್ಣಿಗೆ ಬಿದ್ದರೆ ಸಾಕು, ಮೈಲಿಗೆಯನ್ನು ಉಂಟುಮಾಡುತ್ತಾರೆ. ಅವರು ದೃಶ್ಯಶೌಚಕಾರಿಗಳು.[೩೮]

*ದೂರಶೌಚಕಾರಿಗಳು, ದೃಶ್ಯಶೌಚಕಾರಿಗಳು* ಮುಂತಾದ ವರ್ಗದವರ ಸಂಕಷ್ಟಗಳು ಎಂಥವಿರಬೇಕು? ಹೇಗೆ ಅವರು ತಮ್ಮ ಬದುಕನ್ನು ತಳ್ಳುತ್ತಿರಬಹುದು? ಅವರು ಹತ್ತಿರ ಬರುವುದೂ ಕಣ್ಣಿಗೆ ಬೀಳುವುದೂ ನಿಷಿದ್ಧವಾಗಿರುವಾಗ ದುಡಿಮೆಗೆ ಅವರಿಗೆ ಯಾವ ಕೆಲಸ ಸಿಕ್ಕೀತು? ಭಿಕ್ಷೆ ಬೇಡುವುದು ಅಥವಾ ನಾಯಿಯ ಮಾಂಸ ತಿನ್ನುವುದು ಇಂಥದಲ್ಲದೆ ಅವರು ಇನ್ನೇನು ಮಾಡಲು ಸಾಧ್ಯ? ನಿಶ್ಚಿತವಾಗಿಯೂ ಜಗತ್ತಿನ ಯಾವುದೇ ನಾಗರಿಕತೆ ಇದಕ್ಕಿಂತ ಹೆಚ್ಚಿನ ಕ್ರೌರ್ಯದ ಆರೋಪಕ್ಕೆ ಗುರಿಯಾಗಲಾರದು. ಅಸ್ಪೃಶ್ಯ ಯಾವತ್ತೂ ಸ್ಪೃಶ್ಯನಾಗುವಂತಿಲ್ಲ. ಹೀಗಾಗಿ ಅವನಿಗೆ ತನ್ನ ದುರ್ವಿಧಿಯಿಂದ ಯಾವತ್ತೂ ಮೋಕ್ಷವಿಲ್ಲ. ವಾಸಿಸುವ ಹಳ್ಳಿಯಲ್ಲಿ ಆತ ಎಲ್ಲರಿಗೂ ಪರಿಚಿತನೇ ಆಗಿರುವ ಕಾರಣ ಆತನಿಗೆ ಅಲ್ಲಿರುವತನಕ ಮರೆಸಿಕೊಳ್ಳುವ ಸಾಧ್ಯತೆ ಇಲ್ಲವೇ ಇಲ್ಲ. ಒಮ್ಮೆ ತನ್ನ ಹಳ್ಳಿಯನ್ನು ಬಿಟ್ಟು ಯಾವುದೋ ಒಂದು ಪಟ್ಟಣಕ್ಕೆ ಹೋಗಿ ಸೇರಿಕೊಂಡರೆ, ಮರೆಸಿಕೊಂಡರೆ ಸ್ಪೃಶ್ಯನೆನ್ನಿಸಿಕೊಳ್ಳಲು ಸಾಧ್ಯ.[೩೯]

ಶುದ್ಧ ಜಾತಿಗಳಿಗೂ ಹಲವು ವರ್ಗದ ನೀಚ ಜಾತಿಗಳಿಗೂ ನಡುವೆ ದೈಹಿಕ ಸಂಪರ್ಕವನ್ನು ನಿವಾರಿಸಬೇಕು. ಅಸ್ಪೃಶ್ಯತೆಯ ಆಚರಣೆಗೆ ದಕ್ಷಿಣ ಭಾರತವೂ ಅತಿರೇಕದ ನಿದರ್ಶನಗಳನ್ನು ನೀಡಿತು. ಕೆಲವು ಅತಿ ನೀಚ ಜಾತಿಗಳ ಜನರನ್ನು ನೋಡುವುದೇ ಮೈಲಿಗೆ ಎಂದು ಭಾವಿಸಲಾಗುತ್ತಿತ್ತು. ಕೆಲವು ಜಾತಿಯವರ ನೆರಳು ಸೋಂಕುವುದು ಮೈಲಿಗೆ ಎಂದು ನಂಬಲಾಗಿತ್ತು. ತಮಿಳುನಾಡು ಮತ್ತು ಕೇರಳಗಳಲ್ಲಿ ಈ ಕ್ರೂರ ಪದ್ಧತಿ ಆಚರಣೆಯಲ್ಲಿತ್ತು.[೪೦] ಕೇರಳದ ತೀಯನ್ ಹೆಂಡ ಇಳಿಸುವ ಜಾತಿಯವರು ನಂಬೂದರಿ ಬ್ರಾಹ್ಮಣರಿಂದ ಮೂವತ್ತಾರು ಹೆಜ್ಜೆ ದೂರದಲ್ಲಿರಬೇಕು, ಪುಲ್ಯನ್ ಬೇಸಾಯ ಮಾಡುವವರು ತೊಂಬತ್ತಾರು ಹೆಜ್ಜೆ ಅಂತರದಲ್ಲಿರಬೇಕಾಗಿತ್ತು. ಅತ್ಯಂತ ಸಾಮಾನ್ಯವಾದ ಮತ್ತು ಅತಿ ಕಡಿಮೆ ಕ್ರೂರವಾದ ರೀತಿಯ ಅಸ್ಪೃಶ್ಯತೆಯೆಂದರೆ ಶುದ್ಧ ಜಾತಿಗಳೊಂದಿಗೆ ದೈಹಿಕ ಸಂಪರ್ಕ ಪಡೆಯಕೂಡದು ಎನ್ನುವುದು.[೪೧] ಈ ರೀತಿಯ ನಿಬಂಧನೆಗಳನ್ನು ದಲಿತರು ಎದುರಿಸಬೇಕಾಗಿತ್ತು. ಒಟ್ಟಾರೆಯಾಗಿ ಅವರ ಜೀವನ ಪದ್ಧತಿಯು ವೈದಿಕ ಸಂಪ್ರದಾಯಗಳಿಗೆ ಸಿಲುಕಿ ಜರ್ಜರಿತವಾಗಿತ್ತು. ವಾಸಸ್ಥಾನ, ಸಂಬಳಿಗೋಲು ಮತ್ತು ಅವರ ಆಹಾರ ಪದ್ಧತಿಯ ಮೇಲಿನ ವಿವರಣೆಗಳು ನಾಲ್ಕು ವರ್ಣದವರು ಅವರನ್ನು ದೂರವಿರುವಂತೆ ನಿರ್ಬಂಧಿಸುತ್ತಿದ್ದರು ಎಂಬುದನ್ನು ತಿಳಿಸುತ್ತದೆ. ಸಾಮಾಜಿಕ ಶ್ರೇಣೀಕರಣವು ಸಹ ಇದಕ್ಕೆ ಹೊರತಾಗಿರಲಿಲ್ಲ.

## ೩.೨. ಭಕ್ತಿ ಚಳವಳಿಗಳು

'ಭಜ್ ಸೇವಾಯಾಂ' ಎಂಬ ಸಂಸ್ಕೃತ ಧಾತುವಿನಿಂದ ಹುಟ್ಟಿರುವ 'ಭಕ್ತಿ' ಶಬ್ದದ ಅರ್ಥವನ್ನು ಗಮನಿಸಿದರೆ ಅಂತಿಮವಾಗಿ ಭಕ್ತಿಯು ಮಾನವರು ತಾವು ನಂಬಿದ್ದ ದೈವದಲ್ಲಿ ಹೊಂದಿರುವ ಮಧುರ ಸಂಬಂಧವಾಗಿದೆ. ಭಕ್ತಿಯ ಪರಿಕಲ್ಪನೆಯ ಮೂಲದ ಬಗ್ಗೆ ಆಧುನಿಕ ಇತಿಹಾಸಕಾರರಲ್ಲಿ ಭಿನ್ನಾಭಿಪ್ರಾಯವಿದೆ. ಆದರೆ ಉಪನಿಷತ್‌ಗಳಲ್ಲಿ 'ಭಕ್ತಿ' ಎಂಬ ಪದವು ಕಾಣಸಿಗುತ್ತದೆ. ಇದಕ್ಕೆ ಪೂರಕವಾಗಿ ಭಂಡಾರ್‌ಕರ್ ಅವರು ಭಕ್ತಿ ಪರಿಕಲ್ಪನೆ ಮೂಲ ಉಪನಿಷತ್‌ಗಳೆಂದು ಸಹಮತ ವ್ಯಕ್ತಪಡಿಸಿದ್ದಾರೆ. ರಾಯ್‌ಚೌಧರಿಯವರು ಭಕ್ತಿಯ ಬಗ್ಗೆ ಪಾಣಿನಿಯ 'ಅಷ್ಟಾಧ್ಯಾಯಿ' ಕಡೆ ಗಮನ ಸೆಳೆಯುತ್ತಾರೆ. ಅನೇಕ ಧಾರ್ಮಿಕ ಸ್ಥಳಗಳು ಜನತೆಯ ಭಕ್ತಿಗೆ ಪಾತ್ರವಾಗಿವೆ. ಭಕ್ತಿಮಾರ್ಗದ ವೈಶಿಷ್ಟ್ಯವೆಂದರೆ ಅದನ್ನು ಪ್ರವೇಶಿಸಲು ಜಾತಿಮತಗಳ ನಿರ್ಬಂಧವಿಲ್ಲದಿರುವುದು. ಭಕ್ತರಲ್ಲಿ *ಜಾತಿ, ವಿದ್ಯೆ, ರೂಪ, ಕುಲ, ಧನ, ಕರ್ಮ* ಮುಂತಾದವುಗಳಿಂದ ಯಾವ ಭೇದವೂ ಇರಲಾರದು. "ಭಗವಂತನಿಂದ ವಿಮುಖನಾದ ವಿಪ್ರನಿಗಿಂತ ನಿರ್ಮಲವಾದ ಶ್ರದ್ಧೆ ಭಕ್ತಿಗಳನ್ನು ಪಡೆದಿರುವ ಚಂಡಾಲನು ಭಗವಂತನಿಗೆ ಅತ್ಯಂತ ಪ್ರಿಯವೆಂದು ಭಕ್ತಿ ವೈಶಿಷ್ಟ್ಯತೆ ಬಗ್ಗೆ ಭಗವದ್ಗೀತೆ" ಹೇಳುತ್ತದೆ.[೪೨] ಈ ಹಿನ್ನೆಲೆಯಲ್ಲಿ ಭಕ್ತಿ ಚಳವಳಿಗಳು ಜನಸಾಮಾನ್ಯರನ್ನು ಸಾಮಾಜಿಕ ಜಂಜಾಟಗಳಿಂದ ವಿಮುಖಗೊಳಿಸಲು ಯತ್ನಿಸಿದವು. ಮಧ್ಯಕಾಲೀನ ಭಾರತದ ಸಾಮಾಜಿಕ ಮತ್ತು ಧಾರ್ಮಿಕ ಚರಿತ್ರೆಯನ್ನು ಅರ್ಥೈಸುವುದು ಕಷ್ಟ ಸಾಧ್ಯ. ಅದಕ್ಕೆ ಕಾರಣ ಆ ಅವಧಿಯಲ್ಲಿ ವಿಭಿನ್ನ ಪಂಥಗಳು, ಚಳವಳಿಗಳು, ಧರ್ಮಗಳು ವ್ಯವಸ್ಥೆಯ ಮೇಲೆ ಪ್ರಭಾವ ಬೀರಿ ಸಮಾಜವು ಸಂಕೀರ್ಣಗೊಂಡಿದ್ದು. ಆದರೂ ಭಾರತದ ಧಾರ್ಮಿಕ ಸ್ಥಿತಿಯ ಬಗ್ಗೆ ಒಂದು ನಿಖರವಾದ ಕಲ್ಪನೆ ಮೂಡಿಸಿಕೊಳ್ಳಲು ಸಾಧ್ಯವಿದೆ. ಪ್ರತ್ಯೇಕವಾದ ಒಂದು ಧಾರ್ಮಿಕ ಪಂಥವಾಗಿ ಬೌದ್ಧ ಧರ್ಮವು ತನ್ನ

ಜನ್ಮಭೂಮಿಯಿಂದ ವಾಸ್ತವವಾಗಿ ಕಣ್ಮರೆಯಾಗಿ ಹೋಗಿತ್ತು. ಜೈನಧರ್ಮದ ಒಡಿತವು ಪಶ್ಚಿಮದ ಸಣ್ಣ ಪ್ರಾಂತ್ಯಕ್ಕೆ ಸೀಮಿತವಾಗಿತ್ತು. ಇಸ್ಲಾಂ ಧರ್ಮವು ಕೆಲವು ಕಡೆ ವಿಸ್ತಾರವಾಗುವ ಹಂತದಲ್ಲಿತ್ತು. ವೈದಿಕ ಧರ್ಮವು ಮೇಲುಗೈ ಸಾಧಿಸುವುದರ ಜೊತೆಗೆ ಕೆಲವು ಪೂರ್ವಕಾಲದ ನಂಬಿಕೆಗಳ ಸಮ್ಮಿಶ್ರಣವಾಗಿತ್ತು. ಆದರೆ, ಇವೆಲ್ಲವುಗಳ ಹಿನ್ನೆಲೆಯಲ್ಲಿ ಹೊಸ ಪಂಥಗಳ ನಾಂದಿಗೆ ಕೆಲವು ಅನುಭಾವಿಗಳು ಮಧ್ಯಕಾಲದ ಭಾರತದಲ್ಲಿ ಶ್ರಮಿಸಿದರು. ದಕ್ಷಿಣ ಭಾರತದಲ್ಲಿ ಭಕ್ತಿ ಚಳವಳಿಯು ಮೊದಲು ತಮಿಳುನಾಡಿನಲ್ಲಿ ಆರಂಭವಾದಂತೆ ಕಾಣುತ್ತದೆ. ಕ್ರಿ.ಶ. ೭ನೇ ಶತಮಾನದಲ್ಲಿ ಹುಟ್ಟಿಕೊಂಡ *ಆಳ್ವಾರ್ ಮತ್ತು ನಾಯನಾರ್ ಚಳವಳಿಗಳೇ* ಸಾಕ್ಷಿ.[೪೩] ಅನಂತರ ಕರ್ನಾಟಕದಲ್ಲಿ *ವಚನ ಆಂದೋಲನ, ಹರಿದಾಸರ ಚಳವಳಿ,* ಮಹಾರಾಷ್ಟ್ರದಲ್ಲಿ *ಭಾಗವತ ಚಳವಳಿ,* ಪೂರ್ವಭಾರತದಲ್ಲಿ *ಚೈತನ್ಯ ಚಳವಳಿ,* ಉತ್ತರ ಹಿಂದೂಸ್ಥಾನದಲ್ಲಿ *ತುಳಸೀ-ಕಬೀರರ ಚಳವಳಿ,* ಅಸ್ಸಾಂನಲ್ಲಿ *ಶಂಕರದೇವನ ಚಳವಳಿ,* ಪಂಜಾಬ್‌ನಲ್ಲಿ *ಸಿಖ್‌ಪಂಥದ ಚಳವಳಿ,* ಗುಜರಾತ್ ರಾಜಸ್ಥಾನದಲ್ಲಿ *ವೈಷ್ಣವ ಪಂಥದ ಚಳವಳಿ* ಹಾಗೂ *ಮೀರಾಬಾಯಿ* ಮತ್ತು *ನರಸಿಂಹಾ ಮಹ್ತಾರವರ ಚಳವಳಿ, ನಾಥಪಂಥ, ವಾರಕರಿಪಂಥ, ವಚನ* ಮತ್ತು *ಹರಿದಾಸ ಚಳವಳಿ, ಚೈತನ್ಯಪಂಥ, ನಾನಕಪಂಥ, ಮಾಹಿಮಾಪಂಥ, ಸೂಫಿಪಂಥ* ಮತ್ತು *ಕ್ರೈಸ್ತ ಭಕ್ತಿಪಂಥ* ಮುಂತಾದ ಸಾಮಾಜಿಕ ಆಂದೋಲನ ಪಂಥಗಳು ಸಮಾಜದ ಮೇಲೆ ಒಂದಲ್ಲ ಒಂದು ರೀತಿಯಲ್ಲಿ ಪ್ರಭಾವ ಬೀರಲು ಯತ್ನಿಸಿದವು. ಆ ಮುಖಾಂತರ ಕರ್ನಾಟಕದಲ್ಲಿ ನಡೆದ ಚಳವಳಿಗಳು ಸಮಾಜದ ಮೇಲೆ ಬೀರಿದ ಪಾತ್ರವನ್ನು ಚರ್ಚಿಸಲು ಇಲ್ಲಿ ಯತ್ನಿಸಲಾಗಿದೆ.

ಮಹಾರಾಷ್ಟ್ರದಲ್ಲಿ ಕೃಷ್ಣಪಂಥದ ಎರಡು ವಿಭಿನ್ನ ಗುಂಪುಗಳು ಬ್ರಾಹ್ಮಣರ ಪ್ರಾಧಾನ್ಯವನ್ನು ವಿರೋಧಿಸಿದವು. ಮತ್ತೊಂದು ಗಮನಾರ್ಹ ಅಂಶವೆಂದರೆ ಇವೆರಡೂ ಪಂಥಗಳು ಪ್ರಾಚೀನ ಬುಡಕಟ್ಟುಗಳ ಸಾಮುದಾಯಿಕ ನಂಬಿಕೆಗಳನ್ನೇ ಆಧರಿಸಿವೆ. ಬುಡಕಟ್ಟಿನ ಸಾಮುದಾಯಿಕ ಬದುಕಿನ ವಿಚಾರಗಳನ್ನು ಬಳಸಿಕೊಂಡು ೧೨ನೇ ಶತಮಾನದಲ್ಲಿ ಚಕ್ರಾಧರನು ಮಹಾನುಭಾವ ಅಥವಾ ಮಾನ್‌ಭಾವ್ ಪಂಥವನ್ನು ಸ್ಥಾಪಿಸಿದ. ಕರಿಯ ಬಟ್ಟೆ ಧರಿಸುವುದು, ಜಾತಿ ವ್ಯವಸ್ಥೆಯನ್ನು ಸಾರಾಸಗಟಾಗಿ ತಿರಸ್ಕರಿಸುವುದು, ಬುಡಕಟ್ಟಿನಂತಹ ಸಣ್ಣ ಸಣ್ಣ ಗುಂಪುಗಳಾಗಿ ಸಂಘಟಿತರಾಗುವುದು.[೪೪] ಈ ರೀತಿಯ ಜನಸಾಮಾನ್ಯರ ಬದುಕಿನತ್ತ ಮುನ್ನಡೆಯುವುದು ಈ ಪಂಥದ ನಿಲುವಾಗಿತ್ತು. ಈ ಹಿನ್ನೆಲೆಯಲ್ಲಿ ಮರಾಠಿ ಸಂತರು ಜನಸಾಮಾನ್ಯರಿಗೆ ಅರ್ಥವಾಗುವ ರೀತಿಯಲ್ಲಿ ಸಾಹಿತ್ಯ ರಚಿಸಿದರು. ಅವರೆಲ್ಲರೂ ವಿಭಿನ್ನ ಜಾತಿಗಳಿಂದ ಬಂದವರು. ಅವರೆಲ್ಲರೂ ಜನಸಾಮಾನ್ಯರ ಬದುಕಿನ ಕಷ್ಟ, ಕಾರ್ಪಣ್ಯಗಳನ್ನು ಅನುಭವಿಸಿದವರು. ನಾಮದೇವನು ವೃತ್ತಿಯಿಂದ ಒಬ್ಬ ಸಾಮಾನ್ಯ ದರ್ಜಿಯಾಗಿದ್ದರೂ ಕೂಡ, ಈ ಹೊಸ ತತ್ವವನ್ನು ದೂರದ ಉತ್ತರದಲ್ಲಿ ಯಶಸ್ವಿಯಾಗಿ ಪ್ರಚಾರ ಮಾಡಿದ. ಗೋರಾ ಜಾತಿಯಿಂದ ಒಬ್ಬ ಅಸ್ಪೃಶ್ಯ ಮತ್ತು ವೃತ್ತಿಯಿಂದ ಕುಂಬಾರನಾಗಿದ್ದ. ಚೋಕಾ ಮೇಳ ಒಬ್ಬ ಅಸ್ಪೃಶ್ಯ.[೪೫] ವೈದಿಕೇತರ ಮಾತ್ರವಲ್ಲದೆ ಬ್ರಾಹ್ಮಣ ಸಂತರು ಸಹ ಜಾತಿ ನಿರ್ಮೂಲನೆ ಶ್ರಮಿಸಿದವರಲ್ಲಿ ಏಕನಾಥನು ಒಬ್ಬ. ಜ್ಞಾನೇಶ್ವರಿ ಮತ್ತು ಇತರ ಉತ್ತಮ ಮರಾಠಿ ಗ್ರಂಥಗಳ ಕರ್ತೃವೆನ್ನಲಾದ ಪೈಠಾಣ ಬ್ರಾಹ್ಮಣನಾಗಿದ್ದವನು. ಅಸ್ಪೃಶ್ಯತೆಯ ಕ್ರೂರ ಕಟ್ಟುಪಾಡುಗಳನ್ನು ಉಲ್ಲಂಘಿಸುವ ಸಾಹಸ ಮಾಡಿದ.[೪೬] ಈ ರೀತಿಯ ಪ್ರಕ್ರಿಯೆಗಳು ಭಾರತದಾದ್ಯಂತ ನಡೆದಿರುವುದನ್ನು ಗಮನಿಸಬಹುದು.

### ೩.೨.೧. ಸಾಮಾಜಿಕ ಮತ್ತು ಧಾರ್ಮಿಕ ಆಂದೋಲನಗಳಾಗಿ ಭಕ್ತಿ ಚಳವಳಿಗಳು

ಹತ್ತನೆಯ ಶತಮಾನಕ್ಕಿಂತ ಪೂರ್ವದಲ್ಲಿ ಭಾರತೀಯ ಸಮಾಜವು ಹಲವು ಧಾರ್ಮಿಕ ಅಂಧಶ್ರದ್ಧೆಗಳಲ್ಲಿ ಮುಳುಗಿಹೋಗಿತ್ತು. ಅರಿವಿನ ಜಾಗೃತಿ ಮೂಡಿಸುವ ಯಾವುದೇ ಕಾರ್ಯಕ್ರಮಗಳು ಹೆಚ್ಚಿನದಾಗಿ ನಡೆಯಲಿಲ್ಲ. ಕ್ರಿ.ಶ. ೮ರಿಂದ ೧೨ನೇ ಶತಮಾನದ ಕರ್ನಾಟಕದ ಚರಿತ್ರೆಯು ವೈವಿಧ್ಯತೆಯಿಂದ ಕೂಡಿದೆ. ಈ ಅವಧಿಯಲ್ಲಿ ಆಗಮಿಕ ಆಚರಣೆ ಮತ್ತು ವ್ಯವಸ್ಥೆಗೆ ಹೊಂದುವಂತಹ ಸಿದ್ಧಾಂತಗಳು ಪ್ರಚಲಿತದಲ್ಲಿದ್ದವು. ಕಾರಣ, ಗುಪ್ತರ ನಂತರದ ಕಾಲದಲ್ಲಿ ದೇವಾಲಯ ಆರಾಧನೆಯಲ್ಲಿ ಕೇಂದ್ರವಾಗುಳ್ಳ ಆಚರಣೆಗಳು ಬೆಳವಣಿಗೆಯಾದದ್ದು. *ಆಳ್ವಾರರ* ಮತ್ತು *ನಾಯನಾರರ* ಭಕ್ತಿ ಆಂದೋಲನವು ದಾಸ್ಯದ ಸಂಕೋಲೆಯನ್ನು ಬಯಲಿಗೆಳೆದದ್ದು, ಹೀಗಿರುವಾಗ ಕರ್ನಾಟಕದ ಸಾಮಾಜಿಕ ಮತ್ತು ಧಾರ್ಮಿಕ ಕ್ಷೇತ್ರದ ಮೇಲೆ ಪ್ರಭಾವ ಬೀರಿದ ಪ್ರಮುಖ ಚಳವಳಿಗಳನ್ನು ಇಲ್ಲಿ ಪರಿಚಯಿಸಲಾಗಿದೆ.

ದಕ್ಷಿಣ ಭಾರತವು ಹಲವು ಭಕ್ತಿ ಚಳುವಳಿಗಳನ್ನು ಹುಟ್ಟುಹಾಕಿದೆ. ಏಕಕಾಲಕ್ಕೆ ಎರಡು ಭಕ್ತಿ ಚಳವಳಿಗಳು ಉದಯವಾದವು. ಅವು ವಿಷ್ಣು-ಶಿವನನ್ನು ಕೇಂದ್ರವಾಗುಳ್ಳ *ಶ್ರೀವೈಷ್ಣವ* ಮತ್ತು *ಶೈವ* ಭಕ್ತಿ ಚಳವಳಿಗಳು. ಇವು ಕ್ರಮೇಣ ನಾಯನಾರರ ಶೈವಪಂಥ, ಆಳ್ವಾರರ ವೈಷ್ಣವ ಭಕ್ತಿ ಪಂಥ ಎಂದು ಹೆಸರು ಪಡೆದವು. ಶೈವ ಭಕ್ತಿ ಚಳವಳಿ ಅರವತ್ತೂಮ್ರು ಪುರಾತನರಿಂದ ಪ್ರಾರಂಭವಾಗುತ್ತದೆ. ಶೈವ ಭಕ್ತರನ್ನು "ನಾಯನಾರ್" ಎಂದು ಕರೆಯುತ್ತಾರೆ. ಇವರಲ್ಲಿ ಬ್ರಾಹ್ಮಣರಿಂದ ಹರಿಜನವರೆಗೆ ಎಲ್ಲಾ ಸ್ತರದ ಜನತೆ ಭಾಗವಹಿಸಿದ್ದು ಗಮನಾರ್ಹ. ವೈಷ್ಣವ ಪಂಥದ ಆರಾಧಕರನ್ನು "ಆಳ್ವಾರರು" ಎಂದು ಕರೆಯುತ್ತಿದ್ದರು. (ಆಳ್ವಾರ್ ಎಂದರೆ ಭಗವಂತನಲ್ಲಿ ಗಾಢ ಭಕ್ತಿಯುಳ್ಳವರು ಎಂದರ್ಥ).[೪೭] ವೈಷ್ಣವರಿಗೆ ಪ್ರಮುಖ ಆಧಾರಗಳಾದ ಪಂಚರಾತ್ರಗಮನಗಳು ವೈಖಾನಸಾಗಮಗಳಿಗಿಂತ ಹೆಚ್ಚು ಉದಾರ. ಪಂಚರಾತ್ರ ರಿಚುಯಲ್ಲಿನ ಪ್ರಧಾನ ಕೃತಿಯಂತಿರುವ "ಪರಮಸಂಹಿತಾ" ಕೃತಿಯು ಮಾತ್ರವೇ ಅಲ್ಲ, ಸತ್ಕುಲ ಪ್ರಸೂತನೂ ಸಚ್ಚಾರಿತ್ರ್ಯವಂತನೂ ಆದ ಶೂದ್ರನಿಗೆ ಶ್ರೀವೈಷ್ಣವ ದೀಕ್ಷೆಯನ್ನು ನೀಡಬಹುದೆನ್ನುತ್ತದೆ.[೪೮] ಇವರಲ್ಲಿ ಎಲ್ಲಾ ಜಾತಿಯ ಭಕ್ತರಿದ್ದರು. *ಪೆರಿ ಆಳ್ವಾರ್ ಬ್ರಾಹ್ಮಣ, ನಮ್ಮಾಳ್ವಾರ್ ವೆಳ್ಳಾಳ ಶೂದ್ರ.* ತಿರುಪ್ಪಾಣಿ ಅಸ್ಪೃಶ್ಯ ಹನ್ನೆರಡನೆಯ ಶತಮಾನದ ಪೂರ್ವಾರ್ಧದಲ್ಲಿ ಕರ್ನಾಟಕಕ್ಕೆ ಬಂದ ಶ್ರೀವೈಷ್ಣವ ದಾರ್ಶನಿಕ ಅನುಭಾವಿ ಶ್ರೀ ರಾಮಾನುಜರು ಮಾನವ ಪ್ರೇಮಿಯಾಗಿದ್ದು, ದಿಲ್ಲಿಯಿಂದ ಶ್ರೀರಾಮಪ್ರಿಯ ವಿಗ್ರಹವನ್ನು ತರಲು ತಮಗೆ ಸಹಾಯ ಮಾಡಿದ ಅಸ್ಪೃಶ್ಯರಿಗೆ ಮೇಲ್ಕೋಟೆಯ ದೇವಾಲಯದ ಪ್ರಾಕಾರಕ್ಕೆ ವರ್ಷದಲ್ಲಿ ಮೂರು ದಿನ ಪ್ರವೇಶವನ್ನು ದೊರಕಿಸಿಕೊಟ್ಟರೆಂದು ಪ್ರತೀತಿಯಿದೆ.[೪೯] ತಮಿಳುನಾಡಿನ ಶೈವ ಭಕ್ತಿಪಂಥದಲ್ಲಿ ಕಾಣಿಸಿಕೊಳ್ಳುವ ಅರವತ್ತಮೂರು ನಾಯ್ನಾರರಲ್ಲಿ *ರಾಜರು, ಬ್ರಾಹ್ಮಣರು, ಅಸ್ಪೃಶ್ಯರು, ವರ್ತಕರು, ರೈತರು, ಕುರುಬರು, ಕುಂಬಾರರು, ನೇಕಾರರು, ಬೇಡರು, ಬೆಸ್ತರು* ಇದ್ದರು. ಶೈವ ನಾಯ್ನಾರರಲ್ಲಿ ಭಕ್ತಿಯ ನಿರ್ಭಯತೆ, ಮಾನವ ಪ್ರೇಮಗಳು ಉಕ್ಕಿ ಹರಿದಿವೆ. ತಮಿಳು ಶೈವಭಕ್ತರಲ್ಲಿ ನಂದನಾರ್ ಎಂಬ ಭಕ್ತ ಅಸ್ಪೃಶ್ಯ, ತಿಲಕವತಿಯರ್ ಮುಂತಾದ ಸ್ತ್ರೀಯರು ಅಲ್ಲಿದ್ದರು. ಎಲ್ಲಾ ಸಂತಕವಿಗಳಿಗೆ ಧರ್ಮ ಎಂದರೆ ಬೌದ್ಧಿಕ ಪರಿಕಲ್ಪನೆಗಳ ಸ್ವೀಕರಣೆ ಅಲ್ಲ ಅಥವಾ ಅರ್ಥಹೀನ, ಆಚರಣೆಗಳನ್ನು ನಡೆಸುವುದೂ ಅಲ್ಲ. ಶ್ರದ್ಧೆ, ಸಮರ್ಪಣೆ, ಶುದ್ಧ ದೈವಭಕ್ತಿ ಇವುಗಳ ಮೂಲಕ ಪರವಸ್ತುವಿನ ಅನುಭವ ಆಗಿತ್ತು.[೫೦]

ಒಟ್ಟಾರೆಯಾಗಿ ಮೇಲಿನ ಅಭಿಪ್ರಾಯಗಳು ನಾಥಪಂಥದ ವಿಚಾರಧಾರೆಗಳನ್ನು ಮನದಟ್ಟು ಮಾಡುತ್ತವೆ. ಸಾಮಾಜಿಕ ಸಮಾನತೆಯ ತಳಹದಿಯ ಮೇಲೆ ಭಾರತದಲ್ಲಿ ಮೊಟ್ಟ ಮೊದಲ ಬಾರಿಗೆ ಸರ್ವರ ಸಮಾನತೆ ಕುರಿತು ಚಿಂತಿಸಿದ್ದು ಗಮನಾರ್ಹ. ಇದು ಪ್ರಾದೇಶಿಕ ಭಾಷೆಗಳಲ್ಲಿ ತತ್ವಪ್ರಚಾರ ಮಾಡಿತು. ಜಾತಿಪಂಥಗಳು, ಮೇಲುಕೀಳುಗಳನ್ನು ಹೊಡೆದುಹಾಕಿತು. ಭಾರತದಲ್ಲಿ ಆಧ್ಯಾತ್ಮಿಕ ಹಾಗೂ ಧಾರ್ಮಿಕ ಸಾಮಾಜಿಕ ಸಮಾನತೆಯನ್ನು ತರಲು ಯತ್ನಿಸಿತು. ನಾಥಸಂಪ್ರದಾಯವೆಂಬುದು ಒಂದು ಪ್ರತ್ಯೇಕ ಪಂಥವಾಗಿದೆ. ಬಹಳ ಸುಖ ಸಂತೋಷಗಳಲ್ಲಿಯೂ, ವೈಭವಗಳಲ್ಲಿಯೂ ಬಿದ್ದಿರುವ ಮನುಷ್ಯರನ್ನು, ಅವರಲ್ಲಿಯೂ ಮುಖ್ಯವಾಗಿ ಅರಸರನ್ನು ಯೋಗೀಶ್ವರರಾಗಿ ಮಾಡುವುದು, ಜಾತಿಭ್ರಷ್ಟರಾಗಿ ಕಷ್ಟದಲ್ಲಿ ಬಿದ್ದಿರುವವರನ್ನು ಪಂಥಕ್ಕೆ ಸೇರಿಸಿ ಅವರನ್ನು ಉದ್ಧರಿಸುವುದೇ ನಾಥ ಪಂಥದ ಉದ್ದೇಶ.[೫೧] ನಾಥಪಂಥಕ್ಕೆ *ಕಪಾಲಮತ, ಸಿದ್ಧಮತ, ಸಿದ್ಧಮಾರ್ಗ, ಯೋಗಮಾರ್ಗ, ಅವಧೂತಮತ, ಅವಧೂತ ಸಂಪ್ರದಾಯ, ಗೋರಖಪಂಥ* ಎಂಬೆಲ್ಲ ಹೆಸರುಗಳಿವೆ. ನಾಥ ಎಂದರೆ ಒಡೆಯ, ಹಸು, ಇಂದ್ರಿಯ ಇತ್ಯಾದಿ ಅರ್ಥಗಳಿವೆ. ಕದ್ರಿಮಠದ ನಾಥರಿಗೆ ಶಾಸನಗಳಲ್ಲಿ ಒಡೆಯ ಮಂಗಲನಾಥ ಒಡೆಯರು ಎಂದು ಕರೆದಿದೆ.[೫೨]

ಕ್ರಿ.ಪೂ. ೮ನೇ ಶತಮಾನದಲ್ಲಿ ಗೌಡದೇಶದಲ್ಲಿ ನಾಥಪಂಥಕ್ಕೆ ಸೇರಿದ ಪಾರ್ಶ್ವನಾಥನೆಂಬ ರಾಜಕುಮಾರನು ತನ್ನ ವಂಶದ ಕ್ಷತ್ರಿಯರಿಗೋಸ್ಕರ ಒಂದು ಹೊಸ ಪಂಥವನ್ನು ಸ್ಥಾಪಿಸಿದನು, ಅದುವೇ *ನಾಥಪಂಥ.* ಇವರು ಈಶ್ವರ ಆದಿನಾಥ ಅಥವಾ ಲೋಕೇಶ್ವರನೆಂಬ ಹೆಸರಿನಿಂದ ಪೂಜಿಸುವುದು ಅಲ್ಲದೆ ಶಕ್ತಿಯನ್ನು, ಭೈರವನನ್ನು ಪೂಜಿಸುತ್ತಾರೆ. ಈ ಪಂಥಕ್ಕೆ ಸೇರಿದವರನ್ನು ಜೋಗಿಯರೆಂದು ಕರೆಯುತ್ತಾರೆ. ಕಿಜಿಗಾರರು, ಹಾಲಕ್ಕಿ ಜಾತಿಯವರು ಹೆಚ್ಚಿನದಾಗಿ ಈ ಪಂಥವನ್ನು ಅನುಸರಿಸುತ್ತಾರೆ. ನಾಥ ಪಂಥಕ್ಕೆ ಯಾವ ಜಾತಿಯವರಾದರೂ ಸೇರಬಹುದು. ಜಾತಿ ಕಟ್ಟಲೆಗಳು ಇಲ್ಲ. ಪಂಡರಪುರದ *ಜ್ಞಾನದೇವ, ಏಕನಾಥ, ಸೋಪಾನ, ಮುಕ್ತಬಾಯಿ* ಮೊದಲಾದ ಸಂತರು ಈ ಪಂಥಕ್ಕೆ ಸೇರಿದವರು. ಕರ್ನಾಟಕದ ವಿಟ್ಲದ ಅರಸರಲ್ಲಿ ಒಬ್ಬನು ನಾಥಸಂಪ್ರದಾಯವನ್ನು ಅನುಸರಿಸಿ ಯೋಗೀಶ್ವರನಾಗಿ ವಿಟ್ಲದ ಹತ್ತಿರವೂ ಒಂದು ಮಠವನ್ನು ಕಟ್ಟಿಸಿ ಅಲ್ಲಿಯೇ ಇದ್ದನು.[೫೩] ಕರ್ನಾಟಕದಲ್ಲಿ ನಡೆದ ಬಹುತೇಕ ಚಳವಳಿಗಳಿಗೆ ನಾಥಪಂಥವು ಪರೋಕ್ಷವಾಗಿ ಪ್ರಭಾವ ಬೀರಿದೆ ಎಂದು ವಿದ್ವಾಂಸರು ಗುರುತಿಸಿದ್ದಾರೆ. ನಾಥಸಂಪ್ರದಾಯವು ಮೋಕ್ಷವು ಎಲ್ಲ ಲಿಂಗ, ಜಾತಿಗಳಿಗೆ ಎಂದು ಹೇಳಿದ್ದಲ್ಲದೆ ಅದರ ಗುರುಗಳಾದ ನಾಥಸಿದ್ಧರು ಸಾಮಾನ್ಯರ ಭಾಷೆಯಲ್ಲಿ ಜನತೆಗೆ ಬೋಧಿಸಿದರು. ಅಂದಿನ ಸಾಂಪ್ರದಾಯಿಕ ಹಿಂದೂ ಧರ್ಮದ ಶ್ರೇಣೀಕೃತ ವ್ಯವಸ್ಥೆಯನ್ನು ಅವರು ಪ್ರತಿಭಟಿಸಿದ್ದರು.[೫೪] ಕರ್ನಾಟಕದ ಭಕ್ತಿಪಂಥಗಳ ಮೇಲೆ ಇದರ ಪ್ರಭಾವವನ್ನು ಗುರುತಿಸಬಹುದಾಗಿದೆ. ಭಾರತದ ಇತರೆ ಭಾಗಗಳಲ್ಲಿ ಹುಟ್ಟಿಕೊಂಡ ಬಹುತೇಕ ಭಕ್ತಿ ಚಳವಳಿಗಳು ಕರ್ನಾಟಕದ ಮೇಲೆ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಪ್ರಭಾವ ಬೀರಿವೆ. ಅದರಲ್ಲಿಯೂ ತಮಿಳುನಾಡಿನ ಶೈವ ಮತ್ತು ವೈಷ್ಣವ ಭಕ್ತಿ ಚಳವಳಿಗಳು ವಚನ ಆಂದೋಲನದ ಮೇಲೆ ಗಾಢವಾದ ಪ್ರಭಾವ ಆಗಿದೆ ಎಂಬುದನ್ನು ವಿದ್ವಾಂಸರು ಗುರುತಿಸುತ್ತಾರೆ. ಆ ಮುಖಾಂತರ ಕರ್ನಾಟಕವು ಹೊಸಬಗೆಯ ಸಾಮಾಜಿಕ ಕ್ರಾಂತಿಗೆ ನಾಂದಿಯಾಗಲು ಕಾರಣವಾಯಿತು.

### ೩.೨.೨. ರಾಮಾನುಜಾಚಾರ್ಯರು ಮತ್ತು ದಲಿತವರ್ಗ

ರಾಮಾನುಜಾಚಾರ್ಯರು ಶ್ರೀವೈಷ್ಣವ ಧರ್ಮದ ಶ್ರೇಷ್ಠ ಪ್ರವರ್ತಕ. ವಿಶಿಷ್ಟಾದ್ವೈತ ಸಿದ್ಧಾಂತದ ಪ್ರತಿಪಾದಕ. ಮತಾಂಧನಾಗಿದ್ದ ಚೋಳ ಅರಸ ವೈಷ್ಣವರಿಗೆ ಚಿತ್ರಹಿಂಸೆ ಕೊಡತೊಡಗಿದರಿಂದ ರಾಮಾನುಜಾಚಾರ್ಯರು ತನ್ನ ಶಿಷ್ಯರೊಂದಿಗೆ ಕರ್ನಾಟಕದ ವಿಷ್ಣುವರ್ಧನನ ಆಶ್ರಯ ಪಡೆದರು. ಇವರ ಮೇಲೆ ತಮಿಳು ಆಳ್ವಾರರ ಸಂಪ್ರದಾಯಗಳು ಪ್ರಭಾವ ಬೀರಿವೆ. ಅಂದಿನ ಸಾಮಾಜಿಕ ವ್ಯವಸ್ಥೆಯ ಮೇಲೆ ಇವರ ಭಕ್ತಿಪ್ರೇರಿತ ಸಿದ್ಧಾಂತಗಳು ಜನಸಾಮಾನ್ಯರ ಮೇಲೆ ಹೇಗೆ ಪರಿಣಾಮ ಬೀರಿದವು ಎನ್ನುವುದನ್ನು ಗಮನಿಸಬಹುದು. ರಾಮಾನುಜಾಚಾರ್ಯರು ನಿಜವಾದ ಜ್ಞಾನವನ್ನು ಭಕ್ತಿಯೊಂದಿಗೆ ಸಮೀಕರಿಸಿದರು. ಇದೇ ಮೋಕ್ಷಕ್ಕೆ ದಾರಿ. ಭಗವಂತನ ಇಚ್ಛೆಗೆ ಸಂಪೂರ್ಣವಾಗಿ ಒಪ್ಪಿಸಿಕೊಳ್ಳುವುದು ಅಥವಾ ಶರಣಾಗತಿಯಾಗುವುದು. ಸಮಸ್ತ ಜೀವಿಗಳಿಗೂ ವಿಶಿಷ್ಟಾದ್ವೈತ ಮೋಕ್ಷದ ಭರವಸೆ ನೀಡಿತು. ವ್ಯಕ್ತಿಯ ಸಂಪೂರ್ಣ ಶರಣಾಗತಿಯೇ ವಿಶಿಷ್ಟಾದ್ವೈತದ ತಿರುಳು.[೫೫]

ಸಮಾಜದ ಕೆಳವರ್ಗದ ಜನರು ಮೋಕ್ಷಕ್ಕೆ ಅರ್ಹರು ಎನ್ನುವುದು ವಿಶಿಷ್ಟಾದ್ವೈತ ಸಿದ್ಧಾಂತದಲ್ಲಿ ಕಂಡುಬರುವ ಪ್ರಮುಖ ವಿಚಾರವಾಗಿದೆ. ನೀಚ ಜಾತಿಯಲ್ಲಿ ಜನಿಸಿದವರೆಂಬ ಒಂದೇ ಕಾರಣದಿಂದ ಶಾಸ್ತ್ರಾಧ್ಯಯನಕ್ಕೆ ಅವಕಾಶವಿಲ್ಲದೆ ತೊಳಲಾಡುತ್ತಿದ್ದ ಅಸಂಖ್ಯಾತ ದೀನದಲಿತರನ್ನು ಉದ್ಧರಿಸಿ, ಅವರಿಗೂ ಐಹಿಕ ಸುಖಸಾಧನೆಗೆ ಅಧಿಕಾರವುಂಟು, ಅವರಿಗೂ ಮೋಕ್ಷ ಪ್ರಾಪ್ತಿಗೆ ಅವಕಾಶವುಂಟು ಎಂಬ ಉದಾತ್ತ ತತ್ವವನ್ನು ವೈಷ್ಣವಧರ್ಮ ಅನುಷ್ಠಾನಕ್ಕೆ ತಂದಿತು ಎನ್ನುವುದು ಪ್ರಚಾರದಲ್ಲಿರುವ ವಾದ. ಕೆಳಜಾತಿಯ ಜನರು ಭಗವಂತನ ಸೃಷ್ಟಿಯೇ ಆಗಿರುವುದರಿಂದ ಅವರು ದೇವರ ಕೃಪೆಯಿಂದ ವಂಚಿತರಾಗಬಾರದು. ಅವರಿಗೂ ಸಮಾಜದ ಎಲ್ಲ ಸೌಲತ್ತುಗಳು ಸಿಗುವಂತಾಗಬೇಕು ಎಂದು ತಮ್ಮ ಚಿಂತನೆಗಳನ್ನು ತಿಳಿಹೇಳಿದರು. ಅದೇ ರೀತಿಯಾಗಿ ದೇವಾಲಯಗಳಿಗೆ ಪಂಚಮರು ಎಂದು ಕರೆಯಿಸಿಕೊಂಡವರು ಪ್ರವೇಶಿಸಬಹುದು ಎನ್ನುವ ನಿಲುವನ್ನು ವ್ಯಕ್ತಪಡಿಸಿದರು. ಆದರೆ ಇದು ವರ್ಷದಲ್ಲಿ ಒಂದು ದಿನಕ್ಕೆ ಮಾತ್ರ ಸೀಮಿತವಾಗಿತ್ತು.[೫೬] ಈ ಬಗೆಯ ಧೋರಣೆಗಳಿಂದ ಅಂದಿನ ಸಮಾಜವನ್ನು ನೋಡಲೆತ್ನಿಸಿದ್ದು ಸರಿಯೇ. ಆದರೆ ಅವುಗಳ ಪಾಲನೆ ಮತ್ತು ಸಿದ್ಧಾಂತಗಳನ್ನು ಮೂಲತಃ ವೈದಿಕರ ಆಚರಣೆಗಳನ್ನು ಮುಂದುವರಿಯುವಂತೆ ಮತ್ತು ಅವಲಂಬಿಸುವಂತೆ ಮಾಡಿದವು.

ಮೇಲುಕೋಟೆಯಲ್ಲಿ ಚೆಲುವ ನಾರಾಯಣಸ್ವಾಮಿ ದೇಗುಲದ ಜತೆ ರಾಮಾನುಜಚಾರ್ಯರ ಸಂಬಂಧ ಚಾರಿತ್ರಿಕ ಘಟನೆ. ಮೂಲ ವಿಗ್ರಹವನ್ನು ಜನ ಬಚ್ಚಿಟ್ಟಿದ್ದಾರೆಂದು ಪಂಚಲೋಹದ ವಿಗ್ರಹವನ್ನು ದಾಳಿಕಾರರು ಒಯ್ದಿದ್ದರೆಂದೂ, ಹೊಯ್ಸಳ ವಿಷ್ಣುವರ್ಧನನ ನೆರವಿನಿಂದ ಹೊಸ ದೇಗುಲ ನಿರ್ಮಿಸಿ ಹುತ್ತದಲ್ಲಿದ್ದ ಚಲುವನಾರಾಯಣ ವಿಗ್ರಹವನ್ನು ರಾಮಾನುಜರು ಮತ್ತೆ ಪ್ರತಿಷ್ಠಾಪಿಸಿದರೆಂದೂ, ಆದರೆ ಉತ್ಸವಮೂರ್ತಿಯನ್ನು ದೆಹಲಿ ಸುಲ್ತಾನನ ಮಗಳಿಂದ ತರಬೇಕಿತ್ತೆಂದೂ ಕತೆ ಇದೆ. ರಾಮಾನುಜರಿಗೆ ಹರಿಜನರು ಸಹಾಯ ಮಾಡಿದ್ದರಿಂದ ಈ ಮೂರ್ತಿಯನ್ನು ತರಲು ಸಾಧ್ಯವಾಯಿತಂತೆ. ದೊರೆಯ ಮಗಳು ಈ ವಿಗ್ರಹದಲ್ಲೇ ಮನಸ್ಸಿಟ್ಟಿದ್ದರಿಂದ ಅದು ಅಗಲಿದಾಗ ಪ್ರಾಣ ಬಿಟ್ಟಳಂತೆ. ಆ ಯವನ ಹುಡುಗಿ ಬೀಬಿ ನಾಚ್ಚಿಯಾರ್ ಆಗಿ

ಈಗಲೂ ದೇವರ ಪಕ್ಕದಲ್ಲಿದ್ದು ಪೂಜೆಗೊಳ್ಳುತ್ತಿರುವಳು. ನೆರವು ನೀಡಿದ ಹರಿಜನರನ್ನು 'ತಿರುಕುಲತ್ತಾರ್' (*ಶ್ರೇಷ್ಠ ಕುಲದವರು*) ಎಂದು ಗೌರವಿಸಿ ರಾಮಾನುಜಾಚಾರ್ಯ ವರ್ಷದಲ್ಲಿ ಮೂರು ದಿನ ದೇಗುಲ ಪ್ರವೇಶಕ್ಕೆ ಅವಕಾಶ ಕಲ್ಪಿಸಿದರು.[೫೭] ರಾಮಾನುಜರ ಜೀವನದಲ್ಲಿ ದಲಿತರ ಪಾತ್ರ ಇದಿಷ್ಟೇ ಅಲ್ಲ. ಇವರು ತುಂಬಾ ಗೌರವಿಸುತ್ತಿದ್ದ ೧೨ ಜನ ವಿಷ್ಣು ಭಕ್ತರಲ್ಲಿ (*ಆಳ್ವಾರರು*) ಕೆಲವರು ಕೆಳಜಾತಿಯವರು ಉದಾಹರಣೆಗೆ ತಿರುಪ್ಪಾಣಿ, ಶ್ರೀರಂಗದ ರಂಗನಾಥದೇಗುಲದ ಎದುರು ಗುಡಿಸಲು ಕಟ್ಟಿಕೊಂಡಿದ್ದ. ಭಕ್ತಿಗೀತೆ ಹಾಡುತ್ತಿದ್ದ ಪರಮಭಕ್ತ. ದೇವರ ಪೂಜಾರಿ ಲೋಕ ಸಾರಂಗ ಮುನಿಗೆ ಹಾದಿ ಬಿಡದಿರಲು ಆತ ಕಲ್ಲು ಒಗೆದಾಗ ತಿರುಪ್ಪಾಣಿಯ ತಲೆ ಒಡೆಯಿತು. ದೇವರ ಕನಸಿನಲ್ಲಿ ಬಂದು ಹೇಳಿದ್ದರಿಂದ ಲೋಕಸಾರಂಗಮುನಿ ತಿರುಪ್ಪಾಣಿಯನ್ನು ಹೆಗಲ ಮೇಲೆ ಹೊತ್ತು ದೇಗುಲದ ಏಳು ಪ್ರಾಕಾರ ಸುತ್ತಿ ಬರುತ್ತಾನೆ. ಈ ರಂಗನಾಥದೇಗುಲ ಕಟ್ಟಿಸಿದವನೇ ಕಳ್ಳರ ಕುಲದ ತಿರುಮಂಗೈ ಆಳ್ವಾರ್. ನಮ್ಮಾಳ್ವಾರ್ (*ಶತಗೋಪ*) ವೆಳ್ಳಾಳ ಜಾತಿಯವರು. ಇವರ ಐದು ಜನ ಗುರುಗಳಲ್ಲಿ ಕಾಂಚಿ ಪೂರ್ಣರು ಒಬ್ಬರು. ಇವರು ಸಹ ಕೆಳಜಾತಿಯವರು. ಅರಣ್ಯದಲ್ಲಿ ದಾರಿ ತೋರಿ ಕಂಚಿಗೆ ರಾಮಾನುಜರನ್ನು ತಂದು ಬಿಟ್ಟವರು, ಬೇಡ ಬೇಡತಿಯರು.[೫೮]

ಮೇಲಿನ ವಿವರಣೆಯು ರಾಮಾನುಜರ ಮತ್ತು ದಲಿತರ ನಡುವಿನ ಸಾಮರಸ್ಯವನ್ನು ಕುರಿತು ಹೇಳುವುದು ಮಾತ್ರವಲ್ಲದೆ ಸಾಮಾಜಿಕ ಸಮಾನತೆಗಾಗಿ ಶ್ರಮಿಸಿದ ಚಿಂತಕರಲ್ಲಿ ಒಬ್ಬರೆಂದು ತಿಳಿಸುತ್ತದೆ. ಹಾಗೆಂದ ಮಾತ್ರಕ್ಕೆ ರಾಮಾನುಜರ 'ವಿಶಿಷ್ಟಾದ್ವೈತ' ಸಿದ್ಧಾಂತವು ಎಲ್ಲಾ ರೀತಿಯಿಂದಲೂ ಟೀಕೆಗಳಿಂದ ಮುಕ್ತವಾಗಿರಲಿಲ್ಲ. ರಾಮಾನುಜರು ಜಾತಿ ವ್ಯವಸ್ಥೆಯನ್ನು ಟೀಕಿಸಿದರೂ ಕೂಡ ಮೂಲತಃ ಧಾರ್ಮಿಕ ಪ್ರಭುತ್ವವನ್ನು ಒಪ್ಪಿಕೊಂಡಿದ್ದರು. ಪರಿಕಲ್ಪನೆಗಳು ಕೆಳಜಾತಿಗಳಲ್ಲಿ ಮೂಲಸ್ಥಿತಿಯನ್ನೆ ಮುಂದುವರಿಯುವಂತೆ ಮಾಡಿದವು. ಈ ರೀತಿಯ ಟೀಕೆಗಳಿದ್ದರೂ ಅವರ ತತ್ವಗಳಲ್ಲಿ ಕೆಳಜಾತಿಗಳಿಗೆ ಮತ್ತು ದಲಿತರಿಗೆ ಬಿಡುಗಡೆಯ (ಸಾಮಾಜಿಕ ಅಸಮತೋಲನ) ಹಾದಿಗಳಿದ್ದವು.[೫೯]

ಮಧ್ವರು ದ್ವೈತ ಸಿದ್ಧಾಂತದ ಸ್ಥಾಪಕರು. ಈ ಸಿದ್ಧಾಂತವು ವಿಶಿಷ್ಟಾದ್ವೈತದಂತೆ ವೇದಾಂತ ದರ್ಶನವನ್ನು ಅವಲಂಬಿಸಿಕೊಂಡು ಬೆಳೆಯಿತು. ಬ್ರಹ್ಮ ಜಿಜ್ಞಾಸೆಯೇ ಇವರ ಮೂಲ ಉದ್ದೇಶ. ಅದೇ ರೀತಿ ಮುಕ್ತಿಯನ್ನು ಹೊಂದುವುದು ಒಟ್ಟು ಸಿದ್ಧಾಂತದ ತಾತ್ಪರ್ಯ. ಮೋಕ್ಷವು ಜೀವನದಲ್ಲಿ ಅಂತಿಮವಾಗಿ ಅರಸಿ ಸಾಕ್ಷಾತ್ಕರಿಸಿಕೊಳ್ಳಬೇಕಾದದ್ದು ಎಂದು ಮಧ್ವರು ನಂಬುತ್ತಾರೆ. ಸಂಸಾರ ಯಾತನೆಗಳಿಂದ ಬಿಡುಗಡೆಯೇ ಮೋಕ್ಷ. ಇವೆಲ್ಲವುಗಳನ್ನು ಭಗವಂತನ ಅನುಗ್ರಹದಿಂದ ಪಡೆಯಲು ಸಾಧ್ಯ ಎಂದು ನಂಬಿದ್ದರು. ಜೀವಿಗಳು ಪರಸ್ಪರ ಭಿನ್ನರು ಮತ್ತು ಉಚ್ಚ ನೀಚವೆಂಬ ತಾರತಮ್ಯ ಉಳ್ಳವರು ಎನ್ನುವುದನ್ನು ಮೇಲಿನ ವರ್ಗೀಕರಣದಿಂದ ಸಾಬೀತುಪಡಿಸಲು ಮಧ್ವರು ಪ್ರಯತ್ನಿಸಿದರು. ಅದೇ ರೀತಿಯಾಗಿ ಉತ್ತಮ ಭಕ್ತಿಯಿಂದ ಎಲ್ಲರೂ ಮುಕ್ತಿಯನ್ನು ಪಡೆಯಲು ಸಾಧ್ಯ ಎನ್ನುವ ಸಂದೇಶವನ್ನು ನೀಡಿದರು. ಇದು ದ್ವೈತ ಮತದ ತಿರುಳು.[೬೦]

ಮಧ್ವರ ಕಲ್ಪನೆಯು ಶಂಕರ ಮತ್ತು ರಾಮಾನುಜರಿಂದ ಭಿನ್ನವಾಗಿ ಕಂಡುಬರುವುದಿಲ್ಲ. ಮಧ್ವರ ಪ್ರಕಾರ ಮೋಕ್ಷವೆಂದರೆ ಸಂಸಾರದ ಯಾತನೆಗಳಿಂದ ಬಿಡುಗಡೆ ಹೊಂದುವುದು. ಆದರೆ ಈ ಬಿಡುಗಡೆ ಭಗವಂತನ

ಕೃಪೆಯಿಂದ ಮಾತ್ರ ಸಾಧ್ಯ ಎನ್ನುವ ಮಾರ್ಗೋಪಾಯವನ್ನು ಸೂಚಿಸಿದರು. ಭಗವಂತನ ಕೃಪೆ ಸಿಗಬೇಕಾದರೆ ಅದು ಭಕ್ತಿಮಾರ್ಗದಿಂದ ಮಾತ್ರ ಸಾಧ್ಯ ಎನ್ನುವ ಎಚ್ಚರಿಕೆಯನ್ನು ನೀಡಿದರು. ಮಧ್ವರು ಮೋಕ್ಷದ ಕಲ್ಪನೆಯು ಮನುಷ್ಯ ಸ್ವಾತಂತ್ರ್ಯವನ್ನು ಮೊಟಕುಗೊಳಿಸಿ ಭಗವಂತನನ್ನು ಅವಲಂಬಿಸುವಂತೆ ಮಾಡಿತು. ಇದು ಧಾರ್ಮಿಕ ಪ್ರಭುತ್ವವನ್ನು ಇನ್ನಷ್ಟು ಗಟ್ಟಿಗೊಳಿಸಬಹುದೆ ವಿನಃ ಮಾನವನನ್ನು ವಿವಿಧ ದಾಸ್ಯಗಳಿಂದ ಬಿಡುಗಡೆಗೊಳಿಸಲು ಸಾಧ್ಯವಿಲ್ಲ. ಮಧ್ವರ ಧಾರ್ಮಿಕ ಚಿಂತನೆಗಳು ಬ್ರಾಹ್ಮಣ ಅಥವಾ ಪುರೋಹಿತವರ್ಗದ ನೆಲೆಯಲ್ಲಿಯೇ ರೂಪುಗೊಂಡಿರುವುದು ಇದರಿಂದ ಸ್ಪಷ್ಟವಾಗುತ್ತದೆ. ಭಕ್ತಿ ಸಿದ್ಧಾಂತಗಳಿಂದ ಪುನಃ ದಾಸ್ಯದ ಮನೋಭಾವನೆ, ಅಸಮಾನತೆ, ಶೋಷಣೆಗಳನ್ನು ಮುಂದುವರಿಯುವಂತೆ ಮಾಡಿದವು.[೧೧] ಇದರಿಂದ ಜನಸಮಾನ್ಯರಲ್ಲಿ ಆಶಾಭಾವನೆ ಮೂಡಿತೆ ವಿನಃ ಅವುಗಳಿಂದ ಯಾವುದೇ ರೀತಿಯೂ ಸಕಾರಾತ್ಮಾಕ ಬದಲಾವಣೆಗಳು ಕಂಡುಬರಲಿಲ್ಲ. ಹಲವು ಲೋಪದೋಷಗಳಿಂದ ಕೂಡಿದ ಈ ತತ್ವಗಳು ಮುಂದೆ ವಚನ ಚಳವಳಿಯ ಕಾಯಕ ಸಿದ್ಧಾಂತಕ್ಕೆ ನಾಂದಿಯಾದವು. ಆ ಮುಖಾಂತರ ಕೆಳಜಾತಿಗಳಿಗೆ ಮತ್ತು ದಲಿತರಿಗೆ ನೂತನ ಸಮಾಜದ ನಿರ್ಮಾಣಕ್ಕೆ ಕಾರಣೀಭೂತವಾಗತೊಡಗಿದವು. ಇಲ್ಲಿ ಗಮನಿಸಿದ ಚಿಂತೆಗಳೆಲ್ಲವೂ ಅಂದಿನ ಸಮಾಜದಲ್ಲಿ 'ಭಕ್ತಿ'ಯ ಪ್ರಾಧಾನ್ಯತೆಯನ್ನು ಎತ್ತಿತೋರಿಸುತ್ತವೆ.

### ೩.೨.೩. ವಚನ ಚಳವಳಿ

ಕರ್ನಾಟಕದ ಉತ್ತರ ಭಾಗದಲ್ಲಿ ವಚನ ಆಂದೋಲನ ಒಂದೇ ಬಾರಿಗೆ ಹುಟ್ಟಿಕೊಂಡಿದ್ದಲ್ಲ. ಆಂದೋಲನ ನಡೆಯುವುದಕ್ಕಿಂತ ಮುಂಚೆ ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಅನೇಕ ಪಂಥಗಳು, ಚಳವಳಿಗಳ ಪ್ರಭಾವ, ರಾಜಕೀಯ, ಸಾಮಾಜಿಕ, ಧಾರ್ಮಿಕ ಮತ್ತು ಆರ್ಥಿಕ ಕಾರಣಗಳು ಇದಕ್ಕೆ ಪ್ರಭಾವ ಬೀರಿವೆ. ಕಟ್ಟುನಿಟ್ಟಾದ ಸಾಮಾಜಿಕ ಸಂಪ್ರದಾಯ, ಮಡಿ ಮೈಲಿಗೆಗಳನ್ನು ಆಚರಣೆ ಮಾಡುತ್ತಿದ್ದ ಅಂದು ಬ್ರಾಹ್ಮಣ್ಯತ್ವವನ್ನು ನಿರಾಕರಿಸಿ ತನ್ನದೇ ಆದ ಹೊಸ ಆಂದೋಲನವನ್ನೇ ಹುಟ್ಟಿಹಾಕಲು ಕಾರಣೀಭೂತನಾದ ವ್ಯಕ್ತಿಗಳಲ್ಲಿ ಬಸವಣ್ಣ ಒಬ್ಬ. ನಾವು ಈಗಾಗಲೆ ಗಮನಿಸಿದಂತೆ ಭಕ್ತಿ ಚಳವಳಿಗಳು ವಚನ ಚಳವಳಿಗಿಂತ ಪೂರ್ವದಲ್ಲಿ ನಡೆದಿರುವುದನ್ನು ಗಮನಿಸಿದ್ದೇವೆ.

ವಚನ ಆಂದೋಲನದ ಸ್ವರೂಪವನ್ನು ಗ್ರಹಿಸಬೇಕಾದರೆ ಅಂದಿನ ರಾಜಕೀಯ ಆಯಾಮಗಳನ್ನು ಕುರಿತು ಹೇಳದಿದ್ದರೆ ಅಪೂರ್ಣವೆನಿಸುತ್ತದೆ. ಯಾವುದೇ ಚಳವಳಿ, ಕ್ರಾಂತಿಗೆ ಪ್ರಭುತ್ವದ ಕಾರ್ಯಚಟುವಟಿಕೆಗಳು ನೇರ ಕಾರಣವಾಗುತ್ತವೆ ಎಂಬುದನ್ನು ಮತ್ತೆ ಹೇಳಬೇಕಾಗಿಲ್ಲ. ಕರ್ನಾಟಕದ ಮಟ್ಟಿಗೆ ಹೇಳುವುದಾದರೆ ಕಲ್ಯಾಣದ ಕಲಚೂರರ ಪೂರ್ವದಲ್ಲಿ ಚಾಲುಕ್ಯರ ೬ನೇ ವಿಕ್ರಮಾದಿತ್ಯನ ಕಾಲಾವಧಿಯು ರಾಜಕೀಯವಾಗಿ ವೈಭವದ ಕಾರ್ಯಚಟುವಟಿಕೆಗಳು ಮುಂದೆ ಜನತೆಯ ಆಶೋತ್ತರಗಳಿಗೆ ಭಂಗವನ್ನುಂಟು ಮಾಡಿದವು. ಆ ಸಂದರ್ಭದಲ್ಲಿ ಸಾಕಷ್ಟು ಅಗ್ರಹಾರಗಳು ನಿರ್ಮಾಣವಾದದ್ದು ಅವನ ಕಾಲದಲ್ಲಿ ಎದ್ದು ಕಾಣುವ ಸಂಗತಿ. ಬ್ರಾಹ್ಮಣರಿಗೆ ಉದಾರವಾಗಿ ದತ್ತಿಗಳು, ಅವರ ಕೈಗೆ ಅಧಿಕಾರ ಸೂತ್ರಗಳು ಹೋದದು, ಮಧುಸೂತನ ಅನಂತಪಾಲರಂತಹ ಪ್ರಬಲ ದಂಡನಾಯಕರು ಬ್ರಾಹ್ಮಣರಾಗಿದ್ದು ಶಾಸನಗಳಿಂದ ತಿಳಿದುಬರುವ ಸಂಗತಿಗಳು. ಜಾತಿಗಳಲ್ಲಿ ಯಾವುದೇ ಒಂದು ವರ್ಗಕ್ಕೆ ಸಲ್ಲುವ ಹೆಚ್ಚಿನ ಸೌಲಭ್ಯಗಳು ಇನ್ನುಳಿದ ವರ್ಗಗಳ ಶೋಷಣೆಯನ್ನು

ಉಂಟುಮಾಡುತ್ತವೆ. ತದನಂತರ ಕಳಚೂರರ ಆಳ್ವಿಕೆಯ ಕಾಲದಲ್ಲಿ ಈ ರೀತಿಯ ಚಟುವಟಿಕೆಗಳು ಮಿತಿಮೀರಿ ಹೋಗಿದ್ದವು.[೬೨] ಸಮಾಜವು ನೈತಿಕ ಅಧಃಪತನವನ್ನೆ ಕಾಣತೊಡಗಿತು. ಜನಸಾಮಾನ್ಯರು ಯಾವುದೇ ರೀತಿಯ ಹಕ್ಕು ಭಾದ್ಯತೆಗಳನ್ನು ಕೇಳುವ ಪರಿಸ್ಥಿತಿ ದೂರವಾಗಿತ್ತು. ವಚನ ಚಳವಳಿಯ ಪರಿಣಾಮವಾಗಿ ವಚನಕಾರರು ಅಂದಿನ ರಾಜಕೀಯ ಕ್ರೌರ್ಯಗಳನ್ನು ಪ್ರತಿಭಟಿಸಿದರು.

ಕಲ್ಯಾಣದ ಶಿವಶರಣರು ನಡೆಸಿದ ವಚನ ಚಳುವಳಿ ಕನ್ನಡ ನೆಲದ ಮೇಲೆ ನಡೆದ ಪ್ರಥಮ ಸಮಾಜೋಧಾರ್ಮಿಕ ಆಂದೋಲನವಾಗಿದೆ. ಜನಸಾಮಾನ್ಯರಿಗೆ ಅರಿವನ್ನು ಮೂಡಿಸಿದ್ದು ಪ್ರಾಂತೀಯ ಭಾಷೆಯಾದ ಕನ್ನಡದಲ್ಲಿ. ಬಸವಪೂರ್ವಯುಗವೆಂದು ಕರ್ನಾಟಕದ ಇತಿಹಾಸದಲ್ಲಿ ಪತನ ವೈಭವದ ಕಾಲವಾಗಿದ್ದಿತು. ಅಂದು ರಾಜಸತ್ತೆ, ಮತಸತ್ತೆಗಳು ಸಮಾಜವನ್ನು ನಿಯಂತ್ರಿಸುವ ಶಕ್ತಿಯಾಗಿದ್ದವು. ರಾಜಸತ್ತೆಯ ಪೋಷಣೆಗಾಗಿ ಯುದ್ಧದಲ್ಲಿ ತೊಡಗುವುದು, ಸುಂಕ ತೆರುವುದಕ್ಕಾಗಿ ದುಡಿಯುವುದು ಅಂದಿನ ಪ್ರಜೆಗಳ ಸ್ಥಿತಿಯಾಗಿದ್ದಿತು. ಈ ರಾಜಸತ್ತೆಗೆ ಪೂರಕವಾಗಿ ಮತಸತ್ತೆಯಲ್ಲಿ ಪ್ರತಿಷ್ಠಿತ ಧರ್ಮಗಳ ಆಡಂಬರಗಳು, ಜನಪದ ಧರ್ಮಗಳು, ಕ್ರೂರ ಆಚರಣೆಗಳು ಉಲ್ಬಣಗೊಂಡವು. ಸಮಾಜದಲ್ಲಿ *ರಾಜವರ್ಗ, ಪ್ರಜಾವರ್ಗ, ಪುರೋಹಿತವರ್ಗ, ಭಕ್ತವರ್ಗ, ಪುರುಷವರ್ಗ, ಸ್ತ್ರೀವರ್ಗಗಳೆಂಬ* ಸೀಳು ತಲೆದೋರಿ, ಒಂದು ಇನ್ನೊಂದನ್ನು ಶೋಷಿಸುವಲ್ಲಿ ಜೀವನ ವ್ಯವಸ್ಥೆಯ ಸಮತೋಲನ ತಪ್ಪಿಹೋಯಿತು.[೬೩] ಬಸವಣ್ಣ ಹುಟ್ಟುವ ಹೊತ್ತಿಗೆ ಕರ್ನಾಟಕ ಧಾರ್ಮಿಕ ಕ್ಷೇತ್ರದಲ್ಲಿ ಅಗ್ರಹಾರ ಸಂಸ್ಕೃತಿ, ದೇವಾಲಯ ಸಂಸ್ಕೃತಿಗಳು ಆಳುತ್ತಲಿದ್ದವು. ಅಗ್ರಹಾರ ಸಂಸ್ಕೃತಿಯು ಮೂಲತಃ ಧಾರ್ಮಿಕವಾಗಿ ಕರ್ಮನಿಷ್ಠ, ಸಾಮಾಜಿಕ ವರ್ಣಭೇದನಿಷ್ಠವಾದುದು. ಈಗ ದೇವಾಲಯ ಸಂಸ್ಕೃತಿ ದಾರಿಗೆ ಇದೇ ಹೊರಳಿದ್ದರೂ ಮೂಲತಃ ಅದು ಧಾರ್ಮಿಕವಾಗಿ ಭಕ್ತಿನಿಷ್ಠ, ಸಾಮಾಜಿಕವಾಗಿ ವರ್ಣಭೇದ ನಿರಾಕರಣನಿಷ್ಠವಾದುದು. ಹೀಗಾಗಿ ಬಸವಣ್ಣ ಮತ್ತು ಆತನ ಹಿಂಬಾಲಕರು ಸ್ಥಗಿತ ಮೌಲ್ಯದ ಅಗ್ರಹಾರ ಸಂಸ್ಕೃತಿಯನ್ನು ತೊರೆದು ಚಲನಶೀಲ ಮೌಲ್ಯಕ್ಕೆ ಬಂದರು.[೬೪] ಬಿಜ್ಜಳನು ಚಾಲುಕ್ಯ ಸಿಂಹಾಸನವನ್ನು ವಶಪಡಿಸಿಕೊಂಡು ಕಲ್ಯಾಣದ ಚಕ್ರವರ್ತಿಯಾಗಲು ಬಸವನೂ ತನ್ನ ಪ್ರಭುವಿನೊಂದಿಗೆ ನೂತನ ರಾಜಧಾನಿಗೆ ತೆರಳಿದನು. ಈಗ ಕಲ್ಯಾಣವು ಆಂದೋಲನದ ಕೇಂದ್ರವಾಯಿತು. ಬಿಜ್ಜಳನಿಗೂ ಮತ್ತು ಬಸವನಿಗೆ ಭಿನ್ನಾಭಿಪ್ರಾಯ ಬೆಳೆದುದು, ಊಟ ಮಾಡಿದುದು ತೀವ್ರ ಖಂಡನೆಗೆ ಗುರಿಯಾಯಿತು. ಮಧುವಯ್ಯ ಎಂಬ ಬ್ರಾಹ್ಮಣನ ಮಗಳಿಗೂ ಅಸ್ಪೃಶ್ಯನಾದ ಹರಳಯ್ಯನ ಮಗನಿಗೂ ನಡುವೆ ಅಂತರ್ಜಾತೀಯ ವಿವಾಹ ನಡೆಯಿತು. ಇದಕ್ಕೆ ಬಸವನ ಮತ್ತು ಅವನ ಹಿಂಬಾಲಕರ ಆಶೀರ್ವಾದವಿತ್ತು. ಇದು ಧರ್ಮಶಾಸ್ತ್ರಕಾರರು ನಿಷೇಧಿಸಿದ್ದ ಪ್ರತಿಲೋಮವಿವಾಹ. ಬಿಜ್ಜಳನು ಇವರಿಗೆ ಶಿಕ್ಷೆ ನೀಡಿದ. ಬಸವನು ಸ್ಥಾಪಿತವಾಗಿರುವ ವ್ಯವಸ್ಥೆಯನ್ನು ಮುರಿಯುವುದರಿಂದ ಸಮಾಜಕ್ಕೆ ಲಾಭ ಮತ್ತು ಶಾಂತಿಯಿದೆ ಎಂದು ನಂಬಿದವನು.[೬೫] ಮೂಢನಂಬಿಕೆಗಳು, ಅಸ್ಪೃಶ್ಯತೆ, ಮೇಲುಕೀಳು, ವರ್ಣಭೇದ ನೀತಿ, ಬಲಾಢ್ಯ ಶಕ್ತಿಗಳ ದೌರ್ಜನ್ಯ, ಸಾಮಾಜಿಕ ಬಹಿಷ್ಕಾರದಂತಹ ಕ್ರೂರ ಪದ್ಧತಿಗಳು ಇಡೀ ಸಮಾಜವನ್ನು ತಲ್ಲಣಗೊಳಿಸಿದ್ದವು. ಅವುಗಳನ್ನು ಹೇಗಾದರೂ ಮಾಡಿ ಸಮಾಜದಿಂದ ಕಿತ್ತೊಗೆಯಲು ಆಂದೋಲನ ಯತ್ನಿಸಿತು.

ಚಳವಳಿಯನ್ನು ಆರ್ಥಿಕ ಹಿನ್ನೆಲೆಯಲ್ಲಿ ಗಮನಿಸುವುದಾದರೆ ಅಂದು ಸಮಾಜದಲ್ಲಿ ತಾಂಡವಾಡುತ್ತಿದ್ದ ಭೂಮಾಲೀಕ ರೈತಾಪಿವರ್ಗದ ನಡುವೆ ಪ್ರತಿಭಟನೆಯ ಧ್ವನಿಗಳು ಪ್ರಮುಖವಾಗಿವೆ. ಪರಿಣಾಮವಾಗಿ ಚರಿತ್ರೆಕಾರರ ಅಧ್ಯಯನಗಳನ್ನು ಈ ನಿಟ್ಟಿನಲ್ಲಿ ಗಮನಿಸುವುದು ಸೂಕ್ತವೆನಿಸುತ್ತದೆ. ಈ ಕುರಿತಂತೆ ಆರ್.ಎನ್. ನಂದಿ ಅವರ ಅಧ್ಯಯನಗಳು ಗಮನಾರ್ಹವಾಗಿವೆ. ಆಂದೋಲನವು ಮುಖ್ಯವಾಗಿ ನಗರಕೇಂದ್ರಿತವಾಯಿತು. ವರ್ತಕ ಜನಾಂಗಗಳಿಂದಲೂ (ಜಂಗಮರು ಮತ್ತು ಪಂಚಮಸಾಲಿಗಳೊಂದಿಗೆ) ವಿವಿಧ ರೈತಾಪಿವರ್ಗ ಹಾಗೂ ಕುಶಲಕರ್ಮಿಗಳ ವರ್ಗಗಳಿಂದಲೂ ಬೆಂಬಲ ಪಡೆಯಿತು. ಇವರಿಗೆ ಪಂಚಮಸಾಲಿಗಳಲ್ಲದವರು ಎಂದು ಹೆಸರಿತ್ತು. ಉತ್ತರ ಕರ್ನಾಟಕದಲ್ಲಿ ಬೆಳೆಯುತ್ತಿದ್ದ ವ್ಯಾಪಾರ, ಅದನ್ನು ಕುದುರಿಸುವ ನಗರಕೇಂದ್ರಗಳು ಮತ್ತು ೧೦ ಹಾಗೂ ೧೩ನೇ ಶತಮಾನದ ನಡುವೆ ಬೆಳೆಯುತ್ತಿದ್ದ ಮಾರುಕಟ್ಟೆಯ ಆರ್ಥಿಕ ಸ್ವರೂಪವು ವರ್ತಕ ಮತ್ತು ಕೃಷಿ ವರ್ಗಗಳ ಪ್ರಾಮುಖ್ಯತೆಯನ್ನು ಹೆಚ್ಚಿಸಿದವು.[೬೬] ಅವರ ಹಿತಾಸಕ್ತಿಗಳು ಹಿಂದಿನ ಜಮೀನ್ದಾರ ವರ್ಗದ ಹಿತಾಸಕ್ತಿಗಳಿಗೂ ಸಂಘರ್ಷ ಉಂಟಾಯಿತು, ಭೂಮಿಯನ್ನು ಹೊಂದಿದ್ದ ಆನುವಂಶಿಕ ಮಧ್ಯವರ್ತಿಗಳು ಮತ್ತು ಮುಖ್ಯ ಉದ್ಯಮಗಳು ಭಾರೀ ಪ್ರಮಾಣದ ಭೂಮಿಯನ್ನು ಇತರ ಸವಲತ್ತುಗಳನ್ನು ಪಡೆದಿದ್ದು ಉತ್ಪಾದಕರ, ಕುಶಲಕರ್ಮಿಗಳ ಮತ್ತು ವರ್ತಕರ ಹಿತಗಳಿಗೆ ಹೊಂದಿಕೊಳ್ಳದಾದವು. ೧೦ರಿಂದ ೧೩ನೇ ಶತಮಾನಗಳ ನಡುವೆ ವಾಣಿಜ್ಯ ಮತ್ತು ಆರ್ಥಿಕ ವ್ಯವಹಾರವು ವಿಸ್ತಾರಗೊಂಡುದರಿಂದ ಅವರ ಸ್ಥಾನಮಾನಗಳು ಉತ್ತಮಗೊಂಡಿದ್ದವು. ಜೊತೆಗೆ ಹೊಲಗದ್ದೆಗಳ ಹಾಗೂ ಉದ್ಯಮಗಳ ಕೆಲಸಗಾರರನ್ನು ಗುಲಾಮರಂತೆ ನಡೆಸಿಕೊಳ್ಳುತ್ತಿದ್ದುದರ ಜೊತೆಗೆ ಭೂಮಾಲೀಕರಾಗಿದ್ದ ಗಣ್ಯಜನರು ಕೃಷಿಭೂಮಿಯ ಬಹುಭಾಗವನ್ನು ಅನುತ್ಪಾದಕ ವಿಷಯಗಳಿಗೆ ತಿರುಗಿಸಿದ್ದರು.[೬೭] ಗಣನೀಯ ಕೃಷಿ ಮತ್ತು ಉದ್ಯಮ ಕಾರ್ಮಿಕವರ್ಗವನ್ನು ದಾಸ್ಯಕ್ಕೆ ನೂಕಿದ್ದ ದೇವಾಲಯಗಳು ಹಾಗೂ ಸಾಂಪ್ರದಾಯಿಕ ಬ್ರಾಹ್ಮಣಧರ್ಮ ಇವು ವರ್ತಕರಲ್ಲಿ, ಉತ್ಪಾದಕ ವರ್ಗದಲ್ಲಿ ಜನಪ್ರಿಯತೆ ಕಳೆದುಕೊಂಡವು. ಇದರಿಂದ ಅವರು ಸಮಾಜದಿಂದ ಸಿಡಿದು ಬೇರೆಯೇ ಆದ ನೂತನ ಸಮಾಜ ವ್ಯವಸ್ಥೆಯೊಂದನ್ನು ರೂಪಿಸಿಕೊಂಡರು. ಮೇಲಿನ ಆರ್ಥಿಕ ಭಿನ್ನ ಆಯಾಮಗಳು ಆಂದೋಲನ ಏರ್ಪಡುವುದಕ್ಕೆ ಪ್ರಮುಖ ಕಾರಣಗಳಲ್ಲಿ ಒಂದಾಗಿದೆ ಎಂಬುದನ್ನು ಅರ್ಥೈಸಬಹುದಾಗಿದೆ. ಯಾವುದೇ ಚಳವಳಿ ಅಥವಾ ಸಾಮಾಜಿಕ ಪರಿಸ್ಥಿತಿಯ ಭಿನ್ನ ನೋಟಗಳನ್ನು ಆರ್ಥಿಕ ಆಯಾಮಗಳಿಂದ ವಿಶ್ಲೇಷಿಸುವುದರಿಂದ ಅದರ ಮೂಲ ಕಾರಣಗಳನ್ನು ಹುಡುಕಲು ಗಮನಿಸಿದಂತಾಗುತ್ತದೆ. ಜೊತೆಗೆ ಚಳವಳಿಯ ಕಾರಣ ಮತ್ತು ಪರಿಣಾಮಗಳನ್ನು ಏಕಮುಖತೆಗೆ ಬದಲಾಗಿ ಬಹುಮುಖ ಹಿನ್ನೆಲೆಯಲ್ಲಿ ಅಧ್ಯಯನ ಮಾಡಲು ಸಹಾಯಕವಾಗುತ್ತದೆ. 'ವಚನ' ಎಂದರೆ ಸಂಸ್ಕೃತದಲ್ಲಿ ಮಾತು, ಮಾತನಾಡುವುದು, ವ್ಯಕ್ತಪಡಿಸುವುದು ಇತ್ಯಾದಿ ಅರ್ಥಗಳಿವೆ.[೬೮] ಕನ್ನಡದಲ್ಲಿ 'ವಚನ' ಎನ್ನುವ ಮಾತಿಗೆ ಗದ್ಯ ಅರ್ಥವೂ ಬಹು ಹಿಂದಿನಿಂದಲೂ ರೂಢಿಯಾಗಿದೆ.

ಕರ್ನಾಟಕದ ಚರಿತ್ರೆಯಲ್ಲಿ ಹೆಚ್ಚು ಚರ್ಚೆಗೆ ಗ್ರಾಸವಾದ ಕಾಲಘಟ್ಟವೆಂದರೆ ೧೨ನೇ ಶತಮಾನ. ಈ ಅವಧಿಯಲ್ಲಿ ಸಮಾಜದ ಎಲ್ಲಾ ಸ್ತರದ ಜನರು ವಚನಗಳಲ್ಲಿ ರಚನೆ ಮಾಡಿದರಲ್ಲದೆ ಆ ಮೂಲಕ ಸಮಾಜದ ಅನಿಷ್ಟ ಪದ್ಧತಿಗಳು ಮತ್ತು ಶೋಷಣೆಯ ವಿರುದ್ಧ ಪ್ರತಿಭಟಿಸಿದರು. ಜಡ್ಡುಗಟ್ಟಿದ ಸಮಾಜವನ್ನು ಬದಲಾವಣೆಯ

ಪ್ರಯತ್ನಕ್ಕೆ ತರಲು ಕಾರಣರಾದರು. ರಾಜಶಾಹಿ, ಪುರೋಹಿತಶಾಹಿ, ಅಧಿಕಾರಶಾಹಿ ಜೊತೆಗೆ ಮೇಲುಕೀಳು, ಜಾತಿ ತಾರತಮ್ಯ, ಧಾರ್ಮಿಕ ಮತಾಂಧಗಳು ಸಮಾಜದಲ್ಲಿ ಮುಂಚೂಣಿಯಲ್ಲಿದ್ದವು. ಅವುಗಳನ್ನು ಕಿತ್ತುಹಾಕುವುದಲ್ಲದೆ, ಸ್ಥಾಪಿತವಾದ ಮೌಲ್ಯಗಳ ವಿರುದ್ಧ ನೂತನ ಸಾಮಾಜಿಕ ಬದಲಾವಣೆಗಳನ್ನು ಸಮಾಜ ಅಂದು ಬಯಸುತ್ತಿತ್ತು. ಅಂತಹ ಸಂದರ್ಭದಲ್ಲಿ ಕರ್ನಾಟಕದಲ್ಲಿ ಬಸವಣ್ಣನ ನೇತೃತ್ವದಲ್ಲಿ ಆಂದೋಲನವೇ ಪ್ರಾರಂಭವಾಯಿತು.[೧೯] ಬಹುಪಾಲು ಕೆಳಜಾತಿಗಳಿಗೆ ಸೇರಿದ ಶರಣರು ಆಂದೋಲನದ ಪ್ರಮುಖ ರೂವಾರಿಗಳಾದರು. ಶರಣ ಧರ್ಮಕ್ಕೆ ಸೇರಿದ ತರುವಾಯ ಶರಣರು ಎರಡು ಗುಂಪುಗಳನ್ನು ಗುರುತಿಸಿದರು. ಭಕ್ತರು ಮತ್ತು ಭಕ್ತರಲ್ಲದವರು. ಅಂದಿನ ಸಾಮಾಜಿಕ ವೈರುಧ್ಯಗಳನ್ನು ಗುರುತಿಸುವ ಸಂದರ್ಭದಲ್ಲಿ ಆಹಾರ ಪದ್ಧತಿ, ವಿವಾಹ, ಕೊಡುಕೊಳ್ಳುವಿಕೆ, ಅಸ್ಪೃಶ್ಯತೆ, ಜಮೀನುದಾರರ ದಬ್ಬಾಳಿಕೆ ಮುಂತಾದ ಆಯಾಮಗಳಲ್ಲಿ ಅಂದಿನ ಸಾಮಾಜಿಕ ಪರಿಸ್ಥಿತಿಯ ವಾಸ್ತವಿಕ ಜೀವನವನ್ನು ವಚನಗಳ ಮುಖಾಂತರ ಮನಗಾಣಬಹುದು.

ಹಿಂದೆ ಗಮನಿಸಿದಂತೆ ತಮಿಳಿನ ಶೈವ ಭಕ್ತಿಪಂಥದಲ್ಲಿ ಕಾಣಿಸಿಕೊಳ್ಳುವ ಅರವತ್ಮೂರು ನಾಯನಾರ್‌ಗಳಲ್ಲಿ ಎಲ್ಲಾ ಜಾತಿಯ ಜನತೆ ಸೇರಿದಂತೆ, ಇಲ್ಲಿಯು ಸಹ *ಮಡಿವಾಳ, ಅಂಬಿಗ, ಹೊಲೆಯ, ಮಾದಿಗ, ಬೇಟೆಗಾರ, ಬೆಸ್ತ, ಕುಂಬಾರ, ಡೋಹರ* ಮತ್ತು *ಬ್ರಾಹ್ಮಣ* ಜಾತಿಗಳಿಗೆ ಸೇರಿದ ಶರಣರು ವಚನಗಳನ್ನು ರಚಿಸಿರುವುದನ್ನು ಕಂಡುಬರುತ್ತದೆ. ಕೇವಲ ಪುರುಷಪ್ರಧಾನವಾದ ಸಂಗತಿಗಳು ಮಾತ್ರವಲ್ಲದೆ ಅಂದು ಉಗ್ರರೂಪದ ಪ್ರತಿಭಟನೆಗಳು ದಲಿತ ವರ್ಗದ ಶರಣೆಯರಲ್ಲಿ ಸಹ ಕಾಣಬಹುದು. ಕನ್ನಡ ಮತ್ತು ಸಂಸ್ಕೃತ ಎರಡು ಭಾಷೆಗಳಲ್ಲಿ ಪ್ರಾವಿಣ್ಯತೆಯನ್ನು ಪಡೆದಿದ್ದರು ಎಂದು ಹೇಳುವುದರಲ್ಲಿ ಅಂದಿನ ವಾಸ್ತವಿಕ ಬದುಕನ್ನು ಅರ್ಥೈಸಬಹುದಾಗಿದೆ. ಸಾಮಾಜಿಕ ನೆಲೆಯ ಬೇರೆ ಬೇರೆ ಸ್ತರಗಳಿಂದ ಬರುವ ಅಮ್ಮಿದೇವಯ್ಯನು *ಕ್ಷೌರಿಕ;* ಮಾರಿತಂದೆ ಮೂಲತಃ ಕನ್ನಕೊರೆದು ಕಳ್ಳತನ ಮಾಡುತ್ತಿದ್ದವನು; ಕಣ್ಣಪ್ಪ ಗಾಳಹಾಕಿ ಮೀನು ಹಿಡಿಯುವವನು, ಭೀಮಣ್ಣ ಮತ್ತು ರಾಮಣ್ಣ *ಗೋವಲಿಗರು,* ಕಲಕೇತಯ್ಯ ಓರ್ವ ಜಾನಪದ ಕಲಾವಿದ, ಕಿನ್ನರಿ ಬ್ರಹ್ಮಯ್ಯ ಕಿನ್ನರಿ ನುಡಿಸುತ್ತಿದ್ದ ಓರ್ವ ಕಲಾವಿದ, ಡಕ್ಕೆಯ ಬೊಮ್ಮಣ್ಣನು ಮೂಲತಃ ಢಕ್ಕೆಯನ್ನು ಬಾರಿಸುತ್ತ ಮೊರದಲ್ಲಿ ಮಾರಿಯನ್ನಿಟ್ಟು ಕುಣಿಸುವವನು. ನುಲಿಯ ಚಂದಯ್ಯ ಹುಲ್ಲನ್ನು ತಂದು ಹಗ್ಗವನ್ನಾಗಿ ಹೊಸೆದು ಮಾರಿ ಜೀವಿಸುವವನು. ಕಾಮಿದೇವಯ್ಯ ಊರನ್ನು ಕಾಯುವ ತಳವಾರ ಕಾಯಕದವನು.[೨೦] ಇವರೆಲ್ಲರು ಶೂದ್ರ ಲೋಕದಿಂದ ನೋವುನಲಿವುಗಳನ್ನು ಅನುಭವಿಸಿ ಬಂದವರು.

೧೨ನೇ ಶತಮಾನದಲ್ಲಿ ಕರ್ನಾಟಕದಲ್ಲಿ ಉಂಟಾದ ಸಾಮಾಜಿಕ ಕ್ರಾಂತಿಯಲ್ಲಿ ಸಮಾಜದ ಎಲ್ಲಾ ಸ್ತರದ ಜನತೆ ತಮ್ಮ ವಚನಗಳ ಮುಖಾಂತರ ಪ್ರತಿಭಟಿಸುವುದರ ಜೊತೆಗೆ ಸ್ಥಾಪಿತ ಮೌಲ್ಯದ ವಿರುದ್ಧ ಮಾತನಾಡಿದರು. ದಲಿತ ಲೋಕದಿಂದ ಬಂದ ಶರಣರಲ್ಲಿ *ಮಾದಾರ ಚೆನ್ನಯ್ಯ, ಡೋಹಾರ ಕಕ್ಕಯ್ಯ, ಕೆಂಬಾವಿ ಭೋಗಯ್ಯ, ಮಾರುಡಿಗೆ ನಾಚಯ್ಯ, ಮಾದಾರ ಧೂಳಯ್ಯ, ಮಡಿವಾಳ ಮಾಚಯ್ಯ, ಮೇದರ ಕೇತಯ್ಯ, ಗಾಳದ ಕಣ್ಣಯ್ಯ, ಉರಿಲಿಂಗಪೆದ್ದಿ* ಮುಂತಾದವರು ವಚನ ಸಾಹಿತ್ಯದ ಮುಖಾಂತರ ಸಮಾಜದ ತಾರತಮ್ಯ ನೀತಿಗಳ ವಿರುದ್ಧ ಮಾತನಾಡತೊಡಗಿದರು. ಸಾಹಿತ್ಯವು ಪುರುಷ ಪ್ರಧಾನ ಮಾತ್ರವಾಗದೆ ಸ್ತ್ರೀಯರ ಪಾತ್ರವು ಅಷ್ಟೇ ಪ್ರಮುಖವಾಗಿದ್ದಿತು.

ಅಂದು ಬಹುತೇಕ ಶೋಷಣೆ ಪ್ರಕ್ರಿಯೆಗೆ ಹೆಚ್ಚು ಒಳಪಡುತ್ತಿದ್ದವರು ಕೆಳಜಾತಿಗಳ ಸ್ತ್ರೀಯರು ಎಂಬುದು ಸರ್ವವಿದಿತ. ಉರಿಲಿಂಗಪೆದ್ದಿಯ ಪತ್ನಿಯಾದ *ಕಾಳವ್ವೆ, ಸೂಳೆ ಸಂಕವ್ವೆ, ಪುಣ್ಯಸ್ತ್ರೀ ಗಂಗಮ್ಮ, ಪುಣ್ಯಸ್ತ್ರೀ ಲಿಂಗಮ್ಮ, ಬಾಚಿಕಾಯಕದ ಬಸವಯ್ಯಗಳ ಪುಣ್ಯಸ್ತ್ರೀ ಕಾಳವ್ವೆ, ವರದಾನಿ ಗುಡ್ಡವ್ವೆ,, ದುಗ್ಗಳೆ, ಕೇತಲದೇವಿ (ಕುಂಬಾರ ಗುಂಡಯ್ಯನ ಪತ್ನಿ), ಲಕ್ಕಮ್ಮ, ಗೊಗ್ಗವ್ವೆ, ಕಾಲಕಣ್ಣಿಯ ಕಾಮಮ್ಮ*[೬೧] ಮುಂತಾದವರು ಸಮಾಜದಲ್ಲಿ ನಡೆಯುತ್ತಿದ್ದ ಅನ್ಯಾಯ ಅಕ್ರಮಗಳ ವಿರುದ್ಧ ಸಾಹಿತ್ಯದ ಮುಖಾಂತರ ಧ್ವನಿ ಎತ್ತಿದವರು. ವಿದ್ವತ್ ಪ್ರಪಂಚ ಬೆರಗಾಗುವಂತೆ ಕನ್ನಡ ಮತ್ತು ಸಂಸ್ಕೃತದಲ್ಲಿ ವಚನಗಳನ್ನು ರಚಿಸುವುದರ ಮುಖಾಂತರ ಮೇಲ್ಜಾತಿಗಳಿಗೆ ಎಲ್ಲಾ ರೀತಿಯಿಂದಲೂ ಸರಿಸಾಟಿಯಾಗಬಲ್ಲರು. ಆದರೆ ಸಮಾಜ ಅವರನ್ನು ನೋಡುವ ದೃಷ್ಟಿಕೋನವೇ ಬೇರೆಯಾಗಿತ್ತು.

ಕರ್ನಾಟಕದಲ್ಲಿ ಕಲ್ಯಾಣ ಕಲಚೂರರ ಆಳ್ವಿಕೆಯ ಕಾಲಕಾಲಕ್ಕಾಗಲೇ ಸಮಾಜದ ಸರ್ವಕ್ಷೇತ್ರಗಳಲ್ಲಿ ಅರಾಜಕತೆಯು ತಾಂಡವಾಡುತ್ತಿತ್ತು. ದಿನದಿಂದ ದಿನಕ್ಕೆ ಸಾಂಸ್ಕೃತಿಕ ಬಿಕ್ಕಟ್ಟುಗಳು ವ್ಯವಸ್ಥೆಯ ಭಾಗವಾಗಿ ಮುಂದುವರಿಯುತ್ತಿದ್ದವು. ಈಗಾಗಲೇ ಸಮಾಜದಲ್ಲಿ ಭದ್ರವಾಗಿ ಬೇರೂರಿದ್ದ ಅಥವಾ ರೂಢಿಗತವಾದ ಸ್ಥಾಪಿತ ಮೌಲ್ಯಗಳು ಸದಾ ಮುಂದುವರಿಯುವಂತೆ ನೋಡಿಕೊಳ್ಳಲಾಗುತ್ತಿತ್ತು. *ಪುರೋಹಿತಶಾಹಿ, ಅಗ್ರಹಾರ ಸಂಸ್ಕೃತಿ* ಮುಂತಾದ ವಿಷಯಗಳು ಜನಸಾಮಾನ್ಯರ ಬದುಕಿಗೆ ಕಂಟಕಪ್ರಾಯವಾಗಿದ್ದವು ಎಂದರೆ ತಪ್ಪಾಗಲಾರದು. ಇವೆಲ್ಲವುಗಳ ನಡುವೆ ಜನಸಾಮಾನ್ಯರು ಬದಲಾವಣೆಯ ಆಶೋತ್ತರಗಳಿಗೆ ಎದುರು ನೋಡುತ್ತಿದ್ದರು. ಆದರೆ ಈ ಬದಲಾವಣೆಯು ಕ್ರಾಂತಿ ಅಥವಾ ಚಳವಳಿ ಮೂಲಕ ಮಾತ್ರ ಸಾಧ್ಯವಿತ್ತು. ಆದರೆ ಅದು ಸುಲಭದ ಮಾತಾಗಿರಲಿಲ್ಲ. ವರ್ಣ, ಜಾತಿ, ಶ್ರೇಷ್ಠತೆ ಎಂಬ ಸ್ಥಾಪಿತ ಮೌಲ್ಯಗಳು ಇಡೀ ವ್ಯವಸ್ಥೆಯನ್ನೇ ನಿಯಂತ್ರಿಸುತ್ತಿದ್ದವು. ಇವೆಲ್ಲವುಗಳ ಹಿನ್ನೆಲೆಯಲ್ಲಿ ಬಸವಣ್ಣನ ನೇತೃತ್ವದಲ್ಲಿ ವಚನ ಆಂದೋಲನ ನಡೆದಿದ್ದು ಐತಿಹಾಸಿಕ ಸಂಗತಿ. ಅದಕ್ಕೆ ಒಂದು ವೇದಿಕೆ ನಿರ್ಮಾಣ ಮಾಡಿದ್ದು ಸ್ಪಷ್ಟವಾಗಿದೆ. ಬಸವಣ್ಣನ ನೇತೃತ್ವದ ವಚನಕಾರರ ಅಂದಿನ ಸಮಾಜದ ಕ್ರೂರ ಪದ್ಧತಿಗಳ ವಿರುದ್ಧ ಪ್ರತಿಭಟಿಸಿದರು, ಶ್ರೇಷ್ಠತೆ ಎಂಬುದನ್ನು ಹಲವು ನೆಲೆಗಳಿಂದ ತಿರಸ್ಕರಿಸಲಾಯಿತು. ಯಾವುದು ಶ್ರೇಷ್ಠತೆ, ಯಾರು ಶ್ರೇಷ್ಠರು ಎಂಬುದನ್ನು ವಚನಗಳ ಮೂಲಕ ಪ್ರಚುರಪಡಿಸಿದರು. ಹಾಗೆಯೇ ಬ್ರಾಹ್ಮಣ್ಯತೆಯ ಏಕಸ್ವಾಮ್ಯವನ್ನು ಹಲವು ನೆಲೆಗಳಿಂದ ತಿರಸ್ಕರಿಸಲಾಯಿತು.

*ವರ್ಣ, ಜಾತಿ* ಪದಗಳು ವಚನಕಾರರ ಮೇಲೆ ಪರಿಣಾಮ ಬೀರಿವೆ. ಪ್ರಾಚೀನ ಕಾಲದಲ್ಲಿ ವರ್ಣ ಸಂಕರಗಳ ಪ್ರಭಾವವಿದ್ದಂತೆ, ಮಧ್ಯಕಾಲೀನ ಸಂದರ್ಭದಲ್ಲಿ ಜಾತಿ ಸಂಕರಗಳ ಪ್ರಭಾವವಿದ್ದದ್ದನ್ನು ಗಮನಿಸಬಹುದು. ಅಂದರೆ ವರ್ಣದಿಂದ ಜಾತಿ ಸಂಕರಕ್ಕೆ ಪಲ್ಲಟ ಮತ್ತು ಜಾತಿಗಳ ಉತ್ಪತ್ತಿ ಅಥವಾ ವಿಭಜನೆ ಬೇರೆ ಬೇರೆ ಉದ್ಯೋಗಗಳಿಂದ ಎಂಬುದನ್ನು ಬಸವಣ್ಣ ತಿಳಿಸುತ್ತಾನೆ. ಹದಿನೆಂಟು ಜಾತಿಗಳಲ್ಲಿ ಒಂದೊಂದು ಜಾತಿಗೂ ಬೇರೆ ಬೇರೆ ಕಾಯಕ (ಉದ್ಯೋಗ)ವಿರುವುದನ್ನು ಕಾಯಕದ ಅಮ್ಮಿದೇವ ಗುರುತಿಸುತ್ತಾನೆ. ಜಾತಿಗಳಲ್ಲಿ ಉತ್ತಮವೆಂದು ಭಾವಿತವಾಗಿದ್ದ ಬ್ರಾಹ್ಮಣದ ವಿರುದ್ಧ ಅಪಮೌಲ್ಯೀಕರಣವನ್ನು ನೋಡುತ್ತೇವೆ. ಅಸ್ಪೃಶ್ಯನು ಬ್ರಾಹ್ಮಣನಿಗಿಂತ ಕೀಳಲ್ಲ ಎಂಬುದನ್ನು ಸಾರಿದರು. ಬಸವಣ್ಣನ ಪ್ರಕಾರ ವರ್ಣಗಳಿಗೆ ಗುರು ಶಿವಭಕ್ತರೇ

ಹೊರತು ಬ್ರಾಹ್ಮಣರಲ್ಲ, ಬ್ರಾಹ್ಮಣನೇ ಗುರು ಎಂಬುದು ಸುಳ್ಳು. ವೇದಶಾಸ್ತ್ರ ಪುರಾಣ ಆಗಮಗಳನ್ನು ಕರಗತ ಮಾಡಿಕೊಂಡ ಬ್ರಾಹ್ಮಣರು ಶ್ರೇಷ್ಠರೆಂಬ ಮಾತನ್ನು ಆಡಬೇಡಿ ಎನ್ನುತ್ತಾನೆ ಉರಿಲಿಂಗಪೆದ್ದಿ.[೨೮] ಜಾತಿವ್ಯವಸ್ಥೆ ಹುಟ್ಟುಹಾಕಿ, ತಮಗೆ ಉನ್ನತ ಸ್ಥಾನಮಾನವನ್ನು ದೊರಕಿಸಿಕೊಂಡ ವೈದಿಕರು ಸಮಾಜದಲ್ಲಿ ಅಸಮಾನತೆಯ ಸೃಷ್ಟಿಗೆ ನೇರ ಕಾರಣವಾಗಿದ್ದಾರೆ. ವರ್ಣವ್ಯವಸ್ಥೆಯ ಆಧಾರದ ಮೇಲೆ ಇತರ ವರ್ಣಗಳ ಜನರಿಗೆ ಹಂಚಿಕೆಯಾದ ಹಕ್ಕು ಅಧಿಕಾರಗಳು ಮತ್ತು ಶೂದ್ರರಿಗೆ ನಿಗದಿಯಾದ ಬಿಟ್ಟಿ ಕೆಲಸ ಇವುಗಳ ಉದ್ದೇಶವೇ ಅಸಮಾನತೆಯ ಪ್ರತಿಪಾದನೆಯಾಗಿತ್ತು. ವ್ಯವಸ್ಥೆಯ ಉನ್ನತ ಸ್ಥಾನದಲ್ಲಿದ್ದಂತಹವರ ವಿರುದ್ಧ ಬಸವಣ್ಣನ ವಚನವೊಂದು ಹೀಗಿದೆ.

> ಏನಯ್ಯ ವಿಪ್ರರು ನುಡಿದಂತೆ ನಡೆಯರು
> ಇದೆಂತಯ್ಯಾ ತಮಗೊಂದು ಬಟ್ಟೆ ಶಾಸ್ತ್ರಕ್ಕೊಂದು ಬಟ್ಟೆ
> ಕೂಡಲ ಸಂಗಮದೇವಯ್ಯ, ಹೊಲೆಯರ ಬಸುರಲ್ಲಿ ವಿಪ್ರರು
> ಹುಟ್ಟಿ ಗೋಮಾಂಸ ತಿಂದರೆಂಬುದಕ್ಕೆ ಇದೇ ಸಾಕ್ಷಿ[೨೯]

ಸಮಾಜದಲ್ಲಿ ಹೇಳುವುದೊಂದು, ಮಾಡುವುದು ಇನ್ನೊಂದು ಎಂಬಂತೆ ಶಾಸ್ತ್ರ ಪುರಾಣಗಳಲ್ಲಿ ಗೋಹತ್ಯೆ ಮಹಾಪಾಪವೆಂದು ಸಾರಿ ಮೃಷ್ಟಾನ್ನ ಭೋಜನದಲ್ಲಿ ಮಾತ್ರ ಬಳಸಿಕೊಂಡಿರುವುದು ಅಂದಿನ ಸಾಮಾಜಿಕ ವಿಡಂಬನೆಗೆ ಒಂದು ಸಾಕ್ಷಿಯಾಗಿದೆ. ವೈದಿಕರ ಸಾಮಾಜಿಕ ವಂಚನೆಗೆ, ಧಾರ್ಮಿಕ ಪರಿಕಲ್ಪನೆಗಳನ್ನು ಹುಟ್ಟುಹಾಕಿ ವ್ಯವಸ್ಥೆಯನ್ನು ನಿರ್ಬಂಧಿಸುತ್ತಿದ್ದರು. ಹಾಗೆಯೇ ಇತರರಿಂದ ಮಾತ್ರ ಲಾಭವನ್ನು ಪಡೆಯುತ್ತಿದ್ದರು. ಕಾಲಕ್ರಮೇಣ ಜೈನ ಮತ್ತು ಬೌದ್ಧ ಧರ್ಮಗಳು ಯಜ್ಞ ಯಾಗಾದಿಗಳಲ್ಲಿ ಪ್ರಾಣಿ ಬಲಿಯನ್ನು ಖಂಡಿಸಿದಾಗ ಹಠಾತ್ತನೆ ವೈದಿಕ ಧರ್ಮವು ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲು ಪ್ರಾಣಿಬಲಿಯನ್ನು ನಿಷೇಧಿಸಿತು. ಮೇಲ್‌ಸ್ತರದಿಂದ ಹಲವು ನೀತಿ ನಿಯಮಗಳು ರೂಪುಗೊಂಡು ಅವುಗಳ ಪಾಲನೆಗಾಗಿ ಇನ್ನೊಬ್ಬರ ಮೇಲೆ ಹೇರುತ್ತಿದ್ದರೆಂಬುದಕ್ಕೆ ಈ ರೀತಿಯ ವಚನ ಪಠ್ಯಗಳೇ ಮುಖ್ಯ ಸಾಕ್ಷಿ. ಕೇವಲ ತಿನ್ನುವ ಆಹಾರ ಪದ್ಧತಿಯಿಂದಲೇ ಮೇಲುಕೀಳು ಎಂಬ ದೃಷ್ಟಿಯಿಂದ ನೋಡುವ ಜನತೆಯನ್ನು ತೀಕ್ಷ್ಣವಾಗಿ ಟೀಕಿಸಲಾಯಿತು. ಸತ್ತ ಪ್ರಾಣಿಗಳ ಮಾಂಸವನ್ನು ತಿನ್ನುವುದರಿಂದ ಮಹಾಪಾಪವೇನು ನಡೆಯದು. ಆದರೆ ಬದುಕಿದ ಪ್ರಾಣಿಗಳ ಮಾಂಸವನ್ನು ತಿನ್ನುವವರನ್ನು ಏನನ್ನಬೇಕು ಎಂಬುದನ್ನು ಎಚ್ಚರಿಸುತ್ತಾರೆ. ಉತ್ತಮ ಮತ್ತು ಕನಿಷ್ಠರೆಂಬುದು ತಾವು ಸೃಷ್ಟಿಸಿಕೊಂಡು ಆ ಮೂಲಕ ಸಮಾಜ ಒಡೆಯಲು ಕಾರಣವಾಯಿತು. ಜಾತಿಯಿಂದ ಯಾರು ಉತ್ತಮರಾಗಲಾರರು, ಯಾರು ಕನಿಷ್ಠರಾಗಲಾರರು. ಹೀಗೆ ಸಮಾಜದ ಎಲ್ಲಾ ನೆಲೆಗಳಿಂದ ವೈದಿಕದ ವಿವಿಧ ರೂಪುರೇಷೆಗಳನ್ನು ಒಡೆಯಲಾಯಿತು.

ಕರ್ನಾಟಕ ಚರಿತ್ರೆಯಲ್ಲಿ ದಲಿತ ಸಮುದಾಯಗಳಿಗೆ ಒಂದು ಸಾಂಸ್ಕೃತಿಕ ಅನನ್ಯತೆ, ಪರಂಪರೆಯಿದೆ. ಅವು ಕಾಲದಿಂದ ಕಾಲಕ್ಕೆ ಆಗುವ ಬದಲಾವಣೆಗಳನ್ನು ಶಾಶ್ವತವಾಗಿ ಹಿಡಿದಿಡಬಲ್ಲವು. ಅಂದು ತಮ್ಮ ಮೇಲೆ ನಡೆಯುತ್ತಿದ್ದ ಹಲ್ಲೆ, ಬಹಿಷ್ಕಾರ, ಶೋಷಣೆ ಮುಂತಾದ ಕ್ರೂರ ಪದ್ಧತಿಗಳ ವಿರುದ್ಧ ಜನತೆಯಲ್ಲಿ ಅರಿವು ಮೂಡಿಸುವ ಪ್ರಯತ್ನವೊಂದನ್ನು ದಲಿತ ವಚನಕಾರರು ನಡೆಸಿದರು. ಶತ ಶತಮಾನಗಳಿಂದ ಸದಾ ನಡೆಯುತ್ತಲೇ

ಇದ್ದ ದಬ್ಬಾಳಿಕೆಯನ್ನು ಪ್ರತಿಭಟಿಸುವ ಒಂದು ವೇದಿಕೆ ಸಿಕ್ಕಿದ್ದು ಈ ಕಾಲಘಟ್ಟದಲ್ಲಿ. ಆದುದರಿಂದ ದಲಿತ ಲೋಕದಿಂದ *ಮಾದಾರ ಚೆನ್ನಯ್ಯ, ಡೋಹಾರ ಕಕ್ಕಯ್ಯ, ಕೆಂಭಾವಿ ಭೋಗಯ್ಯ, ಮಾರುಡಿಗೆ ನಾಚಯ್ಯ, ಮಾದಾರ ಧೂಳಯ್ಯ, ಮಡಿವಾಳ ಮಾಚಯ್ಯ, ಮೇದರ ಕೇತಯ್ಯ, ಗಾಳದ ಕನ್ನಯ್ಯ, ಉರಿಲಿಂಗಪೆದ್ದಿ, ಕಾಳವ್ವೆ, ಲಿಂಗಮ್ಮ, ಸೂಳೆ ಸಂಕವ್ವ* ಮುಂತಾದವರು ಧ್ವನಿ ಎತ್ತಿದರು. ಇದಕ್ಕೆ ಪ್ರೇರಕಶಕ್ತಿಯಾದವರು ಬಸವಣ್ಣ. ಯಾವುದೇ ಜಾತಿ, ವರ್ಣವನ್ನು ಒಪ್ಪಿಕೊಳ್ಳದೇ ಸಮಾನತೆಯ ತಳಹದಿಯನ್ನು ಪ್ರತಿಪಾದಿಸಿದರು.

ಕುಲ-ಜಾತಿ-ಹೊಲೆ ಸಮಸ್ಯೆಗಳ ಕುರಿತು ಚಿಂತನೆ ನಡೆಸಿದವರಲ್ಲಿ ಮಾದಾರ ಚೆನ್ನಯ್ಯ ಒಬ್ಬರು. 'ನಿಜಾತ್ಮರಾಮ ರಾಮನ' ಎಂಬ ಅಂಕಿತದಲ್ಲಿ ವಚನಗಳನ್ನು ರಚಿಸಿದ್ದಾರೆ. ಶ್ರೇಷ್ಠತೆ ಎಂಬುದು ಕೇವಲ ಸಮಾಜದ ಉನ್ನತ ಸ್ಥಾನದಲ್ಲಿದ್ದವರಿಗೆ ಮಾತ್ರ ಸೀಮಿತವಲ್ಲ. ವ್ಯಕ್ತಿ ಯಾವುದೇ ಜಾತಿ, ಧರ್ಮ, ವರ್ಣದಿಂದ ಬಂದಿದ್ದರೂ ತಮ್ಮ ಶ್ರದ್ಧೆ, ಶ್ರಮದಿಂದ ಉನ್ನತ ಸ್ಥಾನಕ್ಕೆ ಬರಬಹುದೆಂಬುದನ್ನು ತಿಳಿಸಿದರು. ಈ ಕುರಿತು ಅವನ ಒಂದು ವಚನ ಹೀಗಿದೆ:

ಸಾಂಖ್ಯ ಶ್ವಪಚ, ಅಗಸ್ತ್ಯ ಕಬ್ಬಿಲ
ದೂರ್ವಾಸ ಮಚ್ಚಿಗ, ದಧೀಚಿ ಕೀಲಿಗ
ಕಶ್ಯಪ ಕಮ್ಮಾರ, ರೋಮಜ ಕಂಚುಗಾರ
ಕೌಂಡಿಲ್ಯ ನಾವಿದನೆಂಬುದನರಿದು
ಮತ್ತೆ ಕುಲವುಂಟೆ ಛಲಕ್ಕೆ ಹೊರಲೇತಕ್ಕೆ
ಇಂತೀ ಸಪ್ತ ಋಷಿಯರುಗಳೆಲ್ಲರೂ[೭೪]

ಮನುಷ್ಯನ ವ್ಯಕ್ತಿತ್ವ ಅವನ ಸಾಧನೆಯಿಂದ ಬರಬಹುದೇ ವಿನಃ ಜಾತಿ ಅಥವಾ ಕುಲದಿಂದ ಅಲ್ಲವೆಂಬುದನ್ನು ಹೇಳುತ್ತಾ ಚಾತುರ್ವರ್ಣ ಪದ್ಧತಿಯನ್ನು ಸಾರಾಸಗಟಾಗಿ ತಿರಸ್ಕರಿಸಲಾಯಿತು. ಬಹುತೇಕ ತೀರ್ಮಾನಗಳು ಜಾತಿ ಹಿನ್ನೆಲೆಯಿಂದಲೇ ನಿರ್ಧಾರವಾಗುತ್ತಿದ್ದರಿಂದ ದಲಿತರನ್ನು ಕಡೆಗಣಿಸಲಾಗಿತ್ತು. ಉರಿಲಿಂಗ ಪೆದ್ದಿಯ ಪತ್ನಿಯಾದ ಕಾಳವ್ವೆ ಅಸ್ಪೃಶ್ಯ ವಚನಗಾರ್ತಿಯರಲ್ಲಿ ಪ್ರಮುಖಳು. ಕನ್ನಡ ಮತ್ತು ಸಂಸ್ಕೃತದಲ್ಲಿ ಪಾಂಡಿತ್ಯವನ್ನು ಸಂಪಾದಿಸಿದ್ದಳು. ಅವಳು ತನ್ನ ಜಾತಿಯ ಪರವಾಗಿ ನಿಂತು ದಿಟ್ಟವಾಗಿ ವಾದಿಸಿದ್ದಾಳೆ. ತನ್ನ ಜಾತಿಯನ್ನು ಕೀಳಾಗಿ ಭಾವಿಸುವುದನ್ನು ಸ್ಪಷ್ಟೋಕ್ತಿಗಳಲ್ಲಿ ಪ್ರತಿಭಟಿಸಿದ್ದಾಳೆ. ಅವಳ ಒಂದು ವಚನ ಹೀಗಿದೆ :

ಕುರಿ ಕೋಳಿ ಕಿರುಮೀನು ತಿಂಬುವರಿಗೆಲ್ಲ ಕುಲಜ ಕುಲಜರೆಂದೆಂಬರು
ಶಿವಗೆ ಪಂಚಾಮೃತ ಕರೆವ ಪಶುವ ತಿಂಬುವ ಮಾದಿಗ ಕೀಳು ಜಾತಿಯೆಂಬುರು
ಅವರೆಂತು ಕೀಳು ಜಾತಿಯಾದರು ಜಾತಿಗಳು ನೀವೇಕೆ ಕೀಳಾಗಿರೊ?[೭೫]

ಕುರಿ, ಕೋಳಿ, ಮೀನು ತಿನ್ನುವವರು; ಕುಲಜರು ಶಿವನ ಅಭಿಷೇಕಕ್ಕೆ ಹಾಲು ಕೊಡುವ ಹಸುವನ್ನು ತಿನ್ನುವ ಮಾದಿಗ ಹೇಗೆ ಕೀಳುಜಾತಿ ಎಂದು ಸವಾಲು ಹಾಕುವುದಲ್ಲದೆ ಬ್ರಾಹ್ಮಣನು ಮಾದಿಗನಿಗಿಂತ ಶ್ರೇಷ್ಠ ಹೇಗೆ ಎಂದು ಪ್ರಶ್ನಿಸುತ್ತಾಳೆ. ಈ ರೀತಿಯ ವಚನಗಳು ಸಮಾಜದ ವೈಚಾರಿಕತೆಗೆ ಸಾಕ್ಷಿಯಾಗಿವೆ.

ವೃತ್ತಿಗಳ ವಿಷಯದಲ್ಲಿ ಮಾತನಾಡುವಾಗ ದಲಿತ ವಚನಕಾರರು ತಮ್ಮ ಪಾರಂಪರಿಕ ವೃತ್ತಿಗಳನ್ನು ಕೀಳೆಂದು ಭಾವಿಸದೇ ವೃತ್ತಿಗೌರವ ತೋರಿದುದು ಒಂದು ರೀತಿಯಲ್ಲಿ ಸರಿ. ಆದರೆ ಅವುಗಳ ಬಗೆಗೆ ಮೇಲ್‌ಜಾತಿಯವರು ತಾಳಿರುವ ಪಾರಂಪರಿಕ ಧೋರಣೆ ಬದಲಾಗಿಲ್ಲ. ಸಮಾಜದಲ್ಲಿ ಕೀಳೆಂದು ಭಾವಿಸಲಾಗಿರುವ ವೃತ್ತಿಗಳನ್ನು ದಲಿತರು ಮಾತ್ರ ಮಾಡುವಂತಹ ಪರಿಸ್ಥಿತಿಯಿರಬಾರದು. ಎಲ್ಲ ವೃತ್ತಿಗಳಿಗೂ ಸಮಾನ ಗೌರವ, ಅವುಗಳಲ್ಲಿ ಮೇಲು-ಕೀಳೆಂಬ ಭಾವ ಎಣಿಸಲಾಗದು ಎಂಬ ಧೋರಣೆಯೂ ಅವರಿಗೆ ಪ್ರಿಯವಾಯಿತು. ಇದರಿಂದಾಗಿ ಎಲ್ಲ ಬಗೆಯ ಕಾಯಕ ಜೀವಿಗಳಿಗೆ ವೃತ್ತಿಗೌರವ ತಾನಾಗಿ ಬಂತು. ಬಟ್ಟೆ ನೇಯುವ, ಬಟ್ಟೆ ಶುಚಿಗೊಳಿಸುವ, ಚಪ್ಪಲಿ ಹೊಲಿಯುವ, ಚರ್ಮ ಹದಗೊಳಿಸುವ, *ನೇಕಾರ, ಮಡಿವಾಳ, ಸಮಗಾರ, ಡೋಹಾರ* ಮುಂತಾದವರು ತಮ್ಮ ತಮ್ಮ ವೃತ್ತಿಗಳನ್ನು ಹೇಳಿಕೊಳ್ಳಲು ಎಳ್ಳಷ್ಟು ಹಿಂಜರಿಯಲಿಲ್ಲ. ಆದರೆ ಒಟ್ಟಾರೆ ಸಾಮಾಜಿಕ ವ್ಯವಸ್ಥೆಯಲ್ಲಿ ಯಾವ ವೃತ್ತಿಗಳನ್ನು ಕೀಳೆಂದು ಭಾವಿಸಲಾಗಿತ್ತೋ ಅಂತಹ ವೃತ್ತಿಗಳನ್ನು ದಲಿತರು ಲಿಂಗದೀಕ್ಷೆಯ ನಂತರವೂ ಮುಂದುವರಿಸಿದ್ದರಿಂದ ದಲಿತರ ಸ್ಥಾನಮಾನಗಳು ಬದಲಾಗದೇ ಉಳಿದವು.[೨೧] ವೃತ್ತಿ ಸಮಾನತೆ ಒಂದು ತತ್ವವಾಗಿ ಪ್ರತಿಪಾದನೆಯಾದರೂ, ಆಚರಣೆಯಲ್ಲಿ ವೃತ್ತಿಗಳ ಬಗೆಗಿನ ಧೋರಣೆ ಯಥಾಪ್ರಕಾರ ಮುಂದುವರಿಯಿತು.

ವಚನ ಚಳವಳಿಯ ತರುವಾಯ ಕರ್ನಾಟಕದ ಹದಿಮೂರು ಮತ್ತು ಹದಿನಾಲ್ಕನೆ ಶತಮಾನದ ದಲಿತರ ವಿಚಾರಗಳನ್ನು ಕುರಿತು ಅರ್ಥ ಮಾಡಿಕೊಳ್ಳಲು *ರಗಳೆಗಳು* ಮುಖ್ಯ ಆಕರವಾಗಿವೆ. ವಚನ ಚಳವಳಿಯ ಕಾರಣ ಮತ್ತು ಪರಿಣಾಮಗಳು ನಂತರ ಕಾಲಘಟ್ಟದಲ್ಲಿ ಸಮಾಜದಲ್ಲಿ ಪ್ರಭಾವ ಬೀರಿದ್ದು ಮಾತ್ರ ಸತ್ಯ. ಸಮಾಜದಲ್ಲಿ ಹೊಲೆತನದ ಸಮಸ್ಯೆಗಳನ್ನು ವೀರಶೈವ ಕವಿಗಳು ತಮ್ಮ ಸಾಹಿತ್ಯದಲ್ಲಿ ದಾಖಲಿಸಿದರು. ಈ ಹಿಂದೆ ವಚನಗಳ ಮೂಲಕ ಪ್ರಚುರಪಡಿಸಿದರೆ ಈ ವೇಳೆಗೆ ರಗಳೆಗಳ ಮೂಲಕ ಸಾಮಾಜಿಕ ಸಂಘರ್ಷಗಳನ್ನು ದಾಖಲಿಸುವಲ್ಲಿ ಯಶಸ್ವಿಯಾದರು. ಲಿಂಗವಂತ ದಲಿತರು ಈ ರಗಳೆಗಳಲ್ಲಿ ಪ್ರಧಾನ ಸ್ಥಾನವನ್ನು ಪಡೆದುಕೊಂಡರು. ಹಾಗೆಯೇ ಲಿಂಗವಂತ ದಲಿತರಲ್ಲದವರನ್ನು ಕುರಿತು ಸಹ ಚರ್ಚಿಸಿದರು. ಹರಿಹರನ ರಗಳೆಗಳಲ್ಲಿ ಇವೆಲ್ಲ ತುಂಬಿ ದಟ್ಟವಾಗಿ ಮೂಡಿನಿಂತಿವೆ. ಹರಿಹರನ ರಗಳೆ ಒಬ್ಬ ದೇವ ಇಲ್ಲವೆ ಒಬ್ಬ ರಾಜನನ್ನು ಕುರಿತು ಬರೆದುದಲ್ಲ. ಒಬ್ಬ ವ್ಯಕ್ತಿಯನ್ನು ಕುರಿತು ಬರೆದವಲ್ಲ. ಪುರುಷ-ಸ್ತ್ರೀ, ರಾಜ-ಪ್ರಜೆ, ಸ್ಪೃಶ್ಯ-ಅಸ್ಪೃಶ್ಯ, ಗುರು-ಶಿಷ್ಯ, ವಿರಕ್ತ-ಅನುರಕ್ತ ಹೀಗೆ ವೈವಿಧ್ಯಪೂರ್ಣ ವ್ಯಕ್ತಿಗಳ ವೈಯಕ್ತಿಕ ಸಾಮಾಜಿಕ ದೈವಿಕ ಜೀವನವನ್ನು ಕುರಿತು ಬರೆದವು. ಪುರಾತನರಲ್ಲಿ *ಬ್ರಾಹ್ಮಣ, ಕುಂಬಾರ, ಅಗಸ, ಮೀನುಗಾರ, ಗಾಣಿಗ, ತುರಕಾರ, ಕ್ಷತ್ರಿಯ, ವೈಶ್ಯ, ಮಾದಿಗ, ಬೇಡ* ಮತ್ತು ಸ್ತ್ರೀ ಹೀಗೆ ಎಲ್ಲಾ ಜಾತಿಯವರು, ಎಲ್ಲ ವರ್ಗದವರು, ಎಲ್ಲಾ ಕಸುಬಿನವರು ಮತ್ತು ಸ್ತ್ರೀಯರು ಇದ್ದಾರೆ. ಕವಿಗಳಿದ್ದಾರೆ. ಅನುಭಾವಿಗಳಿದ್ದಾರೆ. ಸಂಗೀತಗಾರರು, ಗಮಕಿಗಳು ಇದ್ದಾರೆ. ಇವರಲ್ಲಿ ಕೆಲವರು ತಮಿಳುನಾಡಿನವರಾದರೂ ಹರಿಹರ ಕನ್ನಡಿಗನಾದುದರಿಂದ ಇವರ ಕಥೆಗಳಿಗೂ ಕನ್ನಡ ಮನಸ್ಸಿನ ಸಂಸ್ಪರ್ಶವಿದೆ. ಹೀಗಾಗಿ ಕನ್ನಡಿಗರ ವೈವಿಧ್ಯಮಯವಾದ ಜೀವನ ರಗಳೆ ಮಾಧ್ಯಮದಲ್ಲಿ ಕಲೆಯಾಗಿ ಅರಳಿದೆ.[೨೨] ಹರಿಹರ. ರಾಘವಾಂಕ ಮತ್ತು ಭೀಮ ಕವಿ ತಮ್ಮ ಕೃತಿಗಳಲ್ಲಿ ಹೊಲೆತನದ ಸಮಸ್ಯೆಗಳನ್ನು ಕುರಿತು ಚರ್ಚಿಸಿದ್ದಾರೆ.

ವಿಶೇಷವಾಗಿ ಹೊಲೆಯ ಶಿವಭಕ್ತರ ಕುರಿತು ಹೆಚ್ಚಿನ ಚರ್ಚೆಗಳು ಕಾಣಿಸಿಕೊಳ್ಳುತ್ತವೆ. *ಬಸವರಾಜದೇವರ ರಗಳೆ, ಕೊಂಡಗುಳಿ ಕೇಶಿರಾಜನ ರಗಳೆ, ಬೊಮ್ಮಯ್ಯನ ರಗಳೆ* ಮುಂತಾದವುಗಳು ಆಯಾ ಕಾಲದ ವರ್ಗವ್ಯವಸ್ಥೆಯನ್ನು ತುಂಬಾ ಸ್ಪಷ್ಟವಾಗಿ ಪ್ರಶ್ನಿಸುತ್ತವೆ. ಹಾಗೆಯೇ ವರ್ಣಭೇದ ನಿರಾಕರಣೆ ಮಾದಾರ ಚೆನ್ನಯ್ಯ, ತಿರುನಾಳ್ಪೋದ, ಸಾಮವೇದಿ ರಗಳೆಗಳಲ್ಲಿ ಸೌಮ್ಯ ನೆಲೆಯಲ್ಲಿ, ಹಾವಿನಹಾಳ ಕಲ್ಲಯ್ಯನ ರಗಳೆಯಲ್ಲಿ ವೈಯಕ್ತಿಕ ಸಂಘರ್ಷದ ನೆಲೆಯಲ್ಲಿ ಜರುಗಿದರೆ, ಬಸವರಾಜ ದೇವರ ರಗಳೆಯಲ್ಲಿ ಸಾಮಾಜಿಕ ಸಂಘರ್ಷ ರೂಪದಲ್ಲಿ ವ್ಯಾಪಿಸಿಕೊಂಡಿದೆ. ಬಸವರಾಜದೇವರ ರಗಳೆಯಲ್ಲಿ ಸಂಬೋಳಿ ನಾಗಿದೇವ ಪ್ರಸಂಗ, ಕೇತಕಿ ಪುಷ್ಪ ಪ್ರಸಂಗಗಳು ತುಂಬ ಅರ್ಥಪೂರ್ಣವೆನಿಸಿವೆ.

ಶಿವಭಕ್ತ ಹೊಲೆಯರ ಮತ್ತು ವೈದಿಕ ವಿದ್ವಾಂಸರ ನಡುವಿನ ತರ್ಕಗಳನ್ನು ಅರ್ಥಮಾಡಿಕೊಳ್ಳಲು 'ಶ್ವಪಚಯ್ಯ ಕತೆ' ಸ್ವಾರಸ್ಯಕರವಾಗಿದೆ. ಸಾಮವೇದಿ ಎಂಬುವವನು ಒಬ್ಬ ಬ್ರಾಹ್ಮಣ ವಿದ್ವಾಂಸ. ಒಂದು ದಿನ ಕಾಡಿಗೆ ಬಂದು ಯಾರು ಇಲ್ಲದ ಜಾಗದಲ್ಲಿ ಎಲ್ಲರೂ ಸೇರಿ ವೇದವನ್ನು ಪಠಿಸುವುದು ದಿನನಿತ್ಯದ ಕರ್ತವ್ಯವಾಗಿತ್ತು. ಕಾರಣ ಊರಿನಲ್ಲಿ ವೇದವನ್ನು ಪಠಿಸಿದರೆ ಶೂದ್ರರಿಗೆ ವೇದ ಕೇಳಿಸೀತೆಂಬ ಅಳುಕು. ಬಳಿಕ ಸಾಮವೇದಿ ಆಕಾಶ ಮಾರ್ಗದಲ್ಲಿ ಹಾರಿ ಬರುವಾಗ ದಾರಿಯಲ್ಲಿ ಶಿವಭಕ್ತ ಶ್ವಪಚಯ್ಯ ಕಾಣಿಸಿದ. ಕಾಡಿನಲ್ಲಿ ಶಿವಪೂಜೆ ಮಾಡಿದರೆ ಭವಿಗಳ ಕಣ್ಣಿಗೆ ಕಾಣಿಸುವುದಿಲ್ಲ ಎಂಬ ನಂಬಿಕೆ ಶ್ವಪಚಯ್ಯನದು. ಮನುಷ್ಯರ ತಲೆಯೋಡಿನಲ್ಲಿ ನಾಯಿ ಮಾಂಸವನ್ನು ಹಾಕಿ ಅಡುಗೆ ಮಾಡುತ್ತಿದ್ದವನು, ತಕ್ಷಣವೇ ಆಕಾಶಮಾರ್ಗದಲ್ಲಿ ಹಾರಿ ಹೋಗುತ್ತಿದ್ದ ಸಾಮವೇದಿ ಮುನಿಯನ್ನು ಕಂಡು ಪಾತ್ರೆಯನ್ನು ತನ್ನ ಕೆರದಿಂದ ಮುಚ್ಚಿದ ಕಾರಣ ಭವಿಯ ಕಣ್ಣಿಗೆ ಬಿದ್ದೀತೆಂದು. ಇದನ್ನು ಗಮನಿಸಿದ ಬ್ರಾಹ್ಮಣ ಮುನಿ ಸಾಮವೇದಿಗೆ ಆಶ್ಚರ್ಯವಾಯಿತು. ಆಕಾಶದಿಂದ ಇಳಿದು ಬಂದು ಶ್ವಪಚಯ್ಯನ ಬಳಿ ಬಂದು ಪಾತ್ರೆಯನ್ನು ಮುಚ್ಚಿದ್ದೇಕೆ? ಎಂದು ಪ್ರಶ್ನಿಸಿದ. ಶ್ವಪಚಯ್ಯ ಮಾತನಾಡಲಿಲ್ಲ. ಸಾಮವೇದಿಯ ಕನಸಲ್ಲಿ ಶಿವ ಬಂದು ಶ್ವಪಚಯ್ಯ ಬೇರೆ ಅಲ್ಲ. ನಾನು ಬೇರೆ ಅಲ್ಲವೆಂದು ಹೇಳಿದ್ದಲ್ಲದೆ ಇತ್ತ ಶ್ವಪಚಯ್ಯನಿಗೆ ನಿನ್ನ ಬಳಿ ಬರುವ ಸಾಮವೇದಿಗೆ ಉಪದೇಶ ನೀಡು ಎನ್ನುತ್ತಾನೆ. ಗಿಡ, ಮರ, ಬಳ್ಳಿಗಳು ಕಾಡಿನ ಬೇಡರೂ ಚಂಡಾಲರೂ ಭಕ್ತರೇ? ಅವರು ನೋಡಿದರೆ ಮೈಲಿಗೆಯಾಗಲಿಲ್ಲ. ನಾನು ಮಾತ್ರ ಭವಿಯೇ ಎಂದು ಸಾಮವೇದಿ ಕೇಳಿದ್ದಕ್ಕೆ ಉತ್ತರವಾಗಿ ಶ್ವಪಚಯ್ಯ "ಗಿಡ ಮರಗಳು ಪತ್ರೆ ಕೊಡುವುವು, ಮರಕ್ಕೆ ಕಾಮ ಕ್ರೋಧ ಇಲ್ಲ, ಮೃಗಗಳು ಹುಲ್ಲು ಮೇದು ನೀರು ಕುಡಿದು ಮುಗ್ಧವಾಗಿ ಬದುಕುತ್ತವೆ. ಬೇಡರಿಗೆ ವೇದ ತಿಳಿಯದು. ಬೇಟೆ ತಮ್ಮ ಜಾತಿ ಧರ್ಮ ಎಂದು ತಿಳಿದಿದ್ದಾರೆ. ಅವರು ಬರಿಯ ಜಾತಿಯ ಚಂಡಾಲರು. ನೀನು ಕರ್ಮ ಚಂಡಾಲ. ನೀನು ಇದೆಲ್ಲ ತಿಳಿದೂ ಶಿವನನ್ನೂ ಪೂಜಿಸುವುದಿಲ್ಲ. ನಿನ್ನದೇನು ಹೆಚ್ಚಳ ಎನ್ನುತ್ತಾನೆ. ಸಾಮವೇದಿಗೆ ಜ್ಞಾನೋದಯವಾಗಿ ಶಿವಭಕ್ತನಾಗುತ್ತಾನೆ.[೭೮] ಮೇಲಿನ ಕತೆಯಲ್ಲಿ ಬ್ರಾಹ್ಮಣ ಮುನಿಗಳ ಡಾಂಭಿಕತೆಯನ್ನು ಶಿವಭಕ್ತ ಹೊಲೆಯನ ಶ್ರೇಷ್ಠತೆಯನ್ನು ಗಮನಿಸಬಹುದು. ಕಾಡಿನಲ್ಲಿ ವಾಸಮಾಡುವ ಬೇಟೆಗಾರರಿಂದಾಗಲಿ, ಮರಗಿಡಗಳಿಂದಾಗಲಿ ಶಿವಭಕ್ತಿ ಕೆಡುವುದಿಲ್ಲ. ತಾನು ನಾಯಿ ಮಾಂಸ ಬೇಯಿಸುತ್ತಿದ್ದ ಪಾತ್ರೆಯನ್ನು ತಕ್ಷಣ ಕೆರದಿಂದ ಮುಚ್ಚಿದ ಶ್ವಪಚಯ್ಯ ಬ್ರಾಹ್ಮಣ್ಯದ ವಿರುದ್ಧ ಕೆಂಡ ಕಾರುವುದನ್ನು ಗಮನಿಸಬಹುದು. ಈ ರೀತಿಯ ಬ್ರಾಹ್ಮಣರ ತಿರಸ್ಕಾರವನ್ನು ಗಮನಿಸಬಹುದು.

### ೩.೨.೪. ಹರಿದಾಸ ಚಳವಳಿ

ವಚನ ಆಂದೋಲನ ತರುವಾಯ ವಿಜಯನಗರ ಆಳ್ವಿಕೆಯ ಕೊನೆಯ ಕಾಲಘಟ್ಟದಲ್ಲಿ ಹರಿದಾಸ ಚಳವಳಿ ಹುಟ್ಟಿಕೊಂಡಿತು. ವಚನ ಚಳವಳಿಯಷ್ಟು ಗಾಢವಾದ ಪ್ರಭಾವ ಸಮಾಜದ ಮೇಲೆ ಬೀರದಿದ್ದರೂ ಸೌಮ್ಯವಾಗಿ ಸಾಮಾಜಿಕ ಅನಿಷ್ಟ ಪದ್ಧತಿಗಳನ್ನು ವಿರೋಧಿಸುವ ನೆಲೆಯಲ್ಲಿ ಕಾಣಿಸಿಕೊಂಡಿತು. ಆಂದೋಲನ ಎಂಬ ಶಬ್ದಕ್ಕೆ ಇಂಗ್ಲಿಷ್ ಸಂವಾದಿ ಪದವೆ Movement ಎನ್ನಬಹುದು. 'ಹರಿದಾಸ ಚಳವಳಿ' ಎಂದು ಮೊದಲು ಗುರುತಿಸಿದವರು ಆರ್.ಎಸ್. ಪಂಚಮುಖಿ. ವಚನಕಾರರಂತೆ ಕಾಯಕತತ್ವ ಚಳವಳಿಯ ತೆರನಲ್ಲದಿದ್ದರೂ ಹರಿದಾಸರದ್ದು ಒಂದು ಶಾಂತ, ಸೌಮ್ಯ ರೀತಿಯ ಆಂದೋಲನ, ಭಕ್ತಿಯ ಆಂದೋಲನ ಎಂದರೂ ಸರಿಯೆ. ಮಾಧ್ವಮತ, ವೈಷ್ಣವಮತ, ಭಾಗವತಧರ್ಮ ಪ್ರಸಾರ ಹರಿದಾಸರ ಮುಖ್ಯ ಧೋರಣೆಯಾಗಿತ್ತು.[೭೯] ಹರಿದಾಸರ ಮೌಖಿಕ ರಚನೆಗಳನ್ನು (ಮುಂದೆ ಲಿಖಿತ ರೂಪಕ್ಕೆ ಬಂದಿರಬಹುದು.) ಸಾಮಾನ್ಯವಾಗಿ ದಾಸಸಾಹಿತ್ಯ ಎನ್ನುವುದುಂಟು. ಸುಳಾದಿ, ಉಗಾಭೋಗ ಕ್ರಿಯೆಗಳ ಜತೆಗೆ ಕೀರ್ತನೆ ದಾಸಸಾಹಿತ್ಯದ ಕವಲು, ನರಹರಿತೀರ್ಥ. ಶ್ರೀಪಾದರಾಜರಿಂದ ತೊಡಗಿ ಎಲ್ಲ ವೈಷ್ಣವ ಯತಿಗಳೂ, ಗೃಹಸ್ಥ ವೈಷ್ಣವ ಸಂತರೂ ವಿಠ್ಠಲನಲ್ಲಿ ವಾರಕರಿಗಳಾಗಿದ್ದು ಸಂಗೀತ ಸೇವೆಯನ್ನು ನಡೆಸಿಕೊಂಡು ಬರುತ್ತಿದ್ದರು. ಅವರಿಗಿದ್ದ 'ಹರಿದಾಸ' ಎಂಬ ಸಾಮಾನ್ಯಾರ್ಥವು ಕಾಲಕ್ರಮೇಣ ಇವರ ಪರಂಪರೆಗೆ ಅನ್ವಯಿಸಿದಂತೆ ಕಾಣುತ್ತದೆ.[೮೦] ಹರಿದಾಸ ಆಂದೋಲನ ಕೇವಲ ಸೌಮ್ಯವಾದಿ ಆಂದೋಲನವೆಂಬುದು ಸರ್ವವಿಧಿತ. ವರ್ಣಾಶ್ರಮ ವಿರುದ್ಧ ಪ್ರತಿಭಟಿಸುವ ಕ್ರಾಂತಿಯಲ್ಲ. ಜಾತಿ, ಅಂತ್ಯಜ ಇವರ ಬಗ್ಗೆ ಸಹಾನುಭೂತಿ, ತಮ್ಮ ಸಿಟ್ಟು ತೋರಿ, ಎಲ್ಲರೂ ಒಂದೇ. ಹರಿಭಕ್ತನ ಜಾತಿ, ಕುಲ ಕೇಳುವುದು ಪಾಪ ಎಂದರಷ್ಟೆ. ಜಾತಿ ಕುಲದ ಬಗ್ಗೆ ಮಾತನಾಡಿದರೆ ಹೊರತು ಪ್ರತಿಭಟಿಸಲಿಲ್ಲ. ಹೀಗಾಗಿ ವಚನ ಚಳವಳಿಯಲ್ಲಿ ಸಮಾಜದ ಕೆಳಜಾತಿಗಳು ಬಂದು ಸೇರಿದಷ್ಟು ಹರಿದಾಸ ಚಳವಳಿಯಲ್ಲಿ ಸೇರಲಿಲ್ಲ. ಈ ಪಂಥದಲ್ಲಿ ಮೇಲ್ವರ್ಗದವರ ಪಾಲ್ಗೊಳ್ಳುವಿಕೆ ಮತ್ತು ಪ್ರಚಾರ ಆಂದೋಲನ ಹೆಚ್ಚಾಗಿತ್ತು. ಕನಕದಾಸರು ಇದಕ್ಕೆ ಅಪವಾದವಾಗಿದ್ದರು. ಅವನಲ್ಲಿ ಪ್ರತಿಭಟನೆಯ ಧ್ವನಿ ಕೇಳಿಬಂದರೂ (ರಾಮಧಾನ್ಯ ಚರಿತೆ, ಮೋಹನ ತರಂಗಿಣಿ) ಮೇಲ್ವರ್ಗದವರ ತಂತ್ರಗಳಿಂದ ಸಮುದ್ರದಲ್ಲಿ ಮಣ್ಣಿನ ಗೊಂಬೆ ತೊಳೆದಂತಾಯಿತು.[೮೧]

ಹರಿದಾಸರ ಸಾಹಿತ್ಯಿಕ ಕೊಡುಗೆ, ಅಭಿವ್ಯಕ್ತಿಗಳಾದ ನೂರಾರು *ಕೀರ್ತನೆ ಸುಳಾದಿ, ಉಗಾಭೋಗ, ವೃತ್ತನಾಮ, ದಂಡಕ, ತ್ರಿಪದಿ (ತತ್ವಸುವ್ವಾಲಿ)* ಇತ್ಯಾದಿ ಸಾಹಿತ್ಯಿಕ ಪ್ರಕಾರಗಳು. ಆದರೆ ಈ ಪ್ರಕಾರಗಳಲ್ಲಿ ಸಮಾಜದ ಗಂಭೀರ ಸಮಸ್ಯೆಗಳ ಬಗ್ಗೆ ಚಿಂತನೆ ಮಾಡಲೇ ಇಲ್ಲ. ಇದಕ್ಕೆ ಪ್ರತಿಯಾಗಿ ವೈದಿಕ ಧರ್ಮದ ಪುನರ್‌ಸ್ಥಾಪನೆ, ಆಚಾರ, ವಿಚಾರ, ಮಡಿ, ಶೀಲವಂತಿಕೆ ಬಗ್ಗೆ ಮಾತನಾಡಿದರೆ ಹೊರತು ಜನಸಾಮಾನ್ಯರ ಬಗ್ಗೆ ಮಾತನಾಡಲಿಲ್ಲ. ಈ ಹಿನ್ನೆಲೆಯಲ್ಲಿ ವಚನ ಚಳವಳಿಯ ತರುವಾಯ ಜನಸಾಮಾನ್ಯರಲ್ಲಿ ಉಂಟುಮಾಡಿದ್ದ ಬದಲಾವಣೆಯ ಸ್ವರೂಪಗಳು ಕಮರಿಹೋಯಿತು. ಬಹುಪಾಲು ಇದು ಪ್ರತಿಪಾದಿಸಿದ ಹರಿಭಕ್ತಿ ವೈಷ್ಣವಧರ್ಮ ಜನಪ್ರಿಯವೆನಿಸಿಕೊಂಡಿದ್ದು ಮಾತ್ರವಲ್ಲದೆ ಉತ್ತರ ಭಾರತದಲ್ಲಿ ಪಸರಿಸಿ ವಿಷ್ಣು ಭಕ್ತಿಯನ್ನು ಪ್ರಸಾರ ಮಾಡಿತು. ಆದರೆ ಕನಕದಾಸರು 'ಕಾಗಿನೆಲೆ ಆದಿಕೇಶವ' ಎಂಬ ಅಂಕಿತದಲ್ಲಿ ಕೀರ್ತನೆಗಳನ್ನು ರಚನೆ ಮಾಡಿ ಸಮಾಜದ

ಸಮಸ್ಯೆಗಳನ್ನು ಸೌಮ್ಯವಾಗಿ ನಿರೂಪಿಸಿದರು.[೮೨] ವ್ಯಾಸರಾಯರು, ವಾದಿರಾಜರು ಮುಂತಾದ ಯತಿಗಳನ್ನು 'ವ್ಯಾಸಕೂಟ'ವೆಂದು, ಪುರಂದರ, ಕನಕ ಮುಂತಾದ ಗೃಹಸ್ಥ ಪರಂಪರೆಯ ಸಂತರನ್ನು 'ದಾಸಕೂಟ'ವೆಂದು ಕರೆಯುವುದು ರೂಢಿಗೆ ಬಂದಿತು. ದಾಸಸಾಹಿತ್ಯದಲ್ಲಿ *ಹೆಳವನಕಟ್ಟೆ ಗಿರಿಯಮ್ಮ, ಹರಪನಹಳ್ಳಿ ಭೀಮವ್ವ, ಗಲಗಲಿ ಅವ್ವ, ಓರುಬಾಯಿ ಲಕ್ಷ್ಮೀದೇವಿ, ಕುರುಡಿ ಸಂಕ್ರವ್ವ* ಮುಂತಾದ ಮಹಿಳಾ ದಾಸರನ್ನು ಕೂಡ ಕಾಣಬಹುದು.[೮೩] ಹರಿದಾಸರೆಂದು ತಮ್ಮನ್ನು ಭಾವಿಸಿಕೊಂಡು ಹರಿಯಸೇವೆ, ನಾಮ, ಹೀಗೆ ಎಷ್ಟೋ ಮಂದಿ ಈ ಹಿಂದೆ ಇದ್ದವರು. ದ್ರಾವಿಡ ದೇಶದಲ್ಲಿ *ಆಳ್ವಾರರು* ಈ ಗುಂಪಿಗೆ ಸೇರಿದವರು. ಹಲವಾರು ಜಾತಿಗಳಿಗೆ ಸೇರಿದವರಿಂದ ಇವರು ಬಹುತೇಕ ಕೆಳಜಾತಿಗಳಿಗೆ ಸೇರಿದವರೇ ಹೆಚ್ಚು. ನರಸೇವೆಗೆ ಬದಲಾಗಿ ಹರಿಸೇವೆಯನ್ನು ಕೈಗೊಂಡರು. ದಾಸರೆಂಬ ಜನಾಂಗಗಳು ತಮಿಳುನಾಡು, ಆಂಧ್ರಪ್ರದೇಶ, ಕರ್ನಾಟಕದಲ್ಲಿದ್ದವು. ತೆಲುಗು ದೇಶದಲ್ಲಿ *ಬುಕ್ಕದಾಸರಿ, ಪಾಗದಾಸರಿ, ಬುಟ್ಟದಾಸರಿ, ದಂಡೆದಾಸರಿ, ಚಿನ್ನದಾಸರಿ, ಮೂಲದಾಸರಿ, ಭಾಗವತದಾಸರಿಗಳೆಂಬ* ವಿಭಾಗಗಳು ಇದ್ದವು. ಕರ್ನಾಟಕದಲ್ಲಿ *ಬಣಜಿಗ, ಕುರುಬ, ಒಕ್ಕಲಿಗ, ಸಾಲೆ, ತಿಗುಳ, ಗೊಲ್ಲ, ಬೇಡ, ಬೆಸ್ತ, ವಡ್ಡ, ಹೊಲೆಯ, ಮಾದಿಗ* ಜಾತಿಗಳಿಗೆ ಸೇರಿದ ದಾಸರುಗಳಿದ್ದಾರೆ.[೮೪] ಈ ಕುರಿತು ಹೆಚ್ಚಿನ ಸಂಶೋಧನೆಗೆ ಪ್ರಸ್ತುತ ವಿಷಯವು ಅನುವು ಮಾಡಿಕೊಡುತ್ತದೆ. ಕರ್ನಾಟಕದ ಮಾತ್ರವಲ್ಲದೆ ನೆರೆಯ ರಾಜ್ಯಗಳಲ್ಲಿ ಸಹ ವಿವಿಧ ಜಾತಿಗಳಲ್ಲಿ ದಾಸರೆಂಬ ಉಪಪಂಗಡಗಳು ಕಾಣಿಸಿಕೊಳ್ಳುತ್ತವೆ.

ಮೇಲೆ ತಿಳಿದ ದಾಸರಲ್ಲಿ *ಸಮಗಾರ ದಾಸರು, ನಾಮಧಾರಿ ದಾಸರು, ಶನಿವಾರ ದಾಸರು, ಯಲ್ಲದಾಸರು, ದೊಂಬಿದಾಸರು, ಬಿಂದಿಗೆ ದಾಸರು, ಆಟದಾಸರು, ಕತ್ತರಿದಾಸರು, ದೇಶಭಾಗದಾಸರು, ಧರ್ಮದಾಸರುಗಳೆಂಬ* ವಿಭಾಗಗಳಿವೆ. ಇವರೆಲ್ಲ ವೈಷ್ಣವರು, ದಿಟವಾಗಿ ಹರಿದಾಸರೆ. ಇವರಿಗೆ ತಿರುಪತಿಯ ವೆಂಕಟೇಶ್ವರ ಬಹುಮಟ್ಟಿಗೆ ದೈವ. ಇವರಲ್ಲಿ ಆಟದದಾಸರು ಅಥವಾ ಭಾಗವತದಾಸರೆಂಬ ಗುಂಪಿನವರು ಗಂಡಸರು ಸ್ತ್ರೀವೇಷವನ್ನು ತೊಟ್ಟು ಕಾಲಿಗೆ ಗೆಜ್ಜೆ ಕಟ್ಟಿಕೊಂಡು, ಮೃದಂಗದ ಗತಿನಾಟ್ಯವಾಡುವವರು. ಕೆಲವರು ಕೋಲೆ ಬಸವನನ್ನು ಮುಂದೆ ಮಾಡಿಕೊಂಡು ಹೋಗುತ್ತ ಅದರಿಂದ ಆಟವಾಡಿಸುವವರು.[೮೫] ಹರಿದಾಸರು ನರಸೇವೆ ಮಾಡಬಾರದೆಂಬ ನಿಯಮ. ಮಠಾಧಿಪತಿ, ಶ್ರೀಮಂತ, ಅರಸ ಎಲ್ಲರೂ ನರಗುಂಪಿಗೆ ಸೇರಿದವರು. *ಹರಿದಾಸರು* ಇವರಲ್ಲಿ ಯಾರನ್ನು ಆಶ್ರಯಿಸಬಾರದು. ವ್ಯಾಸಕೂಟರ ಪಂಡಿತರು ಮಠಕ್ಕೆ ಅಂಟಿಕೊಂಡವರು. ಶ್ರೀಮಂತರ ಆದರವನ್ನು ಬಯಸುವವರು. ಅರಸನ ಓಲಗದಲ್ಲಿ ಕೈಮುಗಿದು ನಿಲ್ಲಬಲ್ಲವರು. ಹರಿಯೇ ಸರ್ವೋತ್ತಮನೆಂದು ಹೇಳಿದರೂ ಬದುಕಿನಲ್ಲಿ ಮಾನವರನ್ನು ನಂಬಿದರು. ಆದರೆ ಹರಿದಾಸರಾದರೆ ಹಾಗಲ್ಲ. ಹರಿಯನ್ನು ಬಿಟ್ಟು ಬೇರೆ ಯಾರ ಹಂಗಿಗೂ ಒಳಗಾಗುವರಲ್ಲ. ವಿಜಯದಾಸರ ಕಾಲವಾದ ಮೇಲೆ ಹರಿದಾಸರಿಗೂ ಮಾಧ್ವ ಮಠಗಳಿಗೆ ವಿರಸ ಒದಗಿಬಂದದ್ದು ಉಂಟು.[೮೬]

ಕನಕದಾಸರು ವ್ಯಾಸರಾಯರ ಶಿಷ್ಯರು. ಪುರಂದರದಾಸರ ಸಮಕಾಲೀನರು. ಇವರ ಅಂಕಿತ "ಕಾಗಿನೆಲೆಯಾದಿಕೇಶವ". ವೃತ್ತಿಯಲ್ಲಿ ದಣಾಯಕರಾದ ಕನಕದಾಸರು ಕೀರ್ತನಕಾರರೂ ಹೌದು. ಜೊತೆಗೆ "ಮೋಹನತರಂಗಿಣಿ", "ನಳಚರಿತ್ರೆ", "ಹರಿಭಕ್ತಸಾರ", "ರಾಮಧಾನ್ಯ ಚರಿತೆ" ಮುಂತಾದ ಕೃತಿಗಳನ್ನು

ರಚಿಸಿದ್ದಾರೆ. ಸಮಾಜದಲ್ಲಿ ವರ್ಣಭೇದ ಅಳಿದು ಸರ್ವಸಮಾನತೆ ಬರಬೇಕೆಂದು ಅವರ ಹಲವು ರಚನೆಗಳು ಸಾರಿ ಹೇಳುತ್ತಿರುವುದು ಗಮನಾರ್ಹ ಸಂಗತಿ. ಅಂದು ಸಮಾಜದಲ್ಲಿ ತಾಂಡವಾಡುತ್ತಿದ್ದ ಅಂಕುಡೊಂಕು ನಿಕೃಷ್ಟ ಪದ್ಧತಿಗಳನ್ನು ಟೀಕಿಸಿದರು. ಜಾತೀಯತೆ, ದಬ್ಬಾಳಿಕೆ ಪ್ರವೃತ್ತಿ ಮುಂತಾದ ವಿಷಯಗಳನ್ನು ಗಂಭೀರವಾಗಿ ವಿಮರ್ಶಿಸಿದರು. ಕನಕದಾಸರು ರಚಿಸಿದ ಒಂದು ಕೀರ್ತನೆ ಹೀಗಿದೆ:

ದಾಸ ದಾಸರ ಮನೆಯ ದಾಸಿಯರ ಮಗ ನಾನು
ಸಾಸಿರ ನಾಮದೊಡೆಯ ರಂಗಯ್ಯನ ಮನೆಯ
ಶಂಕುದಾಸರ ಮನೆಯ ಮಂಕುದಾಸನು ನಾನು
ಮಂಕುದಾಸನು ನಾನು ಮರುಳದಾಸ
ಸಂಕೀರ್ತನೆಯ ಮಾಡಿ ನೆನವ ಭಕ್ತರ ಮನೆಯ
ಬಿಂಕದಿ ಬಾಗಿಲ ಕಾಯ್ದ ಬಡದಾಸ ನಾನಯ್ಯ[೮೭]

ದಾಸರು ಕೀರ್ತನೆಗಳ ಮುಖಾಂತರ ಅಂದಿನ ಸಮಾಜದ ಅಂಕುಡೊಂಕುಗಳನ್ನು ಕಟುವಾಗಿ ಟೀಕಿಸಿದರು. ಸಮಾಜದ ಬಲಿಷ್ಠ ಶಕ್ತಿಗಳ ವಿರುದ್ಧ ದನಿ ಎತ್ತಿದ ಅವರು ಎಲ್ಲವರಿಗಿಂತ ಕೆಳಗಿನವನು ಎಂದು ಹೇಳುತ್ತ ಜಾತಿ ಸಂಕರಗಳನ್ನು ಕುರಿತು ಚರ್ಚಿಸುತ್ತಾರೆ. ಬಡವ ಶ್ರೀಮಂತರ ನಡುವಿನ ಅಂತರ ಮತ್ತು ವಸ್ತುನಿಷ್ಠ ದೃಷ್ಟಿಕೋನವನ್ನು ವಿಶ್ಲೇಷಿಸುತ್ತಾರೆ.

ಕನಕದಾಸರು ಮಾಡಿದ ಸಮಾಜ ವಿಮರ್ಶೆಯ ನರದೆಲಗ ಅಥವಾ ರಾಗಿಯು ವಿಜಯನಗರ ಸಮಾಜದ ದಲಿತ, ದಮನಿತ ವರ್ಗಗಳನ್ನು ಪ್ರತಿನಿಧಿಸುತ್ತದೆ. ತನ್ನ ಕಾಲದ ಸಾಮಾಜಿಕ ಅನ್ಯಾಯವನ್ನು ಪ್ರತಿಭಟಿಸುವ ಸಾಧನವಾಗಿ ಕನಕದಾಸರು ಈ ಧಾನ್ಯವನ್ನು ಉಪಯೋಗಿಸಿದರು. ನರದೆಲಗದ ಪಾತ್ರವು ಕನಕದಾಸರಿಗಿದ್ದ ಸಾಮಾಜಿಕ ಅರಿವನ್ನು ತೋರಿಸುತ್ತದೆ. ಬಹುಸಾಮಾನ್ಯವಾದ ಉಪಮೆಗಳನ್ನು ಬಳಸಿ ಕಾವ್ಯ ಮಾಧ್ಯಮದ ಮೂಲಕ ಸರಳಭಾಷೆ ಮತ್ತು ನಿರೂಪಣೆಗಳಿಂದ ತಮ್ಮ ಸಮಾಜದ ದರ್ಶನವನ್ನು ಜನತೆಗೆ ಮುಟ್ಟಿಸಬಹುದು. ಸಮಕಾಲೀನ ಸಮಾಜದ ಜಾತಿ ಸಮಸ್ಯೆಯನ್ನು ಬಯಲಿಗೆಳೆಯಬಹುದು ಎಂದು ಕನಕದಾಸರು ದೃಢವಾಗಿ ನಂಬಿದ್ದರು.[೮೮] ಆರ್ಥಿಕ ದೃಷ್ಟಿಯಿಂದಲೂ ರಾಮಧಾನ್ಯ ಚರಿತೆಯು ಮುಖ್ಯವಾದುದಾಗಿದೆ. ಕನಕದಾಸರ ಕಾಲದಲ್ಲಿ ಶ್ರೀಮಂತರ ಮತ್ತು ಮೇಲುಜಾತಿಗಳಿಗೆ ಸೇರಿದವರು ತಮ್ಮ ದಿನನಿತ್ಯದ ಆಹಾರದಲ್ಲಿ ಅಕ್ಕಿಯನ್ನು ಬಳಸುತ್ತಿದ್ದರು. ರಾಗಿ ಮತ್ತು ಇತರ ಧಾನ್ಯಗಳು ಬಡವರ, ದಲಿತರ, ಕೆಳಜಾತಿಯ ಜನಗಳ ಆಹಾರವೆಂದು ಪರಿಗಣಿಸಲಾಗುತ್ತಿದ್ದಿತು. ಸಮಾಜದ ಗಣ್ಯ ಜನರಿಗೆ ಈ ಧಾನ್ಯಗಳು ರುಚಿಸುತ್ತಿರಲಿಲ್ಲ. ೧೬ನೆಯ ಶತಮಾನದಲ್ಲೂ ಕೂಡ ರಾಗಿಯು ಉತ್ಪಾದಕ ವರ್ಗದಲ್ಲಿ ಬಹುಭಾಗವಾಗಿದ್ದ ಶೂದ್ರರ ಮುಖ್ಯ ಆಹಾರವಾಗಿತ್ತು. ಕೃಷಿ ಗೇಣಿದಾರರು, ಕೂಲಿಗೆ ನೇಮಿಸಿಕೊಂಡವರು, ಬಾಡಿಗೆದಾರರು ಇವರೆಲ್ಲರೂ ಅಕ್ಕಿಗಿಂತ ಅಗ್ಗವಾಗಿದ್ದ ರಾಗಿಯನ್ನೇ ಮುಖ್ಯವಾಗಿ ಅವಲಂಬಿಸಿದ್ದರು. ಕರ್ನಾಟಕದ ಗ್ರಾಮೀಣ ಜನತೆಯ ಶ್ರಮಿಕ ವರ್ಗವನ್ನು ಅದು ಪೋಷಿಸುತ್ತಿದ್ದಿತು.[೮೯]

ಈ ಹಿಂದೆ ಗಮನಿಸಿದಂತೆ ಆಹಾರ ಪದ್ಧತಿಯೂ ಸಹ ಸಾಮಾಜಿಕ ಅಂತಸ್ತನ್ನು ನಿರ್ಧರಿಸುತ್ತಿತ್ತು. ಸಮಾಜದ ಪ್ರಮುಖ ಉತ್ಪಾಧನಾ ಅಂಗಗಳ ಶ್ರಮದಿಂದ ರಾಜ್ಯದ ಉತ್ಪಾದನಾ ಪ್ರಮಾಣ ಹೆಚ್ಚಾಗುತ್ತಲ್ಲದೆ ಸರ್ವತೋಮುಖ ಬೆಳವಣಿಗೆ ಸಾಧಿಸಲು ಅವಕಾಶವಿರುತಿತ್ತು. ಆದರೆ ಶ್ರಮದಾಯಕ ಕೆಲಸಗಳಲ್ಲಿ ಜನಸಾಮಾನ್ಯರ ಪಾಲೇ ಅಧಿಕ. ಅಂದಿನ ಸಮಾಜದ ಏರಿಳಿತಗಳನ್ನು ಕನಕದಾಸರು ತನ್ನ ಬರವಣಿಗೆಗಳಲ್ಲಿ ಹಿಡಿದಿಟ್ಟಿದ್ದಾರೆ.

ಕನಕದಾಸರ ಸಾಮಾಜಿಕ ದರ್ಶನವು ಅವರ ಕೃತಿಗಳಲ್ಲಿ ಸುವ್ಯಕ್ತವಾಗಿದ್ದು, ಅದರ ಲಕ್ಷಣ ವರ್ಗವಾಗಿತ್ತು. ಜಾತಿ ಪದ್ಧತಿ, ಮೇಲು ಕೀಳು, ಅಸ್ಪೃಶ್ಯತೆ, ಅರ್ಥಶೂನ್ಯ ಆಚರಣೆಗಳು, ವಂಚನೆ ಇವುಗಳನ್ನು ಅವರು ಉಗ್ರವಾಗಿ ಖಂಡಿಸಿದರು. ಭಗವಂತನಲ್ಲಿ ನಿರ್ಮಲವಾದ ಭಕ್ತಿ ಮತ್ತು ಶ್ರದ್ಧೆ, ಇಹ ಮತ್ತು ಪರಲೋಕಗಳ ಸಮತೋಲನ ಹಾಗೂ ಅತಿರೇಕಗಳಿಲ್ಲದ ಮಧ್ಯಮವರ್ಗದ ಅನುಸರಣೆಗಳನ್ನು ಅವರು ಸಾರಿದರು. ಮಾನವಗೌರವ ಎಂಬ ಹೆಸರಿನಲ್ಲಿ ನೈತಿಕ ಮತ್ತು ಆಧ್ಯಾತ್ಮಿಕ ಸಮಾನತೆಯೆಂದೇ ಮನುಷ್ಯನನ್ನು ಇತರ ಕ್ಷೇತ್ರಗಳ ಲೌಕಿಕ ಪ್ರಗತಿಯ ಯಂತ್ರಗಳಿಂದ ಮೇಲಿನ ಸ್ಥಾನದಲ್ಲಿ ಇರಿಸಬಲ್ಲದು ಎಂದು ಭಾವಿಸಿದರು. ನಮ್ಮನ್ನು ನಾವು ಬದಲಾಯಿಸಿಕೊಳ್ಳಲು ಧರ್ಮವು ಸಹಾಯ ಮಾಡುತ್ತದೆ.[೧೦] ಸಮಾಜದಲ್ಲಿ ಅಂದು ದಬ್ಬಾಳಿಕೆ ಪ್ರವೃತ್ತಿ ಇರುವ ಜನತೆಗೆ ಕನಕದಾಸರ ವಿಚಾರಧಾರೆಗಳು ಅರ್ಥಗರ್ಭಿತವಾಗಿವೆ.

## ೩.೩. ದೇವಾಲಯ ಸಂಸ್ಕೃತಿ ಮತ್ತು ದಲಿತರು

ದೇವಾಲಯ ಸಂಸ್ಕೃತಿ ವಿಚಾರ ಸ್ಥಾಪಿತ ಬಲಾಢ್ಯ ವರ್ಗಗಳಿಗೆ ಸಂಬಂಧಿಸಿದ ವಿಚಾರವೆಂದು ಮೇಲ್ನೋಟಕ್ಕೆ ಕಂಡರೂ ಅದರ ಅಂತರಂಗದಲ್ಲಿ ಸಮಾಜದ ಎಲ್ಲಾ ಜನವರ್ಗಗಳು ಭಾಗಿಯಾಗಿ ಕಾರ್ಯ ನಿರ್ವಹಿಸುತ್ತಿದ್ದರು ಎನ್ನುವುದಕ್ಕೆ ಚರಿತ್ರೆ ಪುರಾವೆ ಒದಗಿಸುತ್ತವೆ. ಮಧ್ಯಕಾಲೀನ ಸಂದರ್ಭದಲ್ಲಿ ಬಹುತೇಕ ರಾಜವಂಶಗಳು ಸಾಮಂತ ಅರಸರು, ಪಾಳೇಗಾರರು ದೇವಾಲಯಗಳ ನಿರ್ಮಾಣಕಾರ್ಯಕ್ಕೆ ಹೆಚ್ಚಿನ ಮಹತ್ವಕೊಟ್ಟರು. ಆ ಮುಖಾಂತರ ಕಲೆ ಮತ್ತು ವಾಸ್ತುಶಿಲ್ಪವು ಉನ್ನತ ಹಂತವನ್ನು ತಲುಪಿತು. ಈ ನಿಟ್ಟಿನಲ್ಲಿ ದೇವಾಲಯಗಳ ನಿರ್ಮಾಣ ಕಾರ್ಯದ ಹಿಂದೆ ಜನ ಸಮುದಾಯದವರ ಕಾರ್ಯಕ್ಷೇತ್ರವೂ ವಿಸ್ತರಿಸಿಕೊಳ್ಳುತ್ತದೆ. ಅಂದರೆ ದೇವಾಲಯಗಳ ನಿರ್ಮಾಣ ಕಾರ್ಯದಲ್ಲಿ ಶ್ರಮ ವಹಿಸಿದವರು ಜನಸಾಮಾನ್ಯರೇ ಹೊರತು ಸಮಾಜದ ಉನ್ನತ ಸ್ತರದಲ್ಲಿದ್ದವರು ಅಲ್ಲ. ದೇವಾಲಯಗಳು ಆರಂಭಕಾಲಘಟ್ಟದಲ್ಲಿ ಭಕ್ತಿಕೇಂದ್ರಗಳಾಗಿ ಸ್ವರೂಪವನ್ನು ಪಡೆದುಕೊಂಡವು. ಆದರೆ ಅವುಗಳ ಇನ್ನೊಂದು ನೆಲೆಯಲ್ಲಿ ಅಧ್ಯಯನ ಮಾಡಿದಾಗ ಸಾಮಾಜಿಕ ಶ್ರೇಣೀಕರಣ, ಸ್ಥಾಪಿತ ಮೌಲ್ಯಗಳು, ರೂಢಿಸಂಪ್ರದಾಯಗಳು ಹಾಗೆಯೇ ಮುಂದುವರೆಯುವಂತೆ ವ್ಯವಸ್ಥಿತವಾಗಿ ನೋಡಿಕೊಳ್ಳಲಾಯಿತು. ದೇವಾಲಯಗಳು ಕೆಳಜಾತಿಗಳಿಗೆ ಮತ್ತು ದಲಿತರಿಗೆ ಶೋಷಣೆಯ ಕೇಂದ್ರಗಳಾಗಿ ಗೋಚರಿಸಿದವು ಎಂದರೆ ತಪ್ಪಾಗಲಾರದು. ಈ ಕುರಿತಂತೆ ದೇವಾಲಯಗಳು ಮತ್ತು ದಲಿತರಿಗೆ ಇರುವ ಅವಿನಾಭಾವ ಸಂಬಂಧಗಳು ಹಾಗೂ ಇತರೆ ಕಾರ್ಯಗಳನ್ನು ಪ್ರಸ್ತುತ ವಿಷಯದಲ್ಲಿ ಚರ್ಚಿಸಲು ಯತ್ನಿಸಲಾಗಿದೆ.

ಪ್ರಾಚೀನ ಕರ್ನಾಟಕದ ದೇವಸ್ಥಾನಗಳು ಜನರ ಭಕ್ತಿ ಮತ್ತು ನಿಷ್ಠೆಗಳ ಪ್ರತೀಕಗಳು. ದೇವಾಲಯದ ಚರಿತ್ರೆಯು ಕರ್ನಾಟಕದಲ್ಲಿ ಕ್ರಿ.ಶ.ಕ್ಕಿಂತ ಹಿಂದೆ ಹೋದರೂ, ಈಗ ಉಳಿದುಬಂದಿರುವ ದೇವಸ್ಥಾನಗಳಲ್ಲೆಲ್ಲ

ಅತ್ಯಂತ ಪ್ರಾಚೀನವಾದುದೆಂದರೆ ತಾಳಗುಂದದ ದೇವಸ್ಥಾನ. ಇವು ವಿವಿಧ ಜನಸಮುದಾಯಗಳ ಜನಸಂಪರ್ಕ ಕೇಂದ್ರಗಳಾಗುವುದರ ಜೊತೆಗೆ ಸ್ಥಾಪಿತ ಪದ್ಧತಿಗಳು ಸದಾ ಮುಂದುವರಿಯುವಂತೆ ಅನುವು ಮಾಡಿಕೊಟ್ಟವು. ಧರ್ಮವು ಸಮಾಜದಲ್ಲಿ ಪ್ರಧಾನ ಪಾತ್ರ ವಹಿಸಿತು. ಇದು ಇಡೀ ವ್ಯವಸ್ಥೆಯನ್ನು ನಿಯಂತ್ರಿಸುತ್ತಿತ್ತು. ಜಾತಿ ವ್ಯವಸ್ಥೆ ಮತ್ತು ಮೂಢನಂಬಿಕೆಗಳು ಸದಾ ಮುಂದುವರಿಯಲು ಸಮಾಜದ ಬಲಾಢ್ಯ ಶಕ್ತಿಗಳು ತಮ್ಮಲ್ಲೆ ಅಧಿಕಾರವನ್ನು ಕೇಂದ್ರಿಕರಿಸಿಕೊಂಡು ಎಲ್ಲಾ ರೀತಿಯ ಸೌಲತ್ತುಗಳನ್ನು ಪಡೆಯುವುದರ ಜೊತೆಗೆ ತಾವು ಇತರರಗಿಂತ ಉತ್ತಮರು ಎಂದು ತೋರಿಸಿಕೊಳ್ಳುತ್ತಿದ್ದರು. ಕೆಳಜಾತಿಗಳಿಗೆ ಮತ್ತು ದಲಿತರ ಪಾಲಿಗೆ ದೇವಾಲಯಗಳು ಯಾವಾಗಲೂ ಶೋಷಣೆಯ ಸಂಕೇತವಾಗಿ ಕಂಡಿವೆ. ಅಧ್ಯಯನದ ಅವಧಿಯಲ್ಲಿ ದೇವಾಲಯಗಳಿಗೆ ದಲಿತರ ಪ್ರವೇಶ ಕುರಿತು ಹಲವು ಆಂದೋಲನಗಳೇ ನಡೆದಿವೆ. ಆದರೆ ಅವು ಯಶಸ್ವಿಯಾಗಿರುವುದು ಮಾತ್ರ ಶೂನ್ಯವೆ. ಇವೆಲ್ಲ ಹಿನ್ನೆಲೆಗಳು ದೇವಾಲಯದ ನಿರ್ಮಾಣ ಹಂತದಲ್ಲಿ ಅದಕ್ಕೆ ಶ್ರಮಿಸಿದ ಶ್ರಮಿಕರನ್ನು ಸ್ಮರಿಸುವುದಿಲ್ಲ. ಆದರೆ ಯಾವುದೇ ಒಬ್ಬ ರಾಜ ಅಥವಾ ರಾಣಿಯ ಹೆಸರು ಮಾತ್ರ ಶಾಶ್ವತವಾಗಿ ಉಲ್ಲೇಖವಾಗುತ್ತದೆ. ನಿರ್ಮಾಣ ಯಾವ ಉದ್ದೇಶಕ್ಕಾಗಿ ಆಯಿತು, ಅದರ ಆಡಳಿತ ವರ್ಗ, ವಿದ್ಯಾಕೇಂದ್ರಗಳಾಗಿ, ನ್ಯಾಯಾಲಯಗಳಾಗಿ, ಪರಿಚಾರಿಕ ವರ್ಗ, ದೇವದಾಸಿ ಪದ್ಧತಿಯಂತಹ ಸೇವಾ ಪ್ರವೃತ್ತಿಯನ್ನು ಹುಟ್ಟುಹಾಕಿದ ಇವು ಆ ಸಂದರ್ಭದಲ್ಲಿ ವಿಭಿನ್ನ ಪಾತ್ರ ವಹಿಸಿವೆ. ದೇವಾಲಯಗಳು ಬಹುಪಾಲು ರಾಜಪ್ರಭುತ್ವದಿಂದ ಹೆಚ್ಚು ನಿರ್ಮಾಣ ಮಾಡಿಸಿರುವುದು ಶಾಸನಗಳಿಂದ ವೇದ್ಯವಾಗುತ್ತದೆ.[೧] ಇದಕ್ಕೆ ವ್ಯತಿರಿಕ್ತವಾಗಿ ಜನಸಾಮಾನ್ಯರೂ ಕೂಡ ದೇವಾಲಯಗಳನ್ನು ಕಟ್ಟಿರುವುದು ಮತ್ತು ದಾನಧರ್ಮಗಳನ್ನು ನೀಡಿರುವುದನ್ನು ಚರಿತ್ರೆಯಲ್ಲಿ ಗಮನಿಸಬಹುದು.

### ೩.೩.೧. ಪರಿಚಾರಕ ವರ್ಗ

ದೇವಾಲಯಗಳು ಸಾಮಾಜಿಕ ಸ್ತರವಿನ್ಯಾಸವನ್ನು ಸದಾ ಮುಂದುವರಿಸಲು ಕಾರಣೀಭೂತವಾದವು. ದೇವಾಲಯ ಆರ್ಥಿಕ ಸಶಕ್ತವಾಗುವುದರ ಜೊತೆಗೆ ವಿವಿಧ ಜನಸಮುದಾಯಗಳ ಸೇವೆಯ ಕೇಂದ್ರವಾಯಿತು. ಒಬ್ಬ ಅರ್ಚಕನಿಂದ ಹಿಡಿದು ಬೀದಿಯಲ್ಲಿ ಕಸ ಗುಡಿಸುವ ವ್ಯಕ್ತಿಯವರೆಗೂ ವಿವಿಧ ಕಾರ್ಯಗಳಿಗೆ ಜಾತಿ ಶ್ರೇಣೀಕರಣಕ್ಕೆ ಅನುಗುಣವಾಗಿ ನೇಮಿಸಿಕೊಳ್ಳಲಾಗುತ್ತಿತ್ತು. ದೇವಾಲಯದ ಗರ್ಭಗೃಹದಿಂದ ದ್ವಾರಬಾಗಿಲುವರೆಗೆ ಎಲ್ಲಾ ವರ್ಗದವರಿಗೆ ಮುಕ್ತ ಪ್ರವೇಶವಿರಲಿಲ್ಲ. ಬಹುತೇಕ ಕೆಳಜಾತಿ ಜನಾಂಗಗಳು ಮುಖಮಂಟಪದ ಹೊರಗಿನಿಂದಲೆ ದೇವತೆಯ ದರ್ಶನ ಪಡೆಯಬೇಕಾಗಿತ್ತು. ದೇವಸ್ಥಾನದ ಪರಿಚಾರಕ ವರ್ಗವೆಂದರೆ ಸರ್ವ ರೀತಿಯಲ್ಲಿ ದೇವಸ್ಥಾನವನ್ನು ಸ್ವಚ್ಛಗೊಳಿಸುವವರು. ಪೂಜೆಗೆ ಹೂಮಾಲೆಗಳನ್ನು ಒದಗಿಸುವುದರಿಂದ ಹಿಡಿದು ದೇವಸ್ಥಾನದ ಹೊರಭಾಗದ ಕಸ ಗುಡಿಸುವವರೆಗೂ ಸೇವೆಯನ್ನು ಸಲ್ಲಿಸಲಾಗುತ್ತಿತ್ತು. ದೇವಸ್ಥಾನದ ಪಕ್ಕದ ಹೂದೋಟವನ್ನು ತೋಟದ ತಳಾರನು ನೋಡಿಕೊಳ್ಳುತ್ತಿದ್ದನು. ಕೊಳಲನ್ನು ಬಾರಿಸುವವರು (*ವಂಶಕಾರ ಅಥವಾ ವಂಶಿಗ*), ಹರೆಯನ್ನು ಬಾರಿಸುತ್ತಿದ್ದ ಪರೆಕಾರ, ದೇವಸ್ಥಾನವನ್ನು ಕಾಯುತ್ತಿದ್ದವನು 'ಅಂಗಜಾವದ ಕಾಹಿನವನು'. ದೇವಸ್ಥಾನ ಶಿಥಿಲವಾದರೆ ರೂವಾರಿ ಅಥವಾ ಕಲ್ಕುಟಿಗನನ್ನ ನೇಮಿಸಲಾಗುತ್ತಿತ್ತು. ಕೊನೆಯದಾಗಿ 'ಪಾತ್ರ'ದವರು.

ಇವರನ್ನು ದೇವದಾಸಿಯರೆಂದು ಕರೆಯಲಾಗಿದೆ.[೧೨] ಪೂಜಾರಿಗಳು ಸೇರಿದಂತೆ ಪರಿಚಾರಕವರ್ಗ(ಸಮಸ್ತ ಊಳಿಗ)ವೆಂದು ದೇವಸ್ಥಾನದ ಸೇವೆಯಲ್ಲಿ ತೊಡಗುತ್ತಿದ್ದರು. ಹಾಸನ ಜಿಲ್ಲೆಯ ಹಳೇಬೀಡಿನ ಕೇದಾರೇಶ್ವರ ದೇವಾಲಯದಲ್ಲಿ ಶೂದ್ರರ ಸೇವೆ ಸಲ್ಲುತ್ತಿತ್ತು.[೧೩] ದೇವಾಲಯಗಳಿಗೆ ಅಗತ್ಯ ಮೂಲಸೌಲಭ್ಯಗಳನ್ನು ಒದಗಿಸಲು: *ಕಮ್ಮಾರರು, ಕುಂಬಾರರು, ಅಕ್ಕಸಾಲಿಗರು* ಮುಂತಾದವರನ್ನು ನಿಗದಿಗೊಳಿಸಲಾಗುತ್ತಿತ್ತು. ಕೆಲವು ಶೂದ್ರ ಸಮುದಾಯಗಳಿಗೆ ಸೇರಿದ ಸ್ತ್ರೀಯರು ಪೂಜಾರಿಕೆ ಕೆಲಸದಲ್ಲಿ ನಿರತರಾಗಿದ್ದರು ಎಂದು ತಿಳಿದುಬರುತ್ತದೆ. ಮೂಲಸ್ಥಾನ ದೇವಾಲಯದಲ್ಲಿ ರೇವಬ್ಬೆ ಎಂಬುವವಳು (ಸಿರಿವೂರು) ಪೂಜಾರಿಕೆ ಸ್ಥಾನದಲ್ಲಿ ಕಾರ್ಯ ನಿರ್ವಹಿಸುತ್ತಿದ್ದಳು. ರೇವಬ್ಬೆ ಎಂಬುವವಳು ಗೊರವಿಯಾಗಿದ್ದುಕೊಂಡು ದೇವಸ್ಥಾನದ ಕಾರ್ಯ ನಿರ್ವಹಿಸುತ್ತಿದ್ದಳು.[೧೪]

ದೇವಾಲಯಗಳು ಗ್ರಾಮಗಳ ಆಡಳಿತ ಮತ್ತು ಜಾತಿ ಕಟ್ಟಳೆಯ ಉನ್ನತ ನ್ಯಾಯಾಲಯಗಳಾಗಿದ್ದವು. ದೇವಾಲಯದ ಕೆಲಸಕಾರ್ಯಗಳಲ್ಲಿ ಭಾಗವಹಿಸುವುದು ಜಾತಿಯನ್ನು ಅವಲಂಬಿಸಿಕೊಂಡಿರುತ್ತಿತ್ತು. ಜಾತಿಯ ಆಧಾರದ ಮೇಲೆ ವಿವಿಧ ಜನ ವರ್ಗದವರು ದೇವಾಲಯಗಳ ಹಕ್ಕನ್ನು ಅನುಭವಿಸಬೇಕಾಗಿತ್ತು. ಬ್ರಾಹ್ಮಣರಿಗೆ ಮಾತ್ರ ಗರ್ಭಗುಡಿಯೊಳಗೆ ಪ್ರವೇಶಿಸಲು ಮತ್ತು ವಿಗ್ರಹಕ್ಕೆ ಪೂಜೆ ಮಾಡಲು ಅವಕಾಶವಿತ್ತು. ಅವರ ಕೆಳಗಿನ ಅಂತಸ್ತಿನವರು ಗರ್ಭಗುಡಿಯ ಮುಂದೆ ನಿಲ್ಲಬಹುದಾಗಿತ್ತು. ಆದರೆ ಒಳಗೆ ಹೋಗುವಂತಿರಲಿಲ್ಲ. ಮೂರನೇ ಅಂತಸ್ತಿನ ಜನರು ದೇವಾಲಯದ ಪ್ರಾಂಗಣದಲ್ಲಿ ಸೇರಲು ಅವಕಾಶವಿತ್ತು. ಇನ್ನೂ ಕೆಳ ಅಂತಸ್ತಿನವರು ದೇವಾಲಯದ ಪೌಳಿ ಆಚೆಯೇ ನಿಲ್ಲಬೇಕಾಗಿತ್ತು. ಅಸ್ಪೃಶ್ಯರು ದೇವಾಲಯದ ಬಳಿ ಎಷ್ಟೋ ಅಂತರದಲ್ಲಿ ನಿಲ್ಲಬೇಕಾಗಿತ್ತು. ದೇವಾಲಯಗಳು ಜಾತಿ ವ್ಯವಸ್ಥೆ, ಆರ್ಥಿಕ ಕೇಂದ್ರವಾಗಿ, ಭಯಭಕ್ತಿ ಮೂಡುವಂತೆ ಮಾಡಿ ಧಾರ್ಮಿಕ ಪ್ರಭುತ್ವವನ್ನು ಒಪ್ಪಿಕೊಳ್ಳುವಂತೆ ಮಾಡುತ್ತಿದ್ದವು.[೧೫] ಎಷ್ಟೋ ದೇವಸ್ಥಾನಗಳು ಗುಲಾಮರ ಮಾರಾಟದ ಕೇಂದ್ರವಾಗಿ ಕಾರ್ಯ ನಿರ್ವಹಿಸಿವೆ. ಕೆಳಜಾತಿಯ ಹೆಣ್ಣುಮಕ್ಕಳನ್ನು ಮಾರಾಟಮಾಡಲಾಗುತ್ತಿತ್ತು. ಮೇಲಿನ ವಿವರಣೆಗಳಿಂದ ಶೂದ್ರ ಮತ್ತು ದಲಿತರು ದೇವಾಲಯದ ಭಾಗವಾಗಿ ಪೂಜಾಕಾರ್ಯಗಳನ್ನು ನಿರ್ವಹಿಸುತ್ತಿದ್ದರು ಎಂಬುದು ವೇದ್ಯವಾಗುತ್ತದೆ. ಆದರೆ ಹೆಚ್ಚಿನದಾಗಿ ದೇವಾಲಯದ ಆಡಳಿತವರ್ಗವು ವ್ಯವಸ್ಥೆಯ ಭಾಗವಾಗಿ ಇವರನ್ನು ಬಳಸಿಕೊಂಡಿದ್ದಲ್ಲದೆ ಶೋಷಣೆಯ ಕೂಪಕ್ಕೆ ತಳ್ಳಿತು. ಈ ರೀತಿಯ ವಿವರಗಳು ಕರ್ನಾಟಕದುದ್ದಕ್ಕೂ ಕಾಣಿಸಿಕೊಳ್ಳುತ್ತವೆ. ಇತ್ತೀಚೆಗೆ ಕರ್ನಾಟಕ ಸರ್ಕಾರವು ದೇವಾಲಯಗಳ ಪುರೋಹಿತ ಕಾರ್ಯಕ್ಕೆ ದಲಿತರನ್ನು ನೇಮಿಸಿಕೊಳ್ಳಬೇಕೆಂಬ ಪ್ರಸ್ತಾವನೆಯನ್ನು ಇಟ್ಟಿರುವುದು ಗಮನಿಸಬಹುದು.

### ೩.೩.೨. ಮಠಗಳು

ದೇವಾಲಯಗಳ ಜೊತೆಗೆ *ಮಠಗಳು* ಸಹ ಅವಿಭಾಜ್ಯ ಅಂಗವಾಗಿ ಬೆಳೆದುಕೊಂಡು ಬಂದವು. ದೇವಾಲಯ ಸಂಸ್ಕೃತಿ ಮುಂದುವರಿದ ಭಾಗವೇ ಮಠಗಳು. ದೇವಸ್ಥಾನದ ಅಂಗವಾಗಿ ಮಠಗಳು ಕಾಣಿಸಿಕೊಳ್ಳಲಾರಂಭವಾದದ್ದು, ಕ್ರಿ.ಶ. ಆರು ಅಥವಾ ಏಳನೇ ಶತಮಾನಗಳಿಂದೀಚೆಗೆ ಎಂದರೆ ಕರ್ನಾಟಕದಲ್ಲಿ *ಲಾಕುಳ ಶೈವಧರ್ಮವು* ಪ್ರಚಾರದ ಬಳಿಕ. ತಮಿಳುನಾಡಿನ ಮಠಗಳ ಇತಿಹಾಸವೂ ಇದನ್ನೇ ಪೋಷಿಸುತ್ತದೆ. ಅಲ್ಲಿನ ಅತ್ಯಂತ ಪ್ರಾಚೀನ ಮಠಗಳು ಕ್ರಿ.ಶ. ೭ನೆಯ ಶತಕದ ಜ್ಞಾನಸಂಬಂಧರಿಗೆ ಸಂಬಂಧಿಸಿದವು (ಜ್ಞಾನಸಂಬಂಧರು ತಮಿಳುನಾಡಿನ ಶೈವಧರ್ಮಕ್ಕೆ

ಸೇರಿದವರು)[೯೬]. ದೇವಾಲಯ ಮತ್ತು ಮಠಗಳು ಅಭಿನ್ನ. ಅವುಗಳನ್ನು ಒಂದರಿಂದ ಮತ್ತೊಂದನ್ನು ಪ್ರತ್ಯೇಕಿಸುವುದು ಕಷ್ಟಸಾಧ್ಯ. ಅವು ಧಾರ್ಮಿಕ, ಸಾಮಾಜಿಕ ಮತ್ತು ಆರ್ಥಿಕ ಕೇಂದ್ರಗಳಾಗಿ ಸಹ ಕಾರ್ಯ ನಿರ್ವಹಿಸಿವೆ. ಮಠಗಳ ವರಮಾನ ಹೆಚ್ಚಾದಂತೆ ಸಮಾಜದ ಬಲಾಢ್ಯ ಸಮುದಾಯಗಳು ಆರ್ಥಿಕವಾಗಿ ಸಶಕ್ತವಾಗುತ್ತಿದ್ದವು. ಇದಕ್ಕೆ ವ್ಯತಿರಿಕ್ತವಾಗಿ ಕೆಳಜಾತಿಗಳ ಸ್ತ್ರೀ ಪುರುಷರನ್ನು ಮಠಗಳ ಚಾಕರಿ ಕೆಲಸಕ್ಕೆ ನೇಮಿಸಿಕೊಳ್ಳಲಾಗುತ್ತಿತ್ತು. ತನಗೆ ತೋಚಿದಾಗ ಅವರನ್ನು ಬದಲಾಯಿಸಿಕೊಳ್ಳಬಹುದಾಗಿತ್ತು ಮತ್ತು ಮಾರಾಟ ಮಾಡಬಹುದಾಗಿತ್ತು. ಈ ವಿಚಾರಕ್ಕೆ ಸಂಬಂಧಿಸಿದಂತೆ ಶೃಂಗೇರಿ ಧರ್ಮಸಂಸ್ಥಾನದಲ್ಲಿ ಮಾರಾಟ ಮಾಡಿದ ಕಡತಗಳಿವೆ.

ಮಠಮಾನ್ಯಗಳು ಮತ್ತು ದೇವಾಲಯಗಳು *ಭಕ್ತಿ* ಪರಿಕಲ್ಪನೆಯ ತಳಹದಿ ಸಂಸ್ಥೆಗಳಾಗಿ ಕೆಲಸ ಮಾಡಿದವು. ಇವು ಉತ್ತಮೋತ್ತರಿಗೆ ಸೇವೆ ಸಲ್ಲಿಸುವ ಮನೋಭಾವವನ್ನು, ಅವರಿಗೆ ನಿರಾತಂಕವೂ ಫಲಾಪೇಕ್ಷೆ ರಹಿತವೂ ಆದ ಶ್ರಮ ಹಾಗೂ ವಿಧೇಯತಾಭಾವವನ್ನು ಸಲ್ಲಿಸುವಂತೆ ಉತ್ತೇಜಿಸಿದವು. ದಾಸ್ಯದ ಮನೋಭಾವವನ್ನು ಸ್ವಂತದ ಲಾಭಕ್ಕಾಗಿ ಬಳಸಿಕೊಂಡ ಪುರೋಹಿತರು ಅಂತ್ಯಜರ ಸೇವೆಯನ್ನು ಕಡ್ಡಾಯವೆಂಬಂತೆ ಬಳಸಿಕೊಂಡರು. ಈ ದಾಸತ್ವ ಪರಂಪರೆಯನ್ನು ಬಹುತೇಕ ಮಠಗಳು ಎತ್ತಿಹಿಡಿದಿವೆ. ಇದರಿಂದಾಗಿ ಕೆಲವು ಪ್ರಮುಖ ಕುಶಲಕರ್ಮಿಗಳ ಮತ್ತು ಶ್ರಮಿಕರ ಸೇವೆಯು ಮುಕ್ತವಾಗಿಯೂ ತಲೆತಲಾಂತರದಿಂದಲೂ ಶಾಶ್ವತವಾಗಿ ಮಠಕ್ಕೆ ಸಲ್ಲುವಂತಾಯಿತು.[೯೭] ಮಠಗಳಿಗೆ ರಾಜರು, ಸಾಮಂತರು, ಸಮಾಜದ ಪ್ರತಿಷ್ಠಿತರು ನೀಡುತ್ತಿದ್ದ ದಾನಗಳಿಂದ ಆರ್ಥಿಕವಾಗಿ ಸದೃಢವಾಗುತ್ತಿದ್ದವು. ಮಧ್ಯಕಾಲೀನ ಕರ್ನಾಟಕದಲ್ಲಿ ಮಠಗಳು ಆಧ್ಯಾತ್ಮಿಕ, ಸಾಂಸ್ಕೃತಿಕ, ಆರ್ಥಿಕ, ರಾಜಕೀಯ ಮತ್ತು ಶೈಕ್ಷಣಿಕ ಕೊಡುಗೆಗಳನ್ನು ನೀಡಿದರೂ ಆಯಾ ಜಾತಿ ಸಮುದಾಯಗಳಿಗೆ ಸೀಮಿತವಾಗಿ ಕಾರ್ಯ ನಿರ್ವಹಿಸಿದವು. ಆ ಸಮಯದಲ್ಲಿ ಶೈವಧರ್ಮದ ಮಠಗಳು ಮುಖ್ಯವಾಗಿ ಕಾಳಾಮುಖ ಪಾಶುಪತ ಲಾಕುಲೀಶ ಕೇಂದ್ರಗಳು ಹೆಚ್ಚು. ಕೋಡಿಮಠ ಇಲ್ಲಿ ಉಲ್ಲೇಖನೀಯ, ಇದರ ನಿಜವಾದ ಹೆಸರು ಕೇದಾರೇಶ್ವರ ಮಠ. ಅದು ಕೇದಾರೇಶ್ವರ ದೇವಸ್ಥಾನದ ಅಂಗವಾಗಿದ್ದಿತು. ಪ್ರಾಚೀನ ಕರ್ನಾಟಕದ ಅತಿ ಪ್ರಸಿದ್ಧ ಶೈವಮಠವೆಂದರೆ ಇದೇ.[೯೮] ದೇವಸ್ಥಾನಕ್ಕೆ ನಿಕಟವಾಗಿ ಅನೇಕ ಮಠಗಳಿದ್ದವು. ಸಂಜೀಮಠ, ಚಿಕ್ಕಸಂಜೀಮಠ, ಲೋಕೇಶ್ವರ ಮಠ ಮುಂತಾದವುಗಳು ಸಾಮಾಜಿಕ ಜೀವನದಲ್ಲಿ ಪ್ರಮುಖ ಪಾತ್ರ ವಹಿಸಿದ್ದವು. ಐವೂರು (೧೦೭೮), ಅಂದೇಲಿ (೧೦೫೦), ಮರ್ತೂರು (೧೧೨೪) ಮಠಗಳು ದೀನದಲಿತರ ಉಪಚಾರ ಕೇಂದ್ರಗಳಾಗಿದ್ದವು. *ಲೆಂಕ, ಗರುಡ, ತೊತ್ತು, ಗುಡ್ಡ* ಹೆಸರಿನ ಶಿಷ್ಯರಿದ್ದುದಾಗಿ ತಿಳಿದುಬರುತ್ತದೆ.[೯೯] ವೀರಶೈವ ಮಠಗಳಲ್ಲಿ ಎರಡು ವಿಧಗಳಿವೆ. *ಗುರುಮಠಗಳು* ಹಾಗೂ *ವಿರಕ್ತಮಠಗಳು, ಹಿರೇಮಠ, ಸಾಲೀಮಠ, ಓಲೆಮಠ* ಮುಂತಾದವುಗಳು ಗುರುಪೀಠಗಳ ಶಾಖೆಗಳು. ಇವು ಧಾರ್ಮಿಕ ಮತ್ತು ಶೈಕ್ಷಣಿಕ ಪಾತ್ರಗಳನ್ನು ಮಾತ್ರ ಹೆಚ್ಚಾಗಿ ನಿರ್ವಹಿಸಿವೆ. ಆದರೆ ವಿರಕ್ತಮಠಗಳು ಆರ್ಥಿಕವಾಗಿಯೂ ಪಾತ್ರ ವಹಿಸಿ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ತಮ್ಮದೇ ಆದ ಕೊಡುಗೆಯನ್ನು ನೀಡಿವೆ.[೧೦೦] ಆ ಸಮಯದಲ್ಲಿ ನಾಡಿನಾದ್ಯಂತ ಮಠಗಳು ಕೇವಲ ಸಾಮಾಜಿಕ ಮತ್ತು ಆರ್ಥಿಕ ಕೇಂದ್ರಗಳಾಗಿ ಪಾತ್ರ ನಿರ್ವಹಿಸುವುದರ ಜೊತೆಗೆ ಕೆಳಜಾತಿ ಸ್ತ್ರೀಯರನ್ನು ಪರಿಚಿತ ಕಾರ್ಯಕ್ಕೆ ನೇಮಿಸಿಕೊಳ್ಳುತ್ತಿದ್ದರು.

ಇದಕ್ಕೆ ಉತ್ತಮ ಉದಾಹರಣೆ ಕೆಳದಿ ಸಂಸ್ಥಾನ. ಸ್ವಾದಿ ಮತ್ತು ಕೆಳದಿ ಅರಸರ ಕಾಲದಲ್ಲಿ ಸಿರಸಿಯಲ್ಲಿ ೧೦ ಮಠಗಳಿದ್ದವು.[೧೦೧] ಈ ಮೇಲೆ ನೀಡಿದ ವಿವರಗಳಿಂದ ಬಹುತೇಕ ಮಠಗಳು ಜನಸಾಮಾನ್ಯರ ಹಾಗು ದಲಿತರ ಶ್ರೇಯಸ್ಸಿಗೆ ಶ್ರಮಿಸಿವೆ ಎಂದರೆ ತಪ್ಪಾಗಲಾರದು.

**೩.೩.೩. ದೇವದಾಸಿ ಪದ್ಧತಿ**

ದೇವದಾಸಿಯರೆಂದರೆ ಭಗವಂತನ ದಾಸಿಯರು, ದೇವರ ಸೇವೆಗೆ ಮೀಸಲಾದವರು ಎಂದರ್ಥ. ದೇವಸ್ಥಾನಗಳಲ್ಲಿ ಗೀತನೃತ್ಯಗಳ ಮೂಲಕ ಭಗವಂತನ ಸೇವೆಯನ್ನು ಮಾಡಿಕೊಂಡು ಬದುಕುತ್ತಿದ್ದವರು. ಭಾರತದಲ್ಲಿ ಈ ಸಂಪ್ರದಾಯ ಅಷ್ಟೇನು ಪ್ರಾಚೀನವಾದುದ್ದಲ್ಲ ಎಂದು ಅಲ್ತೇಕರ್ ಅವರು ಅಭಿಪ್ರಾಯಪಡುತ್ತಾರೆ. ಕರ್ನಾಟಕದಲ್ಲಿ ಈ ಸಂಪ್ರದಾಯವು ಏನಿಲ್ಲವೆಂದರೂ ಕ್ರಿ.ಶ. ೭೭೮-೯ರಿಂದ ಕಂಡುಬರುತ್ತದೆ.[೧೦೨] ಆ ಅವಧಿಯಲ್ಲಿ ದೇವದಾಸಿ ಒಂದು ಅನಿಷ್ಟ ಪದ್ಧತಿಗಳಲ್ಲಿ ಒಂದಾಗಿತ್ತು. ಆದರೆ, ಸಮಾಜ ಅದನ್ನು ಸ್ವೀಕರಿಸಿತ್ತು. ಇದರಿಂದಾಗಿ ಬಡಜನತೆಯ ವರ್ಗವೊಂದು ಹುಟ್ಟಿಕೊಳ್ಳುವಂತಾಯಿತು. ಅವರನ್ನು *ದೇವದಾಸಿಯರು, ಪಾತರದವರು, ಬಸವಿಯರು ಹಾಗೂ ಸೂಳೆಯರು* ಎನ್ನುವ ಹೆಸರಿನಿಂದ ಕರೆಯಲಾಯಿತು. ಇವರು ಬೇರೆ ಬೇರೆ ಹಿನ್ನೆಲೆ ಹೊಂದಿದವರಾಗಿದ್ದು, ವೃತ್ತಿಗಳು ಬೇರೆ ಬೇರೆಯಾಗಿದ್ದವು. ಆದರೆ ಹೆಚ್ಚಿನ ಅಧ್ಯಯನಗಳು 'ದೇವದಾಸಿ'ಯರೆಂದು ಕರೆದಿವೆ.[೧೦೩]

ದೇವದಾಸಿ ಪದ್ಧತಿ ಕರ್ನಾಟಕದಲ್ಲಿ ಬಾದಾಮಿ ಚಾಲುಕ್ಯರ ಕಾಲದಿಂದ ಬೆಳಕಿಗೆ ಬಂದಿರಬೇಕು ಎಂದು ಹೇಳಲಾಗಿದೆ. ಬಹುಶಃ ಕ್ರಿ.ಶ. ೧೦ನೇ ಶತಮಾನದ ವೇಳೆಗೆ 'ಸೂಳೆ' ಎಂಬ ಶಬ್ದ *ಅಂಗಭೋಗ, ರಂಗಭೋಗ* ಎಂದು ಕವಲೊಡೆದಿರಬಹುದೆಂದು ತಿಳಿಯುತ್ತದೆ. ಅಂಗಭೋಗದ ಸೂಳೆಗೆ *ತೆರೆಯ ಮರೆಯ ಸೂಳೆ, ತೆರೆಯೊಳಗೆ ಬಿಟ್ಟಸೂಳೆ, ಪಿರಿಯರವಾಳ ಸೂಳೆ, ಪೆರ್ಗಡೆವಾಳ ಸೂಳೆ, ಪೆರುಕರಗ, ಭೋಗದ* ಸೂಳೆಯರೆಂದು ಹೆಸರಿಸಲಾಗಿದೆ. ರಂಗದಲ್ಲಿ ಹೆಚ್ಚಿನ ಪ್ರಾಮುಖ್ಯತೆ ಪಡೆಯುತ್ತಿದ್ದವಳು ಪಾತ್ರದ ಸೂಳೆ. ಇವರಿಗೆ ಭೂಮಿಯನ್ನು ದಾನ ಮಾಡಿದ ಅನೇಕ ಶಾಸನಗಳು ಲಭ್ಯವಾಗುತ್ತವೆ. ಕೆಳಜಾತಿಗಳಿಗೆ ಸೇರಿದ ಸೂಳೆಯರು ಹೆಚ್ಚಿನ ಪ್ರಮಾಣದಲ್ಲಿ ಕಂಡುಬರುತ್ತಿದ್ದರು. ಈ ವರ್ಗದವರನ್ನು ಪ್ರಭುತ್ವ ದೈಹಿಕವಾಗಿ ಮತ್ತು ಮಾನಸಿಕವಾಗಿ ಶೋಷಣೆ ಮಾಡಿರುವುದು ಸ್ಪಷ್ಟವಾಗಿದೆ. ಇಂದಿಗೂ ಕೂಡ ಸೂಳೆಯ ಬಗೆಗೆ ವೇಶ್ಯಾವಾಟಿಕೆ, ಬಸವಿ ಇತ್ಯಾದಿ ಪದಗಳ ಬಳಕೆಯಾಗುತ್ತಿರುವುದು ಹಾಗೂ ಮುಂದುವರಿಯುತ್ತಿರುವುದು ಆತಂಕಕ್ಕೆ ಎಡೆಮಾಡಿಕೊಟ್ಟಿದೆ. ಅಂದಿನ ರಾಜ ಸೂಳೆಯರ ಬಗ್ಗೆ ಸಹ ಶಾಸನಗಳು ಗಮನ ಸೆಳೆಯುತ್ತವೆ. ಸೂಳೆಯರಲ್ಲಿ *ವ್ಯಕ್ತಿಸೂಳೆ, ದೇವಸೂಳೆ, ಕಂಬದಸೂಳೆ, ಮಾಡದಸೂಳೆ, ಚಾಮರದ ಸೂಳೆ, ಪಾತ್ರದ, ಓಲಗದ, ಬಸವಿ, ನಾಟವ* [೧೦೪] ಎಂದು ಮುಂತಾದ ಹೆಸರುಗಳಿಂದ ಕರೆಯಲಾಗಿದೆ.

ರಂಗದಲ್ಲಿ ಹೆಚ್ಚಿನ ಪ್ರಾಮುಖ್ಯತೆ ಪಡೆದವಳು ಪಾತ್ರದ ಸೂಳೆ. ಇವರಿಗೆ ಭೂಮಿಯನ್ನು ದಾನ ಮಾಡಿದ ಅನೇಕ ಶಾಸನಗಳು ಲಭ್ಯವಾಗುತ್ತವೆ. ಪಾತ್ರದ ಮೆಲ್ಲವೆಯ ವಿಷಯ ಬಳ್ಳಿಗಾವೆಯ ಶಾಸನದಲ್ಲಿ ಮದ್ದಳೆ ಮಾದಿಗನೊಂದಿಗೆ ಅವಳಿಗೆ ದೇವವ್ರತ ವೃತ್ತಿಯಾಗಿ ಎರಡು ಮತ್ತರು ಗದ್ದೆ, ೧೦ ಗದ್ಯಾಣ ಹಣ, ಪುರದಲ್ಲಿ

ಮೂರು ಮನೆಗಳನ್ನು ಬಿಟ್ಟುಕೊಟ್ಟ ವಿಷಯವಿದೆ. ಹೊಯ್ಸಳರ ಕಾಲದ ಒಂದು ಶಾಸನದಲ್ಲಿ *ಪಾತ್ರದ ಮಣಿಗಾರ ಮಾದವ್ವೆ, ಆನೆಯ ಮಾಳವ್ವೆ, ನಾಗೌವ್ವೆ, ಚಂದವ್ವೆ, ಗೋಡವ್ವೆ, ಪಾತ್ರದ ಚಿಣ್ಣಯನ ದೇವವ್ವೆ,* ವಿಸ್ಪವೆ ಮುಂತಾದವರನ್ನು ಹೆಸರಿಸಬಹುದು.[೧೦೫] ದೇವನ ಪ್ರೀತ್ಯರ್ಥವಾಗಿ ಸಂಗೀತಸೇವೆ ಸಲ್ಲಿಸುವವರನ್ನು ಶಾಸನಗಳು ಬಲಗದ ಸೂಳೆಯೆಂದು 'ಪಾಡುವವರು' ಎಂದು ಕರೆದಿವೆ. ಇವರಲ್ಲಿ ವಂಶಗ ಕೊಳಲು ನುಡಿಸುವವ, ಪೆರಕಾರ (*ಹಲಗೆ ನುಡಿಸುವವ*), ಮದ್ದಳಿಗೆ ಮೃದಂಗ ನುಡಿಸುವವರು ಮುಂತಾದವರು ಇರುತ್ತಿದ್ದರು. ಕಲಿದೇವರ *ತೊತ್ತು* ನಾಗವ್ವೆಯ ಮಗಳು ಹಾಡುವ ಕಾಮವೆಂದು ಉಲ್ಲೇಖ ಬಾಗಳಿ ಶಾಸನದಲ್ಲಿ ಕಂಡುಬರುತ್ತದೆ. ನಾಗಾವಿಯ ಮಧುಸೂಧನ ದೇವಾಲಯದ ನಾಲ್ಕರು ಮದ್ದಳೆಕಾರರಿಗೆ ೪೦ ಮತ್ತರು ಬಾಳೇಶ್ವರದ ಪರೆಕಾರರಿಗೆ ೧೨ ಮತ್ತರು ಭೂಮಿ ನೀಡಿರುವುದು.[೧೦೬] ಕೆಳಜಾತಿಯ ಹೆಂಗಸರು ಕೇವಲ ಜೀವಿಕೆಗಾಗಿ ತಮ್ಮ ಗಂಡಸರೊಂದಿಗೆ ಸರಿಸಮಾನರಾಗಿ ದುಡಿಯಬೇಕಾಗಿತ್ತು. ಇವರು ಶ್ರಮಜೀವಿಗಳು ಮತ್ತು ಪರಾವಲಂಬಿಗಳು. ಅವರಲ್ಲಿ ಕೆಲವರು ವೇಶ್ಯೆಯರು. ಸರ್ಕಾರಕ್ಕೆ ತೆರಿಗೆಯನ್ನು ಕಟ್ಟುತ್ತಿದ್ದರು. ದೇವದೇವತೆಯರ ಅನುಗ್ರಹವನ್ನು ಪಡೆಯುತ್ತಿದ್ದರು. ಅವರಲ್ಲಿ ಕೆಲವರು ದೇವಾಲಯ ಅಥವಾ ಮಠಗಳಿಗೆ ಸೇರಿದವರು. ದೇವಾಲಯಗಳಿಗೆ ಸೇರಿದರೂ ನಿಗದಪಡಿಸಿದ ಕರ್ತವ್ಯಗಳನ್ನು ನಿರ್ವಹಿಸಬೇಕಾಗಿತ್ತು. ಅವಳ ವೃತ್ತಿಯು ವ್ಯಾಪಾರವಾಗಿ ಕೆಲವೊಮ್ಮೆ ಮಾರ್ಪಾಡು ಆಗುತ್ತಿತ್ತು. ಮೇಲ್ಜಾತಿಗಳ ಪುರುಷರು ಇವರನ್ನು ಬಳಸಿಕೊಳ್ಳುತ್ತಿದ್ದರು. ಭೇದ ಕಲ್ಪಿಸುವಂತಿರಲಿಲ್ಲ. ಮೇಲುಕೀಳು ಎಂದು ನೋಡಿ ಆರಿಸಿಕೊಳ್ಳುತ್ತಿರಲಿಲ್ಲ.[೧೦೭] ದೇವಾಲಯಗಳಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಜನಗಳಿಗೆ ಕಲಚೂರಿ ಚಕ್ರವರ್ತಿಯ ಒದು ಶಾಸನವು ಮಹಾಜನಗಳ ಸನ್ನಿದಾನದಲ್ಲಿ ಹರಿಹರದೇವರಿಗೆ, ಸೂಳೆಗೇರಿಗೆ ಅಂಗಭೋಗ ರಂಗಭೋಗಕ್ಕೆ ತಮ್ಮ ಶ್ರೇಯೋಭಿವೃದ್ಧಿಗಾಗಿ ಎಡೆಹಳ್ಳಿಗೇರಿಯಲ್ಲಿ ಕೆಲವು ದಾನಗಳನ್ನು ಬಿಡುತ್ತಾರೆ.[೧೦೮] ಪ್ರಾಚೀನ ಕರ್ನಾಟಕದಲ್ಲಿ ದೇವಾಲಯಗಳು ಕೆಳಜಾತಿ ಮತ್ತು ದಲಿತ ಸಮುದಾಯಗಳಿಗೆ ಶೋಷಣೆಯ ಕೇಂದ್ರವಾಗಿ ಕಾಣಿಸಿಕೊಂಡಿವೆ ಎಂದರೆ ತಪ್ಪಾಗಲಾರದು. ಶ್ರಮಸಮುದಾಯಗಳು ದೇವಾಲಯಕ್ಕೆ ಸಂಬಂಧಿಸಿದ ಪರಿಚಾರಿಕ ಕೆಲಸಗಳನ್ನು ನಿರ್ವಹಿಸಬೇಕಾಗಿತ್ತು. ಸಾಮಾನ್ಯ ಜನತೆಯನ್ನು ದೇವಾಲಯದ ಗರ್ಭಗೃಹದಿಂದ ದೂರವಿರುವಂತೆ ನಿರ್ಬಂಧಿಸಲಾಗಿತ್ತು. ಆ ಮುಖಾಂತರ ರೂಢಿ-ಸಂಪ್ರದಾಯಗಳು ಹಾಗೆಯೇ ಮುಂದುವರಿಯುವಂತೆ ಸಹಾಯಕವಾಗುತ್ತಿತ್ತು.

## ೩.೪. ಲಿಂಗವಂತ ಕುರುಬರು ಮತ್ತು ಲಿಂಗವಂತ ದಲಿತರು

ಮಧ್ಯಕಾಲೀನ ಕರ್ನಾಟಕವು ಹಲವು ಬಗೆಯ ಸೈದ್ಧಾಂತಿಕ ಹಿನ್ನೆಲೆಗಳನ್ನು ಕಂಡಿದೆ. ಈ ಸೈದ್ಧಾಂತಿಕ ರೂಪುರೇಷೆಗಳು ಸಮಾಜದ ಮೇಲ್‌ಚಲನೆಯ ಸ್ವರೂಪಗಳನ್ನು ಆವರಿಸಿಕೊಂಡಿವೆ. ಇದೊಂದು ಸಾಮಾಜಿಕ ಪಲ್ಲಟವೆಂಬಂತೆ ಅಂದಿನ ಕೆಲವು ಸಮುದಾಯಗಳು ಗುರುತಿಸಿಕೊಂಡವು. ಅವುಗಳಲ್ಲಿ ಮುಖ್ಯವಾಗಿ ದಲಿತ ಸಮುದಾಯಗಳು ಸೇರ್ಪಡೆಗೊಂಡವು. ಇದರ ಹಿನ್ನೆಲೆಯನ್ನು ಗಮನಿಸುವುದಾದರೆ ಸಾಮಾಜಿಕ ಶ್ರೇಣೀಕರಣದಿಂದ ತುಳಿತಕ್ಕೆ ಒಳಪಟ್ಟ ಸಮುದಾಯಗಳು ಸಾಮಾಜಿಕ ಜೀವನದಿಂದ ತಮ್ಮೆಲ್ಲ ನೋವು ನಲಿವುಗಳನ್ನು ಕಳಚಿಕೊಳ್ಳಲು ಹಾಗು ರೂಢಿಗತ ಕಠೋರ ಸಂಪ್ರದಾಯಗಳಿಂದ ವಿಮುಕ್ತಿಹೊಂದಲು ಈ ಬಗೆಯ ಪಲ್ಲಟಗಳು ಅಂದಿನ

ಸಮುದಾಯಗಳಿಗೆ ಅನಿವಾರ್ಯವಾಗಿ ಕಂಡಿರಬೇಕು. ಈ ಹಿನ್ನೆಲೆಯಲ್ಲಿ ಮಧ್ಯಕಾಲೀನ ಸಮಾಜವು ಕುರುಬರು, ದಲಿತರು ಸಮಾಜದ ಮೇಲ್‌ಸ್ತರಗಳ ಸಂಪ್ರದಾಯಗಳನ್ನು ರೂಢಿಸಿಕೊಳ್ಳುವುದಲ್ಲದೆ ಹೊಸದಾಗಿ ಒಪ್ಪಿಕೊಂಡ ಜಾತಿ ಅಥವಾ ಧರ್ಮದ ನಿಲುವುಗಳಿಗೆ ಪಲ್ಲಟವಾಗತೊಡಗಿದರು.

ಪ್ರಾಚೀನ ಕರ್ನಾಟಕದಲ್ಲಿ *ವೈದಿಕ, ಜೈನ, ಲಿಂಗಾಯತ* ಈ ಮೂರು ಸಮಾಜಗಳು ತಮ್ಮದೇ ಆದ ಸಿದ್ಧಾಂತವನ್ನು ರೂಪಿಸಿಕೊಂಡ ಧರ್ಮಗಳೆನಿಸವೆ. ಮಿಕ್ಕ ಒಕ್ಕಲಿಗ, ಕುರುಬ, ಬೇಡ ಮೊದಲಾದ ಹಿಂದುಳಿದ, ಹೊಲೆಯ, ಮಾದಿಗ ಇತ್ಯಾದಿ ಅಸ್ಪೃಶ್ಯ ಸಮಾಜಗಳು ಇಂತಹ ಯಾವುದೇ ಸಿದ್ಧಾಂತಗಳನ್ನು ರೂಪಿಸಿಕೊಳ್ಳದೆ, ಪ್ರಾದೇಶಿಕ ದೇಶೀ ದೈವಗಳ ಅನುಯಾಯಿಗಳಾಗಿದ್ದು ಕೇವಲ ಸಂಪ್ರದಾಯಗಳೆನಿಸಿವೆ. ಮಿಕ್ಕೆಲ್ಲ ಸಮಾಜಗಳಿಗಿಂತ ಕುರುಬರು ವೀರಶೈವ ಮತದ ವಿಧಿವಿಧಾನಗಳನ್ನು ಅಳವಡಿಸಿಕೊಳ್ಳಲು ಕೆಲವು ಕಾರಣಗಳಿವೆ. ಲಿಂಗಾಯತಕ್ಕೆ ಮತಾಂತರಗೊಳ್ಳಲು ಅನುಕೂಲವೆನಿಸುವ ಶೈವ ಸಂಪ್ರದಾಯದವರಾಗಿರುವುದೂ ಕಾರಣವಾಗಿದೆ. ಸಂಸ್ಕೃತಿ, ಸಮಾನ ಆಚರಣೆಗಳು, ಅಂದರೆ ಜನನಮರಣ ಇತ್ಯಾದಿ ಸಂಸ್ಕಾರಗಳು ಪರಸ್ಪರ ಹೋಲುತ್ತವೆ. ಕುರುಬರ ಗುರುಗಳನ್ನು *ಒಡೆಯರು* ಎಂದು ಕರೆಯುತ್ತಾರೆ. ಈ ಅಡ್ಡ ಹೆಸರು ಕೆಲವು ವೀರಶೈವ ಜಂಗಮ ಕುಟುಂಬಗಳಿಗೂ ಇರುವುದು ಇವೆರಡರ ಸಂಬಂಧವನ್ನು ಸೂಚಿಸುತ್ತದೆ. ಕುರುಬರ ಮಂಗಳ ಕಾರ್ಯದಲ್ಲಿ ಆ ಸಮಾಜದ ಗುರುಗಳಾದ ಒಡೆಯರು ಪೌರೋಹಿತ್ಯ ವಹಿಸುತ್ತಾರೆ. ಕೆಲವೊಮ್ಮೆ *ಲಿಂಗಾಯತ ಜಂಗಮರು* ವಹಿಸುತ್ತಾರೆ. ಕುರುಬರಲ್ಲಿ *ಹಂಡೆ ಕುರುಬರು* ಎಂಬ ಒಂದು ಪಂಗಡವಿದೆ. ಇವರು ಲಿಂಗಧಾರಿಗಳು, ವಿಭೂತಿಧಾರಿಗಳು, ಶಾಕಾಹಾರಿಗಳಾಗಿದ್ದು, ಒಂದರ್ಥದಲ್ಲಿ ಲಿಂಗಾಯತರಂತೆ ಬಾಳುತ್ತಲಿದ್ದಾರೆ.[೧೦೯] ಒಂದರ್ಥದಲ್ಲಿ ಮೂಲದಲ್ಲಿ ಎರಡು ಸಮುದಾಯಗಳು ಸಾಮಾಜಿಕ ವಿಧಾನದಲ್ಲಿ ಸಮನ್ವಯ ಸಾಧಿಸಿದಂತೆ ಕಂಡುಬರುತ್ತದೆ.

ಕುರುಬರಲ್ಲಿ *ಒಡೆಯರು* ಎಂಬ ಅದೇ ಜಾತಿಯಲ್ಲಿ ಉಪಜಾತಿ ಎಂದು ಹೇಳಬಹುದಾದ ಒಂದು ವರ್ಗವು ಪುರೋಹಿತ ಸ್ಥಾನದಲ್ಲಿದ್ದುಕೊಂಡು ಕುರುಬರ ಎಲ್ಲ ಧಾರ್ಮಿಕ ವಿಧಿಗಳಿಗೆ ಬಾಧ್ಯರಾಗಿದ್ದಾರೆ. ಒಡೆಯರ ಹೆಂಡತಿ 'ಒಡೆಯರಮ್ಮ'. ಒಡೆಯ ಎಂದರೆ ಯಜಮಾನ ಅಥವಾ ಮುಖ್ಯಸ್ಥ. ಮೈಸೂರು ಅರಸರು ಈ ಹೆಸರನ್ನು ಹೊಂದಿದ್ದರು. ಕುರುಬರು ಇರುವಲ್ಲಿ ಒಡೆಯರು ಇರಬೇಕೆಂದು ನಿಯಮವೇನು ಇಲ್ಲ. ಮೈಸೂರು, ಮಂಡ್ಯ ಜಿಲ್ಲೆಗಳಲ್ಲಿ ಇವರ ಸಂಖ್ಯೆ ತುಂಬಾ ಕಡಿಮೆಯಿದೆ. ಅವರು ಇರುವ ಕಡೆಗಳೆಲ್ಲ 'ರೇವಣಸಿದ್ಧೇಶ್ವರ' ಮಠವಿರುತ್ತದೆ. ಒಡೆಯರು ಅದರ ಅರ್ಚಕರು ಕುರುಬರ ಇನ್ನೊಂದು ದೈವವಾದ ಬೀರ ದೇವರನ್ನು ಒಡೆಯರು ಪೂಜಿಸುವುದಿಲ್ಲ. ಇವರಿಗೆ ಒಡೆಯರು ದೀಕ್ಷೆ ಕೊಟ್ಟಿರುತ್ತಾರೆ. ವೀರಶೈವರಲ್ಲಿ ವೀರಭದ್ರ ಮತ್ತು ಈಶ್ವರನಿದ್ದಂತೆ ಕುರುಬರಲ್ಲಿ *ಬೀರ* ಮತ್ತು *ರೇವಣಸಿದ್ಧೇಶ್ವರ.* ಬೀರಲಿಂಗೇಶ್ವರನನ್ನು ಪೂಜಿಸುವವರು ಮಾಂಸಾಹಾರಿಗಳಾದರೆ, ಒಡೆಯರು ಶುದ್ಧ ಸಸ್ಯಾಹಾರಿ. ವೀರಶೈವರಲ್ಲಿ ಪಟ್ಟದ ಗುರುಗಳು ಮತ್ತು ವಿರಕ್ತ ಗುರುಗಳು ಇರುವಂತೆ, ಒಡೆಯರಲ್ಲಿ ಶಾಂತ ಒಡೆಯರು ಮತ್ತು ಮಂಕು ಒಡೆಯರು ವರ್ಗಗಳಿವೆ. ಒಂದು ಕಾಲಘಟ್ಟದಲ್ಲಿ ಮಾಂಸಾಹಾರಿಗಳಾಗಿದ್ದ ಮತ್ತು ಸಾಮಾಜಿಕವಾಗಿ ಸ್ವಲ್ಪ ಕೆಳಗಿನವರೆಂದು ಕಂಡುಬಂದಿದ್ದರಿಂದ ಒಡೆಯರು ಉಳಿದ ಕುರುಬ ಜನಾಂಗದವರಿಗೆ ಒಡೆಯರದೆ ಒಂದು ಗುಂಪಾದಂತೆ ಕಂಡುಬರುತ್ತದೆ.[೧೧೦] ಸಸ್ಯಾಹಾರಿಗಳಾದ ಒಡೆಯರು

ಇನ್ನೊಂದು ಒಡೆಯರ ಮನೆತನದೊಡನೆ ಸಂಬಂಧವನ್ನೇ ಬೆಳೆಸುವಂತಿಲ್ಲ. ಅವರು ಕಡ್ಡಾಯವಾಗಿ ಮಾಂಸಾಹಾರಿಗಳಾದ ಕುರುಬರ ಮನೆಗೇ ಹೆಣ್ಣು ಕೊಟ್ಟು ತರಬೇಕು. ಪುರೋಹಿತ-ಭಕ್ತ, ಸಸ್ಯಾಹಾರಿ-ಮಾಂಸಾಹಾರಿ ಸಂಸಾರಗಳ ಮಧ್ಯೆ ನಡೆಯುವ ವಿವಾಹಗಳೂ ಕೂಡ ಒಡೆಯರ್ ಜನಾಂಗದ ಒಂದು ವೈಶಿಷ್ಟ್ಯ. ಜಾತಿಭೇದದ ಕೆಟ್ಟ ಪರಿಣಾಮಗಳನ್ನು ಮೇಲಿನ ವ್ಯವಸ್ಥೆ ಹೇಗೆ ತೊಡೆದುಹಾಕಿದೆಯೆಂಬುದನ್ನು ಗಮನಿಸಬೇಕು. ಒಡೆಯರು ಯಾರು? ಅವರ ಲಿಂಗಾಯತತ್ವಕ್ಕೆ ಕಾರಣ ಏನು? ಯಾವ ಕಾಲಘಟ್ಟದಿಂದ ಅವರಲ್ಲಿ ಈ ಪದ್ಧತಿ ಪ್ರಾರಂಭವಾಯಿತು. ಮುಂತಾದ ಪ್ರಶ್ನೆಗಳಿಗೆ ಉತ್ತರಿಸುವುದು ಕಷ್ಟಸಾಧ್ಯ.[೧೧೧] ಈ ಕುರಿತು ಹೆಚ್ಚಿನ ಸಂಶೋಧನೆಗೆ ಅವಕಾಶವಿದೆ. ನಿರ್ದಿಷ್ಟವಾಗಿ ಇಂಥದೇ ಶತಮಾನದಲ್ಲಿ ಅಥವಾ ಕಾಲಘಟ್ಟದಲ್ಲಿ ಈ ಬಗೆಯ ಬದಲಾವಣೆಗೆ ಅವಕಾಶವಾಯಿತು ಎಂದು ಹೇಳುವುದು ಕಷ್ಟವಾಗುತ್ತದೆ. ಆದರೆ ಹನ್ನೆರಡನೆ ಶತಮಾನದ ತರುವಾಯ ಈ ರೀತಿಯ ಪಲ್ಲಟಗಳು ಸಮಾಜದಲ್ಲಿ ಕಂಡುಬರುತ್ತಿದ್ದವು.

ಕುರುಬರ ಬೀರಲಿಂಗನೇ ಚರಿತ್ರೆಯ ಇನ್ನೊಂದು ಘಟ್ಟದಲ್ಲಿ ಲಿಂಗಾಯಿತರ ವೀರಭದ್ರನಾಗಿ ಪರಿವರ್ತಿತಗೊಂಡಿದ್ದಾನೆ ಎಂದು ಎಂ.ಎಂ. ಕಲಬುರ್ಗಿ ಅಭಿಪ್ರಾಯಪಡುತ್ತಾರೆ. ಬೆಳಗಾಂ ಜಿಲ್ಲೆಯ ಏಡೂರ ವೀರಭದ್ರ ದೇವಾಲಯದ ಗರ್ಭಗುಡಿಯ ಹೊರ ಗೋಡೆಯಲ್ಲಿ ಬೀರಪ್ಪನ ಗದ್ದುಗೆಯಿದೆ. ಈ ಗ್ರಾಮ ಪರಿಸರದಲ್ಲಿ ಕುರುಬರ ಸಂಖ್ಯೆ ಅಧಿಕ. ಇಡ್ಡೆಕುರುಬ ಇದೇ *ಎಡೆಯೂರು* ಎಂಬ ರೂಪವಾಗಿ ಬೆಳೆದಿರಬಹುದು ಎಂದು ಅಭಿಪ್ರಾಯಪಡುತ್ತಾರೆ. ವೀರಭದ್ರನ ಯಾವುದೇ ವಿಗ್ರಹದ ಮಗ್ಗಲು ಕುರುಬರ ಟಗರಿನ ತಲೆಯ ದಕ್ಷಬ್ರಹ್ಮನ ತಲೆಯ ರೂಪದಲ್ಲಿ ಉಳಿದುಬಂದದು ಗಮನಾರ್ಹವೆನಿಸಿದೆ. ಹಳೆಯ ವೀರಭದ್ರನ ದೇವಾಲಯಗಳ ವಿಗ್ರಹದ ಕೈಯಲ್ಲಿ ಖಡ್ಗಕ್ಕೆ ಬದಲು ಮಗ್ಗುಲಲ್ಲಿ ಕೋಲು ಇರುತ್ತಿದ್ದು, ಇದನ್ನು ದೋಟಿಯೆಂದು ಕರೆಯುತ್ತಾರೆ. ದೋಟಿಯೆಂದರೆ ಕುರಿಗಾಗಿ ಗಿಡದ ತಪ್ಪಲು ಕೆತ್ತಲಿಕ್ಕೆ ಬಳಸುವ ಕೋಲು, ಇವೆಲ್ಲ ಅಂಶಗಳು ಕುರುಬರು ಮತ್ತು ವೀರಶೈವರ ಸಾರ್ವತ್ರಿಕ ದೇವತೆಗಳೆಂಬುದನ್ನು ನೆನಪಿಸಿಕೊಂಡರೆ ಈ ಸಮಾಜಗಳು ಪರಸ್ಪರ ಪೂರಕವೆಂದು, ಸಂಸ್ಕೃತಿಗಳು ಪರಸ್ಪರ ಹತ್ತಿರದವೆಂದು ಇನ್ನು ಸ್ಪಷ್ಟವಾಗುತ್ತದೆ.[೧೧೨] ಕರ್ನಾಟಕ ಚರಿತ್ರೆಯಲ್ಲಿ ಈ ಸಮುದಾಯಕ್ಕೆ ಸಂಬಂಧಿಸಿದ ರಾಜವಂಶಗಳು ಆಳ್ವಿಕೆ ನಡೆಸಿರುವುದನ್ನು ಗಮನಿಸಬಹುದಾಗಿದೆ. ಗುಲ್ಬರ್ಗ ಜಿಲ್ಲೆಯ ಕೊರಳಿಯ ಉರಿಲಿಂಗಪೆದ್ದಿ ಮಠದ ಅಧ್ಯಕ್ಷರು ಮೂರುನಾಲ್ಕು ದಶಕಗಳ ಹಿಂದೆ ಹರಿಜನರಿಗೆ ಲಿಂಗದೀಕ್ಷೆ ಕೊಟ್ಟರು. ಅಂತಹ ಸಂದರ್ಭದಲ್ಲಿ ಆ ಸ್ವಾಮಿಗಳಿಗೆ ಸಂಪ್ರದಾಯನಿಷ್ಠ ಲಿಂಗಾಯಿತರಿಂದ ಹಿಂಸೆಯೂ ಆಯಿತು. ಉರಿಲಿಂಗ ಪೆದ್ದಿ ಸಂಪ್ರದಾಯದ ಹರಿಜನ ಮನೆಗಳಲ್ಲಿ ಕೆಲವರು ಲಿಂಗವಂತರಾಗಿದ್ದರೆ, ಉಳಿದವರು ಹಾಗೆಯೇ ಉಳಿದಿದ್ದಾರೆ. ಮದ್ಯ ಮಾಂಸ ವಿಸರ್ಜನೆ ಮಾಡಬೇಕು, ಲಿಂಗಧರಿಸಿ ನಿತ್ಯವೂ ಸ್ನಾನ ಮಾಡಿ ಪೂಜಿಸಬೇಕು. ಇವು ಲಿಂಗವಂತ ಹರಿಜನರು ಅನುಸರಿಸಬೇಕಾದ ವಿಧಿಗಳು. ಉಳಿದ ಮಾಂಸಾಹಾರಿ ಹರಿಜನ ಬಂಧುಗಳು ಜೊತೆ ಯಾವುದೇ ಸಂಬಂಧವನ್ನು ಇಟ್ಟುಕೊಳ್ಳಕೂಡದು. ಅವರಿಗೆ ಹುಟ್ಟಿದ ಮಗುವಿಗೆ ಹತ್ತನೆಯ ದಿನ ಕೊರಳಿಗೆ ಲಿಂಗವಸ್ತ್ರ ಕಟ್ಟಿ, ಕಿವಿಯನ್ನು ಪಂಚಾಕ್ಷರಿ ಬೋಧಿಸಿ (*ಕರಣ ಬೋಧ*) ರುದ್ರಾಕ್ಷಿಯನ್ನು ಕಟ್ಟುತ್ತಾರೆ. (*ಮಣಿದೀಕ್ಷೆ*) ಕೆಲವರು ಮದುವೆ ಸಮಯದಲ್ಲಿ ಲಿಂಗಧಾರಣೆ ಮಾಡಿಸುತ್ತಾರೆ.[೧೧೩]

ಉರಿಲಿಂಗ ಪೆದ್ದಿಯ ಸಂಪ್ರದಾಯದವರೆಂದು ಹೇಳಿಕೊಳ್ಳುವ ಲಿಂಗಾಯತ ಅಸ್ಪೃಶ್ಯರ ಬಗೆಗೆ ಬಳ್ಳಾರಿ ಜಿಲ್ಲೆಯ ಒಂದು ಹಳ್ಳಿಯಲ್ಲಿ ಹರಿಜನ ವೀರಶೈವರ ಕುರಿತು ಬಸವರಾಜ ಕಲ್ಗುಡಿ ಮಾಹಿತಿ ಒದಗಿಸಿದ್ದಾರೆ. ಮರುಳಸಿದ್ದನ ಪಂಥದವರೆಂದು ಹೇಳಿಕೊಳ್ಳುವ ಇವರು ಲಿಂಗ ಕಟ್ಟುತ್ತಾರೆ, ಸಸ್ಯಾಹಾರಿಗಳು, ಮರುಳಸಿದ್ದನ ಪಾದುಕೆಗಳನ್ನು ಪೂಜಿಸುತ್ತಾರೆ. ಮರುಳಸಿದ್ಧನ ದೇವಸ್ಥಾನ ಆವರಣದಲ್ಲಿ ಮಾತ್ರ ವಾಸಿಸುವ ಇವರು ಹೆಣ್ಣನ್ನು ತಮಗಿಂತ ಕೀಳೆಂದು ಭಾವಿಸಿರುವ ಹೊಲೆಯರ ಮನೆಯಿಂದ ತಂದುಕೊಳ್ಳುತ್ತಾರೆ. ಏಕೆಂದರೆ ಸಂಪ್ರದಾಯಸ್ಥ ಲಿಂಗಾಯತರು ಇವರಿಗೆ ಹೆಣ್ಣು ಕೊಡುವುದಿಲ್ಲ. ಆದರೆ ಇವರಲ್ಲಿ ಹುಟ್ಟುವ ಹೆಣ್ಣು ಮಕ್ಕಳನ್ನು ಹೊಲೆಯರ ಮನೆಗಳಿಗೆ ಇವರು ಮದುವೆ ಮಾಡಿಕೊಡುವುದಿಲ್ಲ. ಲಿಂಗಾಯತ ಸಂಪ್ರದಾಯಸ್ಥರೂ ಸಹ ಇವರನ್ನು ತಂದುಕೊಳ್ಳುವುದಿಲ್ಲ. ಹೀಗಾಗಿ ಇವರು ದೇವದಾಸಿಯಾಗಿದ್ದಾರೆಂದು ಅಭಿಪ್ರಾಯಪಡಲಾಗಿದೆ.[೧೧೪] ಲಿಂಗಾಯಿತ ಅಸ್ಪೃಶ್ಯರ ವಿವಾಹಗಳು ಒಂದು ವೇಳೆ ಲಿಂಗವಂತರಲ್ಲದವರಿಗೆ ಹೆಣ್ಣುಗಳನ್ನು ಕೊಟ್ಟರೆ, ಬಂಧುಗಳು ಪಡಸಾಲೆಯಲ್ಲಿ ಮಗಳ ಮತ್ತು ಇತರರ ಕ್ಷೇಮ ವಿಚಾರಿಸಿ ಹಿಂದಕ್ಕೆ ಬರುತ್ತಾರೆ. ಲಿಂಗವಂತರಾಗಿದ್ದರೂ ಸವರ್ಣಿಯರಿಗೆ ಇವರು ಅಸ್ಪೃಶ್ಯರೇ. ತಮ್ಮವರಿಂದ ಬೇರೆಯಾಗಿ ಉತ್ತಮ ಕುಲದವರಿಗೆ ಬೇಡವಾಗಿ ಇಂದು ಇವರ ಸ್ಥಿತಿ ತ್ರಿಶಂಕು ಸ್ಥಿತಿಯಾಗಿದೆ.[೧೧೫] ಈ ಕುರಿತಂತೆ ಕರ್ನಾಟಕದ ಬೇರೆ ಸ್ಥಳಗಳಲ್ಲಿ ಬೇರೆ ಪರಿವೀಕ್ಷಣೆ ಮಾಡಿದರೂ ಕುತುಹೂಲಕಾರಿಯಾದ ಸಂಗತಿಗಳು ದೊರೆಯುವ ಸಂಭವವಿದೆ ಎಂದು ಹೇಳಿದರೆ ತಪ್ಪಾಗಲಾರದು.

೧೨ನೆಯ ಶತಮಾನದ ತರುವಾಯ ಕರ್ನಾಟಕದಲ್ಲಿ ವೈಚಾರಿಕ ಕ್ರಾಂತಿ ಆರಂಭವಾಯಿತು. ಎಲ್ಲ ಕ್ಷೇತ್ರಗಳಲ್ಲಿ ಮೇಲ್ಚಲನೆಗೆ ಮುಕ್ತ ಅವಕಾಶ ಕಲ್ಪಿಸಿಕೊಟ್ಟಿತು ವಚನ ಆಂದೋಲನ. ಇದರ ಪರಿಣಾಮ ಸಮಾಜದ ಬಹುತೇಕ ಕೆಳಜಾತಿಗಳು ಮೇಲ್ಚಲನೆಗೆ ಯತ್ನಿಸಿದ್ದು, ಅದರ ಫಲವಾಗಿ ಇಂದಿಗೂ ಪ್ರತ್ಯೇಕ ಸಮುದಾಯಗಳಾಗಿ ಉಳಿದುಕೊಂಡು ಬಂದಿದ್ದು, ತಮಗೆ ಅಂಟಿದ ಸಾಮಾಜಿಕ ಸೋಂಕಿನಿಂದ ಪಾರಾಗದೆ ಇರುವುದು ಕಂಡುಬರುತ್ತದೆ. ಅಂತಹ ಸಮಾಜಗಳಲ್ಲಿ *ಲಿಂಗಾಯತ ಅಸ್ಪೃಶ್ಯರು* ಒಂದು ಗುಂಪು. ಅವರನ್ನು ಲಿಂಗವಂತ ಹರಿಜನರೆಂದು ಸಹ ಕರೆಯಲಾಗಿದೆ. ಕರ್ನಾಟಕದುದ್ದಕ್ಕೂ ಅಲ್ಪಸಂಖ್ಯೆಯ ಹರಿಜನರು ಲಿಂಗವಂತರಾಗಿಯೂ ಲಿಂಗಾಯತ ಗುಂಪಿನಿಂದ ಹೊರಗೆ ಉಳಿದಿರುವುದು ವರದಿಯಾಗಿದೆ. ಅಂತಹ ಜನ ಹಿರಿಯೂರು ತಾಲೂಕಿನಲ್ಲಿ ಹಲವರಿರುವುದು ಕಂಡುಬಂದಿದೆ. ದಕ್ಷಿಣ ಕರ್ನಾಟಕದ ತುತ್ತ ತುದಿಯ ಮೈಸೂರು, ಮಂಡ್ಯ, ಹೆಗ್ಗಡದೇವನ ಕೋಟೆ ತಾಲೂಕುಗಳಲ್ಲಿ ಇನ್ನೂ ಕೆಲವಡೆ ಅಂತಹ ಜನ ಇದ್ದಾರೆಂದು ಅಧ್ಯಯನ ಸಮೀಕ್ಷೆಯಿಂದ ತಿಳಿದುಬರುತ್ತದೆ.[೧೧೬] ವೀರಶೈವರಾಗಿ ಪರಿವರ್ತನೆ ಹೊಂದಿದ ಅಸ್ಪೃಶ್ಯರು ಸಾಮಾಜಿಕ ಸ್ಥಾನದ ದೃಷ್ಟಿಯಿಂದ ತ್ರಿಶಂಕು ಸ್ಥಿತಿಯಲ್ಲಿಯೇ ಮುಂದುವರಿದರು. ಅಂತಹ ಸಮುದಾಯಗಳು ಇಂದಿಗೂ ಮುಂದುವರಿಯುತ್ತಿರುವುದನ್ನು ನೋಡಬಹುದು.

ಅಸ್ಪೃಶ್ಯನಾಗಿ ಹುಟ್ಟಿ, ಶರಣಧರ್ಮ ಪ್ರವೇಶಿಸಿ, ಅಂದೇ ಮಠಾಧ್ಯಕ್ಷನಾಗಿ ಮೆರೆದ ಉರಿಲಿಂಗಪೆದ್ದಿಯ ಬಳಿಕ ಅವನ ಧರ್ಮಪೀಠ ಪರಂಪರೆ ಮುಂದೆ ಬೆಳೆದುದು ಮಾತ್ರ ಅಚ್ಚರಿ. ಪರಿಶಿಷ್ಟ ಪರಂಪರೆಯ ಉರಿಲಿಂಗಪೆದ್ದಿ ಸಂಪ್ರದಾಯದ ಮಠಗಳು ಶಿಷ್ಯ ಪರಂಪರೆಯಾಗಿ ಬೆಳೆಯುತ್ತಾ ಹೋದಂತೆ ಅವು ವೀರಶೈವ

ಪುರೋಹಿತಶಾಹಿಗಳ ಆಕ್ರಮಣಕ್ಕೆ ಗುರಿಯಾಗಿರುವ ಸಾಧ್ಯತೆಯಿದೆ. ಸುಮಾರು ೨೫೦ ವರ್ಷಗಳ ಹಿಂದೆ ಕಂಧಾರ ಸಮೀಪದ ಗುಲ್ಬರ್ಗಾ, ಬೀದರ್, ಪರಿಸರದಲ್ಲಿ 'ಉರಿಲಿಂಗಪೆದ್ದಿ ಮಠ' ಪರಂಪರೆಯೆಂದು ತಲೆಯೆತ್ತಿತ್ತು. ಬೀದರ್ ಜಿಲ್ಲೆಯ ಬೇವಿನ ಚಿಂಚೋಳಿಯ ಶ್ರೀ ಶಿವಯೋಗಿಸ್ವಾಮಿಗಳು ಗುಲ್ಬರ್ಗಾ ಜಿಲ್ಲೆಯ ಸೇಡಂ ತಾಲೂಕಿನ ಕೋಡ್ಲಾ ಗ್ರಾಮದಲ್ಲಿ ಮಠ ಸ್ಥಾಪಿಸುವ ಮೂಲಕ ಈ ಪರಂಪರೆಯನ್ನು ಹುಟ್ಟುಹಾಕಿದರು. 'ಶ್ರೀ ಉರಿಲಿಂಗ ಪೆದ್ದೀಶ್ವರ ಮಹಾಸಂಸ್ಥಾನಮಠ' ಹೆಸರಿನಲ್ಲಿ ಪ್ರಸಿದ್ಧಿಗೆ ಬಂದಿರಲು ಈ ಮಠ ಪರಂಪರೆಯಲ್ಲಿ ಉತ್ತರ ದಕ್ಷಿಣ ಕರ್ನಾಟಕದಲ್ಲಿ ಸುಮಾರು ೪೧ ಮಠಗಳಿರುವುದು ಉಲ್ಲೇಖನೀಯ. ಗುಲ್ಬರ್ಗಾ, ಬೀದರ್, ಮೈಸೂರು, ಚಾಮರಾಜನಗರ, ಮಂಡ್ಯ ಮತ್ತು ಹಾಸನ ಜಿಲ್ಲೆಗಳಲ್ಲಿ ಈ ಮಠಗಳು ಹರಡಿಕೊಂಡಿವೆ.[೧೧೭] ಇತ್ತೀಚೆಗೆ ಸಮಾಜದ ಎಲ್ಲಾ ಜಾತಿ ವರ್ಗಗಳಂತೆ ಕೆಳಜಾತಿ ಮತ್ತು ದಲಿತ ಸಮುದಾಯಗಳು ತಮ್ಮ ಅಭಿವೃದ್ಧಿಗೆ ಮಠಗಳನ್ನು ಸ್ಥಾಪಿಸಿಕೊಳ್ಳುತ್ತಿರುವುದನ್ನು ಗಮನಿಸಬಹುದು. ಆದರೆ ಉರಿಲಿಂಗಪೆದ್ದಿ ಸಂಪ್ರದಾಯದ ಮಠಗಳು ಎದುರಿಸುತ್ತಿರುವ ಬಹುಮುಖ್ಯ ಸಮಸ್ಯೆ ಎಂದರೆ ಒಂದು ಕಡೆ ವೀರಶೈವ ಧರ್ಮಕ್ಕೆ ಸಂಪೂರ್ಣವಾಗಿ ಅರ್ಪಿತವಾಗಿದೆ ಮತ್ತೊಂದು ಕಡೆ ಮೂಲಸಂಪ್ರದಾಯಕ್ಕೆ ಮರಳದೆ ತ್ರಿಶಂಕು ಪರಿಸ್ಥಿತಿಯನ್ನು ಎದುರಿಸುತ್ತಿವೆ. ಆದರೂ ಸಹ ಹೊಸದಾಗಿ ಒಪ್ಪಿಕೊಂಡ ಧರ್ಮದ ಜಾಡಿನಲ್ಲಿ ಮುನ್ನೆಡೆಯಲು ಈ ಮಠಗಳು ತುಂಬ ಉತ್ಸಾಹಭರಿತವಾಗಿ ಕಾರ್ಯ ನಿರ್ವಹಿಸಲು ಯತ್ನಿಸುತ್ತಿವೆ.

ಇತ್ತೀಚಿನ ಶೋಧನೆಯಿಂದ ಉರಿಲಿಂಗಪೆದ್ದಿಯ ಸಂಪ್ರದಾಯದವರು ಮೈಸೂರು, ಮಂಡ್ಯ, ಹಾಸನ ಜಿಲ್ಲೆಗಳನ್ನು ಹಾಗೂ ಅವುಗಳ ಸಮೀಪ ಪ್ರದೇಶಗಳಲ್ಲಿ ಚದುರಿ ಹೋಗಿರುವುದು ತಿಳಿದು ಬರುತ್ತದೆ. ಮೈಸೂರಿನಲ್ಲಿರುವ ಗಾಂಧೀನಗರ, ಟಿ.ನರಸೀಪುರ ತಾಲೂಕಿಗೆ ಸೇರಿದ ಪುರಿಗಾಲಿ, ಸಿರಿಮಳ್ಳಿ, ಮುಡುಕುತೊರೆ, ದೊಡ್ಡಪುರ; ಚಾಮರಾಜನಗರ ಜಿಲ್ಲೆಯ ದಿಡ್ಡಾಪುರ, ದಡದಳ್ಳಿ, ಕೊಳ್ಳೆಗಾಲ ತಾಲೂಕಿನ ಸಿದ್ದಯ್ಯನಪುರ, ಮಣಗಳ್ಳಿ, ಬಂಡಳ್ಳಿ, ನರಿಪುರ, ಮಳವಳ್ಳಿ ತಾಲೂಕಿನ ಬೆಳಕವಾಡಿ, ಬೆಂಗಳೂರು ಈ ಸ್ಥಳಗಳಲ್ಲಿ ಸಂಪ್ರದಾಯಕ್ಕೆ ಸೇರಿದ ಜನತೆ ಇರುವುದಾಗಿ ತಿಳಿದು ಬಂದಿದೆ. ಈ ಭಾಗದ ಲಿಂಗವಂತ ಹರಿಜನರಲ್ಲಿ (*ಹೊಲೆಯರು*) ಮುದ್ದು ಮಾರಪ್ಪನ ಹೆಸರು ಮನೆಮಾತಾಗಿದೆ. ವಿರಕ್ತರಾದ ಇವರು ಮೈಸೂರು, ಮಂಡ್ಯದಲ್ಲಿ ಹೆಚ್ಚು ಸಂಚರಿಸಿ ಲಿಂಗದೀಕ್ಷೆ ಮಾಡುವರು. ಆ ಭಾಗದಲ್ಲಿ ಉರಿಲಿಂಗಪೆದ್ದಿ ಸಂಪ್ರದಾಯದವರು ಹರಡಲು ಇವರೇ ಪ್ರಮುಖ ಕಾರಣ. ಮಾಗಳ್ಳಿಯ ಶಿವಾನಂದಾಶ್ರಮಕ್ಕೆ ಹಾಗೂ ಮುಡುಕುತೊರೆಯ ಮಲ್ಲಿಕಾರ್ಜುನ ಮಠಕ್ಕೆ ಇವರೇ ಅಧಿಕಾರಿಗಳು. ಆದರೆ ಸವರ್ಣೀಯರು ಇವರಿಗೆ ಯಾವುದೇ ರೀತಿಯಲ್ಲಿ ಸಹಕರಿಸುವುದಿಲ್ಲ. ಆ ಮೂಲಕ ಶರಣ ತತ್ವಗಳನ್ನು ಲಿಂಗದಂಡ ಹರಿಜನರಿಗೆ ತಿಳಿಯಪಡಿಸುವುದು.[೧೧೮] ಲಿಂಗಧಾರಣೆ ಮಾಡುವಾಗ ಗುರುವಾದವನು ಶಿಷ್ಯನ ಪೂರ್ವೋತ್ತರಗಳನ್ನು ಸಾಕಷ್ಟು ತಿಳಿದೇ ಲಿಂಗವನ್ನು ಅನುಗ್ರಹಿಸುವನು. ಲಿಂಗಧಾರಣೆಯಿಂದ ತಾವು ಉತ್ತಮರಾಗುವವೆಂಬ ಭಾವನೆ ಮನಸ್ಸಿನಲ್ಲಿದ್ದರೂ, ಎಲ್ಲರೂ ಲಿಂಗವಂತರಾಗಲು ಹೊರಟಿಲ್ಲ. ಒಂದು ಮನೆಯಲ್ಲಿ ಕೆಲವರು ಲಿಂಗವಂತರಾದರೆ ಉಳಿದವರು ಲಿಂಗವಂತರಾಗದೆ ಉಳಿದಿರುವುದು ಕಾಣಬಹುದು. ಲಿಂಗವಂತ ಹರಿಜನರು ಬಂಧು-ಬಳಗ, ರಕ್ತ ಸಂಬಂಧ, ಮದ್ಯ ಮಾಂಸ ಸೇವನೆ ಎಲ್ಲವನ್ನು ಬಿಡಬೇಕಾಗಿರುವುದರಿಂದ

ಲಿಂಗಧಾರಣೆಗೆ ದಲಿತರು ಹಿಂಜರಿಯುವರು. ಲಿಂಗವಂತರಾದವರು ತಮಗೆ ಸರಕಾರದಿಂದ ಸಿಗುವ ಸವಲತ್ತು ಎಲ್ಲಿ ಕೈ ಬಿಟ್ಟು ಹೋಗುವುದೋ ಎಂಬ ಭಯದಿಂದ ಹಲವರು ಇದಕ್ಕೆ ಒಪ್ಪುವುದಿಲ್ಲ. ಲಿಂಗ ಕಟ್ಟಿದಾಕ್ಷಣ ಇಡೀ ವ್ಯವಸ್ಥೆ ತನ್ನಂತಾಗುವುದಿಲ್ಲ. ವಾಸ್ತವ ಸತ್ಯ ಹಾಗೆಯೇ ಮುಂದುವರಿಯುತ್ತದೆ. ಲಿಂಗವಂತ ಹರಿಜನರಲ್ಲಿ ಲಿಂಗಧಾರಣೆಯು ಮಗು ಜನಿಸಿದ ಹತ್ತನೇ ದಿವಸ ಜರುಗುವುದು. ಅದರ ಕೊರಳಿಗೆ ಲಿಂಗವನ್ನು ವಸ್ತ್ರದಲ್ಲಿ ಕಟ್ಟುವ ಪದ್ಧತಿ ಇದೆ. ಸಣ್ಣ ಮಕ್ಕಳಿಗೆ ಕರಣ ಬೋಧೆ (*=ಕಿವಿಯಲ್ಲಿ ಗುರು ಪಂಚಾಕ್ಷರಿ ಮಂತ್ರವನ್ನು ಉಚ್ಚರಿಸುವುದು*) ಮಾಡಿ 'ಮಣಿ'ದೀಕ್ಷೆ (*=ರುದ್ರಾಕ್ಷಿಧಾರಣೆ*) ಮಾಡುವುದೂ ಉಂಟು.[೧೯]

ಮೈಸೂರು ಹಾಗೂ ಅದರ ಸುತ್ತಮುತ್ತಲ 'ದೇವರ ಗುಡ್ಡರು' ರುದ್ರಾಕ್ಷಿ ಧರಿಸಿದರೂ ಇವರು ಆಚಾರ ನಿಷ್ಠರಾಗಿಲ್ಲದಿರುವುದರಿಂದ ಇತ್ತೀಚೆಗೆ ಲಿಂಗವಂತ ದಲಿತರು 'ಮಣಿದೀಕ್ಷೆ' ಪಡೆಯುವ ಪದ್ಧತಿಯನ್ನು ಉದ್ದೇಶಪೂರ್ವಕವಾಗಿ ನಿಲ್ಲಿಸಿರುವರು. ದೇವರ ಗುಡ್ಡರ ಗುಂಪಿನಲ್ಲಿ ಹೊಲೆಯ, ಮಾದಿಗ, ಪರಿವಾರ ಹೀಗೆ ಎಲ್ಲಾ ಜಾತಿಗಳಲ್ಲಿ ಇರುವರು. ಇವರು ಕಟ್ಟುನಿಟ್ಟಾದ ಆಚಾರವಂತರಲ್ಲ. ಮಾಂಸಭಕ್ಷಣೆ, ಸುರಪಾನ, ಭವಿಸಂಪರ್ಕ ಇತ್ಯಾದಿಗಳ ಆಚರಣೆ ಗುಡ್ಡರಲ್ಲಿ ಉಂಟು. ಲಿಂಗವಂತ ದಲಿತರು ಲಿಂಗವಂತರಲ್ಲದವರನ್ನು ಭವಿಗಳೆಂದು ಭಾವಿಸುತ್ತಾರೆ. ಲಿಂಗವಂತರಿಗೆ ಒಡಹುಟ್ಟಿದ ಸೋದರ ಸೋದರಿ ಪಕ್ಕದ ಮನೆಯಲ್ಲಿ ವಾಸವಿದ್ದರೂ ಅವರ ಮನೆಯನ್ನು ಪ್ರವೇಶಿಸುವುದಿಲ್ಲ. ಬೇರಾವ ಸಂಪರ್ಕವೂ ಇರುವುದಿಲ್ಲ. ಮದುವೆ ಇತ್ಯಾದಿ ಸಂದರ್ಭದಲ್ಲಿ (ಹೆಣ್ಣನ್ನು) ಲಿಂಗವಂತರ ಮನೆಯಲ್ಲಿಯೇ ತರುವರು. ಹೆಣ್ಣು ಕೊಡುವಾಗ ಇದೇ ಕ್ರಮವನ್ನು ಅನುಸರಿಸುತ್ತಾರೆ. ಲಿಂಗವಂತರಲ್ಲದವರಿಗೆ ಹೆಣ್ಣು ಮಕ್ಕಳನ್ನು ಕೊಟ್ಟಿರುವ ಪ್ರಸಂಗಗಳು ಉಂಟು. 'ಕೊಟ್ಟ ಹೆಣ್ಣು ಕುಲಕ್ಕೆ ಹೊರಗು' ಎಂಬ ನಾಣ್ಣುಡಿಯಂತೆ ತಮ್ಮ ಮಗಳು ಸುಖವಾಗಿರಲಿ ಎಂದು ಹಾರಿಸುತ್ತಾರೆ.[೨೦] ಈ ಒಂದು ಸಂಪ್ರದಾಯಕ್ಕೆ ಸೇರಿದ ಮನೆಗಳಲ್ಲಿ ಬಸವಣ್ಣ, ಮಹಾದೇವಿಯಕ್ಕ, ತೋಂಟದ ಸಿದ್ಧಲಿಂಗರ ಫೋಟೋಗಳು ಇರುತ್ತವೆ. ಜೊತೆಗೆ ಕೆಲವರ ಮನೆಯಲ್ಲಿ ಅಂಬೇಡ್ಕರರ ಫೋಟೋ ದೇವರ ಫೋಟೋ ಪಕ್ಕದಲ್ಲಿರುತ್ತಿದ್ದುದ್ದನ್ನು ಕಾಣಬಹುದು. ಹೆಚ್ಚು ಕಡಿಮೆ ವೀರಶೈವ ಸಂಪ್ರದಾಯಗಳನ್ನು ಇವರು ಮುಂದುವರಿಸುತ್ತಾರೆ. ಸ್ನಾನ, ಮಡಿಮೈಲಿಗೆ, ಶಿವಪೂಜೆ, ಪ್ರಸಾದ ಹಾಗೂ ಜನನ, ನಾಮಕರಣ, ಅಂತ್ಯಕ್ರಿಯೆ ಮುಂತಾದ ಸಂದರ್ಭಗಳಲ್ಲಿ ಮಠದ ಸ್ವಾಮಿಗಳನ್ನು ಕರೆಸುವರು. ವೀರಶೈವ ಸಮಾಜದವರು ಇವರನ್ನು ನೋಡುವ ದೃಷ್ಟಿಕೋನ, ಲಿಂಗವಂತ ದಲಿತರು ಸ್ವತಃ ತಾವು ಅನುಭವಿಸುತ್ತಿರುವ ಧರ್ಮ ಸಂಕಟ ಯಾವ ರೂಪದ್ದು ಎಂಬುದು ತಿಳಿದೇ ಇದೆ. ಇವರ ಪರಿಸ್ಥಿತಿ ಇಂದು ಚಿಂತಾಜನಕವಾಗಿದೆ. ಏಕೆಂದರೆ ಸೌಲಭ್ಯಗಳಿಂದ, ಬಂಧು ಬಳಗದವರಿಂದ, ಕೇವಲ ಮಾನಸಿಕ ತೃಪ್ತಿ ಪಡೆಯಲು ಯತ್ನಿಸಿ ವಿಫಲವಾಗಿರುವುದನ್ನು ಕಾಣಬಹುದು. ಈ ರೀತಿಯ ಧರ್ಮಸಂಕಟಗಳು ಮತ್ತು ಸಾಮಾಜಿಕ ಸಮಸ್ಯೆಗಳು ಇವರನ್ನು ಕಾಡುತ್ತಿದ್ದರೂ ಶರಣ ಧರ್ಮ ಮತ್ತು ಬಸವಣ್ಣನ ತತ್ವಗಳನ್ನು ಪಾಲನೆ ಮಾಡುವಲ್ಲಿ ತಮಗೆ ಗೌರವವಿದೆ ಎಂದು ಭಾವಿಸುತ್ತಾರೆ. ಸುಮಾರು ಎಂಟುನೂರು ವರ್ಷಗಳಿಂದ ಈ ಸಂಪ್ರದಾಯ ಬೇರು ಬಿಟ್ಟಿದ್ದರೂ ಮಧ್ಯದಲ್ಲಿ ಇದರ ಅಸ್ತಿತ್ವವನ್ನು ಗುರುತಿಸುವುದು ಕಷ್ಟವಾಗುತ್ತದೆ.[೨೧] ಮತ್ತೆ ಇನ್ನೂರು ಅಥವಾ ಮುನ್ನೂರು ವರ್ಷಗಳ ತರುವಾಯ ಈ ಸಂಪ್ರದಾಯ ಕಾಣಿಸಿಕೊಳ್ಳುತ್ತದೆ.

### ೩.೪.೧. ಲಿಂಗವಂತ ದಲಿತರ ಬಗೆಗಿನ ಸಾಮಾಜಿಕ ದೃಷ್ಟಿಕೋನಗಳು

ದಲಿತರಿಗೆ ಸಾಮಾಜಿಕ ಧರ್ಮ ಸಂಕೋಲೆಗಳಿಂದ ಬಿಡುಗಡೆಯ ಆಶಯಗಳು ವ್ಯಕ್ತವಾಗಿದ್ದು ೧೨ನೇ ಶತಮಾನದಲ್ಲಿ. ಪ್ರಥಮ ಬಾರಿಗೆ ಮಾನಸಿಕ ನೆಮ್ಮದಿಯ ದಾರಿಯನ್ನಿಡಿದು ಸಮಾಜದ ಮೇಲ್ಬಲನೆಗೆ ಯತ್ನಿಸಿದ್ದು ಆ ಕಾಲಘಟ್ಟದಲ್ಲಿ. ಅಂದು ವೀರಶೈವ ಧರ್ಮವನ್ನೇ ಹುಟ್ಟು ಹಾಕಿ ಸಮಾಜದ ಅನೇಕ ಕೆಳಜಾತಿಗಳ ಸೇರ್ಪಡೆಗೆ ಅವಕಾಶ ನೀಡಲಾಯಿತು. ಇದು ಹಿಂದೂ ಧರ್ಮದ ನೋವು ನಲಿವುಗಳನ್ನು ಅನುಭವಿಸಲಾರದೆ ವೀರಶೈವ ಧರ್ಮವನ್ನು ಅನುಸರಿಸಿದರೆ ನಮ್ಮ ಬಾಳು ಸುಂದರವಾಗುವುದು ಎಂದು ಭವಿಷ್ಯದ ಕನಸುಗಳನ್ನು ಹೊತ್ತು ಬಂದವರು. ಕರ್ನಾಟಕದ ಚರಿತ್ರೆಯಲ್ಲಿ ಮತ್ತೆ ಹದಿನೇಳನೇ ಶತಮಾನದ ಕೊನೆಯ ವೇಳೆಗೆ ಉರಿಲಿಂಗ ಪೆದ್ದಿ ಸಂಪ್ರದಾಯದವರು ಕಾಣಿಸಿಕೊಳ್ಳುತ್ತಾರೆ.

ವೀರಶೈವ ಧರ್ಮಕ್ಕೆ ಹೊರಳಿದ ಇವರನ್ನು ಹೊಲೆಯರು ತಮಗಿಂತ ಶ್ರೇಷ್ಠ ಕುಲದವರು, ಶರಣ ಸಂಸ್ಕೃತಿಯ ಜನರು, ಉತ್ತಮ ಕುಲದವರು ಎಂದು ಭಾವಿಸುವುದುಂಟು. ಆಚಾರ ವಿಚಾರದಲ್ಲಿ ಸುಸಂಸ್ಕೃತ ಜನರು, ತಲೆತಲಾಂತರದಿಂದ ಶಾಕಾಹಾರಿಗಳು. ರಕ್ತ ಸಂಬಂಧವಂತೂ ಕನಸಿನ ಮಾತು. 'ಮಠದ ಹೆಣ್ಣು ಮಠದವರಿಗೆ ಮೀಸಲು' ಹೊಲೆಯರು ಮದುವೆ ಮಾಡಿಕೊಳ್ಳುವ ಹಾಗಿಲ್ಲ. ಏಕೆಂದರೆ ಮಠದ ಕನ್ಯೆಯನ್ನು ಮಾಡಿಕೊಂಡರೆ ತಮಗೆ ಪಾಪ ತಟ್ಟುತ್ತದೆಂಬ ನಂಬುಗೆ ಹೊಲೆಯರಲ್ಲಿ ಗಾಢವಾಗಿ ಮನೆಮಾಡಿಕೊಂಡಿದೆ. ಹೊಲೆಯರ ದೃಷ್ಟಿಯಲ್ಲಿ ಇವರು ಮೇಲ್ವರ್ಗದವರಾಗಿ ಕಾಣಿಸಿಕೊಳ್ಳುತ್ತಾರೆ. ಲಿಂಗಾಯತರ ದೃಷ್ಟಿಯಲ್ಲಿ ಲಿಂಗವಂತ ದಲಿತರು ಕೀಳು, ಹಿಂದುಳಿದವರು, ಅಸ್ಪೃಶ್ಯರು. ಹೊಲೆಯರಿಂದ ಬಂದ ಸಮುದಾಯದವರನ್ನು ತಮ್ಮೊಳಗೆ ಸೇರಿಸಿಕೊಳ್ಳಲು ವೀರಶೈವರು ನಿರಾಕರಿಸುತ್ತಾರೆ. ಹಿಂದೂ ಧರ್ಮದಲ್ಲಿ ಇರುವಂತೆ ಜಾತಿಯ ಶ್ರೇಣಿಯನ್ನು ರೂಪಿಸುತ್ತಿದ್ದಾರೆ ಇಂದಿನ ಲಿಂಗಾಯತರು.[೨೨] ಹನ್ನೆರಡನೇ ಶತಮಾನದ ತರುವಾಯ ಸಮಾಜದ ಅಭಿವೃದ್ಧಿಗೆ ಶ್ರಮಿಸಿದ ಪ್ರಮುಖ ಧರ್ಮಗಳಲ್ಲಿ ವೀರಶೈವ ಧರ್ಮವೂ ಒಂದು. ಈ ಧರ್ಮದಲ್ಲಿ ಕೂಡ ಇತರೆ ಧರ್ಮಗಳಂತೆ ಸಾಮಾಜಿಕ ಶ್ರೇಣೀಕರಣ ಇದೆ. ಆದಕಾರಣ ದಲಿತ ಸಮುದಾಯಗಳು ಹೊಸದಾಗಿ ಒಪ್ಪಿಕೊಂಡ ವೀರಶೈವ ಧರ್ಮದಲ್ಲಿ ಮುಖ್ಯಸ್ಥಾನ ಪಡೆಯುವುದು ಅಷ್ಟು ಸುಲಭದ ಕೆಲಸವಲ್ಲ. ಆದರೆ ವಾಸ್ತವಿಕವಾಗಿ ಗಮನಿಸಿದಾಗ ದಲಿತರು ಆ ಧರ್ಮದ ಸಂಪ್ರದಾಯಗಳನ್ನು ಅನುಸರಿಸುತ್ತಿರಬಹುದು.

೧೨ನೇ ಶತಮಾನದಲ್ಲಿ ಆರಂಭವಾದ ಈ ಆಂದೋಲನದ ಉದ್ದೇಶ ಜಾತಿ ವ್ಯವಸ್ಥೆಯನ್ನು ಮುರಿದು ಹಾಕಿ, ಸರ್ವಸಮಾಜ ನಿರ್ಮಿಸುವುದೇ ಆಗಿತ್ತು. ಆದರೆ ಇಂದು ತದ್ವಿರುದ್ಧವಾಗಿ ಅವರಲ್ಲಿಯೇ ಅನೇಕ ಒಳಪಂಗಡಗಳಾಗಿ ಕಿತ್ತಾಡುತ್ತಿದ್ದಾರೆ. ಲಿಂಗಾಯತರ ಜಾತಿಗೆ ಸೇರಿದ ಹಡಪದ ಸಮಾಜದವರ ಜೊತೆ ರಕ್ತ ಸಂಬಂಧ ಬೆಳೆಸಲು ಯಾವ *ಬಣಜಿಗ, ಪಂಚಮಸಾಲಿ ಲಿಂಗಾಯತರು* ಮುಂದೆ ಬರುವುದಿಲ್ಲ. ಏಕೆಂದರೆ ಅವರಿಗೆ ತಮ್ಮ ಜಾತಿಯ ಅಂತಸ್ತು ಮುಖ್ಯ, ಧರ್ಮ ಅಮುಖ್ಯ. *ಕುಂಬಾರ, ಬಡಿಗ, ಕಂಬಾರ, ಗಾಣಿಗ* ಸಮಾಜದವರ ಸ್ಥಿತಿಯೂ ಅದೇ ಆಗಿದೆ. ಸಾದರು, ಬಣಜಿಗರು ತಮ್ಮ ತಮ್ಮಲ್ಲಿಯೇ ರಕ್ತ ಸಂಬಂಧಕ್ಕೆ ನಿರ್ಬಂಧ ಹಾಕಿಕೊಂಡಿದ್ದನ್ನು ನೋಡಿದರೆ, ಹೊಲೆಯರಿಂದ ವೀರಶೈವಕ್ಕೆ ಹೊರಳಿದ ಉರಿಲಿಂಗಪೆದ್ದಿ ಸಂಪ್ರದಾಯದವರನ್ನು

ಹೇಗೆ ತಾನೇ ನಮ್ಮವರೆಂದು ಭಾವಿಸಲು ಸಾಧ್ಯ? ಪರಿಸ್ಥಿತಿ ಹೀಗಿರುವಾಗ ಈಗಲೂ ಲಿಂಗಾಯಿತರೆಂದು ಹೆಮ್ಮೆ ಪಟ್ಟುಕೊಳ್ಳಲು *ಡೋಹರ ಸಮಾಜ, ಮಾದರ ಸಮಾಜ, ನುಲಿಯ ಚಂದಯ್ಯನ ಸಮಾಜ ಮತ್ತು ಸಮಗಾರ ಹರಳಯ್ಯನ ಸಮಾಜದವರ* ಗತಿಯೇನು? ಜಾತಿಯ ಹಂಗು ತೊರೆದು ಅವಮಾನ, ಅನ್ಯಾಯಕ್ಕೆ ಒಳಗಾಗಿರುವ ಇವರು ವೀರಶೈವರಿಗೆ ಬೇಡವಾಗಿ, ಇತ್ತ ಹೊಲೆಯರು ಒಂದು ರೀತಿಯ ದ್ವೇಷ ತುಂಬಿಕೊಂಡಿದ್ದಾರೆ.[೧೩] ಕಾರಣ ತಮ್ಮ ಸಮಾಜವನ್ನು ಸಮುದಾಯಗಳು ಕೂಡ ಮೊದಲಿನ ಸ್ಥಿತಿಯತ್ತ ನೋಡುವುದೇ ಹೆಚ್ಚು ಎಂದು ಅಭಿಪ್ರಾಯಪಡಲಾಗಿದೆ.

ಆದರೆ ಲಿಂಗವಂತ ದಲಿತರ ದೃಷ್ಟಿಯಲ್ಲಿ ಉಳಿದ ಸಮುದಾಯಗಳು ವಿಶೇಷವಾಗಿ ಹೊಲೆಯರು ಮತ್ತು ಲಿಂಗಾಯತರು ಪ್ರತ್ಯೇಕತಾ ಭಾವನೆಯಿಂದ ನೋಡುವುದಿಲ್ಲ. ಹೊಲೆಯರೊಂದಿಗೆ ವಿಶೇಷವಾಗಿ ಬೆರತು ಆಗು ಹೋಗುಗಳ ಬಗೆಗೆ ಚರ್ಚಿಸುತ್ತಾರೆ. ಏಕೆಂದರೆ ಅವರು ಸಹ ನಮ್ಮಂತೆ ಸಮಾಜದ ಸ್ಥಾನಮಾನಗಳತ್ತ ಒಲವು ಬರುವಂತೆ ಮಾಡುವುದು ಹಾಗೂ ಸಮಾಜದ ಮುಖ್ಯ ವಾಹಿನಿಗೆ ಒಲವು ಬರುವಂತೆ ಮಾಡುವುದು ಹಾಗೂ ಸಮಾಜದ ಮುಖ್ಯ ವಾಹಿನಿಗೆ ಬರಲು ಯತ್ನಿಸುವುದಕ್ಕೆ ಸಹಾಯ ಮಾಡುವುದು. ಈ ರೀತಿಯ ಉದಾತ್ತ ಧೋರಣೆಗಳನ್ನು ಹೊಲೆಯರ ಬಗೆಗೆ ಇಟ್ಟುಕೊಂಡಿದ್ದಾರೆ. "ಕಾಗೆ ಒಂದಗುಳ ಕಂಡರೆ ಕರೆಯದೆ ತನ್ನ ಬಳಗವನು? ಎಂಬ ಶರಣೋಕ್ತಿಯನ್ನು ಆಚರಿಸುತ್ತಾರೆ. ಉರಿಲಿಂಗಪೆದ್ದಿ ತತ್ವವನ್ನು ಪಾಲನೆ ಮಾಡುತ್ತಾರೆ. ಲಿಂಗಾಯತ ಸಮಾಜ ಎಷ್ಟೇ ದೂರಿದರೂ ನಾವು ಶರಣ ಮಾರ್ಗದಲ್ಲಿಯೇ ಮುನ್ನಡೆಯುತ್ತೇವೆ ಎಂದು ಧೈರ್ಯದಿಂದ ಹೇಳಿಕೊಳ್ಳುತ್ತಾರೆ. *ವಿಭೂತಿಧಾರಣ, ಲಿಂಗದೀಕ್ಷೆ-ಲಿಂಗಪೂಜೆ, ದಾಸೋಹ, ಶಿವಾನುಭವ ಗೋಷ್ಠಿ, ಪುಣ್ಯತಿಥಿ-ಸಪ್ತಾಹ, ಭಾವಚಿತ್ರ ಪ್ರದರ್ಶನ* ಮುಂತಾದ ಲಿಂಗಾಯತಮುಖಿ ಚಟುವಟಿಕೆಯಲ್ಲಿ ತೊಡಗಿಕೊಳ್ಳುತ್ತಾರೆ[೧೪] ಆದರೆ ಇವರ ಸಾಮಾಜಿಕ ಸ್ಥಾನಮಾನದತ್ತ ಒಮ್ಮೆ ಯೋಚಿಸುವುದರ ಜೊತೆಗೆ ಎರಡು ಸಮಾಜಗಳಿಂದ ತಿರಸ್ಕೃತರಾಗಿ ಏಕಾಂಗಿ ಜೀವನ ನಡೆಸುವಂತಾಗಿದೆ. *ದಲಿತ ಕ್ರೈಸ್ತರ* ಜೀವನ ಇದಕ್ಕಿಂತ ಭಿನ್ನವಾಗಿ ಕಾಣಿಸುವುದಿಲ್ಲ. ಇತ್ತ ಮೂಲ ಜಾತಿಗೆ ಬರಲಾರದೆ, ಲಿಂಗವಂತ ಜಾತಿಯ ವೈರುಧ್ಯಗಳನ್ನು ಎದುರಿಸಲಾರದೆ ಇವರು ಭವಿಷ್ಯದಲ್ಲಿ ಅನಾಹುತಗಳನ್ನು ಎದುರಿಸುವ ಸಂದರ್ಭ ಎದುರಾಗಿದೆ.

**೩.೪.೨. ಇತರೆ ಲಿಂಗವಂತ ದಲಿತ ಸಮುದಾಯಗಳು**

ಉರಿಲಿಂಗಪೆದ್ದಿಯ ಸಂಪ್ರದಾಯದಂತೆ ಇತರೆ ಲಿಂಗವಂತ ದಲಿತ ಸಮುದಾಯಗಳನ್ನು ಗುರುತಿಸಬಹುದಾಗಿದೆ. ದಲಿತ ಸಮುದಾಯಗಳ ವಿವಿಧ ಪಂಗಡಗಳು ಆಯಾ ಕಾಲಕ್ಕೆ ಸಂದರ್ಭದಂತೆ ಶರಣ ತತ್ವವನ್ನು ಪರಿಪಾಲನೆ ಮಾಡಿದವು. ಇವುಗಳಲ್ಲಿ *ಚರ್ಮಕಾರರು, ಕೊರವರು, ಮಾದರು* ಉಪಜಾತಿಗಳು ತಮಗೊಂದು ಸಮುದಾಯದ ಚಾರಿತ್ರಿಕ ವೀರನನ್ನು ಗುರುತಿಸಿ ಸಿದ್ಧಾಂತ ಪ್ರತಿಪಾದನೆ ಮಾಡಿದವು. ಅವುಗಳಲ್ಲಿ ಮಾದಾರ ಚೆನ್ನಯ್ಯ ಲಿಂಗವಂತ ಸಂಪ್ರದಾಯ, *ಡೋಹರ ಕಕ್ಕಯ್ಯ ಲಿಂಗವಂತ ಸಂಪ್ರದಾಯ, ಸಮಗಾರ ಹರಳಯ್ಯ* ಲಿಂಗವಂತ ಸಂಪ್ರದಾಯ, ಕೊರವ ನುಲಿಯ ಚಂದಯ್ಯ ಲಿಂಗವಂತ ಸಂಪ್ರದಾಯಗಳು ಉರಿಲಿಂಗ ಪೆದ್ದಿಯ ಸಂಪ್ರದಾಯದಂತೆ ಬೆಳೆದು ಬರಲಿಲ್ಲ. ಆದರೂ ಈ ಸಮಾಜಗಳು ಇಂದಿಗೂ ಶರಣತತ್ವಗಳನ್ನು ಬಾಳುತ್ತ, ಲಿಂಗವಂತರಿಗೆ ಹತ್ತಿರವಾಗಿರುವುದು ಕಾಣಬಹುದು.

ಮಾದರ ಚೆನ್ನಯ್ಯ ಸಂಪ್ರದಾಯ : ಇವನು 'ಕೈಯಳಿ ಕತ್ತಿ ಅಡಿಗೂಂಟಕ್ಕೆಡೆಯಾಗಬೇಡ ಅರಿ ನಿಜಾತ್ಮಾರಾಮ ರಾಮನಾ' ಎಂಬ ಮುದ್ರಿಕೆಯಿಂದ ಬರೆದ ಹತ್ತು ವಚನಗಳು ಸಿಕ್ಕಿವೆ. ಈ ವಚನಗಳಲ್ಲಿ ಕುಲ-ಜಾತಿ-ಹೊಲೆ ಸಮಸ್ಯೆಗಳನ್ನು ಕುರಿತು ತೀವ್ರ ಚಿಂತನೆ ನಡೆಸಿದ್ದಾನೆ. ಆಚಾರವೇ ಕುಲ, ಅನಾಚಾರವೇ ಹೊಲೆ ಎಂಬ ಮಾತು ತುಂಬಾ ಪ್ರಸಿದ್ಧಿಯಾಗಿದೆ. ೧೨ನೇ ಶತಮಾನದ ಬಳಿಕ ಮಾದಿಗ ಜನಾಂಗದವರು ತಮ್ಮನ್ನು 'ಚೆನ್ನಯ್ಯನ ಕುಲ'ದವರೆಂದು ಹೆಮ್ಮೆಯಿಂದ ಕರೆದುಕೊಳ್ಳುತ್ತಾ ಬಂದುದು ಇಂದಿಗೂ ರೂಢಿಯಲ್ಲಿದೆ. ಕರ್ನಲ್ ಮೆಕೆಂಜಿ ಸಂಗ್ರಹಿಸಿದ ಕೈಫಿಯತ್ತುಗಳಲ್ಲಿ ಮಾದಿಗರ ಕೈಫಿಯತ್ತನ್ನು *ಚೆನ್ನಯ್ಯ ಕುಲದ ಜಾತಿ ರಿವಾಜು ಕೈಫಿಯತ್* ಎಂದು ಕರೆಯಲಾಗಿದೆ. ಹೀಗೆ ಮಾದಾರ ಕುಲಕ್ಕೆ ಶರಣ ಚೆನ್ನಯ್ಯನ ಹೆಸರು ಪರ್ಯಾಯವಾಗಿ ಪ್ರಯೋಗವಾದದ್ದು ಗಮನಿಸಬೇಕಾದ ವಿಷಯ. ಇಂದಿಗೂ ಈ ಕುಲದ ಕೆಲವರು ಹಣೆಗೆ ವಿಭೂತಿ, ಕೊರಳಲ್ಲಿ ಲಿಂಗ ಧರಿಸುತ್ತಾರೆ. ತಮ್ಮದೇ ಆದ ಸಂಘಟನೆಗೆ 'ಚೆನ್ನಯ್ಯ ಸಮಾಜ'ವೆಂದೂ ಹೆಸರಿಟ್ಟಿದ್ದಾರೆ. ಶರಣರ ಜಯಂತಿಗಳಲ್ಲಿ ಭಕ್ತಿಯಿಂದ ಭಾಗವಹಿಸಿ, ವೀರಶೈವಕ್ಕೆ ವಾಲಿದ್ದರೂ ದಲಿತರಾಗಿ ಉಳಿದುಕೊಂಡಿದ್ದಾರೆ.

ಡೋಹರ ಕಕ್ಕಯ್ಯ ಸಂಪ್ರದಾಯ : ಚರ್ಮವನ್ನು ಹದಮಾಡುವ ಜಾತಿಯಲ್ಲಿ ಹುಟ್ಟಿ ಉನ್ನತ ಶಿಖರವೇರಿದವನೀತ. 'ಅಭಿನವ ಮಲ್ಲಿಕಾರ್ಜುನ' ಎಂಬುದು ಈತನ ವಚನಾಂಕಿತ. ಬಹುತೇಕ ಸಮಕಾಲೀನ ಶರಣರು ಇವನ ಶ್ರೇಷ್ಠತೆಯನ್ನು ಹೊಗಳಿದ್ದಾರೆ. ಇವನನ್ನು ಕುರಿತು "ಜೋದರ ಕುಲದ ಈ ಶರಣ ಮಾಳವದಿಂದ ಬಂದಿದ್ದನು. ಬಸವೇಶ್ವರನು ಈತನನ್ನು ಆಗಾಗ ಹೊಗಳುತ್ತಾನೆ. ಶಿವಶರಣರು ಉಳವಿಗೆ ಹೊರಟಾಗ ಬಿಜ್ಜಳನ ಸೇನೆಯೊಡನೆ ಈತನು ಹೋರಾಡಿರಬೇಕು. ಈಗಿನ ಕಕ್ಕೇರಿ ಎಂಬ ಕಡೆ ಈತನು ಹೋರಾಡುತ್ತ ಮಡಿದಿರಬೇಕು. ಅಲ್ಲಿ ಕಕ್ಕಯ್ಯನ ದೇವಾಲಯವಿದೆ. ಕಕ್ಕಯ್ಯನ ಕೆರೆ, ಬಾವಿ, ಆತನ ಸಮಾಧಿಗಳೂ ಅಲ್ಲಿವೆ ಎಂದು ತ.ಸು.ಶಾಮರಾಯರು ಬರೆಯುತ್ತಾರೆ. ಬೆಳಗಾವಿ ಜಿಲ್ಲೆಯ ಖಾನಾಪೂರ ತಾಲೂಕಿನ ಕಕ್ಕೇರಿ ಗ್ರಾಮದಲ್ಲಿ ಕಕ್ಕಯ್ಯನವರ ಸಮಾಧಿ ಇದೆ. ಇವನ ಸಂಪ್ರದಾಯದ ಮಠಗಳು ದೊರೆಯುವುದಿಲ್ಲ. ಇಂದಿಗೂ ಲಿಂಗವಂತ ಡೋಹರ ಜಾತಿಯವರು ವೀರಶೈವರಂತೆ ಲಿಂಗ, ವಿಭೂತಿಧಾರಣೆ, ಶಾಕಾಹಾರದಿಂದ ಬದುಕುತ್ತಾರೆ. ಬಿಜಾಪೂರದ ಕಕ್ಕಯ್ಯ ಪೋಳ ಕುಟುಂಬಗಳು ಇಳಕಲ್ಲು ಗ್ರಾಮದ ಚಿತ್ತರಗಿ ಮಠದ ಮಹಾಂತ ಸ್ವಾಮಿಗಳಿಂದ ಲಿಂಗದೀಕ್ಷೆ ಹೊಂದಿ, ಬಸವ ಅನುಯಾಯಿಗಳಾದುದು ಎತ್ತಿ ಹೇಳಬೇಕಾದ ವಿಷಯವಾಗಿದೆ.[೧೨೫] ನಮ್ಮ ಗಮನಕ್ಕೆ ಬಾರದೆ ಇರುವಂತ ಅನೇಕ ಕುಟುಂಬಗಳು ಈ ಸಂಪ್ರದಾಯದಲ್ಲಿ ಇದ್ದಿರಬಹುದಾಗಿದೆ. ಹಿನ್ನೆಲೆಯಲ್ಲಿ ಪ್ರಸ್ತುತ ವಿಷಯವನ್ನು ಕುರಿತು ಕ್ಷೇತ್ರಕಾರ್ಯ ಕೈಗೊಂಡರೆ ಹೆಚ್ಚಿನ ವಿವರಗಳು ಸಿಗುವ ಸಾಧ್ಯತೆ ಇದೆ.

ಲಿಂಗವಂತ ಸಮಗಾರ ಹರಳಯ್ಯ ಸಂಪ್ರದಾಯ : ವಿಜಾಪುರ ಜಿಲ್ಲೆಗೆ ಸೇರಿದ ಸಮಗಾರ ಹರಳಯ್ಯ ಅಂದಿನ ವರ್ಣಗಳನ್ನು ವಿರೋಧಿಸಿ ಅಂತರಜಾತಿಯ ವಿವಾಹ ಮಾಡಿದ್ದು ಕಲ್ಯಾಣದಲ್ಲಿ ಲಿಂಗವಂತರಿಗೆ ಸಹಿಸಲಾರದ ಸಂಗತಿಯಾಯಿತು. ವಿಜಾಪುರದಲ್ಲಿ ಹರಳಯ್ಯನ ಕ್ಷೇತ್ರವಿದೆ. ಒಂದು ದೇವಾಲಯವಿದ್ದು ಹರಳಯ್ಯನ ಬಗ್ಗೆ ತ್ರಿಪದಿಗಳನ್ನು ಹಾಡುತ್ತಾರೆ. ಇಂದಿಗೂ ಸಮಗಾರರು ವಿಭೂತಿ, ಲಿಂಗಧಾರಣೆಯಿಂದ,

ಶಾಕಾಹಾರದಿಂದ ಬದುಕುವ ನೂರಾರು ಉದಾಹರಣೆಗಳಿವೆ. ಧಾರವಾಡದಲ್ಲಿ ಶ್ರೀ ಮಾರ್ಕಂಡೇಯ ದೊಡ್ಡಮನಿ ಅವರ ಕುಟುಂಬ, ರಾಮದುರ್ಗದ ಶ್ರೀ ಮುರಗೋಡ ಮನೆತನಗಳು ಹರಳಯ್ಯನ ಪರಂಪರೆಯವರೆಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತಲಿದ್ದಾರೆ.

ನುಲಿಯ ಚಂದಯ್ಯ ಸಂಪ್ರದಾಯ : ನುಲಿಯ ಚಂದಯ್ಯ ದಲಿತ ವರ್ಗಕ್ಕೆ ಸೇರಿದ ಕೊರವ ಜಾತಿಯವನು. ಹಗ್ಗ ಹೊಸೆದು ಮಾರುವುದು ಇವನ ಕಾಯಕ. "ಚಂದೇಶ್ವರ ಲಿಂಗ" ಅಂಕಿತದಿಂದ ೪೮ ವಚನಗಳನ್ನು ರಚಿಸಿದ್ದಾನೆ. ಈತನ ಊರು ವಿಜಾಪುರ ಜಿಲ್ಲೆಯ ಶಿವಣಗಿಯೆಂದು ತಿಳಿದು ಬರುತ್ತದೆ. ಕಳೆದ ಶತಮಾನದ ಅಂತ್ಯದವರೆಗೂ ಇವನ ವಂಶಸ್ಥರಿದ್ದು, ಈಗ ಯಾರು ಇಲ್ಲ ಎಂದು ತಿಳಿದುಬಂದಿದೆ. ಈತನ ಹೆಸರಿನಲ್ಲಿ ಸ್ಮಾರಕ (ಸಮಾಧಿ) ಚಿತ್ರದುರ್ಗ ಜಿಲ್ಲೆಯ ಹೊಳಲ್ಕೆರೆ ತಾಲೂಕಿನ ನೂಲೇನೂರಿನಲ್ಲಿದ್ದು ಈಗಲೂ ಪೂಜೆ ಸಲ್ಲುತ್ತದೆ. ಶಿವಣಗಿಯ ಮುಖ್ಯ ರಸ್ತೆಯಲ್ಲಿ ಚಂದಯ್ಯನೆಂದು ಹೇಳುವ ದೇವಾಲಯವಿದೆ. ಬೀದರ್ ಜಿಲ್ಲೆಯ ತ್ರಿಪುರಾಂತ ಗ್ರಾಮದಲ್ಲಿ ಈತನ ಗುಡಿಯಿದ್ದು ಇಂದಿಗೂ ಪೂಜೆ ಸಲ್ಲುತ್ತದೆ. ರಾಯಚೂರಿನ ದೇವದುರ್ಗ ತಾಲೂಕಿನ ಕೊತ್ತ ದೊಡ್ಡಿಯಲ್ಲಿ ನುಲಿಯ ಚಂದಯ್ಯ ಸಂಪ್ರದಾಯದ ಜನಸಮುದಾಯವಿದೆಯೆಂದು ತಿಳಿದು ಬರುತ್ತದೆ.[೨೬] ಹೀಗೆ ೨೧ನೇ ಶತಮಾನದಲ್ಲಿ ವೀರಶೈವಕ್ಕೆ ಹೊಂದಿಕೊಂಡು ಮೇಲ್‌ಸ್ತರದ ಸಂಪ್ರದಾಯಗಳನ್ನು ಅನುಸರಿಸುತ್ತ ಬಂದಿದ್ದಾರೆ. ಆದರೆ ಇವರ ಭವಿಷ್ಯದ ಬಗ್ಗೆ ಯೋಚಿಸಬೇಕಾದ ಸಂದರ್ಭ ಒದಗಿ ಬಂದಿದೆ. ಈ ಮೇಲಿನ ನಾಲ್ಕು ಸಂಪ್ರದಾಯಗಳನ್ನು ಗಮನಿಸಿದಾಗ ಅವರಲ್ಲಿಯ ಸಾಮಾಜಿಕ ಶ್ರೇಣೀಕರಣ ಹಾಗೂ ಪರಿಳಿತಗಳು ಕಂಡುಬರುತ್ತವೆ. ಹೊಲೆಯರು ಮತ್ತು ಮಾದಿಗರು ಪ್ರಾಚೀನ ಕಾಲದಿಂದಲೂ ತಾವು ಪ್ರತ್ಯೇಕ ಸಮುದಾಯಗಳೆಂದು ವೃತ್ತಿ ಸಂಬಂಧ ಹಿನ್ನೆಲೆಯಲ್ಲಿ ಗುರುತಿಸಿಕೊಂಡು ಬಂದಿವೆ. ಅವು ವೃತ್ತಿ ಸಂಬಂಧಕ್ಕೆ ಮಾತ್ರವಲ್ಲದೆ ಸಾಮಾಜಿಕ ಜಿವನಕ್ಕೂ ಅನ್ವಯಿಸಿ ಜೀವನ ನಡೆಸತೊಡಗಿವೆ. ಆದರೆ ಮತಾಂತರ ಪ್ರಕ್ರಿಯೆಯ ಸಂದರ್ಭದಲ್ಲಿ ಮಾದಿಗ, ಹೊಲೆಯ, ಕೊರವ ಇತರೆ ಕೆಳಜಾತಿಗಳು ತಮ್ಮ ತಮ್ಮಲ್ಲಿಯೇ ಒಳಪಂಗಡಗಳನ್ನು ಸೃಷ್ಟಿಸಿಕೊಂಡು ಸಂಪ್ರದಾಯಗಳನ್ನು ಮುಂದುವರಿಸಿದವು.

## ೩.೫. ಮತಾಂತರ ಪ್ರಕ್ರಿಯೆ ಮತ್ತು ದಲಿತರು

ಕರ್ನಾಟಕದುದ್ದಕ್ಕೂ ಹಲವು ಭಾಷಿಕ ಸಮುದಾಯಗಳನ್ನು ಕಾಣುತ್ತೇವೆ. ಈ ಸಮುದಾಯಗಳು ಚಾರಿತ್ರಿಕ ಕಾಲಘಟ್ಟದಲ್ಲಿ ಬದಲಾವಣೆಗೆ ಒಳಪಟ್ಟಿವೆ. ಈ ಸಂಕೀರ್ಣ ಆಯಾಮಗಳನ್ನು ಕುರಿತು ಚರ್ಚಿಸುವುದು ಕಷ್ಟ ಸಾಧ್ಯ. ಸಮಕಾಲೀನ ಸಂದರ್ಭದ ಸಾಮಾಜಿಕ ಪರಿಸ್ಥಿತಿಯ ಒತ್ತಡ ಹಾಗೂ ಮೇಲ್ಚಲನೆಗೆ ಅವಕಾಶಗಳಿರುವ ವ್ಯವಸ್ಥೆಯತ್ತ ಗಮನ ಹರಿಸುವುದು ಅಂದಿನ ಜಾತಿ ಸಮುದಾಯಗಳಿಗೆ ಅನಿವಾರ್ಯವಾಗಿರಬೇಕು. ಸಂಪ್ರದಾಯ, ರೂಢಿ-ಪದ್ಧತಿಗಳಿಂದ ಭವಿಷ್ಯದ ಮುನ್ನೋಟವನ್ನು ಕಾಣಲು ಸಾಧ್ಯವಾಗದಿದ್ದಾಗ, ಹೊಸ ಬಗೆಯ ಅವಕಾಶಗಳನ್ನು ಪಡೆಯಲು ಅನುವು ಮಾಡಿಕೊಡುವ ಸಿದ್ಧಾಂತಗಳಿಗೆ ಒಲವು ಮೂಡುವಂತೆ ಜನ ಸಾಮಾನ್ಯರಲ್ಲಿ ಧಾರ್ಮಿಕ ತತ್ವಗಳು ಪ್ರಭಾವ ಬೀರಿವೆ. ಸಾಮಾಜಿಕ ಸಂಕೋಲೆಗಳಿಂದ ಬಿಡುಗಡೆಯಾಗಲು ಸಹಕಾರಿಯಾಗಿವೆ. ಕರ್ನಾಟಕವು

ಸೇರಿದಂತೆ ಪ್ರಾಚೀನ ಕಾಲಘಟ್ಟದಲ್ಲಿ ಒಂದು ಧರ್ಮದಿಂದ ಮತ್ತೊಂದು ಧರ್ಮಕ್ಕೆ, ಒಂದು ಪಂಥದಿಂದ ಮತ್ತೊಂದು ಪಂಥಕ್ಕೆ, ಜಾತಿಯಿಂದ ಜಾತಿಗೆ ಜನತೆ *ಮಂತ್ರದೀಕ್ಷೆ* ಮತ್ತು *ಮತಾಂತರದೀಕ್ಷೆ* ಆಗಿರುವುದನ್ನು ಕಾಣಬಹುದು. ಇದಕ್ಕೆ ಹಲವು ಕಾರಣಗಳಿವೆ. ಸಾಮಾಜಿಕ ಕಾರಣಗಳೇ ಮತಾಂತರ ಪ್ರಕ್ರಿಯೆಗೆ ಮುಖ್ಯವಾಗಿ ಗೋಚರಿಸುತ್ತವೆ. *ಬೌದ್ಧ, ಜೈನ, ವೀರಶೈವ, ಇಸ್ಲಾಂ, ಕ್ರಿಶ್ಚಿಯನ್* ಧರ್ಮಗಳು ತಮ್ಮೆಡೆಗೆ ಜನಸಮುದಾಯಗಳನ್ನು ಸೆಳೆದಿವೆ. ಕೆಳಸಮುದಾಯಗಳು ಸಾಮಾಜಿಕವಾಗಿ ಬಲಾಢ್ಯ ಸಮುದಾಯಗಳ ಜೀವನ ಶೈಲಿಯನ್ನು ಅನುಸರಿಸಲು ಯತ್ನಿಸುವುದು ಹೊಸತೇನಲ್ಲ. ಚರಿತ್ರೆಯುದ್ದಕ್ಕೂ ಈ ರೀತಿಯ ಪ್ರಕ್ರಿಯೆಗಳನ್ನು ಕಾಣಬಹುದಾಗಿದೆ. ಇಂದಿಗೂ ಬಹುತೇಕ ಕೆಳಜಾತಿಗಳು, ದಲಿತರು ಬೌದ್ಧ ಮತ್ತು ಕ್ರಿಶ್ಚಿಯನ್ ಧರ್ಮಕ್ಕೆ ಮತಾಂತರವಾಗುತ್ತಿರುವುದನ್ನು ಕಾಣಬಹುದು.

### ೩.೫.೧. ಜೈನಧರ್ಮ

ಪ್ರಾಚೀನ ಕರ್ನಾಟಕದಲ್ಲಿ ಹಲವು ಧರ್ಮಗಳು ಸಮಾಜದ ಮುಖ್ಯವಾಹಿನಿಯಲ್ಲಿ ಇದ್ದರೂ ಜೈನಧರ್ಮವು ಅವುಗಳಲ್ಲಿ ಒಂದಾಗಿತ್ತು. ಇದಕ್ಕೆ ರಾಜಾಶ್ರಯ ಸಿಕ್ಕಿದ್ದು ಮುಖ್ಯಕಾರಣವಾಗಿತ್ತು. ಈ ನಿಟ್ಟಿನಲ್ಲಿ ಗಮನಿಸಿದಾಗ ಕನ್ನಡ ಸಾಹಿತ್ಯವೂ ಕೂಡ ಜೈನಧರ್ಮದ ಪ್ರಭಾವಕ್ಕೆ ಒಳಗಾಗಿ ರಚನೆಯಾಯಿತು. ಅಂದು ರಚಿಸಿದ ಬಹುತೇಕ ಕನ್ನಡ ಕೃತಿಗಳು ಸಮಕಾಲೀನ ಸಂದರ್ಭದ ಸಮಾಜದ ವಾಸ್ತವಿಕ ಚಿತ್ರಣವನ್ನು ಹಿಡಿದಿಡುವಲ್ಲಿ ಯಶಸ್ವಿಯಾಗಿ ಅವುಗಳಲ್ಲಿ ಜಾತಿ, ವರ್ಣ, ಧರ್ಮ, ಮತಾಂತರ ಪ್ರಕ್ರಿಯೆಯಗಳು ಮುಂತಾದ ವಿಚಾರಗಳ ಕುರಿತು ಕನ್ನಡ ಪಠ್ಯಗಳು ವಿವರಿಸುತ್ತವೆ. ಪ್ರಾಚೀನ ಕಾಲದಲ್ಲಿ ಮತಾಂತರದೀಕ್ಷೆ ಇಲ್ಲವೆ ಮಂತ್ರದೀಕ್ಷೆ ಮುಖಾಂತರ ವ್ಯಕ್ತಿ ತನ್ನನ್ನು ತಾನು  ಉದಾತ್ತೀಕರಿಸಿಕೊಳ್ಳುತ್ತಿದ್ದನು. ಮತಾಂತರ ದೀಕ್ಷೆಯವರು ತಾವು ಹೊಸದಾಗಿ ಒಪ್ಪಿಕೊಂಡ ಧರ್ಮದಲ್ಲಿ ಸೇರಿಹೋಗಿ 'ಮತೀಯರು' ಆಗುತ್ತಿದ್ದರು. ಮಂತ್ರದೀಕ್ಷೆಯವರು ಹೀಗೆ ಸೇರಿ ಹೋಗದೆ ಹೊರಗೆ ನಿಂತು 'ಒಕ್ಕಲು' ಆಗುತ್ತಿದ್ದರು. ಪ್ರಾಚೀನ ಕರ್ನಾಟಕದ ಮಟ್ಟಿಗೆ ಹೇಳುವುದಾದರೆ ವೈದಿಕರು ಅಬ್ರಾಹ್ಮಣರನ್ನು ಮತಾಂತರ ಮಾಡಿಕೊಳ್ಳುತ್ತಿರಲಿಲ್ಲ. ಮಂತ್ರದೀಕ್ಷೆ ನೀಡಿ ಒಕ್ಕಲು ಮಾಡಿಕೊಳ್ಳುತ್ತಿರಲೂ ಇಲ್ಲ (ಗಾಯತ್ರಿಮಂತ್ರ ಕೇಳಿದ ಶೂದ್ರನ ಕಿವಿಯಲ್ಲಿ ಕಾಯಿಸಿದ ಸೀಸ ಸುರಿಯುವುದು ಎಂಬ ಮನುವಿನ ಹೇಳಿಕೆ ಗಮನಿಸಿರಿ), ಜೈನರು ಮಾತ್ರ ಮೇಲೆ ಹೇಳಿದಂತೆ ಮಂತ್ರವನ್ನಾದರೂ ಕೊಡುವ ಉದಾರಿಗಳಾಗಿದ್ದಾರೆಂಬ ಭಾವನೆಯಿಂದ ಅಬ್ರಾಹ್ಮಣರು ದೊಡ್ಡ ಸಂಖ್ಯೆಯಲ್ಲಿ ಆ ಧರ್ಮಕ್ಕೆ ಒಕ್ಕಲಾಗತೊಡಗಿದರು. ಇದು ಕೆಳ ವರ್ಗದವರಿಗೆ ಒಂದು ರೀತಿಯ ಮಾನಸಿಕ ನೆಮ್ಮದಿಯನ್ನು, ಸಾಮಾಜಿಕ ಪ್ರತಿಷ್ಠೆಯನ್ನು ಉಂಟುಮಾಡಿತು. ಹೀಗೆ ಒಕ್ಕಲು ಆಗುವ ಬ್ರಾಹ್ಮಣೇತರರಿಗೆ ಮಂತ್ರದೀಕ್ಷೆ ನೀಡುವುದೆಂದರೆ ಜೈನಮುನಿಗಳು ಪಂಚನಮಸ್ಕಾರ ಬೋಧಿಸುವುದಾಗಿದೆ. ಈ ರೀತಿ ಮಂತ್ರದೀಕ್ಷೆ ಪಡೆದವರೊಂದಿಗೆ ಜೈನರು ಸಹಬೋಜನವೇಕೆ? ಮುಟ್ಟಿಸಿಕೊಳ್ಳುತ್ತಿರಲೂ ಇಲ್ಲವೆನಿಸುತ್ತದೆ. ವಡ್ಡಾರಾಧನೆಯಲ್ಲಿ ಬ್ರಾಹ್ಮಣಬಾಲಿಕೆ ನಾಗಶ್ರೀಯನ್ನು ಮುಟ್ಟಿಸಿಕೊಂಡು ಮುಕ್ತವಾಗಿ ವ್ಯವಹರಿಸುವ ಅಗ್ನಿಭೂತಿ ಮುನಿಯ ಹೊಲೆಯರ ಕುರುಡು ಬಾಲಕಿಯ ವಿಷಯದಲ್ಲಿ ಮುಟ್ಟಿಸಿಕೊಳ್ಳಲಾರದೆ ಮರುಗಿ, ದೂರದಿಂದಲೇ ಕುಂಚದ ಕೋಲಿನಿಂದ ನೆಲದ ಮೇಲಿನ ಹಣ್ಣುಗಳನ್ನು ಅವಳತ್ತ ದೂಡಿ, ಪಂಚನಮಸ್ಕಾರ ಮಂತ್ರ ಬೋಧಿಸುತ್ತಾನೆ.

ಇದನ್ನು ನೆನೆದರೆ 'ಒಕ್ಕಲು' ಆಗುವವರೊಂದಿಗೆ ಜೈನರ ಸಾಮಾಜಿಕ ಸಂಬಂಧ ಯಾವ ರೀತಿಯದ್ದಾಗಿದ್ದಿತೆಂದು ಸ್ಪಷ್ಟವಾಗುತ್ತದೆ.[೧೨೭]

ಬ್ರಹ್ಮಶಿವನ ಸಮಯ ಪರೀಕ್ಷೆಯ 'ಪೆಂಡತಿ ಮಾಹೇಶ್ವರಿ ಗಡ, ಗಂಡಂ ಜೈನಂ ಗಡವನ ಮಕ್ಕಳ್ ಗಡ ಮಾರ್ತಂಡಂಗೆ ಭಕ್ತರ್' ಎಂಬ ವಾಕ್ಯದಲ್ಲಿ ಬರುವ ಇವರೆಲ್ಲ ಮೂಲತಃ ಕೆಳವರ್ಗದವರು, ಅವರಲ್ಲಿಯೂ ಮಾರ್ತಾಂಡ ಭಕ್ತ(ಸೌರ)ರಾಗಿರಬಹುದು. ಇದರಲ್ಲಿ ಹೆಂಡತಿ ಕಾಳಾಮುಖಕ್ಕೆ, ಗಂಡ ಜೈನ್ಯಕ್ಕೆ ಒಕ್ಕಲಾಗದೆ, ಮಕ್ಕಳು ಪ್ರತಿಷ್ಠಿತವಲ್ಲದ ಮೂಲ ಮಾರ್ತಾಂಡ ಸಂಪ್ರದಾಯದಲ್ಲೇ ಮುಂದುವರಿದುದನ್ನು ಈ ಸಾಲು ಸೂಚಿಸುತ್ತದೆ. ಕರ್ನಾಟಕದಲ್ಲಿ ಕೆಳವರ್ಗದ ಕುಟುಂಬದ ಸದಸ್ಯರು ಈ ರೀತಿ ತಮ್ಮ ಮನಸ್ಸಿಗೆ ಬಂದ ಧರ್ಮಕ್ಕೆ ಒಕ್ಕಲಾಗುವ ಪ್ರಕ್ರಿಯೆ ರೂಢಿಯಲ್ಲಿದ್ದಿತು. ಬ್ರಹ್ಮಶಿವ ತನಗೆ "ಪಿರಿದರ್ತಿ ಮುನ್ನ ಮಾಹೇಶ್ವರದೊಳದರೊಳೊಳ್ಪು ಗಾಣದ ನೆಗಳ್ದೀ ಪರಮ ಜಿನಧರ್ಮದೊಳ್" ತಾನು ಪ್ರವೇಶಿಸಿದನೆಂದು ಹೇಳುತ್ತಿದ್ದು, ಬಹುಶಃ ಯಾವುದೋ ಪರಿಶಿಷ್ಟ ಜಾತಿಯವನಿರಬೇಕೆಂದು ಎಂ.ಎಂ.ಕಲಬುರ್ಗಿ ಅಭಿಪ್ರಾಯಪಡುತ್ತಾರೆ. ಕೆಳವರ್ಗದವರಿಗೆ ಮಂತ್ರದೀಕ್ಷೆ ನೀಡುತ್ತಿದ್ದರಾದರೂ ಬಹುಶಃ ಜೈನರು ಮುಟ್ಟಿಸಿಕೊಳ್ಳುತ್ತಿರಲಿಲ್ಲ. ಇದಕ್ಕೆ ವಡ್ಡಾರಾಧನೆಯಲ್ಲಿ ಬರುವ ಅಗ್ನಿಭೂತಿ ಹೊಲೆಯರ ಬಾಲಿಕೆ ಪ್ರಸಂಗ ಪ್ರಮುಖ ಉದಾಹರಣೆ. ಶ್ರೀ ವೈಷ್ಣವರು ಮುಟ್ಟಿಸಿಕೊಳ್ಳುತ್ತಿರಲಿಲ್ಲ. ಈಗಲೂ ಮೇಲುಕೋಟೆ ಚೆಲುವನಾರಾಯಣಸ್ವಾಮಿ ದೇವಸ್ಥಾನದಲ್ಲಿ ವರ್ಷಕ್ಕೆ ಮೂರು ದಿನ ಧ್ವಜ ಸ್ತಂಭ ಆವರಣದವರೆಗೆ ಬರಲು ಕೆಳವರ್ಗದವರಿಗೆ ಅನುಕೂಲ ಮಾಡಿಕೊಡಲಾಗುತ್ತಿದೆ. ನಾಲ್ಕನೆಯ ದಿನ ಆ ನೆಲವನ್ನು ಶುದ್ಧೀಕರಣ ಮಾಡುತ್ತಾರೆ.[೧೨೮]

ಈ ಮೇಲಿನ ವಿವರಣೆಯಿಂದ ಧರ್ಮಕ್ಕೆ ಮತಾಂತರ ಹೊಂದುವ ಸಂದರ್ಭದಲ್ಲಿ ಎರಡು ಆಯಾಮಗಳನ್ನು ಗುರುತಿಸಬಹುದಾಗಿದೆ. ಒಂದು, ಸಮುದಾಯ ತಮ್ಮ ಮೂಲ ಜಾತಿಯಲ್ಲಿಯೇ ಇದ್ದು ಇನ್ನೊಂದು ಧರ್ಮದ ತತ್ವ ಸಿದ್ಧಾಂತಗಳನ್ನು ಅಳವಡಿಸಿಕೊಳ್ಳುವುದು ಕಂಡುಬರುತ್ತದೆ. ಎರಡನೆಯದಾಗಿ ಒಂದು ಸಮುದಾಯ ಅಥವಾ ಜಾತಿ ಸಂಪೂರ್ಣವಾಗಿ ಮೂಲಜಾತಿಯನ್ನು ಬಿಟ್ಟು ಹೊಸದಾಗಿ ಒಪ್ಪಿಕೊಂಡ ಜಾತಿ ಅಥವಾ ಧರ್ಮಕ್ಕೆ ಮತಾಂತರವಾಗಿ ಹೊಂದಿಕೊಳ್ಳಲು ಯತ್ನಿಸುವುದು. ಎರಡೂ ಆಯಾಮಗಳನ್ನು ಗಮನಿಸಿದಾಗ ಮೊದಲಿನ ಆಯಾಮವು ಹೆಚ್ಚು ಚಾಲ್ತಿಯಲ್ಲಿತ್ತು. ಏಕೆಂದರೆ ಪ್ರಾಚೀನ ಕರ್ನಾಟಕದಲ್ಲಿ ದಲಿತರು ಸಾಮಾಜಿಕ ಶ್ರೇಣೀಕರಣ ಸ್ಥಾನಮಾನ ಪಡೆಯುವುದಕ್ಕಿಂತ ಹೆಚ್ಚಿನದಾಗಿ ತಮಗೆ ಅಂಟಿದ್ದ ಅನಿಷ್ಟ ಪದ್ಧತಿಗಳಿಂದ ಮುಕ್ತಿಹೊಂದಿ ಆಶಾದಾಯಕ ಜೀವನ ನಡೆಸಲು ಯತ್ನಿಸುತ್ತಿದ್ದರು. ಹಾಗೆಯೇ ಜೈನ ಧರ್ಮವು ಇತರೆ ಧರ್ಮಗಳ ಪೈಪೋಟಿಯನ್ನು ಎದುರಿಸುವುದರ ಜೊತೆಗೆ ಸಮಾಜದ ಮುಖ್ಯವಾಹಿನಿಯಲ್ಲಿ ಇರಲು ಯತ್ನಿಸುತ್ತಿತ್ತು. ಈ ರೀತಿಯ ಪ್ರಕ್ರಿಯೆಯಗಳು ಅಂದು ಸರ್ವಸಾಮಾನ್ಯವಾಗಿದ್ದವು. ಇದರ ಜೊತೆಗೆ ವೈದಿಕ ಧರ್ಮವು ಪ್ರಬಲವಾಗಿರುವುದರ ಜೊತೆಗೆ ಆಗ ತಾನೇ ಹುಟ್ಟಿಕೊಂಡ ವೀರಶೈವಧರ್ಮವು ಪ್ರತಿಸ್ಪರ್ಧಿಯಾಗಿದ್ದವು. ಆದರೆ ಹನ್ನೆರಡನೆ ಶತಮಾನದ ತರುವಾಯ ಜೈನಧರ್ಮದ ಉನ್ನತಿ ಕ್ಷೀಣಿಸುತ್ತಾ ವೀರಶೈವ ಧರ್ಮವು ಕರ್ನಾಟಕದಲ್ಲಿ ಹೊಸಧರ್ಮವಾಗಿ ಹುಟ್ಟಿಕೊಂಡಿತು. ವಚನ ಚಳವಳಿ ನೇತೃತ್ವ ವಹಿಸಿದ ಬಸವಣ್ಣ ಕೆಳಸಮುದಾಯಗಳ ಅನೇಕ

ಶರಣರನ್ನು ಸೇರಿಸಿಕೊಂಡು ಬೃಹತ್ ಆಂದೋಲನವಾಗಿ ರೂಪುಗೊಳ್ಳಲು ಕಾರಣವಾದರು. ಇದಕ್ಕೆ ದಲಿತ ಸಮುದಾಯದ ಬಹುತೇಕ ಶರಣರು ಮತ್ತು ಶಿವಭಕ್ತರು ಸಕ್ರಿಯವಾಗಿ ಪಾಲ್ಗೊಂಡಿದ್ದರಿಂದ ಕರ್ನಾಟಕದುದ್ದಕ್ಕೂ ವಿಸ್ತರಿಸಲು ಅನುವಾಯಿತು. ಇದರಿಂದ ವೀರಶೈವ ಧರ್ಮವು ಕೆಳಜಾತಿಗಳ ಪಾಲಿಗೆ ಆಶಾದಾಯಕ ಜೀವನ ನಡೆಸಲು ಅನುವು ಮಾಡಿಕೊಟ್ಟಿತು. ಹಾಗೆಯೇ ಬಹುತೇಕ ಕೆಳಜಾತಿ ಜನಾಂಗಗಳನ್ನು ತನ್ನ ಧರ್ಮಕ್ಕೆ ಸೆಳೆದುಕೊಳ್ಳಲು ಯತ್ನಿಸಿ ಯಶಸ್ವಿಯಾಯಿತು. ಅಂದು ನಡೆದ ಚಾರಿತ್ರಿಕ ಮತಾಂತರ ಪ್ರಕ್ರಿಯೆಯೂ ಇಂದಿಗೂ ಕೂಡ ತನ್ನ ಕುರುಹುಗಳನ್ನು ಉಳಿಸಿಕೊಂಡು ಬಂದಿದೆ.

### ೩.೫.೨. ವೀರಶೈವ ಧರ್ಮ

ವಚನ ಆಂದೋಲನದ ಪರಿಣಾಮವಾಗಿ ಕರ್ನಾಟಕದ ಬೇರೆ ಬೇರೆ ಸಮುದಾಯಗಳು ವೀರಶೈವದ ಮತಕ್ಕೆ ಸೇರಿಕೊಳ್ಳಲು ಯತ್ನಿಸಿದ್ದು, ಅದರ ಪರಿಣಾಮವಾಗಿ ದಲಿತರು ಲಿಂಗವಂತರಾಗಿದ್ದು ಮುಖ್ಯ ಚರ್ಚೆಯ ವಿಷಯಗಳು. ಈ ಒಂದು ಅವಕಾಶಕ್ಕೆ ವೀರಶೈವ ಮತವು ಅವಕಾಶ ಕಲ್ಪಿಸಿದ್ದು ಒಂದು ಚಾರಿತ್ರಿಕ ವಿಷಯವೇ ಸರಿ. ಸಾಮಾಜಿಕ ಕೆಳಸಮುದಾಯಗಳು ಮತ್ತು ದಲಿತರು ಈ ಧರ್ಮಕ್ಕೆ ಮತಾಂತರವಾದರು ಎಂದು ಹೇಳುವಾಗ 'ಭಕ್ತರು ಮಾಡು', 'ಶಿವದೀಕ್ಷೆಯ ಕೊಡು', 'ಅನುಗ್ರಹವ ಕೊಡು' ಇವು ಮತಾಂತರಗೊಳಿಸುವುದನ್ನು, "ಪುನರ್ಜಾಸನಾಗು, ಶಿವಲಾಂಛನವ ತಾಳು, ಲಿಂಗಭಕ್ತನಾಗು, ಅಂಗದ ಮೇಲೆ ಲಿಂಗಸಾಹಿತ್ಯವಾಗು 'ಭಕ್ತನಾಗು" ಇವು ಮತಾಂತರವಾಗುವುದನ್ನು ಹೇಳಲು ಬಳಕೆಯಾಗಿರುವ ಪದಗಳು.

ಬಸವಣ್ಣನಿಂದಾಗಿ ಎಲ್ಲ ಜಾತಿಗೆ ಸೇರಿದ ಬಹುಸಂಖ್ಯೆಯ ಜನ ಭಕ್ತರಾದ ಸಂಗತಿಯನ್ನು ವಚನಕಾರ ಸಿದ್ಧರಾಮ ಹೇಳಿದ್ದಾನೆ. ಅವರಲ್ಲಿ ದಲಿತರು ಸೇರಿದ್ದರು. "ಶ್ವಪಚೋಡಿಯಾದರೇನು ಲಿಂಗಭಕ್ತನೆ ಕುಲಜನೆಂಬುದು ಮುಂತಾದ ಮಾತುಗಳು ಮುಖ್ಯ ಸಾಕ್ಷಿ. ಅಂದಿನ ಸನ್ನಿವೇಶದಲ್ಲಿ ಮತಾಂತರಕ್ಕೆ ಪ್ರಚೋದನೆ ಏನು? ಸ್ವತಃ ಕೆಳಜಾತಿಗಳು, ದಲಿತರು ವೀರಶೈವ ಧರ್ಮಕ್ಕೆ ಮತಾಂತರ ಹೊಂದಿದರೆ? ಅಥವಾ ಸಾತ್ವಿಕ ಪ್ರೇರಣೆಯಿಂದಾಗಲಿ ಅಥವಾ ಆಮಿಷಗಳನ್ನೊಡ್ಡಿಯಾದರೂ ಅಥವಾ ಬಲವಂತವಾಗಿ ಪ್ರಚೋದಿಸಿದರೆ ಎಂಬುದರ ಕುರಿತು ಚರ್ಚಿಸುವುದು ಅವಶ್ಯಕವೆನಿಸುತ್ತದೆ."[೫] ಸಾಮಾಜಿಕವಾಗಿ ಅಂದು ಸಾಮಾಜಿಕ ಸ್ಥಾನಮಾನದ ಜೊತೆಗೆ ಬಿಡುಗಡೆಯ ನೆಲೆಗಳಿಗಾಗಿ ಜನತೆ ಹೊಸ ಬಗೆಯ ದಾರಿಗಳನ್ನು ಕಂಡುಕೊಳ್ಳಲು ಯತ್ನಿಸುತ್ತಿದ್ದರು. ಮತಾಂತರ ಹೊಂದಿದ ಕೆಲವು ಧರ್ಮಗಳಲ್ಲಿ ಮೇಲ್ಚಲನೆಗೆ ಅವಕಾಶವಿದ್ದುದರಿಂದ ಜನಸಾಮಾನ್ಯರ ಬದುಕು ಆಶಾದಾಯಕವಾಗಿ ಕಂಡಿರಲು ಸಾಧ್ಯವೆನಿಸುತ್ತದೆ. ಹಾಗೆಯೇ ಆರ್ಥಿಕವಾಗಿ ಸದೃಢವಾಗಲು ಸಹಾಯಕವಾಗುತ್ತದೆ. ಈ ರೀತಿಯ ಪ್ರಸ್ತಾವನೆಯ ಹಿನ್ನೆಲೆಯನ್ನು ಅವಲೋಕಿಸಿದರೆ ಅದರ ಹಿಂದಿನ ತಾತ್ವಿಕ ಹಿನ್ನೆಲೆಯನ್ನು ಗ್ರಹಿಸಬಹುದಾಗಿದೆ. ಮತಾಂತರ ಹೊಂದಿದ ಮೇಲೆ ದಲಿತರ ಬದುಕು ಹಸನಾಯಿತೆ ಎಂಬುದಕ್ಕೆ ಸ್ಪಷ್ಟ ಉತ್ತರ ಕೊಡಲು ಕಷ್ಟವಾಗುತ್ತದೆ. ಏಕೆಂದರೆ ಲಿಂಗವಂತ ಭಕ್ತರಲ್ಲಿ ಕೂಡ ಕೆಲವೊಂದು ಸಂದರ್ಭಗಳು (ಆಹಾರ ಪದ್ಧತಿ, ರಕ್ತಸಂಬಂಧಗಳ ವಿಚಾರದಲ್ಲಿ) ಯಾವ ಬದಲಾವಣೆಗಳನ್ನು ಕಾಣಲಿಲ್ಲ. ಭಾವನಾತ್ಮಕವಾಗಿ ದಲಿತರನ್ನು ಸೌಮ್ಯ ರೀತಿಯಲ್ಲಿ ಉಚ್ಚರಿಸಿದರೇ ವಿನಃ ನಿರೀಕ್ಷಿಸಿದ ಬದಲಾವಣೆಗಳು ಕಾಣಲಿಲ್ಲ. ವೀರಶೈವ ಧರ್ಮಕ್ಕೆ ಮತಾಂತರ

ಹೊಂದಿರುವ ವಿವಿಧ ದಲಿತ ಸಮುದಾಯಗಳ ಕುರಿತು ಈ ಹಿಂದೆ ಇದೇ ಅಧ್ಯಾಯದ ಲಿಂಗವಂತ ದಲಿತರು ಎನ್ನುವ ವಿಷಯದಲ್ಲಿ ವಿಸ್ತಾರವಾಗಿ ಚರ್ಚಿಸಲಾಗಿದೆ.

೩.೫.೩. ಇಸ್ಲಾಂ ಧರ್ಮ

ಪ್ರಾಚೀನ ಕಾಲದಿಂದಲೂ ಅನೇಕ ಜನಾಂಗಗಳು ಭಾರತಕ್ಕೆ ಬಂದು ನೆಲೆಸಿವೆ. ಅವುಗಳಲ್ಲಿ ಕೆಲವು ಇಲ್ಲಿನ ಸಂಸ್ಕೃತಿಯೊಂದಿಗೆ ವಿಚಾರಧಾರೆಗಳನ್ನು ಬೆಸೆದುಕೊಂಡಿವೆ. ಮುಸಲ್ಮಾನರ ಆಗಮನದ ನಂತರ ಇಲ್ಲಿನ ವಿಚಾರಕರು, ಸನ್ಯಾಸಿಗಳು, ಭಿಕ್ಷುಗಳು ಸಹಜವಾಗಿ *ಸೂಫಿ ಪಂಥದ* ಬಗೆಗೆ ಒಲವು ತೋರಿದರು. ಇಲ್ಲಿನ ಜನಸಾಮಾನ್ಯರು, *ಮುಸಲ್ಮಾನ ಫಕೀರರ* ಉಪದೇಶಗಳಿಂದ ಸಂತೃಪ್ತರಾಗಿ ಮೋಕ್ಷ ಸಾಧನೆಯ ಸುಲಭ ಮಾರ್ಗವನ್ನು ಆಹ್ವಾನಿಸತೊಡಗಿದರು. ಇಲ್ಲಿ ದಲಿತರೆಂದು ಕರೆಯಿಸಿಕೊಂಡ ನಿಮ್ನ ವರ್ಗದವರಂತೂ ಆತ್ಮೀಯವಾಗಿ ಇಸ್ಲಾಂನಲ್ಲಿ ದೀಕ್ಷಿತರಾಗತೊಡಗಿದರು. ಕ್ರಿ.ಶ.೭ನೇ ಶತಮಾನದ ಸುಮಾರಿಗೆ ಪಶ್ಚಿಮದಲ್ಲಿ ಹುಟ್ಟಿ, ಪೂರ್ವ ಭಾಗಕ್ಕೆ ಹರಡಿದ *ಸೂಫಿ* ಎಂಬ ಪದ ತದನಂತರ ವಿಸ್ತಾರಗೊಂಡಿದ್ದು ಮಾತ್ರ ಗಮನಾರ್ಹ. ತವಸ್ಸಫ್ ಎಂಬ ಪರ್ಶಿಯನ್ ಪದದಿಂದ ಅಥವಾ *ಸೂಧಿ* ಎಂಬ ಗ್ರೀಕ್ ಪದದಿಂದ ಬಂತು ಎಂಬುದು ಸ್ಪಷ್ಟವಾಗಿಲ್ಲ. ಇದರಡಿಯಲ್ಲಿ ಶ್ರೀಮಂತರು, ಭಿಕಾರಿಗಳು, ಪಂಡಿತರು, ಪಾಮರರು, ಕುಡುಕರು, ಧರ್ಮ ನಿಷ್ಠರು, ಧರ್ಮಭ್ರಷ್ಟರು ಸೇರುತ್ತಾರೆ.[೫೦] ಇಲ್ಲಿ ತಾರತಮ್ಯಕ್ಕೆ ಅವಕಾಶವಿಲ್ಲ. ಈ ಹಿನ್ನೆಲೆಯಲ್ಲಿ ಸಮಾಜದ ಜಾತಿಶ್ರೇಣೀಕರಣದಿಂದ ಬೇಸತ್ತು ನಿಮ್ನ ವರ್ಗದವರು ಸಹಜವಾಗಿ *ಸೂಫಿ* ಸಿದ್ಧಾಂತಗಳತ್ತ ಒಲವು ತೋರಿಸಿದರು. ವೈದಿಕಶಾಹಿ ಪ್ರಭಾವದಿಂದ ಬೇಸತ್ತ ಕೆಳ ಸಮುದಾಯಗಳು ಹೊಸ ಬಗೆಯ ಚಿಂತನೆಗಳಿಗೆ ಆಶಾದಾಯಕವಾಗಿ ಸ್ಪಂದಿಸಿದರು.

ಇಸ್ಲಾಂ ಧರ್ಮದ ಅನುಭಾವಿಕ ಮುಖವೇ *ಸೂಫಿ ಪಂಥ.* ಅದು ಆಮಿಷಗಳ ಮರುಕಳಿಕೆಯಿಂದ ಹೃದಯವನ್ನು ಶುದ್ಧೀಕರಿಸಿಕೊಳ್ಳುವುದು. ಸೂಫಿಗಳು ತಮ್ಮ ಬೋಧನೆಗಳನ್ನು ಅತಿಕೆಳವರ್ಗದ ಜನಸಾಮಾನ್ಯರ ಬಳಿಗೆ ಕೊಂಡೊಯ್ದರು. ಆತ್ಮಶುದ್ಧೀಕರಣ ಮಾರ್ಗವನ್ನು ಅವರಿಗೆ ಒದಗಿಸಿದರು. ಈ ಚಳವಳಿಯ ತಾತ್ವಿಕ ದರ್ಶನದಿಂದ ಮಾನವನಲ್ಲಿರುವ ಕೀಳು ಭಾವನೆಗಳನ್ನು ನಾಶ ಮಾಡುವ ಚಳವಳಿಗೆ ವೈವಿಧ್ಯವನ್ನು ಸತ್ವವನ್ನು ತುಂಬಿತು. ಯುಗಯುಗಾಂತರಗಳಿಂದ ಅಸಮಾನತೆಯ ಭಾರಕ್ಕೆ ಸಿಕ್ಕಿ ಜರ್ಜರಿತವಾಗಿದ್ದ ದಲಿತ ವರ್ಗಗಳಿಗೆ ಅವರು ಪರಿಹಾರ ದೊರಕುವಂತೆ ಮಾಡಿದರು. ಮೇಲು-ಕೀಳು, ಕಪ್ಪು-ಕೆಂಪು, ಜಾತಿ-ಪಂಥ ಒಮ್ಮೆ ಇದರ ತೆಕ್ಕೆಗೆ ಬಂದನೆಂದರೆ ಎಲ್ಲವೂ ಮುರಿದು ಬೀಳುತ್ತಿದ್ದವು. ಇಸ್ಲಾಂ ಧರ್ಮದ ತೆಕ್ಕೆಗೆ ಬಂದ ನಂತರ ಸಾಮಾಜಿಕ, ಆರ್ಥಿಕ, ರಾಜಕೀಯ ಮೇಲ್ಚಲನೆಗೆ ಅವಕಾಶ ಸಿಗುತ್ತಿದ್ದವು. ಇದಕ್ಕಿಂತ ಮೊದಲು ಅವರು ಜೀತದಾಳುಗಳಾಗಿದ್ದರು. ಈ ಬದಲಾವಣೆಗೆ ಸುಲ್ತಾನರು ಮುಖ್ಯರಲ್ಲ. ಆ ಕೆಲಸಕ್ಕೆ ಕೈ ಹಾಕಿದವರು ಸೂಫಿಗಳು. ಹೀನಾಯವಾಗಿ ಮೇಲ್ವರ್ಗದ ತುಳಿತಕ್ಕೆ ಸಿಕ್ಕಿ ಜರ್ಜರಿತವಾಗಿರುವ ದಲಿತ ಮತ್ತು ಕೆಳಜಾತಿಗಳ ಮೇಲೆ ಸೂಫಿಸಂ ಪ್ರಭಾವ ಬೀರಿತು. ಭಾರತದಲ್ಲಿ ಇಸ್ಲಾಂ ಬೇರುಬಿಡಲು ಬಹುಮಟ್ಟಿಗೆ ಸೂಫಿಗಳೇ ಮುಖ್ಯ ಕಾರಣವೆಂದರೆ ತಪ್ಪಾಗಲಾರದು. ದಖನ್ ಭಾಗದ ಗುಲ್ಬರ್ಗಾ ಮತ್ತು ಬೀದರ್‌ಗಳಲ್ಲಿ ಎರಡನೆ ಹಂತದ ಪ್ರಾರಂಭವನ್ನು ಸೂಚಿಸುತ್ತದೆ. ಬೆಸ್ತಿ,

ಕಾದ್ರಿ ಮತ್ತು ಶತ್ತಾರಿ ಗುಂಪುಗಳಿಗೆ ಸೇರಿದ ಸಂತರು ದಖನಿಗೆ ಬಂದು ನೆಲೆಸಲು ಆರಂಭಿಸಿದರು. ಕಾದ್ರಿ ಮತ್ತು ಶತ್ತಾರಿಗಳು ಸಮಾಜದ ಸುಧಾರಣೆಗೆ ಹೆಚ್ಚು ಗಮನ ಕೊಟ್ಟರು.[೧೩೧] ಸೂಫಿ ಸಂತರು ಮತ್ತು ಮುಸ್ಲಿಂರು ಅರೇಬಿಯಾ, ಬಾಗ್ದಾದ್ ರಾಷ್ಟ್ರಗಳಿಂದ ಕರಾವಳಿ ಪ್ರದೇಶಗಳಾದ ಮಂಗಳೂರು ಸುತ್ತಮುತ್ತಲಿನ ಪ್ರದೇಶಗಳಿಗೆ ಬಂದರು. ಹಾಗೆಯೇ ಇಲ್ಲಿನ ಜನಸಾಮಾನ್ಯರನ್ನು ತಮ್ಮ ಆಕರ್ಷಕ ಸರಳ ನೀತಿ ನಿಯಮಗಳಿಂದ ಗಮನ ಸೆಳೆದರು. ಸಮಾಜದ ಎಲ್ಲಾ ಸ್ತರದವರೊಂದಿಗೆ ಸಮಾನವಾಗಿ ನಡೆದುಕೊಳ್ಳುವುದರ ಜೊತೆಗೆ ಜನಸಾಮಾನ್ಯರ ಹೃದಯಗಳು ಬೆಸುಗೆಗೊಳ್ಳಲು ನಾಂದಿ ಹಾಡಿದರು.[೧೩೨] ಸಾಮಾಜಿಕವಾಗಿ ಜನಸಾಮಾನ್ಯರು ಮುಸ್ಲಿಂರ ಬೋಧನೆಯತ್ತ ವಾಲಿದರು. ಅಲ್ಲಿ ಯಾವುದೇ ಕಾರಣಕ್ಕೂ ಬೇದಭಾವಕ್ಕೆ ಅವಕಾಶವಿಲ್ಲ, ಎಲ್ಲರನ್ನೂ ಸಮಾನವಾಗಿ ನೋಡಿಕೊಳ್ಳುವ ತಳಹದಿಯ ಮೇಲೆ ರೂಪುರೇಷೆ ವ್ಯಕ್ತವಾಗುತ್ತಿತ್ತು.[೧೩೩] ಈ ಹಿನ್ನೆಲೆಯಲ್ಲಿ ಜನಸಾಮಾನ್ಯರು ಆ ಧರ್ಮದತ್ತ ವಾಲಿದರು.

ಪಿಂಜಾರರು : ಪಿಂಜಾರರು ಮುಸ್ಲಿಂ ಧರ್ಮಕ್ಕೆ ಮತಾಂತರ ಹೊಂದಲು ಕಾರಣವೇನು? ಹಿಂದೂ ಧರ್ಮದ ಯಾವ ನಿರ್ದಿಷ್ಟ ಜಾತಿಯಿಂದ ಈ ಮತಾಂತರಕ್ಕೆ ಒಳಗಾದರು? ಮತಾಂತರ ಹೊಂದಿದ ಮೇಲೆ ಕೂಡ ಮುಸ್ಲಿಂ ಜನಾಂಗದ ಉಪಪಂಗಡವಾಗಿ ಉಳಿಯಲು ಕಾರಣವೇನು? ಯಾವ ಕಾಲಘಟ್ಟದಲ್ಲಿ ಇವರು ಮತಾಂತರ ಹೊಂದಿದರು? ಅಥವಾ ಇವರು ಮೂಲತಃ ಹಿಂದೂ ಧರ್ಮದ ಕೆಳಜಾತಿಯವರು ಎನ್ನುವುದಕ್ಕೆ ಅವರ ಜೀವನ ಪದ್ಧತಿಯಲ್ಲಿರಬಹುದಾದ ಕುರುಹುಗಳಾದರೂ ಏನು? ಮುಂತಾದ ವಿಚಾರಗಳಿಗೆ ಖಚಿತವಾದ ಉತ್ತರ ಕೊಡಲು ಕಷ್ಟವಾಗುತ್ತದೆ.

ಅಲ್ಲಾವುದ್ದೀನ್ ಖಿಲ್ಜಿಯ ಸೇನಾಪತಿಯಾದ ಮಲ್ಲಿಕಾಫರನ ಅಜೇಯ ದಂಡ ಯಾತ್ರೆಯುದ್ದಕ್ಕೂ ವ್ಯಾಪಕ ಪ್ರಮಾಣದಲ್ಲಿ ಮತಾಂತರ ನಡೆದ ಉದಾಹರಣೆ ನಮಗೆ ಸಿಗುತ್ತದೆ. ನಂತರ ಮುಸ್ಲಿಂ ಅರಸನಾಗಿದ್ದ ಔರಂಗಜೇಬ್ ಮತ್ತು ಟಿಪ್ಪುಸುಲ್ತಾನನ ಆಡಳಿತ ಸಂದರ್ಭದಲ್ಲಿ ಕೂಡ ಮತಾಂತರ ಕ್ರಿಯೆ ನಡೆದುದಾಗಿ ಚರಿತ್ರೆಯಿಂದ ತಿಳಿದು ಬರುತ್ತದೆ. ಹದಿನೈದು ಮತ್ತು ಹದಿನಾರನೆ ಶತಮಾನದ ಅವಧಿಯಲ್ಲಿ ಮತಾಂತರ ಹೊಂದಿರಬಹುದಾದ ಪಿಂಜಾರರು ಇಂದು ಕರ್ನಾಟಕದಲ್ಲಿ ವ್ಯವಸ್ಥೆಯಿಂದ ನಿರ್ಲಕ್ಷ್ಯಕ್ಕೆ ಒಳಗಾಗಿದ್ದಾರೆ. ಇತ್ತ ಇಸ್ಲಾಂ ಧರ್ಮಕ್ಕೆ ಪೂರ್ತಿಯಾಗಿ ಸೇರದೆ ಅಥವಾ ಹಿಂದೂ ಧರ್ಮಕ್ಕೆ ಸೇರದೆ ತ್ರಿಶಂಕು ಸ್ಥಿತಿಯಲ್ಲಿ ಜೀವನ ಸಾಗಿಸುತ್ತಿದ್ದಾರೆ. ಪಿಂಜಾರರು ತಾವು ಅಕ್ಬರನ ಕಾಲದಲ್ಲಿ ಮತಾಂತರ ಹೊಂದಿರುವುದಾಗಿ ಭಾವಿಸಿಕೊಂಡಿದ್ದಾರೆ.[೧೩೪] ಇವರಲ್ಲಿ ಶೂದ್ರರು ಹೆಚ್ಚಿನ ಸಂಖ್ಯೆಯಲ್ಲಿ ಮತಾಂತರ ಹೊಂದಿದ್ದರು ಎಂಬುದು ಕಟು ಸತ್ಯ. ಮುಸ್ಲಿಂ ಧರ್ಮದ ಪ್ರಚಾರ, ಒತ್ತಾಯ ಪೂರ್ವಕ ಮತಾಂತರ, ಹಿಂದೂ ಧರ್ಮದ ಕಠೋರ ನೀತಿಗಳು, ಶೂದ್ರ ಮತ್ತು ಅಸ್ಪೃಶ್ಯರು ಹೆಚ್ಚಿನ ಪ್ರಮಾಣದಲ್ಲಿ ಮತಾಂತರಕ್ಕೆ ಒಳಗಾದರು ಎಂದರೆ ತಪ್ಪಾಗಲಾರದು.

ಪಿಂಜಾರರನ್ನು 'ನದಾಫ್' ಎಂದು, ಆಂಧ್ರದಲ್ಲಿ *ದೂದೆಕುಲವೆಂದು* ಕರೆಯುತ್ತಾರೆ. ಇವರು ಆಚರಿಸುವ ಪ್ರಮುಖ ದೇವರುಗಳಲ್ಲಿ ನಾಯಕನಹಟ್ಟಿ ತಿಪ್ಪೇಸ್ವಾಮಿಯಿಂದ ಹಿಡಿದು ಎಲ್ಲಮ್ಮ, ಚೌಡಮ್ಮ, ಧರ್ಮಸ್ಥಳದ

ಮಂಜುನಾಥ, ಶಿರಡಿಸಾಯಿಬಾಬಾ, ಬಾಬಾ ಬುಡನ್‌ಗಿರಿಯ ದಾದಾ ಕಲಂದರ್, ಹೊನ್ನಾರಲಿ, ಬಸವಣ್ಣ, ಈಶ್ವರ, ಹನುಮಂತನವರಿಗೆ ಎಲ್ಲಾ ದೇವರಿಗೂ ಪಿಂಜಾರರು ನಡೆದುಕೊಳ್ಳುತ್ತಾರೆ.[೧೩೫]

### ೩.೫.೪. ಕ್ರಿಶ್ಚಿಯನ್ ಧರ್ಮ

ಜಗತ್ತಿನ ಪ್ರಮುಖ ಧರ್ಮಗಳಲ್ಲಿ ಕ್ರೈಸ್ತ ಧರ್ಮವು ಒಂದು. ಈ ಧರ್ಮವು ಭಾರತದಲ್ಲಿ ಹುಟ್ಟಿ ಬೆಳೆಯದಿದ್ದರೂ ಭಾರತೀಯ ಸಮಾಜದ ಮೇಲೆ ಪ್ರಭಾವ ಬೀರಿದ್ದು ಗಮನಾರ್ಹ. ಜೈನ, ಬೌದ್ಧ ಮತ್ತು ಇಸ್ಲಾಂ ಧರ್ಮದಂತೆ ಕ್ರಿಶ್ಚಿಯನ್ ಧರ್ಮವು ಕೆಲವೆ ಶತಮಾನಗಳಲ್ಲಿ ಭಾರತದಾದ್ಯಂತ ವಿಸ್ತರಿಸಿತು. ಇದಕ್ಕೆ ಯೂರೋಪಿಯನ್ನರ ಕಾರ್ಯ ಚಟುವಟಿಕೆಗಳೇ ಪ್ರಮುಖ ಕಾರಣವಾಗಲಾರಂಭಿಸಿದವು. ಭಾರತಕ್ಕೆ ಆಗಮಿಸಿದ ಐರೋಪ್ಯರಲ್ಲಿ ಪೋರ್ಚುಗೀಸರೆ ಮೊದಲಿಗರು. ಪಶ್ಚಿಮ ಭಾರತದ ಕರಾವಳಿ ಭಾಗದಲ್ಲಿ ನೆಲೆಗೊಂಡ ಮೇಲೆ ಕರ್ನಾಟಕಕ್ಕೆ ಇವರ ಪ್ರಭಾವ ಅಧಿಕವಾಯಿತು. ಹದಿನೈದನೆಯ ಶತಮಾನದ ತರುವಾಯ ಕರ್ನಾಟಕದಲ್ಲಿ ಧರ್ಮದ ಪ್ರಚಾರವು ಚುರುಕುಗೊಂಡು ಮತಾಂತರ ಪ್ರಕ್ರಿಯೆಗಳಿಗೆ ಪ್ರಚೋದನೆ ಸಿಕ್ಕಿತು. ಹಾಗೆಯೇ ಕೆಲವರನ್ನು ಮತಾಂತರಿಸಿದರು. ಮತಾಂತರವಾದಾಗ ಕ್ರಿಶ್ಚಿಯನ್ನರಿಗೆ ಹಾಗೂ ಮತಾಂತರಗೊಂಡ ಕ್ರಿಶ್ಚಿಯನ್ನರಿಗೆ ಭೇದಬಾವಗಳು ಹಾಗೆಯೇ ಮುಂದುವರಿದವು. ಈ ನಡುವೆ ನಡೆದ ಬಿಕ್ಕಟ್ಟುಗಳು ಮಧ್ಯಕಾಲೀನೋತ್ತರ ಕರ್ನಾಟಕದಲ್ಲಿ ಅಧ್ಯಯನಗಳಿಗೆ ಅವಕಾಶ ಮಾಡಿಕೊಟ್ಟಿದೆ.

ಪೋರ್ಚುಗೀಸರು, ಬ್ರಿಟೀಷರು ಭಾರತಕ್ಕೆ ಆಗಮಿಸಿದ ಅನಂತರ ಕ್ಯಾಥೊಲಿಕರ, ಪ್ರಾಟೆಸ್ಟೆಂಟ್ ಮಿಷನ್ನುಗಳ ಚಟುವಟಿಕೆ ಕರ್ನಾಟಕದಲ್ಲಿ ಅಧಿಕವಾಯಿತು. ಕ್ರಿ.ಶ.೧೫೧೦ರಲ್ಲಿ ಪೋರ್ಚುಗೀಸರು ಕೈ ಹಾಕಿದ್ದೆ ಮತಾಂತರ ಪ್ರಕ್ರಿಯೆಗೆ. ಅವರು ವಿಜಯನಗರ, ಇಕ್ಕೇರಿ ಮೊದಲಾದ ದೊರೆಗಳೊಡನೆ ಸಂಪರ್ಕ ಇರಿಸಿಕೊಂಡು ಇಲ್ಲಿನ ಜನಸಮುದಾಯಗಳನ್ನು ಈ ಪ್ರಕ್ರಿಯೆಗೆ ಪ್ರೇರೇಪಿಸಿದರು.

ಕ್ರಿ.ಶ.೧೫೬೦ರಲ್ಲಿ ಗೋವಾದ ಪೋರ್ಚುಗೀಸರು ಮತಾಂತರಗೊಂಡ ಕ್ರೈಸ್ತರನ್ನು ಶಿಕ್ಷಿಸಲು ಇನ್‌ಕ್ವೆಜಿಷನ್ ಧಾರ್ಮಿಕ ವಿಚಾರಣೆ ಆರಂಭಿಸಿದರು. ಮತಾಂತರಗೊಂಡ ಕ್ರೈಸ್ತರು ಅಂತರಂಗದಲ್ಲಿ ಹಿಂದಿನ ದೇವರುಗಳನ್ನೇ ನಂಬುತ್ತಾ, ಹಿಂದಿನ ಆಚಾರಗಳನ್ನೇ ಪಾಲಿಸುತ್ತ ಹೊರಗೆ ಮಾತ್ರ ಕ್ರೈಸ್ತರಂತೆ ನಟಿಸುತ್ತಿದ್ದನ್ನು ತಪ್ಪಿಸುವುದೇ ಈ ಉಗ್ರ ವಿಚಾರಣೆಯ ಉದ್ದೇಶವಾಗಿತ್ತು. ಈ ವಿಚಾರಣೆಯನ್ನು ಎದುರಿಸಲಾರದೆ ಮತಾಂತರಗೊಂಡ ಕ್ರೈಸ್ತರು ಕರಾವಳಿ ತೀರ ಪ್ರದೇಶಗಳಾದ ಕುಂದಾಪುರ, ಮುಲ್ಕಿ, ಮಂಗಳೂರು, ಬಂಟ್ವಾಳಕ್ಕೆ ಬಂದರು. ವಿಜಯನಗರ, ಇಕ್ಕೇರಿ, ಸೊಂದೆಯ ಅರಸರು ಹೀಗೆ ಬಂದ ಕ್ರೈಸ್ತರಿಗೆ ಭೂಮಿ ನೀಡಿ ಅವರನ್ನು ರಕ್ಷಿಸಿದರು. ಇವರೇ ಇಂದಿನ ಕೊಂಕಣಿ ಕ್ಯಾಥೋಲಿಕರು.[೧೩೬]

ಕೊಂಕಣಿ ಕ್ರಿಶ್ಚಿಯನ್ನರು ಕರ್ನಾಟಕದ ಕರಾವಳಿ ಪ್ರದೇಶದಲ್ಲಿ ಬಹುಮುಖ್ಯ ವರ್ಗವಾಗಿ ಕಾಣಿಸಿಕೊಂಡಿದ್ದು ವಿಜಯನಗರ ಕಾಲದಲ್ಲಿ. ಅನೇಕ ಕಾರಣಗಳಿಂದ ಅವರು ಪೋರ್ಚುಗೀಸ್ ಆಕ್ರಮಿತ ಗೋವಾದಿಂದ ಈ ಪ್ರದೇಶಕ್ಕೆ ವಲಸೆ ಬಂದರು. ಆ ಕಾರಣಗಳಲ್ಲಿ ಬಹುಮುಖ್ಯವಾದದ್ದು ಮತೀಯ ವಿಚಾರಣೆಗಳ ಮೂಲಕ

ಪೋರ್ಚುಗೀಸ್ ಕ್ರಿಶ್ಚಿಯನ್ನರು ಇವರ ಬಗೆಗೆ ತೋರಿಸಿದ ಧಾರ್ಮಿಕ ಅಸಹಿಷ್ಣುತೆ ಮತ್ತು ಕಿರುಕುಳ. ಕೆಳದಿ ನಾಯಕರು ಕೊಂಕಣಿ ಕ್ರಿಶ್ಚಿಯನ್ನರನ್ನು ಸ್ವಾಗತಿಸಿದರು. ಹಾಗೆಯೇ ಜೀವನಾಧಾರಕ್ಕೆ ಭೂಮಿಯನ್ನು ಕೊಟ್ಟರು.[೧೩೭] ಕ್ರಿ.ಶ.೧೫೫೦ರಿಂದ ೧೭೬೩ರ ನಡುವೆ ಕ್ರಿಶ್ಚಿಯನ್ನರ ಜನಸಂಖ್ಯೆ ಕರಾವಳಿ ಕರ್ನಾಟಕದಲ್ಲಿ ಹೆಚ್ಚಳವಾಯಿತು. ಇವರಲ್ಲಿ ಕೆಲವರು ಭೂಮಾಲೀಕರಾಗಿ ಹೊರಹೊಮ್ಮಿದರು. ಕ್ರಿ.ಶ.೧೫೮೭ ಬಂಟ್ವಾಳದ ಶಾಸನವು ಈ ವಿಷಯವನ್ನು ಖಚಿತಪಡಿಸುತ್ತದೆ. ಕೆಳದಿನಾಯಕರ ಆಹ್ವಾನದ ಮೇರೆಗೆ ಕ್ರಿಶ್ಚಿಯನ್ನರ ಕರಾವಳಿ ಕರ್ನಾಟಕದಲ್ಲಿ ನೆಲೆ ಊರಿದರು.[೧೩೮] ಮಂಗಳೂರು, ಮುಲ್ಕಿ, ಹೊನ್ನಾವರ, ಅಂಕೋಲಾ, ಮಂಜೇಶ್ವರ ಮುಂತಾದ ಸ್ಥಳಗಳಲ್ಲಿ ಈ ರೀತಿಯ ಪ್ರಕ್ರಿಯೆ ಕೆಳದಿ ಅರಸರ ಆಳ್ವಿಕೆಯ ಕಾಲದಲ್ಲಿ ಹೆಚ್ಚಾಯಿತು.

ದಕ್ಷಿಣ ಭಾರತದಲ್ಲಿ ಕ್ರಿಶ್ಚಿಯನ್ ಪ್ರವರ್ಧಮಾನಕ್ಕೆ ಬಂದಿದ್ದು ಹದಿನೈದನೆ ಶತಮಾನದ ಮಧ್ಯಭಾಗದಲ್ಲಿ ಸುಮಾರು ಇಪ್ಪತ್ತು ಸಾವಿರ ಪರಮರು ಕ್ರಿಶ್ಚಿಯನ್ ಧರ್ಮಕ್ಕೆ ಮತಾಂತರ ಹೊಂದಿದರೆಂದು ತಿಳಿದು ಬರುತ್ತದೆ.[೧೩೯] ಕ್ರಿ.ಶ.೧೫೬೦ ಡೊನ್ ಕೊನ್ಸ್‌ಟೆಂಟೈನ್ ಡಿ ಬ್ರೆಗಾನ್ಝಾ ಎಂಬುವವನು ವೈಸರಾಯಿಯಾಗಿದ್ದ ಸಮಯದಲ್ಲಿ ಗೋವಾ ಸಾಲ್ಸೆಟ್ ದ್ವೀಪಗಳಲ್ಲಿರುವ ಹಿಂದೂಗಳನ್ನೆಲ್ಲಾ ಕ್ರೈಸ್ತ ಮತಕ್ಕೆ ಬಲಾತ್ಕಾರದಿಂದ ಸೇರಿಸಿ ದೇವಸ್ಥಾನಗಳನ್ನೆಲ್ಲಾ ನಾಶಮಾಡಿ ಬಹಳ ಪೀಡಿಸುತ್ತಿದ್ದಾಗ ಅನೇಕ ಹಿಂದೂಗಳು ಈ ಜಿಲ್ಲೆಗೆ ಬಂದು ನೆಲೆಸಿದರು.[೧೪೦] ಹಾಗೆಯೇ ಬಿಜಾಪುರದ ಸುಲ್ತಾನನ ಆಹ್ವಾನದ ಮೇಲೆ ಗೋವಾದ ಆರ್ಚ್ ಬಿಷಪರು ಹಲವಾರು ಯಹೂದಿಗಳನ್ನು ಕಳುಹಿಸಿದುದನ್ನು ಗಮನಿಸಬಹುದು. ಕ್ರಿ.ಶ.೧೫೮೭ರಲ್ಲಿ ಫ್ರಾನ್ಸಿಸ್ಕರು ಮೈಸೂರು ರಾಜ್ಯದಲ್ಲಿ ಸುವಾರ್ತೆಗಳನ್ನು ಪ್ರಚಾರ ಮಾಡಿದರು. ಇಟಾಲಿಯನ್ ಕುಲೀನನಾದ ರಾಬರ್ಟ್ ಡಿ ನೊಬಿಲಿಯು ಕ್ರಿ.ಶ.೧೬೦೫ರಲ್ಲಿ ಭಾರತಕ್ಕೆ ಬಂದನು. ಆತನು ಬಹುಬೇಗ ದಕ್ಷಿಣ ಭಾರತದ ಪ್ರಾಂತೀಯ ಸಂಸ್ಕೃತಿಯೊಂದಿಗೆ ಬೆರೆತು ಭಾರತೀಯ ಜೀವನ ವಿಧಾನಕ್ಕೆ ಹೊಂದಿಕೊಂಡನು. ಇವನ ಬಗ್ಗೆ ಅನೇಕ ಟೀಕೆಗಳು ಬರಲಾರಂಭಿಸಿದವು. ಕೆಳಜಾತಿಯಿಂದ ಮತಾಂತರ ಹೊಂದಿದವರು ಮತ್ತು ಮೇಲುಜಾತಿಯಿಂದ ಮತಾಂತರ ಹೊಂದಿದವರು ಎಂಬ ಜಾತಿಭೇದಗಳನ್ನು ಗುರುತಿಸುವ ಮತ್ತು ಕ್ರೈಸ್ತವಲ್ಲದ ಸಂಪ್ರದಾಯ ಮತ್ತು ಆಚರಣೆಗಳನ್ನು ಚರ್ಚುಗಳಲ್ಲಿ ರೂಢಿಗೆ ತಂದವನೆಂಬ ಟೀಕೆಗೆ ಅವನು ಗುರಿಯಾದ. ಆದರೂ ಒಬ್ಬ ಬ್ರಾಹ್ಮಣ ಬಿಜಾಪುರ ಮತ್ತು ಗೊಲ್ಕೊಂಡಗಳನ್ನು ದೇವರ ಪ್ರತಿನಿಧಿಯಾಗಿ ವಿಕಾರ್ ಅಪಾಸ್ಟೊಲಿಕ್ ಸೇವೆ ಸಲ್ಲಿಸಿದನು. ಭಾರತೀಯ ಸಂಸ್ಕೃತಿಯೊಂದಿಗೆ ಬೆರೆತು ಇಲ್ಲಿನ ಜನಸಾಮಾನ್ಯರನ್ನು ಕ್ರಿಶ್ಚಿಯನ್ ಧರ್ಮಕ್ಕೆ ಮತಾಂತರ ಮಾಡುತ್ತಿದ್ದರು ಎಂಬುದಕ್ಕೆ ಈ ಮೇಲಿನ ವಿವರಣೆಯೇ ಸಾಕ್ಷಿಯಾಗಿದೆ. ಅದೇ ರೀತಿಯಾಗಿ ಜನಸಾಮಾನ್ಯರನ್ನು ಒತ್ತಾಯಪೂರ್ವಕವಾಗಿ ಮತಾಂತರ ಮಾಡುತ್ತಿದ್ದರೆ ಅಥವಾ ಕ್ರಿಶ್ಚಿಯನ್ ಧರ್ಮದ ಸರಳ ತತ್ವಗಳಿಗೆ ಮಾರುಹೋಗಿ ಇಲ್ಲಿನ ಜನತೆ ಮತಾಂತರವಾಗುತ್ತಿದ್ದರೆ ಎಂಬುದು ಮುಖ್ಯ ಸಂಗತಿ. ಹೆಚ್ಚಿನದಾಗಿ ಕ್ರಿಶ್ಚಿಯನ್ ಧರ್ಮಗುರುಗಳ ಪ್ರಭಾವದಿಂದ ಮತಾಂತರ ಪ್ರಕ್ರಿಯೆ ಹೆಚ್ಚು ನಡೆಯುತ್ತಿತ್ತು.

ಕೆಳದಿ ರಾಜ್ಯದಲ್ಲಿ ಶಿವಪ್ಪನಾಯಕನ ಕಾಲದಲ್ಲಿ ಸುಮಾರು ಮೂವತ್ತು ಸಾವಿರ ಕ್ರೈಸ್ತ ಜನರಿದ್ದರೆಂಬುದನ್ನು ಬಿ.ಎಲ್. ರೈಸ್‌ರ ಮೈಸೂರು ಕೊಡಗು ಶಾಸನ ಹೇಳುತ್ತಿದೆ. ಪಾದ್ರಿಗಳು ಜನರಿಗೆ ಉಪದೇಶ ಮಾಡಲು

ಅನುಮತಿಯನ್ನು ಈ ರಾಜರು ಕೊಟ್ಟಿದ್ದರು. ಧರ್ಮಾಂತರಕ್ಕೆ ಕೂಡ ಒಪ್ಪಿಗೆ ಕೊಟ್ಟಿದ್ದು ತೀರ ಅಚ್ಚರಿಯ ಸಂಗತಿ. ಕ್ರೈಸ್ತರನ್ನು ಗುಲಾಮರನ್ನಾಗಿರಿಸಿಕೊಳ್ಳಬಾರದೆಂಬ ಭರವಸೆಯೂ ಇತ್ತು. ಕ್ರೈಸ್ತರು ಹಿಂದೂ ಸ್ತ್ರೀಯರನ್ನು ಮದುವೆಯಾಗಲು ಅನುಮತಿ ಕೊಡುತ್ತಿರಲಿಲ್ಲ. ಇಷ್ಟಕ್ಕೂ ಮೀರಿ ವ್ಯಭಿಚಾರ ನಡೆಸಿದ ಕ್ರೈಸ್ತರನ್ನು ಮಂಗಳೂರಿನ ಅವರ ಸಂಸ್ಥೆಗೆ ಕಳುಹಿಸಲಾಗುತ್ತಿತ್ತು.[೧೪೨] ಸ್ಥಳೀಯ ರಾಜರು ಸಹ ಪರೋಕ್ಷವಾಗಿ ಕೆಲವು ಪೋರ್ಚುಗೀಸರ ಮೇಲೆ ಹಾಗೆಯೇ ಮತಾಂತರ ವಿಚಾರದಲ್ಲಿ ನಿರ್ಬಂಧಗಳನ್ನು ಹಾಕಿದ್ದರು. ಮತಾಂತರ ವಿಚಾರದಲ್ಲಿ ನಡೆದ ಒಂದು ಘಟನೆ ಈ ಕೆಳಗಿನಂತಿದೆ. ದಕ್ಷಿಣ ಭಾರತದಲ್ಲಿ ಪೋರ್ಚುಗೀಸ್ ಜೆಸೂಯಿಟ್ ಫಾದರುಗಳು ಫರಂಗಿಗಳನ್ನು ಕಂಡರೆ ಜನರಿಗೆ ಆಗದು ಎಂದು ಅರಿತವರಾಗಿ ತಾವು ಫರಂಗಿಗಳಲ್ಲ, ರೋಮ್‌ಪುರ ಬ್ರಾಹ್ಮಣರೆಂದು ಕರೆದುಕೊಂಡು ತಮ್ಮ ಬೋಧನೆ ಮಾಡಿದ್ದರು. ಮಿಷನರಿ ಕೆಲಸದ ಮೇಲೆ ಕಳುಹಿಸುವ ಮೊದಲು ಪಾದ್ರಿಗಳಿಗೆ ಸ್ಥಳೀಯ ಭಾಷೆಗಳನ್ನು ಕಲಿಸಿ ತದನಂತರ ಜನರನ್ನು ಮತಾಂತರ ಮಾಡಲು ಕೈ ಹಾಕುತ್ತಿದ್ದರು.[೧೪೩] ಹೀಗಿರುವಾಗ ಒಬ್ಬ ಮತಬೋಧಕ ಬಹಿರಂಗವಾಗಿ ಹೇಳಿದ್ದೇನೆಂದರೆ, ರೋಮಪುರಿ ಬ್ರಾಹ್ಮಣರು ಮತ್ತಾರೂ ಅಲ್ಲ, ಅವರೂ ಫರಂಗಿಗಳೇ. ಎಲ್ಲ ಫರಂಗಿಗಳನ್ನು *ಪರಿಯರು* ಎಂದು ಭಾವಿಸುವುದಾದರೆ ರೋಮಪುರಿ ಬ್ರಾಹ್ಮಣರನ್ನು ಪರಿಯರೆಂದೇ ಭಾವಿಸಬೇಕು ಎಂದ. ಈ ಮಾತು ಬ್ರಾಹ್ಮಣರಿಗೆ ದಿಗ್ಭ್ರಮೆಯನ್ನುಂಟು ಮಾಡಿತು. ಯಾರನ್ನು ಬ್ರಾಹ್ಮಣರೆಂದು ಭಾವಿಸಿದ್ದರೋ ಅವರೀಗ ಪರಿಯರು ಸರಿ ಎಲ್ಲೆಲ್ಲೂ ಅಲ್ಲೋಲ ಕಲ್ಲೋಲವೆದ್ದಿತು. ಹಿಂದೂಗಳೆಲ್ಲ ರೇಗಿಹೋದರು. ಇದರ ಪರಿಣಾಮವಾಗಿ ಪಾದ್ರಿಗಳ ವಿರುದ್ಧ ಸೇಡು ತೀರಿಸಿಕೊಳ್ಳಲು ಹಿಂದೂಗಳು ಕಾಯುತ್ತಿದ್ದರು.[೧೪೪] ಈ ರೀತಿಯ ಪ್ರಕ್ರಿಯೆಗಳು ದಕ್ಷಿಣ ಭಾರತದಾದ್ಯಂತ ನಡೆಯುತ್ತಿದ್ದವು. ವಿಶೇಷವಾಗಿ ಪಶ್ಚಿಮ ಕರಾವಳಿಯ ಪೋರ್ಚುಗೀಸರ ಪ್ರಭಾವವಿರುವ ಸ್ಥಳಗಳು ಮತಾಂತರ ಪ್ರಕ್ರಿಯೆಗೆ ಒಳಗಾಗಿದ್ದವು.[೧೪೫] ಈ ಹಿನ್ನೆಲೆಯಲ್ಲಿ ಐರೋಪ್ಯರ ಪ್ರಬಲ ಅಸ್ತ್ರವೊಂದು ಪ್ರಸರಿಸಲು ಧರ್ಮವು ಮುಖ್ಯ ಕಾರಣವಾಗಲಾರಂಭಿಸಿತು. ಇದರಿಂದ ತಾರತಮ್ಯ ಭಾವನೆಗಳು ಹಾಗೆಯೇ ಮುಂದುವರಿದವು. ಪೋರ್ಚುಗೀಸರ ಪ್ರಾಬಲ್ಯ ಕಡಿಮೆಯಾಗಿ ಬ್ರಿಟಿಷರು ಭಾರತೀಯರ ಮೇಲೆ ಒತ್ತಡ ಹೇರಿದರು.

## ೩.೬. ದಲಿತರ ಬ್ರಾಹ್ಮಣರ ಕೆಲವು ಸಂಬಂಧಗಳು

ಮಧ್ಯಯುಗದಲ್ಲಿ ಹೊಲೆಯರಿಗೆ ಮೇಲ್‌ಸ್ತರದ ಸಮುದಾಯಗಳ ಕೇರಿಗೆ ನಿರ್ಬಂಧವಿತ್ತು. ಪ್ರತಿಯಾಗಿ ಹೊಲೆಗೇರಿಗೆ ಬ್ರಾಹ್ಮಣರ ಪ್ರವೇಶವನ್ನು ನಿರ್ಬಂಧಿಸುತ್ತಾರೆ. ಬ್ರಹ್ಮಶಿವನು ಕೂಡ ಈ ಹೇಳಿಕೆಯನ್ನು ಖಚಿತಪಡಿಸುತ್ತಾನೆ. ಹೊಲೆಯರು ತಮ್ಮ ಜಾತಿ ಸಂಬಂಧಿಕರು ಬಂದರೆ ಸಂಭ್ರಮಪಟ್ಟುಕೊಳ್ಳುತ್ತಾರೆ. ಆದರೆ ಕುಲಜರ್ ಸಮಯಿಗಳಂ (*ಬ್ರಾಹ್ಮಣರು*) ಬಂದರೆ ಬಿಟ್ಟುಕೊಳ್ಳುವುದಿಲ್ಲ. ಆದರೆ ಇತರೆ ಸಮುದಾಯದವರು ಬಂದರೆ ಮನಃಪೂರ್ವಕವಾಗಿ ಬಿಟ್ಟುಕೊಳ್ಳುತ್ತಾರೆ. ಜೈನರು ಬಂದರೂ ಸಹ ಬಿಟ್ಟುಕೊಳ್ಳುತ್ತಾರೆ. ಹೊಲೆಯರ ಚರ್ಮದ ಪಾತ್ರೆಯ ನೀರು ಬ್ರಾಹ್ಮಣರಿಗೆ ಪವಿತ್ರವಂತೆ. ಅಂದು ಕೆಳವರ್ಗದ ದೈವಗಳು ಸ್ಪೃಶ್ಯ ಅಸ್ಪೃಶ್ಯ ಸಮುದಾಯಗಳನ್ನು ಸಮಾನ ವೇದಿಕೆಗೆ ತರುವ ಪ್ರಯತ್ನ ಮಾಡುತ್ತಿದ್ದವು. ಬಳರಿ ಹೊಲೆಯರ ದೇವತೆ ಮಾರಿ,

ಮಸಣಿವಾಸಿಣಿಗಳೂ ಹೊಲೆಯರ ದೈವಗಳೇ. ಆ ದೈವಗಳಿಗೆ ಹೆದರಿದ ಬ್ರಾಹ್ಮಣರು ಅವುಗಳ ನೋಂಪಿಯನ್ನು ಹೊತ್ತ ಮೇಲೆ ಆ ದೈವಗಳ ಅನುಯಾಯಿಗಳಾದ ಹೊಲೆಯರು ಪರೆ ಬಾರಿಸುತ್ತ ಕುಣಿಯುತ್ತಿದ್ದರೆ ಅವರ ಜೊತೆಗೆ ಅನಿವಾರ್ಯವಾಗಿ ಮಿಶ್ರವಾಗುತ್ತಿದ್ದರು. ಚಿತೆಗೆ ಹಾಕಿದ ಮಾಂಸವನ್ನು ಯಾವುದೇ ಯೋಚನೆಯಿಲ್ಲದೆ ತೆಗೆದುಕೊಳ್ಳಬಹುದೆಂದು ಬ್ರಹ್ಮಶಿವ ಹೇಳುತ್ತಾನೆ.[೧೪೬]

ಇಂದಿಗೂ ಕೂಡ ಹಳ್ಳಿಯಲ್ಲಿ ಬ್ರಾಹ್ಮಣರ ಬೀದಿಯಲ್ಲಿ ನಡೆದುಹೋಗಲು ಪರಯನಿಗೆ ಮಾನಸಿಕವಾಗಿ ಎಡೆ ಕೊಡುವುದಿಲ್ಲ. ಆದರೆ ಪಟ್ಟಣಗಳಲ್ಲಿ ಬ್ರಾಹ್ಮಣರ ಮನೆ ಹತ್ತಿರ ಹೋಗುವ ಅಥವಾ ಮುಂದೆ ಸಾಗಿ ಹೋಗುವುದನ್ನು ಯಾರು ತಡೆಯುವುದಿಲ್ಲ. ತಡೆಯಲಾರರು. ಅದೇ ರೀತಿ ಪರಚ್ಚೇರಿ (ಪರಯರ ಗುಡಿಸಲು)ಯ ಮುಂದಿನಿಂದ ಹಾದುಹೋಗಲು ಎಂದಿಗೂ ಬ್ರಾಹ್ಮಣರಿಗೆ ಆಸ್ಪದ ಕೊಡಲಾರರು. ಕಾರಣ, ಅದರಿಂದ ನಮ್ಮ ಜಾತಿ ನಾಶವಾದೀತೆಂಬ ನಂಬಿಕೆ ಅವರದು. ಹಾಸನ ಜಿಲ್ಲೆಯ ಹೊಲೆಯರ ಬಗ್ಗೆ ಮೆಕೆಂಜಿ ಈ ರೀತಿ ಅಭಿಪ್ರಾಯಪಟ್ಟಿದ್ದಾರೆ. "ಪ್ರತಿಯೊಂದು ಹಳ್ಳಿಯಲ್ಲಿಯೂ ಹೊಲೆಗೇರಿಯಿದೆ. ಬ್ರಾಹ್ಮಣರು ಹೊಲೆಯರ ಕೈಯಿಂದ ಏನನ್ನು ಸ್ವೀಕರಿಸುವುದಿಲ್ಲ. ಬ್ರಾಹ್ಮಣನೇನಾದರೂ ಹೊಲೆಗೇರಿಯನ್ನು ಪ್ರವೇಶಿಸಲು ಯತ್ನಿಸಿದರೆ ಅವರೆಲ್ಲರು ಜೊತೆಗೂಡಿ ಬ್ರಾಹ್ಮಣರನ್ನು ಒದೆಯಲು ಯತ್ನಿಸುತ್ತಾರೆ."[೧೪೬]

ಇತರ ಜಾತಿಯವರು ಹೊಲೆಯರ ಮನೆಗೆ ಪ್ರವೇಶಿಸಿದರೆ ಅದರಿಂದ ಹೊಲೆಯರಿಗೆ ದುರದೃಷ್ಟವೆನ್ನಲಾಗಿದೆ. ಅಕಸ್ಮಾತ್ ಪ್ರವೇಶಿಸಿದರೆ ಅವನ ಬಟ್ಟೆ ಹರಿದು, ಅದರ ತುದಿಗೆ ಸ್ವಲ್ಪ ಉಪ್ಪನ್ನು ಕಟ್ಟಿ ಹೊರದೂಡುತ್ತಾರೆ. ಅದೃಷ್ಟ ಹೊರಹೋಗದಂತೆ, ಮನೆಯವರಿಗೆ ಕೆಡುಕಾಗದಂತೆ ಎಚ್ಚರ ವಹಿಸಲು ಈ ರೀತಿ ಮಾಡುತ್ತಾರೆ. "ಅಬೆದುಬೀಸ್ ಪ್ರಕಾರ ಪಟ್ಟಣಗಳಲ್ಲಿ ಇಂದು ಹೊಲೆಯರು ಬ್ರಾಹ್ಮಣರ ಮುಂದೆ ಸುಳಿದಾಡುವುದನ್ನು ನಿರ್ಬಂಧಿಸುವುದು ಸಾಧ್ಯವಿಲ್ಲವಾದರೂ, ಹಳ್ಳಿಗಳಲ್ಲಿ ಇಂದಿಗೂ ಯಾವ ಹೊಲೆಯರು ಬ್ರಾಹ್ಮಣರ ಕೇರಿಗಳಲ್ಲಿ ತಿರುಗಾಡಲು ಸಾಧ್ಯವಿಲ್ಲ. ಹಾಗೆಯೆ ಬ್ರಾಹ್ಮಣರ ಸಾಮೀಪ್ಯದಿಂದ ತಮಗೆ ಕೇಡುಂಟು ಎಂದು ಬಲವಾಗಿ ನಂಬಿರುವ ಹೊಲೆಯರು ಕೂಡ ಎಂಥದೇ ಸಂದರ್ಭದಲ್ಲಿ ಬ್ರಾಹ್ಮಣರು ತಮ್ಮ ಕೇರಿಯ ನಡುವೆ ಸುಳಿದಾಡುವುದನ್ನು ಸಹಿಸುವುದಿಲ್ಲ. ತಂಜಾವೂರಿನ ಬ್ರಾಹ್ಮಣರು ತಮ್ಮ ಕೇರಿಯ ನಡುವೆ ಸುಳಿದಾಡುವುದನ್ನು ಸಹಿಸುವುದಿಲ್ಲ. ತಂಜಾವೂರಿನ *ಪರಿಯನ್, ಪಲ್ಲಿಯನ್, ಚಕ್ಕಲಿಯನ್* ಎಂಬ ಅಸ್ಪೃಶ್ಯ ಜಾತಿಗಳು ತಮ್ಮ ಬಡಾವಣೆಗಳಿಗೆ ಬ್ರಾಹ್ಮಣರ ಪ್ರವೇಶದಿಂದ ದೊಡ್ಡ ಅನಾಹುತ ತಪ್ಪಿದ್ದಲ್ಲವೆಂದು ಬಲವಾಗಿ ನಂಬಿದವರಾಗಿದ್ದು, ಬ್ರಾಹ್ಮಣರು ತಮ್ಮ ಬಡಾವಣೆಯನ್ನು ಪ್ರವೇಶಿಸುವುದನ್ನು ಬಲವಾಗಿ ಆಕ್ಷೇಪಿಸುತ್ತಾರೆ. ಒಂದು ವೇಳೆ ಈ ರೀತಿಯೇನಾದರೂ ಹಾದುಹೋದರೆ ಅಲ್ಲಿನ ಹೊಲೆಯರು ಚಪ್ಪಲಿ, ಕಸಪೊರಿಕೆ ಮತ್ತು ಸಗಣಿಯನ್ನು ಎರಚುವ ಮೂಲಕ ಬ್ರಾಹ್ಮಣರಿಗೆ ಅದೃಷ್ಟ, ಹೊಲೆಯರಿಗೆ ದುರದೃಷ್ಟವನ್ನು ತೊಡೆದುಹಾಕಲು ಯತ್ನಿಸುತ್ತಾರೆಂದು ನಂಬಿದ್ದಾರೆ.[೧೪೮]

ಬ್ರಾಹ್ಮಣರು ತಮ್ಮ ಕೇರಿಗಳಿಗೆ ಪ್ರವೇಶಿಸಿದರೆ ಅಪಶಕುನ, ಮೈಲಿಗೆ ಎಂದು ದಲಿತರು ಭಾವಿಸುತ್ತಾರೆ. ತೊಗಲನ್ನು ಹದಮಾಡಲು ಅಮ್ಮನ ಗುಡಿಯಂಗಳದಲ್ಲಿ ಹುದುಗಿರುವ ಕರಿಬಾನಿಯ ನೀರನ್ನು ಬ್ರಾಹ್ಮಣರು

ಗುಟ್ಟಾಗಿ ತಮ್ಮ ಶುಭಕಾರ್ಯಗಳಿಗೆ ಒಯ್ಯುವುದು ನಿಲ್ಲಿಸಲಿಲ್ಲ. ಮದುವೆ, ಗೃಹಪ್ರವೇಶ ಮೊದಲಾದ ಸಂದರ್ಭಗಳಲ್ಲಿ ಆ ನೀರು ಅವಶ್ಯಕವಾಗಿ ಬೇಕಾಗುತ್ತದೆಂದು ಬ್ರಾಹ್ಮಣರು ತಿಳಿದಿದ್ದರು. ರೋಗದಿಂದ ನರಳುವ ಮಗುವನ್ನು ಒಬ್ಬ ಕೊರಗನ ಕೈಯಲ್ಲಿ ಕೊಟ್ಟರೆ ಅಥವಾ *ಕೊರಗ* ಹೆಂಗಸರ ಹಾಲು ಕುಡಿಸಿದರೆ ರೋಗ ಪರಿಹಾರವಾಗುತ್ತದೆ, ವೈದಿಕರ ಮನೆಗಳಲ್ಲಿ ದಲಿತರು ಚರ್ಮ ಹದ ಮಾಡುವ ಆಯುಧಗಳನ್ನು ಮದುವೆಯಲ್ಲಿ ಪೂಜಿಸಲಾಗುತ್ತದೆ. ಮೊದಲಾದ ಸಂಗತಿಗಳು ಅವಶೇಷಗಳಂತೆ ಉಳಿದವು. ಇವುಗಳ ಗುಟ್ಟನ್ನು ಸಂಶೋಧನೆಯ ಮುಖಾಂತರ ಬಿಡಿಸಬೇಕಾಗಿದೆ. ಸಿಂದ್ ಮಾದಿಗರ ಮೂಲ ಪುರುಷ ಸುಬ್ಬಯ್ಯನು ಬ್ರಾಹ್ಮಣನ ಸೊಕ್ಕನ್ನು ಅಡಗಿಸಿ, ಅವನಿಂದ ಕ್ಷಮೆ ಕೇಳಿಸಿಕೊಂಡ ವಿವರಗಳಿವೆ.[೧೪೯] ಭೂತಬಲಿಯಿಡುವಾಗ ಪಾಪಿ ಬಂದು ಬೇಡಿದರೂ ಶ್ವಪಚ ಬಂದರೂ ಅವರಿಗೆ ದಾನ ಕೊಡುವುದು ಊಟಕ್ಕೆ ಹಾಕುವುದು ಪುಣ್ಯಕರವೆಂದು ಬ್ರಾಹ್ಮಣರು ನಂಬಿದ್ದರು. ಹೊಲೆಯನು ಜತೆಗೆ ಹಾಕಿದ ಮಾಂಸವನ್ನು ಬ್ರಾಹ್ಮಣನು ಯಾವುದೇ ಯೋಚನೆಯಿಲ್ಲದೆ ತೆಗೆದುಕೊಳ್ಳಬಹುದೆಂದೂ ಹಾಗೆ ತೆಗೆದುಕೊಂಡಿದ್ದರಿಂದ ಬರಬಹುದಾದ ದೋಷನಿವಾರಣೆಗೆ ಮಾಂಸವನ್ನು ಕತ್ತರಿಸಿ ಹೊಲೆಯನ ಖಡ್ಗಕ್ಕೆ ತನ್ನ ನೊಸಲನ್ನು ಮುಟ್ಟಿಸಿದರೆ ಸಾಕು ಎಂದು ಬ್ರಾಹ್ಮಣರು ಹೇಳುತ್ತಿದ್ದರು.[೧೫೦] ಈ ರೀತಿಯ ವಿವರಗಳನ್ನು ಕನ್ನಡ ಪತ್ರಗಳು ತಿಳಿಯಪಡಿಸುತ್ತವೆ. ಇನ್ನೂ ಹಲವು ಸಂಗತಿಗಳು ಇವೆರಡು ಸಮುದಾಯಗಳ ಮಧ್ಯೆ ವೈರುಧ್ಯಗಳನ್ನು ಸೃಷ್ಟಿಸಿವೆ. ಶ್ರದ್ಧೆ, ಭಕ್ತಿ, ಆಚಾರ ವಿಚಾರಗಳಲ್ಲಿ ವೈದಿಕರಿಗಿಂತ ತಾವೇನು ಕಡಿಮೆಯಿಲ್ಲವೆನ್ನುವ ಆತ್ಮವಿಶ್ವಾಸದ ಮಾತುಗಳು ದಲಿತರಲ್ಲಿ ಅಲ್ಲಲ್ಲಿ ಕಾಣಿಸಿಕೊಳ್ಳುತ್ತವೆ.

## ೩.೭. ಗ್ರಾಮ ದೇವತೆಗಳು

ಇವತ್ತಿಗೂ ಕೂಡ ಕರ್ನಾಟಕದುದ್ದಕ್ಕೂ ಹಲವು ಗ್ರಾಮದೇವತೆಗಳನ್ನು ಕಾಣುತ್ತೇವೆ. ಚಾರಿತ್ರಿಕವಾಗಿ ಈ ದೇವತೆಗಳು ಸಮಾಜದೊಂದಿಗೆ ಅವಿನಾಭಾವ ಸಂಬಂಧ ಹೊಂದಿದ್ದ ಜನಸಮುದಾಯಗಳೊಂದಿಗೆ ಸಂಕೀರ್ಣ ಸಂಬಂಧಗಳನ್ನು ಅರ್ಥೈಸಿಕೊಳ್ಳಲು ಈಗ ರೂಢಿಯಲ್ಲಿರುವ ಆಚರಣೆಗಳೇ ಮುಖ್ಯ ಕಾರಣಗಳಾಗಿವೆ. ಚೌಡಮ್ಮ, ಎಲ್ಲಮ್ಮ, ಮಾರಮ್ಮ ಇತರ ದೈವಗಳು ಇದಕ್ಕೆ ಪುಷ್ಟಿ ನೀಡುತ್ತವೆ. ಪ್ರಾಂತೀಯವಾಗಿ ಒಂದೇ ಹೆಸರಿನ ಬೇರೆ ಬೇರೆ ದೇವತೆಗಳನ್ನು ಗುರುತಿಸಬಹುದು. ಈ ರೀತಿಯ ಕಾರಣಗಳಿಗೆ ಮೂಲತಃ ದೇವತೆಯ ರೂಪಗಳು ಚದುರಿ ಹೋದಂತೆ ಕಂಡುಬರುತ್ತದೆ. *ದುರುಗಮ್ಮ, ಪೋಲಮ್ಮ, ಸುಂಕಲಮ್ಮ, ಹುಲಿಗೆಮ್ಮ, ಗಾಳೆಮ್ಮ* ಮುಂತಾದವುಗಳು. ದುರುಗಮ್ಮ ಎಂಬ ದೇವತೆ ಹೈದ್ರಾಬಾದ್ ಕರ್ನಾಟಕ ಪ್ರದೇಶದಲ್ಲಿ ವಿವಿಧ ಪ್ರದೇಶಗಳಲ್ಲಿ ಕಾಣಿಸಿಕೊಳ್ಳುತ್ತಾನೆ. ಇದಕ್ಕಿಂತ ಮೊದಲಿನ ಸ್ಥಿತಿ ನಮಗೆ ಸರಿಯಾಗಿ ತಿಳಿಯುವುದಿಲ್ಲ. ಲಗ್ನ ಮುಹೂರ್ತ ಆದಾಗ ಹರಿಜನರು ಬಂದು ಕಾಯಿ ಹೊಡೆಸಿಕೊಂಡು ಹೋಗುತ್ತಾರೆ. ಮೊದಲು ಮಾದರಗೇರಿ ಇತ್ತು. ಗ್ರಾಮ ದೈವಗಳನ್ನು ಕುರಿತು ಚರ್ಚಿಸುವಾಗ ದಲಿತರ ಮತ್ತು ಮೇಲ್ಜಾತಿಗಳೊಂದಿಗೆ ಇರುವ ಸಂಬಂಧವನ್ನು ಈ ದೈವಗಳು ಪ್ರತಿನಿಧಿಸುತ್ತವೆ. ಹಾಗೆಯೇ ದಲಿತರು ವೈದಿಕರ ಹಾಗೆ ರೂಪಾಂತರವಾಗುವ ಅನೇಕ ಪ್ರಸಂಗಗಳು ಗ್ರಾಮ ದೈವಗಳ ಆಚರಣೆಯ ಮೂಲಕ ತಿಳಿಯಬಹುದಾಗಿದೆ. ಇದಕ್ಕೊಂದು ನಿದರ್ಶನವೆಂಬಂತೆ ಹೊಲೆಯರು ಜನಿವಾರ ಧರಿಸುವ ಪ್ರಸಂಗವನ್ನು ಕಾಣಬಹುದು.

ಮಾತೃದೇವತಾ ಪಂಥದ ಜನಪದ ರೂಪಗಳೇ ಗ್ರಾಮದೇವತೆಗಳು. ಭಯ, ಭಕ್ತಿ, ಭೀತಿಯಿಂದ ವೃಕ್ಷ, ಶಿಲೆಗಳನ್ನು ಆರಾಧಿಸುತ್ತಿದ್ದ ಗ್ರಾಮೀಣ ಜನರು ಒಂದು ಕಾಲಘಟ್ಟದಲ್ಲಿ ಗ್ರಾಮದೇವತೆಗಳನ್ನು ಕಂಡುಕೊಂಡರು. ಐತಿಹಾಸಿಕ ಕಾಲದಲ್ಲಿ ನಡೆದ ಕೆಲವು ಘಟನೆಗಳನ್ನು ಹಾಗೂ ಆಕಸ್ಮಿಕಗಳು ಕೂಡ ದೇವತೆಗಳನ್ನು ರೂಪಿಸುವ ಸಂದರ್ಭ ಹೆಚ್ಚಾಗಿ ಗೋಚರವಾಗುತ್ತದೆ. ಗ್ರಾಮದೇವತೆಗಳ ಉಗಮದ ಕುರಿತು ಸ್ಪಷ್ಟಪಡಿಸಬೇಕಾದರೆ ಮಾತೃಪ್ರಧಾನ ಕುಟುಂಬ ವ್ಯವಸ್ಥೆಯ ಪರಿಣಾಮಗಳನ್ನು ಪರಿಶೀಲಿಸುವುದು ಅತ್ಯವಶ್ಯಕ. *ಸೆಮಿಟಿಕ್* ಜನಾಂಗದಲ್ಲಿ ಬೆಳೆದ ಅಷ್ಟಾರ್ಟ್ ದೇವತೆಯ ಕಲ್ಪನೆ ಈಜಿಪ್ಟ್‌ನಲ್ಲಿ ರೂಪುಗೊಂಡ *ಇಸಿಸ್* ದೇವತೆಯ ಕಲ್ಪನೆ, ಫ್ರಿಜಿಯಾದಲ್ಲಿ *ಸಿಬಿಲೇ* ದೇವತೆಯ ಕಲ್ಪನೆ ಭಾರತದ ಶಕ್ತಿದೇವತೆಯ ಕಲ್ಪನೆಗೆ ಸಮಾನ ಪರಿಕಲ್ಪನೆಗಳಾಗಿವೆ. ಮಾತೃಪ್ರಧಾನ ಕುಟುಂಬ ವ್ಯವಸ್ಥೆ ರೂಪುಗೊಂಡು ಮಾತೃದೇವತೆಗಳ ಪ್ರತಿನಿಧಿಗಳಾದ ಗ್ರಾಮದೇವತೆಗಳು ಗ್ರಾಮಗಳ ಆರಾಧನೆಗೆ ಒಳಗಾದವು. ಈ ಆರಾಧನೆಯು ಚರಿತ್ರೆಯು ಪೂರ್ವಕಾಲದಲ್ಲಿ ಬಳಕೆಯಲ್ಲಿತ್ತೆಂಬುದನ್ನು ವಿಪುಲವಾದ ಸಾಕ್ಷ್ಯಾಧಾರಗಳು ದೊರೆಯುತ್ತವೆ.

ಕರ್ನಾಟಕದ ಬಹುಪಾಲು ದೇವತೆಗಳು ಆಚರಣೆಯ ವಿಧಾನ, ಚಾರಿತ್ರಿಕ ಹಿನ್ನೆಲೆಯ ಬಗೆಗೆ ಪುರಾಣಗಳು, ಐತಿಹ್ಯಗಳು ಹೆಚ್ಚಿನ ಪ್ರಮಾಣದಲ್ಲಿ ಜನಪದದ ಸ್ವರೂಪದಲ್ಲಿ ಅಡಕವಾಗಿವೆ. ಈ ವೈಶಿಷ್ಟ್ಯತೆಗಳನ್ನು ಅಧ್ಯಯನ ಮಾಡಿ, ತುಲನಾತ್ಮಕವಾಗಿ ಹೋಲಿಸಿ ನೋಡಿದಾಗ ಆಯಾ ಜನಾಂಗದ ಹಿನ್ನೆಲೆಯ ರೂಪವನ್ನು ಅರಿಯಬಹುದು. ಈ ಹಿನ್ನೆಲೆಯಲ್ಲಿ ಹೆಚ್ಚಿನದಾಗಿ ಕೆಳವರ್ಗದ ಜನತೆ ಆಚರಿಸುವ ಮತ್ತು ಮೇಲ್ವರ್ಗದ ಜನತೆಯೊಂದಿಗೆ ಸಂಬಂಧ ಇರುವ ಅನೇಕ ದೇವತೆಗಳ ಚಾರಿತ್ರಿಕ ಹಿನ್ನೆಲೆ ಸಿಗುತ್ತದೆ. ಆದುದರಿಂದ ಗ್ರಾಮದೇವತೆಗಳನ್ನು ಮುಖ್ಯವಾಗಿ ಮೂರು ವಿಭಾಗಗಳಲ್ಲಿ ಗುರುತಿಸಬಹುದು. ರಾಷ್ಟ್ರೀಯ ದೇವತೆಗಳು, ಪ್ರಾಂತೀಯ ದೇವತೆಗಳು, ಸ್ಥಳೀಯ ದೇವತೆಗಳು ಎಂದು. ಈ ದೇವತೆಗಳನ್ನು ಕುರಿತು ಅಧ್ಯಯನ ಮಾಡುವಾಗ ನಾವು ಹೆಚ್ಚಿನದಾಗಿ ಮೌಖಿಕ ಆಕರಗಳ ಮೊರೆ ಹೋಗಬೇಕಾಗುತ್ತದೆ. ಆ ಮುಖಾಂತರ ಅಂದಿನ ಸಮಾಜದೊಂದಿಗೆ ಅವುಗಳು ಹೊಂದಿರುವ ಸಂಬಂಧ, ಜನಸಮುದಾಯಗಳು ಆರಾಧಿಸುತ್ತಿದ್ದ ವಿಧಾನ, ಹತ್ತು ಹಲವು ಪರಿಕಲ್ಪನೆಗಳನ್ನು ಅರ್ಥೈಸಲು ಸಾಧ್ಯವಿದೆಯಾದರೂ ಲಿಖಿತ ಆಧಾರಗಳಿಗಿಂತ ಮೌಖಿಕ ಆಕರಗಳೇ ಗ್ರಾಮದೇವತೆಗಳ ಸುತ್ತ ಹೆಣೆದುಕೊಂಡಿರುವುದನ್ನು ಕಾಣಬಹುದು.

ಎಲ್ಲಮ್ಮ : ಕರ್ನಾಟಕದ ಪ್ರಮುಖ ಗ್ರಾಮದೈವಗಳಲ್ಲಿ ಎಲ್ಲಮ್ಮ ಒಬ್ಬಳಾಗಿದ್ದಾಳೆ. ಈ ಗ್ರಾಮದೈವದ ಚರಿತ್ರೆಯ ಬಗ್ಗೆ ನಿರ್ದಿಷ್ಟವಾಗಿ ಹೇಳುವುದು ಕಷ್ಟಸಾಧ್ಯವಾಗಿದೆ. ಏಕೆಂದರೆ ಎಲ್ಲಮ್ಮನನ್ನು ಆರಾಧಿಸುವ ವಿವಿಧ ಜನಸಮುದಾಯಗಳು ಚಾರಿತ್ರಿಕ ಕಾಲಘಟ್ಟದಲ್ಲಿ ಎಳೆದಾಡಿರುವುದು ಕಂಡುಬರುತ್ತದೆ. "ರಾಷ್ಟ್ರಕೂಟರ ಆಳ್ವಿಕೆಯ ಸಂದರ್ಭದಲ್ಲಿ ಜನಪದರು ಶಕ್ತಿ ಆರಾಧನೆಯನ್ನು ಎಲ್ಲಮ್ಮನ ರೂಪದಲ್ಲಿ ನಡೆಸುತ್ತಿದ್ದರು ಹಾಗೂ ಎಲ್ಲಮ್ಮ ಗ್ರಾಮದ ದೈವವಾಗಿತ್ತು ಎನ್ನುವ ಮಾಹಿತಿಗಳು ಸಿಗಲಾರಂಭಿಸುತ್ತವೆ. ಎಲ್ಲಮ್ಮ ದೇವತೆಯ ಹುಟ್ಟು ಹಾಗೂ ಹೆಸರಿನ ಕುರಿತಾಗಿ ಸಂಶೋಧಕರಲ್ಲಿ ಒಮ್ಮತದ ಅಭಿಪ್ರಾಯವಿಲ್ಲ. ಲಿಖಿತ ಮತ್ತು ಮೌಖಿಕ ಆಕರಗಳಲ್ಲಿ ಎಲ್ಲಮ್ಮನ ಕುರಿತು ಪರಸ್ಪರ ಪೂರಕವಾದ ಮಾಹಿತಿಗಳು ಸಿಗುವುದಿಲ್ಲ. ಶಾಸನಗಳಲ್ಲಿ ಮತ್ತು ಕಾವ್ಯಗಳಲ್ಲಿ

ಎಕ್ಕಲದೇವಿ, ಎಕ್ಕುಲವಿರಿ, ಎಕ್ಕುನದಿ, ಯಕನಾತಿ, ಏಕನಾಥಮ್ಮ ಹೆಸರುಗಳು ಕಂಡುಬಂದರೆ, ಮೌಖಿಕ ಆಕರಗಳಲ್ಲಿ ಎಲ್ಲಮ್ಮ ಎಲ್ಲಾಯಿ ಎನ್ನುವ ಹೆಸರುಗಳು ಕಂಡುಬರುತ್ತವೆ. ಎಕ್ಕಲದೇವಿ ಎಂಬುದೇ ಎಲ್ಲಮ್ಮ ಆಗಿರಬಹುದು ಎನ್ನುವುದು ಎಂ.ಎಂ. ಕಲಬುರ್ಗಿ ಅವರ ಅಭಿಪ್ರಾಯ.[೧೫೧]

ಎಲ್ಲಮ್ಮ ದೇವತೆಯ ಕುರಿತು ಕನ್ನಡ ಕಾವ್ಯಗಳಲ್ಲಿ ಮಾಹಿತಿ ಸಿಗುತ್ತದೆ. ಈ ನಿಟ್ಟಿನಲ್ಲಿ ನಯಸೇನನ 'ಧರ್ಮಾಮೃತ', ಬ್ರಹ್ಮಶಿವನ 'ಸಮಯ ಪರೀಕ್ಷೆ', ವಚನಗಳಲ್ಲಿ ಪ್ರಸ್ತಾಪವಾಗಿದೆ. ಬೆಳಗಾಂ ಜಿಲ್ಲೆಯ ಸವದತ್ತಿ ತಾಲೂಕಿನ 'ಯಲ್ಲಮ್ಮ' ಪ್ರಸಿದ್ಧ ದೇವತೆಯಾಗಿದ್ದಾಳೆ. ಈ ಸವದತ್ತಿಯ ಎಕ್ಕಲದೇವಿ ಯಾರು? ಸವದತ್ತಿ ಮೂಲತಃ ಜೈನಯಕ್ಷಿಯ ವಿಗ್ರಹವೆಂದು ಕಲಬುರ್ಗಿಯವರು ಅಭಿಪ್ರಾಯಪಡುತ್ತಾರೆ. ಇದಕ್ಕೆ ಆಧಾರವಾಗಿ ಮುಖ್ಯ ದೇವಾಲಯದ ಹೊರಮೈ ಗೋಡೆಯಲ್ಲಿ ಹಿಂದೆ ಮತ್ತು ಎಡಕ್ಕೆ ತೀರ್ಥಂಕರನ ಕುಳಿತ ಭಂಗಿಯ ಎರಡು ಸಣ್ಣ ವಿಗ್ರಹಗಳಿರುವುದನ್ನು ಈಗಲೂ ನೋಡಬಹುದು. ಬಾಗಿಲಿನ ಮೇಲೂ ತೀರ್ಥಂಕರನ ವಿಗ್ರಹವಿದೆ. ಇದರಿಂದ ಈ ದೇವಾಲಯ ಮೂಲತಃ ಜೈನ ಬಸದಿಯಾಗಿದ್ದಿತು ಎಂದು ಹೇಳಬಹುದು. ಮತೀಯ ಸಂಘರ್ಷದಲ್ಲಿ ತೀರ್ಥಂಕರನನ್ನು ಭಗ್ನಗೊಳಿಸಿ ಆತನ ಯಕ್ಷಿಯನ್ನು ಮಧ್ಯದಲ್ಲಿ ಪ್ರತಿಷ್ಠಾಪಿಸಿ ಎಲ್ಲಮ್ಮನ ಹೆಸರಿನಿಂದ ಹಿಂದೂಗಳು ಪೂಜಿಸುತ್ತಿರಬಹುದು. ಎಂ.ಎಂ. ಕಲಬುರ್ಗಿಯವರು *ಜೈನಘಟ್ಟ, ಕ್ಷತ್ರಿಯ ಘಟ್ಟ, ಬ್ರಾಹ್ಮಣಘಟ್ಟ,* ಮತ್ತು *ಲಿಂಗಾಯತ ಕಾಲಘಟ್ಟವೆಂದು* ವಿಂಗಡಿಸುತ್ತಾರೆ. ಆಯಾಯ ಕಾಲಘಟ್ಟದಲ್ಲಿ ವಿವಿಧ ಪ್ರಾಬಲ್ಯದಲ್ಲಿದ್ದ ಸಮುದಾಯಗಳು ತಮ್ಮ ದೇವತೆಯಾಗಿ ಸ್ವೀಕರಿಸಿಕೊಂಡಿರಲು ಸಾಧ್ಯತೆ ಇರುವುದಾಗಿ ಹೇಳಲಾಗಿದೆ. ಗ್ರಾಮ ದೇವತೆಯಾದ ಎಲ್ಲಮ್ಮನನ್ನು ಅಂದು ಬ್ರಾಹ್ಮಣರು ರೇಣುಕೆಯಾಗಿ, ವೀರಶೈವರು ಸತ್ಯಕ್ಕಗಳಾಗಿ, ಜೈನರು ಪದ್ಮಾವತಿಯಾಗಿ, ಕೆಳಜಾತಿಗಳು ಎಲ್ಲಮ್ಮ, ಹುಲಿಗಮ್ಮ ದೇವತೆಯಾಗಿ ಸ್ವೀಕರಿಸಿರುವುದು ಕಂಡುಬರುತ್ತದೆ.[೧೫೨]

ಎಲ್ಲಮನ ಭಕ್ತರಲ್ಲಿ ಅಥವಾ ಚೌಡಿಕೆ ಸಂಪ್ರದಾಯದ ಗುಡ್ಡರಲ್ಲಿ ಗೊಂದಲಿಗರು, ಚೌಡಿಕೆಯವರು ಹಾಗೂ ಎಲ್ಲಮ್ಮನ ಸಾಮಾನ್ಯ ಗುಡ್ಡರು ಇರುವರು. ಇವರಲ್ಲಿ *ಗೊಂದಲಿಗರು* ಒಂದು ಜನಾಂಗವಾದರೆ, ಉಳಿದವರು ಬೇರೆ ಬೇರೆ ಜನಾಂಗದ ಗಾಯಕ ಭಕ್ತರು. ಚೌಡಿಕೆಯವರು ಸವದತ್ತಿ ಎಲ್ಲಮನ ಸಂಪ್ರದಾಯಕ್ಕೆ ಸೇರಿದವರು. ಸವದತ್ತಿ ಎಲ್ಲಮನ ದೇವಾಲಯ ಕಲ್ಯಾಣ ಚಾಲುಕ್ಯರ ಕಾಲಕ್ಕೆ ಸಂಬಂಧಿಸಿದ್ದು ಎಂದು ಹೇಳಲಾಗಿದೆ.

ಸವಾರೆಮ್ಮ, ಮಾಪ್ರರತಾಯಿ ಎಂದು ಆರಾಧಿಸುವುದನ್ನು ಕಾಣುತ್ತೇವೆ. ಪ್ರಾರಂಭದಲ್ಲಿ ಇದು ಬುಡಕಟ್ಟು ದೇವತೆಯಂತೆ ಕಾಣಿಸುತ್ತಾಳೆ. *ಬುಡಕಟ್ಟು* ಜನಾಂಗಗಳಲ್ಲಿ ಒಂದು ಸೀಮೆ (ಗಡಿ)ಯವರು ಮತ್ತೊಂದು ಸೀಮೆಯನ್ನು ದಾಟಬಾರದು ಮತ್ತು ಬೇಟೆಯಾಡಬಾರದು ಎಂದು ನಿರ್ಬಂಧವಿತ್ತು. ಈ ಬುಡಕಟ್ಟುಗಳು ಒಂದಾಗಿ ಒಕ್ಕಲುತನದ ಸಲುವಾಗಿ, ಮುಂದೆ ಒಂದು ಕಲ್ಲನ್ನು ಊರಿದರು. ಈ ಕಲ್ಲು ಮುಂದೆ ವಿಶೇಷತೆ ಪಡೆದು ಅಲ್ಲಿಯೇ ಒಂದು ಗುಡಿ ನಿರ್ಮಾಣ ಮಾಡಿದರು. ಊರನ್ನು ಕಾಯಲು ಗ್ರಾಮದೇವತೆ ಇರುವಂತೆ ಅಡವಿಯನ್ನು ಕಾಯಲು ಸೀಮೆ ದೇವತೆ ಇರಬೇಕೆಂದು (ಎಲ್ಲೆಯ *ದೇವತೆ* = ಎಲ್ಲಮ್ಮ) ಗುಡಿ ಸ್ಥಾಪಿಸಿದರು.[೧೫೩]

ಮಾತಂಗಿ : ಮಾತಂಗಿ ಮಾದಿಗರ ದೈವ. ಮಾದಿಗರು ತೊಗಲಿನ ಕೆಲಸ ಮಾಡುವ ಕುಶಲಕರ್ಮಿಗಳು. ಮಾದಿಗರು ತೀವ್ರ ಮಾತಂಗಿಯ ಮಕ್ಕಳೆಂದು ಹೇಳಿಕೊಳ್ಳುತ್ತಾರೆ. ಮಾತಂಗಿಯನ್ನು ಪೌರಾಣಿಕ ಓನ್ನೆಲೆಯೊಂದಿಗೆ ಸಮೀಕರಿಸುತ್ತಾರೆ. ಮಾತಂಗಿಯನ್ನು ಪರಶುರಾಮ ಸೋಲಿಸಿದಾಗ ಅವಳು ಮಾದಿಗನೊಬ್ಬನ ಮನೆಯ ಚರ್ಮ ಹದಮಾಡುವ ಕರಿಬಾನಿಯ ಕೆಳಗೆ ಅವನಿಂದ ತಪ್ಪಿಸಿಕೊಳ್ಳಲು ಅವಿತುಕೊಂಡಳಂತೆ. ಹಬ್ಬದ ದಿನ ಮಾದಿಗರು ತಮ್ಮ ಅಂತಹ ಕರಿಬಾನಿಗಳನ್ನು ಮಾತಂಗಿಯರ ಪ್ರತಿನಿಧಿಗಳೆಂದು ಪೂಜಿಸುತ್ತಾರೆ. ಮಾಂಸ ಹೆಂಡಗಳನ್ನು ಅವಳಿಗೆ ನೈವೇದ್ಯ ಮಾಡುತ್ತಾರೆ.

ಮಾತಂಗಿಯನ್ನು ಮಾತಂಗಿ, ಮಾತಂಗೆವ್ವ, ಮಾತೆಂಗಮ್ಮ, ದೋಣಿ ಮಾತಂಗಿ, ಮಾತಂಗ ಕನ್ಯೆ ಎಂಬ ಹೆಸರುಗಳಿಂದ ಕರೆಯುತ್ತಾರೆ. ಊರಿನ ಮಾದರ ಕೇರಿಯಲ್ಲಿ ಮಾತಂಗಿ ಇದ್ದೇ ಇರುತ್ತಾಳೆ. ಕೆಲವು ಕಡೆ ಮಾತಂಗಿ ಹೆಸರಿನಲ್ಲಿ ಪ್ರತ್ಯೇಕ ಗುಡಿಗಳನ್ನು ಕಾಣಬಹುದು. ಮಾತಂಗಿ ಎಂಬ ಪದಕ್ಕೆ ಹೆಣ್ಣುದೇವತೆ, ಹೊಲತಿ, ಚಾಂಡಾಲತಿ, A Chandala Women ಮಾದಿಗಿತ್ತಿ ಮುಂತಾದ ಹೆಸರುಗಳಿರುವುದು ಕಾಣಬಹುದು. ಚಾರಿತ್ರಿಕ ಕೃತಿಗಳಲ್ಲಿ ಮಾತಂಗಿಯ ಬಗೆಗೆ ಪ್ರಸ್ತಾಪಗಳನ್ನು ಕಾಣಬಹುದು. ಚಾವುಂಡರಾಯ ವಿರಚಿತ 'ತ್ರಿಷಷ್ಠಿ ಶಲಾಕಾ ಪುರುಷ ಪುರಾಣ' ಕೃತಿಯಲ್ಲಿ ಮಾತಂಗಿ ಒಂದು ವಿದ್ಯೆಯೆಂದು ವರ್ಣಿತವಾಗಿದೆ. ಆದಿಕವಿ ವಿರಚಿತ 'ಸುಕುಮಾರ ಚರಿತೆ'ಯಲ್ಲಿ ಮಾತಂಗಿ ಜಿನಮುನಿಗಳನ್ನು ಹಳಿದ ಕಾರಣವಾಗಿ ಮಾದಿಗನ ಮಗಳಾಗಿ ಹುಟ್ಟಿ ನಾನಾ ಕಷ್ಟಗಳನ್ನು ಎದುರಿಸಿರುವುದು ಕಂಡಬರುತ್ತದೆ.[೧೫೪] ಮಾತಂಗಿಯ ಸಂಪ್ರದಾಯವನ್ನು ಅಧ್ಯಯನಕ್ಕೊಳಪಡಿಸಿದಾಗ ನಂಬಿಕೆ, ಆಚರಣೆ, ವಿಧಿನಿಷೇಧಗಳು ಮತ್ತು ಸಂಪ್ರದಾಯಗಳನ್ನು ನೋಡಿದಾಗ ಆ ದೈವದ ವೈವಿಧ್ಯಮಯವಾದ ಚರಿತ್ರೆಗೆ ಸಾಕ್ಷಿಯಾಗಿದೆ. ಮಾತಂಗಿ ಮಾದಿಗರ ದೈವ (ಆದರೆ ಅಪವಾದವೆಂಬಂತೆ ಚಂದ್ರಗುತ್ತಿಯಲ್ಲಿರುವ ಮಾತಂಗಿಯ ಪೂಜೆ ದೇವಾಂಗ ಜನಾಂಗದವರದ್ದಾಗಿದೆ.) ಆಕೆಗೆ ಚಪ್ಪಲಿಯನ್ನು ಎಡೆಯಾಗಿ ಕೊಡುವುದು (ಬಹುಶಃ ಈ ಓನ್ನೆಲೆಯಲ್ಲಿ ಮಾದಿಗರ ದೇವೆಗೆ ಮಚ್ಚಪೂಜೆ ಎಂಬ ಗಾದೆ ಬಂದಿರಬಹುದು). ಮಾದಿಗರ ದೇವತೆಗೆ ಮೇಲ್ಜಾತಿಯವರು ಕೊಡುವ ಪ್ರಾಮುಖ್ಯತೆ, ಅವಳ ರೂಪವೆಂದು ಭಾವಿಸುವ ಮಾದಿಗರು ಚರ್ಮ ನೆನೆ ಹಾಕುವ ಕರಿಬಾನಿಯ ನೀರನ್ನು ಪವಿತ್ರವೆಂದು ಉಪಯೋಗಿಸುವುದು ಚಿಂತನೆಗೆ ಒಳಪಡಿಸುವ ವಿಷಯಗಳಾಗಿವೆ.[೧೫೫] ಈ ರೀತಿಯ ವಿಚಾರಗಳ ಒಳಗುಟ್ಟನ್ನು ಸಂಶೋಧನೆಗೆ ಒಳಪಡಿಸಬೇಕಾಗಿದೆ.

ಗ್ರಾಮದೇವತೆಗಳ ಆಚರಣೆ ಮೂಲಕ ಸಾಮಾಜಿಕ ಸಂಘರ್ಷ ಹೇಗೆ ರೂಪುಗೊಳ್ಳುತ್ತಿತ್ತು ಎನ್ನುವುದನ್ನು ನೋಡೋಣ. ಸಮಾಜದ ಒಳತಿಗಾಗಿ, ನೆಮ್ಮದಿಗಾಗಿ, ಶಿಷ್ಟರನ್ನು ರಕ್ಷಿಸಿ ದುಷ್ಟರನ್ನು ಶಿಕ್ಷಿಸುವ ಸಲುವಾಗಿ ಗ್ರಾಮದೇವತೆಗಳು ಹುಟ್ಟಿಕೊಂಡವು. ಇದರ ಜೊತೆಗೆ ಸಮಾಜದಿಂದ ಆರಾಧನೆಗೆ ಒಳಪಡುತ್ತಿದ್ದವು. ಬಹುತೇಕ ಗ್ರಾಮದೇವತೆಗಳು ಗ್ರಾಮೀಣ ಪರಿಸರದಲ್ಲಿ ಗ್ರಾಮಕ್ಕೆ ಯಾವುದೇ ರೀತಿಯ ಸಮಸ್ಯೆಗಳು ಕಾಡದಂತೆ ನೋಡಿಕೊಳ್ಳುವ ಮತ್ತು ಪರಿಹರಿಸುವ ಶಕ್ತಿ ಆ ದೇವತೆಗೆ ಇರುತ್ತಿತ್ತು ಎಂಬ ಗ್ರಾಮದ ಸಮುದಾಯಗಳ ನಂಬಿಕೆಯಾಗಿತ್ತು. ಕಾಲಕ್ರಮೇಣ ಈ ದೇವತೆಗಳ ಆರಾಧನಾ ವಿಧಾನದಲ್ಲಿ ಬದಲಾವಣೆ ಪ್ರಕ್ರಿಯೆಗಳು ಕಾಣಿಸಿಕೊಳ್ಳಲಾರಂಭಿಸಿದವು. ಕಾರಣ, ಅಂದು ಸಮಾಜದ ಮುಖ್ಯ ವಾಹಿನಿಯಲ್ಲಿದ್ದ ಪ್ರಬಲ ಜಾತಿಗಳು ತಮ್ಮ

ಸಮುದಾಯದ ದೇವತೆಯಾಗಿರುವಳು ಎಂಬಂತೆ ತೋರಿಸಿಕೊಂಡಿದ್ದು. ಅಧಿಕಾರಿಗಳಿಂದ, ಶ್ರೀಮಂತರಿಂದ, ಸಮಾಜದ ಉನ್ನತ ಸ್ತರದಲ್ಲಿದ್ದವರು ಗ್ರಾಮದೇವತೆಯನ್ನು ಶೋಷಣಾ ಅಸ್ತ್ರವನ್ನಾಗಿ ಮಾಡಿದರು. ಮೇಲ್ಜಾತಿಯವರಾದ ಊರಿನ ಆಡಳಿತಾಧಿಕಾರಿಗಳು ತಮ್ಮ ಜನ, ಧನ ಬಲದಿಂದ ಕೆಳಜಾತಿಯ ಜನ ಹೆಣ್ಣು, ಮಣ್ಣು, ಅನ್ನ ಲೂಟಿ ಮಾಡಿದರು. ಗ್ರಾಮದೇವತೆಯ ಹೆಸರಿನಲ್ಲಿ ಜಾತೀಯತೆ, ಸ್ಥಿರೀಕರಣ, ಅನೈಕ್ಯತೆ, ಮೌಢ್ಯ ಬೆಳವಣಿಗೆ, ಅಸ್ಪೃಶ್ಯತಾ ಸ್ಥಿರೀಕರಣ ಹಾಗೂ ಕೊಲೆಸುಲಿಗೆ, *ಬಸವಿ ಪದ್ಧತಿ, ವೇಶ್ಯಾವಾಟಿಕೆ, ಆತ್ಮಬಲಿದಾನ* ಮುಂತಾದ ಕ್ರೂರ ಪದ್ಧತಿಗಳು ಹುಟ್ಟಿಕೊಂಡವು. ಕೆಳಜಾತಿ ವರ್ಗದವರಾದ ವಾಲೀಕಾರ, ತಳವಾರ, ಕುರುಬ, ಕೊರವ, ಅಗಸ, ಪಂಚಮರಾದ ಹೊಲೆಯ ಮಾದಿಗ, ಸಮಗಾರ, ಸೋರ ಮುಂತಾದವರು ಮೇಲ್ಜಾತಿಗಳ ಸೇವೆ ಮಾಡಲು ಹುಟ್ಟಿ ಬಂದವರಂತೆ ತಿಳಿದುಕೊಂಡರು. ಹೊಲೆಯರಿಗಿಂತ ಮಾದಿಗರು ಕನಿಷ್ಠರೆಂಬುದನ್ನು ಹುಟ್ಟಿಹಾಕಿ ಇಬ್ಬರನ್ನು ಅಸ್ಪೃಶ್ಯ ದೃಷ್ಟಿಯಿಂದ ನೋಡುವ ಪರಿಪಾಟ ಹೆಚ್ಚಾಯಿತು. ಮೇಲುಕೀಳು, ಪವಿತ್ರ ಅಪವಿತ್ರ ಪದ್ಧತಿಗಳು ಮತ್ತಷ್ಟು ಗಟ್ಟಿಗೊಳ್ಳಲು ಅನುವು ಮಾಡಿಕೊಟ್ಟದಂತಾಯಿತು.

ದೇವಿ ಅಪವಿತ್ರಳು, ದೇವಿಯ ಆಡಳಿತಾಧಿಕಾರಿಗಳಾದ ತಾವು ಆಕೆಯಷ್ಟೇ ಪವಿತ್ರರು, ಉಳಿದವರು ಕನಿಷ್ಟರು, ಅಪವಿತ್ರರು, ಅಸ್ಪೃಶ್ಯರೆನ್ನುವಂತೆ ಗ್ರಾಮಾಧಿಕಾರಿಗಳು ನೋಡಿಕೊಂಡರು. ತಮಗಿಂತ ಕೆಳಗಿನ ಜನರಲ್ಲಿ ಒಬ್ಬರಿಗೊಬ್ಬರು ಮುಟ್ಟಿಸಿಕೊಳ್ಳದಂತೆ ತಾರತಮ್ಯ ಭಾವದಿಂದ ನೋಡಲು, ಗ್ರಾಮದೇವತೆಯ ಹೆಸರಿನಲ್ಲಿ ಅಸ್ಪೃಶ್ಯತೆಯನ್ನು ಮತ್ತಷ್ಟು ಗಟ್ಟಿಗೊಳಿಸುವ ಪರಿಪಾಟ ಹೆಚ್ಚಾಯಿತು. ಮಧ್ಯಮ ವರ್ಗದವರು ದೇವಿಯ ಮೂಲಭಾಗದಲ್ಲಿ, ಕೆಳವರ್ಗದವರು ದೇವಿಯ ಒಳಾಂಗಣದಲ್ಲಿ, ಪಂಚಮರು ದೇವಿಯ ಹೊರಾಂಗಣದಲ್ಲಿ ನಿಲ್ಲುವಂತೆ ಮಾಡಿ ದೇವಿ ಮೂರ್ತಿ ಹತ್ತಿರ ಬರದಂತೆ ನಿಷೇಧ ತಂದರು.

ಹೊಲೆಯರಿಗೆ ಜನಿವಾರ (ಹೆಬ್ಬಾರೆ ಗುಡ್ಡರು): ಇದು ದೇಶದಲ್ಲೇ ವಿಶಿಷ್ಟವಾದ ಸಂಪ್ರದಾಯ. ಹೊಲೆಯರು ಜನಿವಾರ ಧರಿಸಿ ಬ್ರಾಹ್ಮಣರಾಗುವ ಅಪೂರ್ವ ಸನ್ನಿವೇಶ ಈ ಹಬ್ಬದಲ್ಲಿ ಬರುತ್ತದೆ. ನಿರ್ದಿಷ್ಟವಾಗಿ ನಿಯಮಿಸಿದ ಆರು ಜನ ಹೊಲೆಯರು ಈ ಬದಲಾವಣೆಗೆ ಒಳಗಾಗುತ್ತಾರೆ. ಈ ಸಂಪ್ರದಾಯ ಜಾತೀಯತೆಗೆ ಒಂದು ಸವಾಲು ಎನ್ನಬಹುದು. ಕಂಬ ಇಕ್ಕುವ ಬೆಳಿಗ್ಗೆ ಈ ಆರು ಜನ ಹೊಲೆಯರೂ 'ಚವುರ' ಮಾಡಿಸಿಕೊಂಡು ಉಡುದಾರವನ್ನು ಕಿತ್ತು ಹಾಕಿ ಸ್ನಾನ ಮಾಡುತ್ತಾರೆ. ನಂತರ ಅರಿಶಿನ ಸೀಗೇಕಾಯನ್ನು ಬಾಯಲ್ಲಿಟ್ಟು ನುಂಗುತ್ತಾರೆ. ಅರಿಶಿನ ಸೀಗೇಕಾಯನ್ನು ನುಂಗಿದರೆ ಇದುವರೆಗೆ ಇದ್ದ ಹೊಲಸೆಲ್ಲ ಕಳೆದು ಶುಚಿಯಾಗುತ್ತಾರೆ ಎಂಬ ನಂಬಿಕೆ ನಮ್ಮ ಜನರಲ್ಲಿದೆ. ಆಮೇಲೆ ಚೆನ್ನಾಗಿ ಸ್ನಾನ ಮಾಡಿ ಹೊಸ ಉಡುಪುಗಳನ್ನು ಧರಿಸಿ ಬಾಯಿಗೆ ಬಟ್ಟೆ ಕಟ್ಟಿಕೊಳ್ಳುತ್ತಾರೆ. ಬಾಯಿಗೆ ಬಟ್ಟೆ ಕಟ್ಟಿಕೊಳ್ಳುವ ಕಾರಣವೆಂದರೆ ಹೆಚ್ಚು ಮಾತನಾಡದೆ ಮೌನವಾಗಿರಬೇಕೆಂಬ ನಿಯಮದ ಪಾಲನೆ ಮಾಡುವುದಕ್ಕಾಗಿ. ನಂತರ ತಲೆಗೆ ಪೇಟವನ್ನು ಕಟ್ಟಿಕೊಳ್ಳುತ್ತಾರೆ. ಹೀಗೆ ಇವರು ಶುಚಿಭೂತರಾಗುವುದು ಊರ ಒಳಗೆ ಇರುವ ಹೆಬ್ಬಾರಮ್ಮನ ಗುಡಿಯಲ್ಲಿ. ಇಷ್ಟಾದ ಮೇಲೆ ಅವರು ಯಾವ ಕಾರಣಕ್ಕಾಗಿಯೂ ಮನೆಗೆ ಹೋಗಬಾರದು. ಅವರ ಜಾತಿಯವರನ್ನು ಮುಟ್ಟಿಸಿಕೊಳ್ಳಬಾರದು. ಸಂಪೂರ್ಣವಾಗಿ ಹಬ್ಬ ಮುಗಿದ ಮೇಲೆ ಮಾತ್ರ ಅವರು ತಮ್ಮ ಮನೆಗಳಿಗೆ ಹಿಂದಿರುಗಬೇಕು. ಹೀಗೆ ಮಡಿಯಾದ ಆರು ಜನರೂ

ತಮಟೆ ವಾದ್ಯಗಳ ಸಮೇತರಾಗಿ ಊರಮಧ್ಯೆ ದೊಡ್ಡ ಬೀದಿಯ ಪಕ್ಕದಲ್ಲಿರುವ ಹಳೇಕಲ್ಲು ಬಾವಿಯ ದಡಕ್ಕೆ ಬಂದು ಕುಳಿತುಕೊಳ್ಳುತ್ತಾರೆ. ಬ್ರಾಹ್ಮಣ ಜಾತಿಯ ಜೋಯಿಸರು ಅಲ್ಲಿಗೆ ಬಂದು ಹೋಮ ನೇಮಗಳನ್ನು ಮಾಡಿ ಬಹಳಷ್ಟು ಕಾಲ ಶ್ಲೋಕಗಳನ್ನು ಹೇಳುತ್ತಾರೆ. ನಂತರ ನಗಾರಿ, ತಮಟೆ ವಾದ್ಯಗಳ ಸದ್ದಿನಲ್ಲಿ ನೆರೆದ ನೂರಾರು ಜನರು ಕೈ ಚಪ್ಪಾಳೆಯ ನಡುವೆ ಬಹಿರಂಗವಾಗಿ ಆರು ಜನರಿಗೂ ಜನಿವಾರ ಧಾರಣೆ ಮಾಡುತ್ತಾರೆ. ಅಲ್ಲಿಗೆ ಈ ಆರು ಜನ ಹೊಲೆಯರ ಶೂದ್ರತ್ವ ಕಳೆದು ಪವಿತ್ರತೆ ಬಂತು ಎಂಬ ನಂಬಿಕೆ. ಒಟ್ಟಿನಲ್ಲಿ ಅವರು ಬ್ರಾಹ್ಮಣರಾಗುತ್ತಾರೆ. ಜನಿವಾರ ಧಾರಣೆಯ ನಂತರ ವಾದ್ಯ ಸಮೇತವಾಗಿ ಹೆಬ್ಬಾರಮ್ಮನ ಗುಡಿಗೆ ಹೋಗುತ್ತಾರೆ. ಹೆಬ್ಬಾರಮ್ಮನನ್ನು ಶೃಂಗರಿಸಲು ಪ್ರಾರಂಭಿಸುತ್ತಾರೆ.

ಹೊಲೆಯರು ಜನಿವಾರ ಧರಿಸುವುದಾದರೂ ಏಕೆ? ಹೆಬ್ಬಾರಮ್ಮ ಯಾರು? ಚೌಡಮ್ಮನ ಹಬ್ಬದಲ್ಲಿ ಹೆಬ್ಬಾರಮ್ಮನಿಗೆ ಪ್ರಾಶಸ್ತ್ಯ ಏಕೆ? ಈ ಮುಂತಾದ ಪ್ರಶ್ನೆಗಳಿಗೆ ಉತ್ತರಿಸಲು ಕಷ್ಟಸಾಧ್ಯ. ಹೆಬ್ಬಾರಮ್ಮ ಮೂಲತಃ ಒಬ್ಬ ಬ್ರಾಹ್ಮಣ ಕನ್ಯೆ. ತನ್ನ ಬಟ್ಟೆಯಲ್ಲಿ ಬಚ್ಚಿಟ್ಟಿರುವ ರಹಸ್ಯ ವಸ್ತುವನ್ನು ಗುರುತಿಸಿದವನನ್ನು ತಾನು ಮದುವೆಯಾಗುತ್ತೇನೆ ಎಂದು ಶಪಥ ಹಾಕಿದಳು. ಈ ವಿಚಾರವನ್ನು ಹೊಲೆಯರ ಯುವಕ ಹೆಬ್ಬಾರಮ್ಮನ ರಹಸ್ಯ ವಸ್ತುವನ್ನು ಗುರುತಿಸಿ ಮದುವೆಯಾಗುತ್ತಾನೆ. ಕೊನೆಗೆ ಈ ವಿಚಾರ ಹೆಬ್ಬಾರಮ್ಮನಿಗೆ ಗೊತ್ತಾಗುತ್ತದೆ. ಹೊಲೆಯರ ಯುವಕನಾದ ಹೆಬ್ಬಾರಮ್ಮನ ಗಂಡ ತನ್ನ ತಪ್ಪಿಗೆ ಕ್ಷಮೆ ಕೇಳುತ್ತಾನೆ. ಆದರೂ ಹೆಬ್ಬಾರಮ್ಮ ಕೇಳುವುದಿಲ್ಲ. ಇದಕ್ಕೆ ಪ್ರಾಯಶ್ಚಿತ್ತವೇನು ಎಂಬುದಕ್ಕೆ ಪ್ರತಿ ವರ್ಷ ಚೌಡಮ್ಮನ ಹಬ್ಬದಲ್ಲಿ ತನ್ನ ಐದು ಜನ ಮಕ್ಕಳಿಗೂ ಹಬ್ಬಕ್ಕೆ ಹದಿನೈದು ದಿನ ಮುಂಚೆಯೇ ಜನಿವಾರ ಧಾರಣೆ ಮಾಡಬೇಕು. ಹಬ್ಬ ಮುಗಿಯುವವರೆಗೂ ಬ್ರಾಹ್ಮಣರಂತೆ ನೀತಿ ನಿಯಮಗಳನ್ನು ಪಾಲನೆ ಮಾಡಬೇಕು. ಕೊಂಡದ ದಿನ ತನ್ನನ್ನು ಪ್ರತಿನಿಧಿಸುವ ಪ್ರತೀಕವೊಂದನ್ನು ಹೊತ್ತು ಅಗ್ನಿಯಲ್ಲಿ ಓಡಬೇಕು ಎಂದು ಹೇಳಿ ಉರಿಯುತ್ತಿದ್ದ ಕೊಂಡದಲ್ಲಿ ಬಿದ್ದು ಸಾಯುತ್ತಾಳೆ. ಅಂದಿನಿಂದ ಆಕೆಯ ಗಂಡ ಮತ್ತು ಮಕ್ಕಳು ಇಪ್ಪತ್ತೊಂದು ದಿನ ಬ್ರಾಹ್ಮಣರಾಗಿ ನಿಯಮವನ್ನು ಪಾಲಿಸುತ್ತಾರೆ. ಹೀಗೆ ಚೌಡಮ್ಮನ ಭಕ್ತೆಯಾದ ಹೆಬ್ಬಾರಮ್ಮ ಚೌಡಮ್ಮನ ಸ್ಥಾನಕ್ಕೆ ಏರಿ ತಾನೂ ಊರ ದೇವತೆಯಾದಳು ಎಂದು ಜನರ ನಂಬಿಕೆ. ಆ ನಂಬಿಕೆಗೆ ಆಧಾರವಾಗಿ ಹೊಲೆಯರು ಇಂದು ಬ್ರಾಹ್ಮಣರಾಗುತ್ತಾರೆ ಆದುದರಿಂದ ಇದೊಂದು ವಿಶಿಷ್ಟ ಸಂಪ್ರದಾಯವೆನಿಸಿದೆ.[೧೫೬] ಈ ರೀತಿಯ ಆಗಮ ಪದ್ಧತಿಯಲ್ಲಿ ಜರುಗುವ ದೇವರ ಜಾತ್ರೆ, ಆಯನ, ಉತ್ಸವ; ಜನಪದ ರೀತಿಯಲ್ಲಿ ನಡೆಯುವ ಭೂತಾರಾಧನೆ (ನೇಮ, ಕೋಲ, ಮೆಚ್ಚಿ, ಕೆಂಡಸೇವೆ, ಜಾಲಾಟ) ಈ ಮೊದಲಾದ ಆರಾಧನಾ ಸಂಪ್ರದಾಯಗಳು ಕರಾವಳಿ ಕರ್ನಾಟಕದಲ್ಲಿ ಸಮೃದ್ಧವಾಗಿ ಪ್ರಚಾರದಲ್ಲಿದೆ. ಬ್ರಾಹ್ಮಣ, ಬ್ರಾಹ್ಮಣೇತರರು ಅಲ್ಲದೆ *ನಲಿಕೆ, ಮೇರ, ಪರವ, ಪಂಬದ, ಪಾಣಾರ, ಮನ್ಸ, ಕೊರಗ* ಮೊದಲಾದ ದಲಿತ ವರ್ಗದ ಜನರು ವಾಸಿಸುತ್ತಿದ್ದ ಪ್ರದೇಶ, ಭಾಷೆ, ಆಚಾರ-ವಿಚಾರ, ನಂಬಿಕೆ ಉದ್ಯೋಗ, ಕುಲಕಸುಬು ಆರಾಧನೆಗಳನ್ನು ವೈಶಿಷ್ಟ್ಯಗಳನ್ನು ಗುರುತಿಸಬಹುದಾಗಿದೆ. ತುಳುನಾಡಿನಲ್ಲಿ ಶೈವ ದೇವಾಲಯಗಳಿವೆ. ವೈಷ್ಣವ ಗುಡಿ ಗೋಪುರಗಳಿವೆ. ಜೈನ ಬಸದಿಗಳಿವೆ. ಬೃಹತ್ ವಾಸ್ತು ಶಿಲ್ಪಗಳಿವೆ. ಪ್ರತಿಗ್ರಾಮದಲ್ಲಿ ಗ್ರಾಮದೇವತೆಗಳ ದೇವಸ್ಥಾನಗಳಿವೆ. ಮಾರಿ ಗುಡಿಗಳಿವೆ. ಸಿರಿಗುಂಡಗಳಿವೆ, ಬೈದ್ಯರ್ಕಳ ಗರಡಿಗಳಿವೆ. ಭೂತಗಳ ಮಾಡಗಳಿವೆ, ನಾಗನ ಬನಗಳಿವೆ.[೧೫೬]

ಭೂತಗಳ ಜಾತ್ರೆ, ಮಾರಿ ಜಾತ್ರೆ, ಸಿರಿ ಜಾತ್ರೆ, ಕೋಟಿ ಚೆನ್ನಯ್ಯ ಬೈರ್ಕರ್ಳ ಜಾತ್ರೆ, ನಾಗಮಂಡಲ ಜಾತ್ರೆ ಹೀಗೆ ಪ್ರಮುಖ ಪ್ರಭೇದಗಳನ್ನು ಗುರುತಿಸಬಹುದು. ಭೂತಾರಾಧನೆಯಲ್ಲಿ ಪುರಾಣ ಸಂಬಂಧ ಭೂತಗಳ ಜಾತ್ರೆ (*ಶೈವ, ವೈಷ್ಣವ, ಶಾಕ್ತ*) ಮತ್ತು ಚಾರಿತ್ರಿಕ ಹಾಗೂ ಐತಿಹಾಸಿಕ ಆಧಾರಗಳಿರುವ (*ಕೋಟಿ-ಚನ್ನಯ್ಯ, ಕಲ್ಕುಡು-ಕಲ್ಲುರ್ಟಿ, ಕೋಡ್ದಬ್ಬು-ತನ್ನಿಮಾನಿಗ, ಕೊರಗ ತನಿಯ, ಬಬ್ಬರ್ಯ, ಆಲಭೂತ* ಇತ್ಯಾದಿ) ವೀರರ ಆರಾಧನೆಯ ಜಾತ್ರೆ, ಕುಲ ಲಾಂಛನದ ಸಂಕೇತ ಪ್ರಾಣಿಸಂಬಂಧ ಹೊಂದಿರುವ ಜಾತ್ರೆ, (*ಪಂಜುರ್ಲಿ, ಪಿಲಿಭೂತ*) ಮುಖ್ಯವಾಗಿವೆ. ಕಲ್ಕುಡನಂತಹ ಐತಿಹಾಸಿಕ ದಲಿತ ವ್ಯಕ್ತಿಯನ್ನು ಶೈಲಗಣದ ಜೊತೆ ಸೇರಿಸಲಾಗಿದೆ.

## ೩.೮. ಬುಡಕಟ್ಟು ಸಮುದಾಯಗಳು

ಭಾರತೀಯ ಸಮಾಜವು ಹಲವಾರು ಜಾತಿ-ಪಂಗಡಗಳಿಂದ ಕೂಡಿದ್ದು ದಿನದಿಂದ ದಿನಕ್ಕೆ ಸಂಕೀರ್ಣಗೊಳ್ಳುತ್ತ ಸಾಗುತ್ತಿದೆ. ಸಮುದಾಯಗಳು ಜಾತಿಗಳಾಗಿ ಪರಿವರ್ತನೆಗೊಳ್ಳುವುದಕ್ಕಿಂತ ಪೂರ್ವದಲ್ಲಿ ವೃತ್ತಿ ಸಮುದಾಯಗಳಾಗಿ ಗುರುತಿಸಿಕೊಂಡಿದ್ದವು. ಇದರ ಜೊತೆಯಲ್ಲಿ ನಾಗರಿಕ ಪ್ರಪಂಚದ ಸಂಪರ್ಕದಲ್ಲಿದ್ದ ಕೆಲವು ಸಮುದಾಯಗಳು ಮತ್ತು ನಾಗರಿಕ ಪ್ರಪಂಚದಿಂದ ಆಚೆ ಇದ್ದ ಹಲವು ಸಮುದಾಯಗಳು ತಮ್ಮದೇ ಆದ ಅನನ್ಯತೆಯನ್ನು ಉಳಿಸಿಕೊಂಡಿದ್ದವು. ಇವುಗಳನ್ನು ಬುಡಕಟ್ಟು ಸಮುದಾಯಗಳೆಂದು ಗುರುತಿಸುತ್ತೇವೆ. ಪ್ರಾರಂಭದಿಂದಲೂ ಇವುಗಳು ಪ್ರಭುತ್ವದ ವಿರುದ್ಧ ಹೋರಾಟ ನಡೆಸುತ್ತಲೆ ಬಂದಿವೆ. ಇಂದಿಗೂ ಕೂಡ ಈ ಪರಿಸ್ಥಿತಿ ಭಿನ್ನವಾಗಿ ಕಾಣುತ್ತಿಲ್ಲ. ಚರಿತ್ರೆಯಲ್ಲಿ ಸ್ಥಾನ ಸಿಗದೆ ಪರಿತಪಿಸಿದವು. ಉಳಿದೆಲ್ಲಾ ಸಮುದಾಯಗಳಂತೆ ಇವು ಕೂಡ ರಾಜ್ಯದ ಅವಿಭಾಜ್ಯ ಅಂಗವಾಗಿದ್ದವು. ಆಚಾರ ವಿಚಾರ, ನಡಾವಳಿ ಮುಂತಾದ ವಿಚಾರಗಳು ಮೌಖಿಕ ಪರಂಪರೆ, ಗತಿಸಿದ ಚರಿತ್ರೆಯನ್ನು ನೆನಪಿಸುತ್ತವೆ. ಈ ರೀತಿಯ ಹಿನ್ನೆಲೆಯಲ್ಲಿ ಗಮನಿಸಿದಾಗ ಕರ್ನಾಟಕವು ಸೇರಿದಂತೆ ದಕ್ಷಿಣ ಭಾರತವು ಹಲವು ಬುಡಕಟ್ಟುಗಳನ್ನೇ ಕಂಡಿದೆ. ಈ ಸಮುದಾಯಗಳ ಚರಿತ್ರೆಯನ್ನು ಅಧ್ಯಯನ ಮಾಡುವುದರಿಂದ ಆ ಮುಖಾಂತರ ಒಟ್ಟು ಸಾಂಸ್ಕೃತಿಕ ಚರಿತ್ರೆಯನ್ನು ಗ್ರಹಿಸಿದಂತಾಗುತ್ತದೆ.

ಪ್ರಸ್ತುತ ವಿಷಯದಲ್ಲಿ ಕರ್ನಾಟಕದ ಕೆಲವು ಬುಡಕಟ್ಟುಗಳನ್ನು ಅಧ್ಯಯನಕ್ಕೆ ಒಳಪಡಿಸಿ, ಚಾರಿತ್ರಿಕ ಸಂಗತಿಗಳನ್ನು ಗ್ರಹಿಸಲು ಯತ್ನಿಸಲಾಗುವುದು. ಈಗಾಗಲೇ ಅಧ್ಯಯನ ಮಾಡಿದ್ದರೂ, ಚಾರಿತ್ರಿಕ ದೃಷ್ಟಿಯಿಂದ ನಡೆದಿರುವುದು ಕಡಿಮೆಯೆಂದು ಹೇಳಬಹುದು. ಪ್ರಾಚೀನ ಮತ್ತು ಮಧ್ಯಕಾಲೀನ ಅವಧಿಯಲ್ಲಿ ಈ ಸಮುದಾಯಗಳು ಸಾಂಸ್ಕೃತಿಕ ನಾಯಕರ ಹುಟ್ಟಿಗೆ ಕಾರಣೀಭೂತವಾಗಿವೆ. ಅಂದರೆ ಬುಡಕಟ್ಟು ಕಾವ್ಯಗಳಾಗಿ ಮಾರ್ಪಟ್ಟು ಸಮಕಾಲೀನ ಸಂದರ್ಭದ ಚರಿತ್ರೆಯನ್ನು ಗರ್ಭೀಕರಿಸಿಕೊಂಡಿವೆ. ಇದರಿಂದ ಅಂದಿನ ಸಮಾಜದ ಒಟ್ಟು ಚಿತ್ರಣವನ್ನು ಗ್ರಹಿಸಲಿಕ್ಕೆ ಸಾಧ್ಯವಾಗುತ್ತದೆ. ಅನೇಕ ಸಂದರ್ಭಗಳಲ್ಲಿ ಚಾರಿತ್ರಿಕವಾಗಿ ಅದ್ವಿತೀಯ ಸ್ಥಾನ ಪಡೆದು ಮೌಖಿಕ ಚರಿತ್ರೆಯಲ್ಲಿ ಯಾವ ಕುರುಹುಗಳು ಲಭ್ಯವಿಲ್ಲದಿರುವುದನ್ನು ಕಾಣಬಹುದು. ಐತಿಹಾಸಿಕವಾಗಿ ಪ್ರಸ್ತಾಪಿಸಲ್ಪಟ್ಟರೂ ಮೌಖಿಕ ಚರಿತ್ರೆಯಲ್ಲಿ ಸಾಂಸ್ಕೃತಿಕ ಮಹತ್ವವನ್ನು ಪಡೆದಿರುವ ಉದಾಹರಣೆಗಳು ಬಹಳಷ್ಟು ಸಿಗುತ್ತವೆ. ರಾಜ್ಯ ವ್ಯವಸ್ಥೆಯೊಂದಿಗೆ ಸಾಂಸ್ಕೃತಿಕ ನಾಯಕರು ನಡೆಸಿದ ವೈರುಧ್ಯಗಳು, ಬಲಾಢ್ಯ

ಸಮುದಾಯಗಳು ಬುಡಕಟ್ಟು ಸಮುದಾಯಗಳನ್ನು ನೋಡಿರುವ ದೃಷ್ಟಿಕೋನಗಳು, ಗ್ರಾಮೀಣ ವ್ಯವಸ್ಥೆಯ ಪ್ರಭಾವ ಬೀರಿದ ಗ್ರಾಮದೈವಗಳು ಮುಂತಾದ ಆಯಾಮಗಳು ಇಲ್ಲಿ ಮುಖ್ಯವೆನಿಸುತ್ತವೆ. ಈ ಎಲ್ಲಾ ವಿಚಾರಗಳನ್ನು ಗಮನದಲ್ಲಿಟ್ಟುಕೊಂಡು ಮಧ್ಯಕಾಲೀನ ಕರ್ನಾಟಕದ ಚರಿತ್ರೆಯೊಂದಿಗೆ ಮುಖಾಮುಖಿಯಾಗುವುದು ಪ್ರಸ್ತುತವೆನಿಸುತ್ತದೆ. ಚಾರಿತ್ರಿಕ ಕಾಲಗರ್ಭದಲ್ಲಿ ಹುದುಗಿಹೋದ ಅನೇಕ ಸಂಗತಿಗಳು ಮೌಖಿಕ ಚರಿತ್ರೆಯಲ್ಲಿ ಹಾಗೆಯೇ ಉಳಿದುಕೊಂಡು ಬಂದಿವೆ. ಕಾರಣ ಶಿಷ್ಟ ದಾಖಲೆಗಳನ್ನು ಮಾತ್ರ ಚರಿತ್ರೆಯೆಂದು ನಂಬಿರುವುದು. ಇದಕ್ಕೆ ಪರ್ಯಾಯವಾಗಿ ಮೌಖಿಕ ದಾಖಲೆಗಳು ಸಹ ಚರಿತ್ರೆಯಿಲ್ಲದವರಿಗೆ ಚರಿತ್ರೆಯನ್ನು ಕಟ್ಟಲು ಸಹಕಾರಿಯಾಗಿವೆ. ಆದರೆ ಈ ಆಕರಗಳನ್ನು ವಿಶ್ಲೇಷಣೆಗೆ ಒಳಪಡಿಸಿ, ಚರಿತ್ರಕಾರ ಬಳಸುವಾಗ ಪಠ್ಯಗಳ ಪಾಠವನ್ನು ಗಮನದಲ್ಲಿರಿಸಬೇಕಾಗುತ್ತದೆ. ಈ ಮೇಲಿನ ವಿಚಾರಗಳ ಕುರಿತಂತೆ ಬಹುತೇಕ ಚರಿತ್ರಕಾರರು, ವಿದ್ವಾಂಸರು ತಕ್ಕಮಟ್ಟಿಗೆ ಅಧ್ಯಯನಗಳನ್ನು ನಡೆಸಿದ್ದಾರೆ.

ಪ್ರಸ್ತುತ ವಿಷಯವನ್ನು ಅಧ್ಯಯನ ಮಾಡಲು ಜಾನಪದ ಮತ್ತು ಬುಡಕಟ್ಟುಗಳ ಬಗ್ಗೆ ಈಗಾಗಲೇ ಬಂದಿರುವ ಬರವಣಿಗೆಗಳನ್ನು ಇಲ್ಲಿ ಬಳಸಿಕೊಳ್ಳಲಾಗಿದೆ. ಜೀ.ಶಂ. ಪರಮಶಿವಯ್ಯ, ಕಾಳೇಗೌಡ ನಾಗವಾರ, ಬಿ.ಎ. ವಿವೇಕ ರೈ, ಹಿ.ಚಿ. ಬೋರಲಿಂಗಯ್ಯ, ಹಿ.ಶಿ. ರಾಮಚಂದ್ರೇಗೌಡ, ಎಸ್.ಎಸ್. ಹಿರೇಮಠ, ಪುರುಷೋತ್ತಮ ಬಿಳಿಮಲೆ, ಚಿನ್ನಪ್ಪಗೌಡ, ರಾಜಾರಾಮ ಹೆಗಡೆ, ಟಿ.ಪಿ. ವಿಜಯ್, ಎ.ವಿ. ನಾವಡ, ಮೊಗಳ್ಳಿ ಗಣೇಶ್, ವೆಂಕಟೇಶ್ ಇಂದ್ವಾಡಿ, ಚಲುವರಾಜು ಮುಂತಾದವರು ಮೌಖಿಕ ಪರಂಪರೆಯ ಕುರಿತು ಅಧ್ಯಯನ ನಡೆಸುತ್ತಿದ್ದಾರೆ. ಇದರ ಜೊತೆಗೆ ಅಮೃತ ಸೋಮೇಶ್ವರ, ತೀ.ನಂ. ಶಂಕರನಾರಾಯಣ, ಎಚ್.ಜೆ. ಲಕ್ಕಪ್ಪಗೌಡ, ಸಿ.ಎನ್. ರಾಮಚಂದ್ರನ್ ಮುಂತಾದವರ ಬರವಣಿಗೆಗಳು ಪ್ರಸ್ತುತ ಅಧ್ಯಯನದ ವಿಶ್ಲೇಷಣೆಗೆ ಸಹಕಾರಿಯಾಗಿವೆ. ವಿಶೇಷವಾಗಿ ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು, ಮಂಟೇಸ್ವಾಮಿ ಮತ್ತು ಮಲೆಮಾದೇಶ್ವರ ಮಹಾಕಾವ್ಯಗಳು, ತುಳು ಜನಪದ ಸಾಹಿತ್ಯ, ಪಳಮೆ ಮುಂತಾದ ಕೃತಿಗಳನ್ನು ಅಧ್ಯಯನದುದ್ದಕ್ಕೂ ಬಳಸಿಕೊಳ್ಳಲಾಗಿದೆ.

ಕರ್ನಾಟಕ ಚರಿತ್ರೆಯ ಕಾಲಘಟ್ಟದಲ್ಲಿ ಭೌಗೋಳಿಕ ಮೇರೆಗಳು ಬದಲಾವಣೆಗೊಳ್ಳುತ್ತಿದ್ದವೇ ವಿನಃ ಬುಡಕಟ್ಟು ಸಮುದಾಯಗಳು ಯಾವ ಗಮನಾರ್ಹ ಬದಲಾವಣೆ ಪ್ರಕ್ರಿಯೆಗೆ ಒಳಪಡಲು ಸಾಧ್ಯವಾಗಿಲ್ಲವೆಂಬುದಕ್ಕೆ ಬುಡಕಟ್ಟು ಕಾವ್ಯಗಳೇ ಸಾಕ್ಷಿ. ಕಾಲಘಟ್ಟದಿಂದ ಕಾಲಘಟ್ಟಕ್ಕೆ ಸಾಮಾಜಿಕ ಆರ್ಥಿಕ ಬದಲಾವಣೆಗಳು ನಿರೀಕ್ಷಿಸಿದ ಪ್ರಮಾಣ ಕಂಡುಬರಲಿಲ್ಲ. ಬಹುತೇಕ ಕಾವ್ಯ, ಸಂಪ್ರದಾಯ, ದೈವಾಧಾರಿತ ಪರಿಕಲ್ಪನೆಗಳು ಮಧ್ಯಕಾಲೀನ ಅವಧಿಯಲ್ಲಿ ಹುಟ್ಟಿರುವುದು ಅನೇಕ ಕಾರಣಗಳಿಗೆ ಎಡೆಮಾಡಿಕೊಟ್ಟಿದೆ. ಈ ಕಾರಣಗಳನ್ನು ಪರಿಶೀಲಿಸುವುದರ ಜೊತೆಗೆ ಅಂದಿನ ಸಮಾಜದ ಸಾಂಸ್ಕೃತಿಕ ಚರಿತ್ರೆಯನ್ನು ಅರ್ಥೈಸಲು ಯತ್ನಿಸಲಾಗಿದೆ.

### ೩.೮.೧. ಸಾಂಸ್ಕೃತಿಕ ವೀರರು ಮತ್ತು ಚರಿತ್ರೆ

ಅನೇಕ ಶತಮಾನಗಳಿಂದ ಬೆಟ್ಟಗುಡ್ಡಗಳ ಪ್ರದೇಶದಲ್ಲಿ ಮರಳುಕಾಡುಗಳಲ್ಲಿ, ಹಿಮಪ್ರದೇಶಗಳ ದ್ವೀಪಗಳಲ್ಲಿ ವಾಸವಾಗಿರುವ ಸಾಮಾಜಿಕ ವರ್ಗಗಳು ನಗರ ಮತ್ತುಗ್ರಾಮೀಣ ಸಂಸ್ಕೃತಿಗಳ ಪ್ರಭಾವಕ್ಕೆ ಸಿಕ್ಕದೆ ತಮ್ಮದೇ

ಸಂಸ್ಕೃತಿಯನ್ನು ಪ್ರತ್ಯೇಕವಾಗಿ ಉಳಿಸಿಕೊಂಡು ಬಂದಿರುವುದುಂಟು. ರಕ್ತಸಂಬಂಧ, ಆಚಾರ ವಿಚಾರ, ಭಾಷೆ ಮೊದಲಾದ ವಿಶೇಷ ಲಕ್ಷಣಗಳನ್ನು ಹೊಂದಿರುತ್ತಾರೆ. ಇಂತಹ ಸಾಮಾಜಿಕ ವರ್ಗಗಳನ್ನು ಸಾಂಸ್ಕೃತಿಕ ಮಾನವ ವಿಜ್ಞಾನದಲ್ಲಿ ಬುಡಕಟ್ಟುಗಳು ಎಂದು ಕರೆಯಲಾಗಿದೆ.[೧೫೮] ಭಾರತದಲ್ಲಿ *ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ* ಮತ್ತು *ಅಸ್ಪೃಶ್ಯರು* ಮಾತ್ರವಲ್ಲದೆ *ಬುಡಕಟ್ಟುಗಳು* ಇದ್ದವು. ಯಾವ ಸಂದರ್ಭದಲ್ಲಿ ಈ ಬುಡಕಟ್ಟುಗಳು ಹಿಂದೂ ಧರ್ಮದ ವ್ಯಾಪ್ತಿಯೊಳಗೆ ಬಂದವು? ಯಾವ ಪ್ರಮಾಣದಲ್ಲಿ ಬದಲಾಗಿದೆ? ಬುಡಕಟ್ಟುಗಳು ಜಾತಿಗಳಾಗಿ ಮಾರ್ಪಾಡಾಗಿದ್ದು ಯಾವಾಗ? ಮುಂತಾದ ಪ್ರಶ್ನೆಗಳಿಗೆ ನಿಖರವಾದ ಉತ್ತರ ಸಿಗುವುದಿಲ್ಲ. ಬಹುಶಃ ಈ ಸಾಮಾಜಿಕ ಪ್ರಕ್ರಿಯೆಯು ಒಂದೇ ಕಾಲಘಟ್ಟದಲ್ಲಿ ಆಗಿರುವ ಸಾಧ್ಯತೆಗಳು ತುಂಬಾ ಕಡಿಮೆಯೆಂದು ಹೇಳಬಹುದು. ಚಾರಿತ್ರಿಕ ಕಾಲಘಟ್ಟದಲ್ಲಿ ವಿದೇಶಿಯರ ದಾಳಿ, ಕೈಗಾರೀಕರಣ, ಆಧುನೀಕರಣದ ಪರಿಣಾಮವಾಗಿ ಅವು ಬದಲಾವಣೆ ಪ್ರಕ್ರಿಯೆಗೆ ಒಳಪಟ್ಟಿರುವ ಸಾಧ್ಯತೆಗಳನ್ನು ತಳ್ಳಿಹಾಕುವಂತಿಲ್ಲ.

ಅನೇಕ ಶತಮಾನಗಳಿಂದ ಸಾಮಾಜಿಕ, ರಾಜಕೀಯ, ಆರ್ಥಿಕ ನ್ಯೂನತೆಗಳನ್ನು ಅನುಭವಿಸುತ್ತಾ ಬಂದಿರುವ ಸಮಾಜದ ಮೇಲ್ವರ್ಗಗಳ ಹಿತಾಸಕ್ತಿಯಿಂದ ಶೋಷಣೆಗೆ ಗುರಿಯಾಗತೊಡಗಿದವು. ಬಲಾಢ್ಯ ಜಾತಿಗಳು ಚಾರಿತ್ರಿಕ ಕಾಲಘಟ್ಟದಲ್ಲಿ ದರಿದ್ರ ಕೂಲಿಕಾರರನ್ನಾಗಿ ನೇಮಿಸಿಕೊಂಡು ದುಡಿಸಿಕೊಳ್ಳಲಾಗುತ್ತಿತ್ತು. ತೀವ್ರ ನೋವು, ಅವಮಾನ ಮುಂತಾದ ರೋಗರುಜಿನಗಳಿಗೆ ತುತ್ತಾಗಿರುವ ಬುಡಕಟ್ಟು ಜನತೆ ನಿಜವಾಗಿಯೂ ದಾರಿದ್ರ್ಯದ ಬದುಕನ್ನೆ ಅನುಭವಿಸಿವೆ. ದಲಿತರಿಗಿಂತ ಭಿನ್ನವಾಗಿಯೇನು ಇವರ ಬದುಕು ಕಂಡುಬರುವುದಿಲ್ಲ. ಆಧುನೀಕರಣದ ಪರಿಣಾಮದಿಂದ ತತ್ತರಿಸಿ ಹೋಗಿವೆ. ಎ.ಎ.ಡಿ. ಲೂಯಿಜ್ ಅವರು *ಟ್ರೈಬ್ಸ್ ಆಫ್ ಮೈಸೂರು* ಕೃತಿಯಲ್ಲಿ ಕರ್ನಾಟಕದ ೨೭ ಬುಡಕಟ್ಟುಗಳ ಬಗ್ಗೆ ವಿವರ ಕೊಟ್ಟಿದ್ದಾರೆ. ಭಾರತ ಸರ್ಕಾರ ಮೈಸೂರು ರಾಜ್ಯದಲ್ಲಿ ೬೩ ಬುಡಕಟ್ಟುಗಳನ್ನು ಮಾನ್ಯ ಮಾಡಿದೆ.[೧೫೯] ಈ ನಿಟ್ಟಿನಲ್ಲಿ ಕರ್ನಾಟಕದ ಕೆಲವು ಬುಡಕಟ್ಟು ಸಮುದಾಯಗಳ ಸಾಂಸ್ಕೃತಿಕ ಚರಿತ್ರೆಯನ್ನು ಅರ್ಥೈಸಿಕೊಳ್ಳಲು ಯತ್ನಿಸಲಾಗುವುದು. ಅವರ ಜೀವನ ಅರಿಯಬೇಕಾದರೆ ಕಾವ್ಯಗಳ ಮೊರೆ ಹೋಗಬೇಕಾಗುತ್ತದೆ. ಆ ಮುಖಾಂತರ ಅಧ್ಯಯನಕ್ಕೆ ಗುರಿಪಡಿಸಿದ ಸಮುದಾಯಗಳ ಬಗ್ಗೆ ಮೌಖಿಕ ಚರಿತ್ರೆ ಗಮನ ಸೆಳೆಯುತ್ತದೆ.

ಕರ್ನಾಟಕದ ಚರಿತ್ರೆಯಲ್ಲಿ ಹತ್ತರಿಂದ ಹನ್ನೆರಡನೆ ಶತಮಾನದ ಕಾಲಘಟ್ಟವು ಹಲವು ಸಾಂಸ್ಕೃತಿಕ ವೈರುಧ್ಯಗಳಿಗೆ ಎಡೆ ಮಾಡಿಕೊಟ್ಟಿದೆ. ಅಧಿಕಾರಸ್ಥ ಸಮುದಾಯಗಳು, ಬಲಾಢ್ಯ ಭೂಮಾಲೀಕ ವರ್ಗಗಳು ಅಂದಿನ ಸಮಾಜದ ಮುಖ್ಯ ವಾಹಿನಿಯಲ್ಲಿದ್ದವು. ಇದರಿಂದ ಕೆಳಜಾತಿಗಳ ಸಾಂಸ್ಕೃತಿಕ ವೈವಿಧ್ಯತೆಗಳಿಗೆ ಚರಿತ್ರೆಯಲ್ಲಿ ಅವಕಾಶ ಸಿಗದಂತಾಯಿತು. ಹಾಗೆಯೇ ಸಮಾಜದ ಎಲ್ಲಾ ಆಗುಹೋಗುಗಳನ್ನು ಪ್ರಭುತ್ವ ನಿಯಂತ್ರಿಸುತ್ತಿದ್ದರಿಂದ ಸಮಾನತೆಯ ಸಿದ್ಧಾಂತವು ತಳವೂರಲು ಸಾಧ್ಯವಾಗುತ್ತಿರಲಿಲ್ಲ. ಪ್ರಬಲ ಭೂಮಾಲಿಕ ವರ್ಗಗಳು ಸಹ ಕೆಳಜಾತಿಗಳಿಗೆ ಕಂಟಕಪ್ರಾಯವಾಗಿದ್ದವು. ಕಾಲದಿಂದ ಕಾಲಕ್ಕೆ ಬದಲಾವಣೆಯಾಗುತ್ತಿದ್ದ ಚಾರಿತ್ರಿಕ ವಿವರಗಳು ಬುಡಕಟ್ಟುಗಳಿಗೆ, ದಲಿತ ಸಮುದಾಯಗಳಿಗೆ ದಾಖಲು ಮಾಡಲು ಸಾಧ್ಯವಿಲ್ಲದ ಕಾರಣ ಕಂಠಸ್ಥ ಪರಂಪರೆಯಲ್ಲಿ ಗಟ್ಟಿಯಾಗಿ ಉಳಿಯಲು ಸಹಕಾರಿಯಾಯಿತು. ಇಂದಿಗೂ ಕೂಡ ಅಖಂಡ ಕರ್ನಾಟಕದ

ವಿವಿಧ ಪ್ರದೇಶಗಳಲ್ಲಿ ಸಾಂಸ್ಕೃತಿಕ ವೀರರು ಮಧ್ಯಕಾಲೀನ ಕಾಲಘಟ್ಟದಿಂದ ಸ್ಪಷ್ಟವಾಗಿ ಕಾಣಿಸಿಕೊಳ್ಳುತ್ತಾರೆ. ಇದರ ಹಿಂದೆ ಸಮಾಜದ ಅಂದಿನ ಒತ್ತಡದ ಸನ್ನಿವೇಶಗಳು, ಸಂಘರ್ಷಗಳು, ಜಾತಿ ವೈಷಮ್ಯಗಳು, ದಬ್ಬಾಳಿಕೆ ಪ್ರವೃತ್ತಿಗಳು ಹಾಗೂ ರಾಜಕೇಂದ್ರಿತ ಆಯಾಮಗಳ ಕುರಿತ ಮೌಖಿಕ ಚರಿತ್ರೆಯಲ್ಲಿ ಕಾಣಬಹುದು. ಹನ್ನೆರಡನೆಯ ಶತಮಾನದ ತರುವಾಯ ಈ ಪ್ರಕ್ರಿಯೆಯು ಬಾಯಿಂದ ಬಾಯಿಗೆ ಪಠ್ಯದ ವಿವರಗಳು ರವಾನಿಸಲ್ಪಟ್ಟವು. ಈ ಹಿನ್ನೆಲೆಯಲ್ಲಿ ಬಹುತೇಕ ಕೆಳಜಾತಿಗಳು ತಮಗೂ ಕೂಡ ಚರಿತ್ರೆಯಿದೆ ಎಂದು ಸಮುದಾಯದ ವೀರರನ್ನು ಕುರಿತು ಕಾವ್ಯಗಳನ್ನೇ ಹುಟ್ಟಿಹಾಕಿದವು. ಆದರೆ ಒಂದು ತೊಡಕೇನೆಂದರೆ ಪಠ್ಯವು (Text) ತಲೆಮಾರಿನಿಂದ ತಲೆಮಾರಿಗೆ ವರ್ಗಾವಣೆಯಾಗುವಾಗ ಬದಲಾವಣೆಯಾಗುವ ಸಂದರ್ಭಗಳಿರುತ್ತವೆ. ಚರಿತ್ರೆಕಾರರು ಈ ಒಂದು ಆಯಾಮವನ್ನು ಸೂಕ್ಷ್ಮವಾಗಿ ಪರಿಶೀಲಿಸಬೇಕಾಗಿದೆ. ಕರ್ನಾಟಕದ ಮಧ್ಯಯುಗೀನ ಚರಿತ್ರೆಯ ಕಾಲವನ್ನು ತಳಸಮುದಾಯಗಳ ಅತಂತ್ರ ಸ್ಥಿತಿಯ ಅಧೀನ ಅವಧಿ ಎಂದು ಗುರುತಿಸಬಹುದಾದರೂ ಅತ್ಯಂತ ಸೂಕ್ಷ್ಮವಾಗಿ ಎಲ್ಲ ತಳಸಮುದಾಯಗಳು ರಾಜನಿಗೆ ಬದಲಾಗಿ, ಊಳಿಗಮಾನ್ಯ ದೊರೆಗೆ ಬದಲಾಗಿ, ಸ್ಥಳೀಯ ಪಾಳೆಯಗಾರರಿಗೆ ಹೊರತಾಗಿ, ತಮ್ಮ ತಮ್ಮ ಕುಲನಾಯಕರನ್ನು ಸಾಂಸ್ಕೃತಿಕ ವೀರರನ್ನಾಗಿ ಪರಿವರ್ತಿಸಿಕೊಂಡು ಅವರ ಮೂಲಕ ತಮಗೊಂದು ಸಾಮಾಜಿಕ ರಚನೆ ಮತ್ತು ಚರಿತ್ರೆ ಇದೆ ಎಂಬುದನ್ನು ತೋರಿಸಿಕೊಂಡಿವೆ. ಇದು ಏಕಕಾಲಕ್ಕೆ ಮಧ್ಯಯುಗದ ಚರಿತ್ರೆಯ ದಬ್ಬಾಳಿಕೆಗೆ ತಳಸಮುದಾಯಗಳು ಪ್ರತಿಕ್ರಯಿಸಿದ ಕ್ರಮವಾಗಿದ್ದ ಸಾಮ್ರಾಟರ ಎದುರು, ಊಳಿಗಮಾನ್ಯ ವ್ಯವಸ್ಥೆಯ ಹಿಂಸೆಯನ್ನು ಮರೆಯಲು ಕೂಡ ಈ ಕಥನಗಳು ಹುಟ್ಟಿಕೊಂಡವು ಎಂದು ಮೊಗಳ್ಳಿ ಗಣೇಶ್ ಹೇಳಿರುವುದು ಸೂಕ್ತವಾಗಿದೆ.[೨೦] ಈ ನಿಟ್ಟಿನಲ್ಲಿ ಕರ್ನಾಟಕದುದ್ದಕ್ಕೂ ಹಲವು ಸಾಂಸ್ಕೃತಿಕ ನಾಯಕರು ಆ ಕಾಲಾವಧಿಯಲ್ಲಿ ಕಾಣಿಸಿಕೊಳ್ಳುತ್ತಾರೆ.

ನಾವು ಇಂದು ಕರ್ನಾಟಕ ಎಂದು ಗುರುತಿಸುತ್ತಿರುವ ಭೂಪ್ರದೇಶದಲ್ಲಿ ಪ್ರಾದೇಶಿಕವಾಗಿ ಸಮುದಾಯದ ವೈವಿಧ್ಯತೆಗಳನ್ನು ಕಾಣಬಹುದು. *ಮೈಸೂರು ಭಾಗ, ಹೈದರಾಬಾದ್ ಕರ್ನಾಟಕ ಭಾಗ, ಕರಾವಳಿ ಕರ್ನಾಟಕ ಭಾಗ, ಮಲೆನಾಡು ಪ್ರದೇಶ, ಕೊಡಗು* ಮತ್ತು *ಬಯಲುಸೀಮೆ* ಎಂದು ಗುರುತಿಸುತ್ತೇವೆ. ಈ ಮೇಲಿನ ಭಾಗಗಳಲ್ಲಿ ಹುಟ್ಟಿಕೊಂಡಿರುವ ಕಾವ್ಯಗಳನ್ನು ಚರಿತ್ರೆಯ ಅಧ್ಯಯನ ಕ್ರಮದಲ್ಲಿ ಅಧ್ಯಯನ ಮಾಡಲು ಯತ್ನಿಸಲಾಗಿದೆ.

### ೩.೮.೨. ಮಲೆಮಾದೇಶ್ವರ

ಕರ್ನಾಟಕದ ಜನಪದ ಕಾವ್ಯಗಳಲ್ಲಿ ಮಲೆಯ ಮಾದೇಶ್ವರ ಚರಿತ್ರೆಗೆ ಒಂದು ಸಾಂಸ್ಕೃತಿಕ ಸ್ಥಾನ ಲಭಿಸುತ್ತದೆ. ಮಾದೇಶ್ವರನ ಬಗ್ಗೆ ಮೌಖಿಕ ಚಾರಿತ್ರಿಕ ಸಂಪತ್ತನ್ನು ರಕ್ಷಿಸಿಕೊಂಡು ಬಂದ ಕಲಾವಿದರನ್ನು 'ದೇವರ ಗುಡ್ಡರು' ಎಂದು ಕರೆಯುತ್ತಾರೆ. ಮೈಸೂರು, ಮಂಡ್ಯ, ಬೆಂಗಳೂರು ಜಿಲ್ಲೆಗಳಲ್ಲಿ ಇವರ ಸಂಪ್ರದಾಯ ಹೆಚ್ಚಿನದಾಗಿ ಹರಡಿಕೊಂಡಿದೆ.[೨೧] ಮಾದೇಶ್ವರ ಯಾರು? ಅವನು ಹುಟ್ಟಿದ್ದು ಎಲ್ಲಿ? ಎಂಬುದರ ಬಗೆಗೆ ಸರಿಯಾದ ದಾಖಲೆಗಳು ಅಲಭ್ಯ. ಈ ಕುರಿತು ವಿದ್ವಾಂಸರು ವಿವಿಧ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಮಲೆಯ ಮಾದೇಶ್ವರರನ್ನು ಕುರಿತು ಮೊದಲನೆ ಕೃತಿ 'ಮಾದೇಶ್ವರ ಸಾಂಗತ್ಯ' ಕ್ರಿ.ಶ. ೧೭೫೦ರಲ್ಲಿ ರಚನೆಯಾಗಿದೆ. ಇದರ ಕರ್ತೃ ಗುರುಸಿದ್ಧಕವಿ. ಕ್ರಿ.ಶ. ೧೮೩೬ರಲ್ಲಿ ಜೈನಕವಿ (೧೭೮೩) ದೇವಚಂದ್ರನ

'ರಾಜಾವಳಿ ಕಥೆ' ಮಾದೇಶ್ವರರ ಚರಿತ್ರೆಯನ್ನು ಪ್ರಸ್ತಾಪಿಸುವ ಎರಡನೇ ಗ್ರಂಥ. ಈ ಕೃತಿಯಿಂದ ವಸ್ತುನಿಷ್ಠ ದೃಷ್ಟಿಕೋನದಿಂದ ವಿವರಗಳನ್ನು ನಿರೀಕ್ಷಿಸಬಹುದಾಗಿದೆ. ಅದೇ ರೀತಿಯಾಗಿ ೨೦ನೇ ಶತಮಾನದ 'ನಿರಂಜನ ವಂಶರತ್ನಾಕರ'ದಲ್ಲಿ ಸಿದ್ಧಲಿಂಗಯತಿಯ ಗುರುಪರಂಪರೆಯಿದೆ. ಈ ಕೃತಿಯಿಂದ ಎಸ್.ಎಸ್. ಹಿರೇಮಠ ಅವರು ಕಾವ್ಯದ ಉಲ್ಲೇಖಗಳನ್ನು ಆಧರಿಸಿ ೧೦ನೇ ಶತಮಾನದ ಪ್ರಾರಂಭದಿಂದ ೧೧ನೇ ಶತಮಾನದ ಪ್ರಥಮಾರ್ಧದಲ್ಲಿ ಜೀವಿಸಿರಬಹುದೆಂದು ಅಭಿಪ್ರಾಯಪಡುತ್ತಾರೆ. ೧೯೩೩ರಲ್ಲಿ ಸಂಗಪ್ಪ ಶಾಸ್ತ್ರೀ ಸುತ್ತೂರು ಸಿಂಹಾಸನದ ಗುರುಪರಂಪರೆ, ಎಂಬ ಕೃತಿಯನ್ನು ರಚಿಸಿದರು.[೧೬೨] ಕ್ರಿ.ಶ. ೧೩೨೪ರ ಹರದನಹಳ್ಳಿ ಶಾಸನ ಹೊಯ್ಸಳ ವೀರಬಲ್ಲಾಳನ ಕಾಲದ್ದು. ಮತ್ತೊಂದು ಶಾಸನದಲ್ಲಿ ಕ್ರಿ.ಶ. ೧೭೬೧ ಹೈದರಾಲಿ ಶಾಸನ. ಈ ಶಾಸನ ಮಹಾ ಜಗದ್ಗುರು ಮಾದೇಶ್ವರ ಎಂದು ಹೇಳುತ್ತದೆ. ಮಾದೇಶ್ವರನ ಸೇವೆಗೆ ಯಾರು ಅರ್ಹರು ಎಂಬ ತಿಕ್ಕಾಟ ಬಂದಾಗ ಹೈದರ ಆ ಬಗೆಗೆ ವಿಚಾರ ನಡೆಸಿ ಈ ಶಾಸನ ಬರೆಸಿದ್ದಾನೆ.[೧೬೩] ೧೯೩೨ರಲ್ಲಿ ಫ.ಗು. ಹಳಕಟ್ಟಿ ಸಂಪಾದಿಸಿರುವ 'ನಿರಂಜನ ವಂಶರತ್ನಾಕರ' ಕೃತಿಯಲ್ಲಿ ಮಾದೇಶ್ವರನನ್ನು ಕುರಿತ ವಿವರಗಳನ್ನು ಕಾಣಬಹುದು.

'ಕಂಸಾಳೆ' ಎನ್ನುವ ಸಂಗೀತ ಸಾಧನದ ಮೂಲಕ ಇವರು ಮಾದೇಶ್ವರನ ವೀರಗಾಥೆಗಳನ್ನು ಸಾಹಸಗಳನ್ನು, ಶಿಷ್ಯರನ್ನು ರಕ್ಷಿಸುವ ಕಥೆಗಳನ್ನು ವಿವರಿಸುವ ಕಾವ್ಯಗಳನ್ನು ಹಾಡುತ್ತಾರೆ. *ದಲಿತರು, ಒಕ್ಕಲಿಗರು, ಕುರುಬರು, ಗಂಗಾಮತದವರು, ಉಪ್ಪಲಿಗರು, ಮಡಿವಾಳರು, ಪರಿವಾರದವರು* ಮಾದೇಶ್ವರನ 'ಗುಡ್ಡ'ರಾಗುತ್ತಾರೆ. ದಲಿತರಲ್ಲಿ ಸೂತಕವಾಗದ ಹೆಂಗಸರನ್ನು ಗುಡ್ಡಿಯರನ್ನಾಗಿ ಹಿಂದೆ ಬಿಡುತ್ತಿದ್ದರು. ಕರ್ನಾಟಕ ಮಾತ್ರವಲ್ಲದೆ ಇಂದಿನ ತಮಿಳುನಾಡು ಪ್ರದೇಶದ ಸೇಲಂ, ಕೊಯಮತ್ತೂರು ಜಿಲ್ಲೆಗಳಲ್ಲಿ ಕೂಡ ಅಸಂಖ್ಯಾತ ಭಕ್ತರನ್ನು ಪಡೆದಿರುವ ಮಾದಯ್ಯ ಒಬ್ಬ ಚಾರಿತ್ರಿಕ ವ್ಯಕ್ತಿಯೆಂದು ಕಾಳೇಗೌಡ ನಾಗವಾರ ಮತ್ತು ಸಿ.ಎನ್. ರಾಮಚಂದ್ರನ್ ಅವರು ಅಭಿಪ್ರಾಯಪಡುತ್ತಾರೆ.[೧೬೪] ಕಾವ್ಯದಲ್ಲಿ ಬರುವ ವ್ಯಕ್ತಿಗಳು ಐತಿಹಾಸಿಕ ಹಿನ್ನೆಲೆಯಿದ್ದವರಾಗಿದ್ದು ಅಂದಿನ ಸಮಾಜದ ಸಾಂಸ್ಕೃತಿಕ ವಿವರಗಳನ್ನು ಒಳಗೊಂಡಿರುವ ಪ್ರತಿನಿಧಿಗಳಾಗಿ ಕಾಣಿಸಿಕೊಳ್ಳುತ್ತಾರೆ.

ಕಾವ್ಯವು ಹೇಳುವ ಹಿನ್ನೆಲೆಯಲ್ಲಿ ಮಾದೇಶ್ವರನ ಮೂಲ ಮತ್ತು ಜಾತಿಯ ಸುಳಿವುಗಳನ್ನು ಮನಗಾಣಬಹುದಾಗಿದೆ. ಇದರ ಜೊತೆಗೆ ಅಂದಿನ ಸಮಾಜ ಅರ್ಥವ್ಯವಸ್ಥೆಯ ದುಃಸ್ಥಿತಿಯನ್ನು ಅರ್ಥೈಸಿಕೊಳ್ಳಲು ಸಾಧ್ಯವಿದೆ. ಈಗಿನ ಉತ್ತರ ಕರ್ನಾಟಕದ ಕಡೆಯಿಂದ ದಕ್ಷಿಣ ಕರ್ನಾಟಕದ ಕಡೆಗೆ ಸಂಚರಿಸಿದಾಗ ಕೊನೆಗೆ ಸುತ್ತೂರು ಮಠಕ್ಕೆ ಬಂದು ನಡೆಸಿದ ಸಂಭಾಷಣೆ ಕುತೂಹಲ ಮೂಡಿಸುತ್ತದೆ. ಮಾದೇಶ್ವರನ ಮೂಲದ ಬಗೆಗೆ ಕಾವ್ಯ ಪಠ್ಯ ರೀತಿಯಿದೆ :

ಏನಪ್ಪಾ ನಿನ್ನ ಹೆಸರೇನು ಅಂದರು
ಉತ್ತರ ದೇಶದ ಮಾದಯ್ಯ
ಮಾದಾರಿ ಅಂತ ಐದ್ಸಾರಿ ಕೇಳ್ದ
ಐದಸಾರಿಗೂ ಮಾದಾರಿ ಅಂದ್ರು
ಹಾಗಾದರೆ ಮಾದಾರಿ ಅಂದ್ಮೇಲೆ
ನನ್ನ ಕಾಲಿಗೆ ತಕ್ಕಂಥ ಚೆಮ್ಮಾಳಿಗೆ ಮಾಡ್ಕಂಡು ಬಂದಿಯಾ ಅಂದ್ರು[೧೬೫]

ಮಾದೇಶ್ವರನ 'ಜಾತಿ' ಮೂಲದ ಬಗೆಗೆ ವಿದ್ವಾಂಸರು ವಿವಿಧ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಅವನನ್ನು 'ವೀರಶೈವ'ನೆಂದು, 'ಮಾದಿಗ' ಜಾತಿಗೆ ಸೇರಿದವನೆಂದು ವಿಶ್ಲೇಷಿಸುವವರು ಇದ್ದಾರೆ. ಇಂದಿನ ಬಹುತೇಕ ಕೆಳಜಾತಿಗಳು ಮತ್ತು ದಲಿತ ವರ್ಗದವರು ಮಾದೇಶ್ವರನ ಒಕ್ಕಲಾಗಿದ್ದಾರೆ. ಹಾಗೆಯೇ ಕಾವ್ಯದಲ್ಲಿ ಪ್ರಸ್ತಾಪವಾಗಿರುವಂತೆ ಮಾದೇಶ್ವರ ತಾನು 'ಮಾದಾರಿ' ಎಂದೆ ಹೇಳುತ್ತಾನೆ. ಇದರ ಮೂಲಕ ತಾನು ಕೆಳಜಾತಿಗಳ ಸಾಂಸ್ಕೃತಿಕ ಪ್ರತಿನಿಧಿಯಾಗಿ ಕಾಣಿಸಿಕೊಳ್ಳುತ್ತಾನೆ. ವಚನ ಚಳವಳಿಯ ತರುವಾಯ ಸಾಂಸ್ಕೃತಿಕ ಏಳುಬೀಳುಗಳ ನಡುವೆ ಅನೇಕ ಭಕ್ತರನ್ನು ಒಲಿಸಿಕೊಳ್ಳುತ್ತಾನೆ. ಆ ಮುಖಾಂತರ ಸಂಪ್ರದಾಯಗಳನ್ನು ಮೀರುವ ಪ್ರವೃತ್ತಿ ವ್ಯಕ್ತವಾಗಿದೆ. ಕಾವ್ಯದಲ್ಲಿ ಪ್ರಸ್ತಾಪವಾಗಿರುವಂತೆ ಮಾದೇಶ್ವರನು ದಕ್ಷಿಣ (ಭಾಗಕ್ಕೆ) ಬಂದು ಯಾವುದಾದರೂ ಚಾಕ್ರಿ ಕೆಲಸ ಕೊಡಿ ಎಂದು ಕೇಳುವಾಗ, ಜೀವನ ನಿರ್ವಹಣೆಗಾಗಿ ಆರ್ಥಿಕ ಪರಿಸ್ಥಿತಿಯನ್ನು ಉತ್ತಮಪಡಿಸಿಕೊಳ್ಳಲು ಯತ್ನಿಸುವುದು ಒಂದಾದರೆ, ಮತ್ತೊಂದು ಬಗೆಯಲ್ಲಿ ವಚನ ಚಳುವಳಿಯ ಸಮಕಾಲೀನ ಸಂದರ್ಭದ ತರುವಾಯ ಬಹುತೇಕ ಕೆಳಜಾತಿಗಳು ಮೇಲ್ಜಾತಿಗಳ ಭಾವನೆಗಳಿಗೆ ವ್ಯತಿರಿಕ್ತವಾಗಿ ಉತ್ತರಿಸುವುದು ಕಂಡುಬರುತ್ತದೆ. ಅತ್ಯಂತ ಪ್ರಗತಿಪರವಾಗಿದ್ದ ಆ ಕಾಲಕ್ಕಾಗಲೆ ಆ ಗುಂಪು, ನಂತರ ಕೆಲವು ಕಟ್ಟುಪಾಡುಗಳನ್ನು ನಿರ್ಮಿಸಿಕೊಂಡು ಒಂದು ಜಾತಿಯಾಗಿ ಮಾರ್ಪಟ್ಟಿದ್ದರಿಂದ ಬೇಸತ್ತ 'ಕೆಳವರ್ಗ'ದ ಕೆಲವು ನಾಯಕರು ಶರಣ ಚಳವಳಿಯಿಂದ ಸಿಡಿದು ನಿಂತು 'ಜನಪದ ಚಳವಳಿ'ಯ ಮೂಲಕ ಚರಿತ್ರೆಯಲ್ಲಿ 'ಬೀದಿಗೆ ಬಂದ ಕೆಳವರ್ಗದ ಜನ' ಎಂದು ಹಿ.ಚಿ. ಬೋರಲಿಂಗಯ್ಯನವರು ಹೇಳುವುದು ಸಮಂಜಸವೆನಿಸುತ್ತದೆ.[೧೬೬] ಈ ಮಾದರಿಯಲ್ಲಿ ಮಾದೇಶ್ವರ ಅನೇಕ ಪವಾಡಗಳ ಮುಖಾಂತರ ದಬ್ಬಾಳಿಕೆ ಪ್ರವೃತ್ತಿಯ, ಶೋಷಣೆ ಮಾಡುವ ನಾಯಕರನ್ನು ಸಂಹಾರ ಮಾಡುವ ಯುಕ್ತಿ ಮತ್ತು ಕಾರ್ಯತಂತ್ರಗಳು ಸಮಾಜದ ಭಿನ್ನ ಆಯಾಮಗಳನ್ನು ಸಂಕೇತಿಸುತ್ತವೆ.

ಶ್ರವಣದೊರೆಯ ಕಾವ್ಯದ ಭಾಗದಲ್ಲಿ ಮಾದೇಶ್ವರ ಶ್ರವಣದೊರೆಯನ್ನು ಸಂಹಾರ ಮಾಡುವ ಕಾರ್ಯತಂತ್ರವು ಗಮನ ಸೆಳೆಯುತ್ತದೆ. ದಬ್ಬಾಳಿಕೆ ಪ್ರವೃತ್ತಿಯ ಶ್ರವಣದೊರೆ ಮಾದೇಶ್ವರನನ್ನು ಮನಬಂದಂತೆ ನಡೆಸಿಕೊಳ್ಳುತ್ತಾನೆ. ಇದನ್ನೆಲ್ಲ ಬಹಳ ಸೂಕ್ಷ್ಮ ರೀತಿಯಲ್ಲಿ ಮಾದೇಶ್ವರ ಮುಖಾಮುಖಿಯಾಗಿಸಿಕೊಳ್ಳುತ್ತಾನೆ. ಕೊನೆಗೆ ಶ್ರವಣದೊರೆಯನ್ನು ಮಾದೇಶ್ವರ ಸಂಹಾರ ಮಾಡುವ ತಂತ್ರ ಕಾವ್ಯದಲ್ಲಿ ಈ ರೀತಿಯಾಗಿ ವ್ಯಕ್ತವಾಗಿದೆ :

ಚಮ್ಮಾಳಿಗೆ ಮೆಟ್ಟಬೇಕು ನೀವು ಒಬ್ಬರೇ ಹೋಗಿ  
ಯಾರು ಕೂಡ ಅಲ್ಲಿಗೆ ಬರಬಾರದು ಅಂದ್ರು  
ಯಾವಾಗ ಉಂಗುಷ್ಟ ತಳ್ಳುವುದಕ್ಕೆ ಬಗ್ಗುದ್ನೋ  
ಅಡಿಯಿಂದ ಅಗ್ನಿದೇವತೆ ಕತ್ತಿ ಧಗಧಗನೆ ಹೊಗೆ ಎದ್ಬುಡ್ತು  
ಬಂಕಾಪುರ ಶ್ರವಣನ ಸಂಹಾರ ಮಾಡ್ಬುಟ್ಟು[೧೬೭]

ಸಮಾಜದ ಪ್ರಬಲ ಜಾತಿಗಳ ವೃತ್ತಿಪರತೆಯನ್ನು ತಿರಸ್ಕರಿಸುವುದರ ಜೊತೆಗೆ ಶ್ರವಣದೊರೆ ತನ್ನ ಅಹಂಕಾರ ಪ್ರವೃತ್ತಿಯಿಂದ ತಾನೆ ಬಲಿಯಾಗುತ್ತಾನೆ. ಇದರಿಂದ ಸಮಾಜಕ್ಕೆ ಒಂದು ಸಂದೇಶ ರವಾನಿಸಿದಂತೆ ಮೇಲ್ನೋಟಕ್ಕೆ ಕಂಡುಬರುತ್ತದೆ. ಸಾಂಸ್ಕೃತಿಕ ವೀರನಾದ ಮಾದೇಶ್ವರ ಅನೇಕ ಬಗೆಯ ಪವಾಡ ಸಾಹಸಗಳು ಅವನ ಜಾಣ್ಮೆ,

ಯುಕ್ತಿ, ತಂತ್ರ, ಕರುಣೆ ಎಲ್ಲವೂ ದಾಖಲಾಗಿರುವ ಈ ಕಾವ್ಯದಲ್ಲಿ ಕತೆಯೇ ಪ್ರಧಾನ ಎಂದು ಮೊಗಳ್ಳಿ ಗಣೇಶ್ ಅಭಿಪ್ರಾಯಪಡುತ್ತಾರೆ. ಜನಪದ ನಾಯಕರ ಸಾಧನೆ ಮತ್ತು ಸಾಂಸ್ಕೃತಿಕ ವ್ಯಾಪ್ತಿಯನ್ನು ಅವಲೋಕಿಸುವ ಸಂದರ್ಭದಲ್ಲಿ ಅವನನ್ನು 'ವರ್ಗ ಹೋರಾಟ', 'ಚಳವಳಿ' ಮತ್ತು 'ಮಾದಿಗ-ಹೊಲೆಯ-ವೀರಶೈವ' ನೆಲೆಗಟ್ಟಿನಲ್ಲಿ ಅರ್ಥ ಮಾಡಿಕೊಳ್ಳುವ ಪ್ರಯತ್ನಗಳನ್ನು ಕನ್ನಡದ ಜನಪದ ವಿದ್ವಾಂಸರು ಮಾಡಿದ್ದಾರೆ ಎಂದು ವಿಜಯ್ ಪೂಣಚ್ಚ ತಂಬಂಡ ಅಭಿಪ್ರಾಯಪಡುತ್ತಾರೆ. ಮಾದೇಶ್ವರನ ಕಾವ್ಯದಲ್ಲಿ ಕೆಳವರ್ಗಗಳ ಆಶಯಗಳು ಹೆಚ್ಚಿನದಾಗಿ ಅಭಿವ್ಯಕ್ತವಾಗಿವೆ ಎಂದು ಜೀ.ಶಂ. ಪರಮಶಿವಯ್ಯನವರು ಅಭಿಪ್ರಾಯಪಡುತ್ತಾರೆ. ಪಿ.ಕೆ. ರಾಜಶೇಖರ್ ಅವರು ಸಂಗ್ರಹಿಸಿದ ಕಾವ್ಯದಲ್ಲಿ ಮಾದೇಶ್ವರನು 'ಮಾದಿಗರ' ಜಾತಿಯವನು ಎಂಬ ವಿಶ್ಲೇಷಣೆ ಮಾಡಿದರು. ಹಾಗೆಯೇ ದೇವಚಂದ್ರನ 'ರಾಜಾವಳಿ ಕಥೆ'ಯಲ್ಲಿ ಸಹ 'ಮಾದಿಗರ ಹುಡುಗ' ಎಂದು ಹೇಳಿರುವುದನ್ನು ಜೀ.ಶಂ. ಪರಮಶಿವಯ್ಯ ಅವರು ದಾಖಲಿಸಿರುವುದನ್ನು ಕಾಣಬಹುದು.[೧೬೮] ಈ ಮೇಲಿನ ಎಲ್ಲಾ ಅಭಿಪ್ರಾಯಗಳನ್ನು ಅವಲೋಕಿಸಿದಾಗ ಇಂದಿನ ಬಹುತೇಕ ಸಾಂಸ್ಕೃತಿಕ ವೈರುಧ್ಯಗಳು ಮಧ್ಯಕಾಲೀನ ಅವಧಿಯಲ್ಲಿ ಹುಟ್ಟಿಕೊಂಡು ಇಂದು ಹೆಮ್ಮರವಾಗಿ ಬೆಳೆದಿವೆ. ಧರ್ಮಮೂಲವಾಗಲಿ, ಜಾತಿಮೂಲವಾಗಲಿ, ವೃತ್ತಿಮೂಲವಾಗಲಿ ಸಾಂಸ್ಕೃತಿಕ ಸಂಘರ್ಷಗಳು ಎಲ್ಲಾ ಸಮಾಜದಲ್ಲಿ ಮತ್ತು ಎಲ್ಲಾ ಕಾಲಕ್ಕೂ ಕಾಣಿಸಿಕೊಳ್ಳುತ್ತವೆ.

ಸಾಂಸ್ಕೃತಿಕ ವೀರರ ಭಿನ್ನ ಆಯಾಮಗಳನ್ನು ಅಧ್ಯಯನ ಮಾಡುವುದರಿಂದ ಅಂದಿನ ಸಮಾಜದ ಚಿತ್ರಣವನ್ನು ಅರ್ಥೈಸಲು ಸಾಧ್ಯವಾಗುತ್ತದೆ. ಮೇಲ್ಜಾತಿಗಳ ಕೆಳಜಾತಿಗಳ ನಡುವೆ ಎಲ್ಲಾ ಕಾಲಕ್ಕೂ ವೈರುಧ್ಯಗಳನ್ನು ಕಂಡೆ ಕಾಣುತ್ತೇವೆ. ಬಹುತೇಕ ಅಧ್ಯಯನಗಳು ಮೌಖಿಕ ಕಾವ್ಯಗಳ ಆಧಾರಗಳಿಂದ ಮತಧರ್ಮದ ವಿಚಾರಗಳಷ್ಟೆ ಹೆಚ್ಚಿನ ಒತ್ತುಕೊಟ್ಟಿರುವುದು ಕಾಣಬಹುದು. ಇದರ ಜೊತೆಗೆ ಆರ್ಥಿಕ ಆಯಾಮದಲ್ಲಿ ಹುಟ್ಟಿನ ಹಿನ್ನೆಲೆಗಳನ್ನು ಗಮನಿಸಿದರೆ ಮಾದೇಶ್ವರನ ಬಗೆಗೆ ಮತ್ತಷ್ಟು ಹೊಳಹುಗಳು ಹೊರಬರುವ ಸಾಧ್ಯತೆಗಳು ಇವೆ. ಮಾದೇಶ್ವರನು ಉತ್ತರದ ಪ್ರದೇಶವನ್ನು ಬಿಡಲು ಅಂದಿನ ಆರ್ಥಿಕ ಪರಿಸ್ಥಿತಿ ಕೂಡ ಕಾರಣವಾಗಿರುವ ಸಾಧ್ಯತೆಗಳು ಹೆಚ್ಚಾಗಿವೆ. ಹೆಚ್ಚಿನ ಅಧ್ಯಯನಕಾರರು ಸಾಮಾಜಿಕ ಆಯಾಮಗಳನ್ನು ಗಮನದಲ್ಲಿರಿಸಿಕೊಂಡು ಮೇಲ್ಜಾತಿಗಳ ಕಿರುಕುಳ ಮತ್ತು ಮೋಸಕ್ಕೆ ತಲೆಬಾಗಿ ದಕ್ಷಿಣಕ್ಕೆ ಸಂಚರಿಸಿರಬಹುದೆಂದು ಅಭಿಪ್ರಾಯಪಟ್ಟಿರುವುದೇ ಕಾಣಬಹುದು. ಬಹುತೇಕ ಕುಶಲಕರ್ಮಿಗಳು ಮತ್ತು ದಲಿತ ವರ್ಗದವರು ಉತ್ತರ ಕರ್ನಾಟಕವೆಂದು ಇಂದು ನಾವು ಗುರುತಿಸುವ ಪ್ರದೇಶದಲ್ಲಿ ಆರ್ಥಿಕವಾಗಿ ಹಿನ್ನಡೆ ಅನುಭವಿಸಿದ್ದರು.

### ೩.೮.೩. ಮಂಟೇಸ್ವಾಮಿ

ಮಾದೇಶ್ವರ ಮತ್ತು ಮಂಟೇಸ್ವಾಮಿ ಸಮಕಾಲೀನ ಸಾಂಸ್ಕೃತಿಕ ವೀರರಾಗಿ ಕಾಣಿಸಿಕೊಳ್ಳುತ್ತಾರೆ. ಇವರಿಬ್ಬರ ಆಶಯಗಳು ಕೂಡ ಸಮಾಜದ ಸರ್ವತೋಮುಖ ಬೆಳವಣಿಗೆಗೆ ಪೂರಕವಾಗಿದ್ದವು. ಚಾರಿತ್ರಿಕ ಕಾಲಘಟ್ಟದಲ್ಲಿ ಇವರಿಬ್ಬರೂ ನಡೆಸಿದ ಘಟನೆಗಳು ಅಂದಿನ ತಿರಸ್ಕೃತವಾದ ಚರಿತ್ರೆಯನ್ನು ರಚಿಸಲು ಸಹಾಯಕವಾಗಬಲ್ಲವು. ಇಬ್ಬರು ಕೂಡ ಉತ್ತರದ ಕಡೆಯಿಂದ ಬಂದವರು ಎಂದು ಕಾವ್ಯದಲ್ಲಿ ಉಲ್ಲೇಖವಾಗಿದೆ. ಮಾದೇಶ್ವರನ ಕಾವ್ಯದಂತೆ ಮಂಟೇಸ್ವಾಮಿ ಕಾವ್ಯವು ವಿಶಿಷ್ಟತೆಯನ್ನು ಪಡೆದುಕೊಂಡಿದೆ. ಮಾದೇಶ್ವರನ ಜೀವನ ಚರಿತ್ರೆಯ

ಬಗೆಗೆ ಎಷ್ಟು ಭಿನ್ನಾಭಿಪ್ರಾಯಗಳಿವೆಯೋ ಅಷ್ಟೆ ಭಿನ್ನಾಭಿಪ್ರಾಯಗಳು ಮಂಟೇಸ್ವಾಮಿ ಬಗೆಗೂ ಇವೆ. ೧೨ನೇ ಶತಮಾನಕ್ಕೆ ಸಂಬಂಧ ಕಲ್ಪಿಸುವ ಸಂಕಥನ ಆಧಾರದ ಮೇಲೆ ಇವರ ಬದುಕನ್ನು ನಿರೂಪಿಸಬೇಕಾಗುತ್ತದೆ. ಮಂಟೇಸ್ವಾಮಿಯನ್ನು *ಧರೆಗೆ ದೊಡ್ಡವರು* ಎಂದು ಕರೆಯಲಾಗುತ್ತಿದೆ. ಈ ಕಾವ್ಯವು 'ನೀಲಗಾರ'ರಿಂದ ರಚಿಸಲ್ಪಟ್ಟಿದೆ. ನೀಲಗಾರರು ಮಂಟೇಸ್ವಾಮಿ ಸಂಪ್ರದಾಯಕ್ಕೆ ಸೇರಿದವರಾದ್ದರಿಂದ ಇವರನ್ನು ಮಂಟೇದವರು, ಮಂಟೇದಯ್ಯ, ಮಂಟೇಸ್ವಾಮಿ ಹೆಸರುಗಳಲ್ಲಿ ಕರೆಯಲಾಗುತ್ತಿದೆ. ಮಂಟೇಲಿಂಗಯ್ಯ ಎಂಬುದು ಮಂಟೇಸ್ವಾಮಿ ಕಥೆಯಲ್ಲಿ ಬರುವ ಧರೆಗೆ ದೊಡ್ಡವರ ಹೆಸರು. ನೀಲಗಾರರನ್ನು ವಿಶೇಷವಾಗಿ ಎಡಗೈನವರು, ಬಲಗೈನವರು, ಕುಂಬಾರ ಶೆಟ್ಟರು, ಮಡಿವಾಳಶೆಟ್ಟರು, ಹೆಗ್ಗಡೆಗೌಡಗಳು ಈ ಮತದವರೆ ಹೆಚ್ಚು. ನೀಲಗಾರರನ್ನು ವಚನಗಾರರು ಎಂದು ಕರೆಯುವ ವಾಡಿಕೆಯುಂಟು. ವೃತ್ತಿಯಿಂದ ಗಾಯಕರಾದ ಇವರು ಮಂಡ್ಯ, ಮೈಸೂರು, ಬೆಂಗಳೂರು[೧೯] ಜಿಲ್ಲೆಗಳಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ.

ದಕ್ಷಿಣ ಕರ್ನಾಟಕ ಭಾಗದಲ್ಲಿ ಹೆಚ್ಚಾಗಿ ಬುಡಕಟ್ಟುಗಳು ಮತ್ತು ಶೂದ್ರ, ಅತಿಶೂದ್ರ ಸಮುದಾಯಗಳು ವಾಸಿಸುವ ಪ್ರದೇಶವನ್ನು ಮಂಟೇಸ್ವಾಮಿ ಆಯ್ಕೆ ಮಾಡಿಕೊಂಡು ನೆಲೆ ನಿಲ್ಲಲು ಪ್ರಯತ್ನಿಸುತ್ತಾನೆ. ಮಂಟೇಸ್ವಾಮಿ 'ಮಹಿಮೆ' ಪ್ರಚಾರವಾಗಲು ಶಿಷ್ಯ ಸಮುದಾಯ ಕಾರಣವಾಗಿದೆ ಎಂದು ಚಂದ್ರು ಕಾಳೇನಹಳ್ಳಿ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಕುರುಬ ಗೌಡ, ಪರಿವಾರದವರನ್ನು ಸೇರಿದಂತೆ ಬಹುತೇಕ ಶಿಷ್ಯ ವೃಂದದವರು ಹೊಲೆಯ ಮಾದಿಗರೇ ಆಗಿದ್ದಾರೆ ಎನ್ನುವ ವಿಚಾರ ಗಮನಾರ್ಹವಾಗಿದೆ. ಉತ್ತರ ಕರ್ನಾಟಕದ ಕೊಡೇಕಲ್ಲು, ಕೆಲೂರು, ಕೂಡಲಸಂಗಮ, ಕುರುವತ್ತಿಗಳಲ್ಲಿ ಮಂಟೇಸ್ವಾಮಿ ತೋರುಗದ್ದುಗೆಗಳಿದ್ದು, ಆ ಗದ್ದುಗೆಗಳಿಗೆ ನಡೆದುಕೊಳ್ಳುವ ಭಕ್ತರು ಇದ್ದರೂ, ದಕ್ಷಿಣದ ನೀಲಗಾರರ ಹಾಗೆ ಒಂದು ಪರಂಪರೆಯನ್ನು ಕಟ್ಟಿಕೊಂಡು ತಮ್ಮದೇ ಆದ ಧಾರ್ಮಿಕ ಕಾವ್ಯವನ್ನು ಸೃಷ್ಟಿಸಿಕೊಂಡಿಲ್ಲ ಎಂದು ವೆಂಕಟೇಶ ಇಂದ್ವಾಡಿ ಹೇಳುತ್ತಾರೆ.[೨೦] ಮುಖ್ಯವಾಗಿ ಗಮನಿಸುವುದಾದರೆ ಮಂಟೇಸ್ವಾಮಿ ದಕ್ಷಿಣದ ಕಡೆ ಸಂಚರಿಸಿದಾಗ ಈ ಮೇಲಿನ ಭಾಗಗಳಲ್ಲಿ 'ಮಹಿಮಾ' ಪ್ರಚಾರಕ್ಕೆ ಸಾಧ್ಯವಾಗದಿರುವುದು ಕಾರಣೀಭೂತವಾಗಿರುವ ಸಾಧ್ಯತೆಯಿದೆ. ಮಧ್ಯಕಾಲೀನ ಸಂದರ್ಭದ ಯಾವ ಲಿಖಿತ ಪಠ್ಯಗಳಲ್ಲಿ ಇವರ ಪ್ರಸ್ತಾಪ ಮತ್ತು ಚರ್ಚೆಗಳು ಬರದಿರುವುದು ಸೋಜಿಗವೆನಿಸಿವೆ. ಮಂಟೇಸ್ವಾಮಿಯನ್ನು ಒಬ್ಬ ಚಾರಿತ್ರಿಕ ವ್ಯಕ್ತಿಯೆಂದು ಗುರುತಿಸುವಾಗ ಯಾವ ಕಾಲಘಟ್ಟದಲ್ಲಿ ಬದುಕಿ ಬಾಳಿದವರು ಎಂದು ನಿರ್ದಿಷ್ಟವಾಗಿ ಹೇಳಲು ಸಾಧ್ಯವಾಗದಿರುವುದು. ನೀಲಗಾರರು ಅಥವಾ ತಂಬೂರಿಯವರು ಹಾಡುವ ಕಾವ್ಯದಲ್ಲಿ ೧೨ನೆಯ ಶತಮಾನದ ತರುವಾಯ ನಡೆದಿರುವ ಕೆಲವು ಘಟನೆಗಳು, ವ್ಯಕ್ತಿಗಳು, ಸಾಂಸ್ಕೃತಿಕ ಸಂದರ್ಭಗಳು ಕಾವ್ಯದಲ್ಲಿ ಕಾಣಿಸಿಕೊಳ್ಳುತ್ತವೆ. ಈ ಹಿನ್ನೆಲೆಯಲ್ಲಿ ಕಾವ್ಯದ ಪಠ್ಯವನ್ನು ವಿಶ್ಲೇಷಣೆಗೆ ಒಳಪಡಿಸಿದರೆ ಹದಿನಾಲ್ಕನೆ ಶತಮಾನದವರೆಗಿನ ಸಾಂಸ್ಕೃತಿಕ ವೈರುಧ್ಯಗಳ ಚರಿತ್ರೆಯ ಬಗೆಗೆ ಹೊಳಹುಗಳು ಲಭ್ಯವಾಗುತ್ತವೆ.

ಇಡೀ ಕಾವ್ಯವು *ಧರೆಗೆ ದೊಡ್ಡವರ ಸಾಲು, ರಾಚಪ್ಪಾಜಿ ಸಾಲು, ಸಿದ್ದಪ್ಪಾಜಿ ಸಾಲು, ಚಿಕ್ಕಲ್ಲೂರು ಸಾಲುಗಳಿಂದ* ಆವೃತವಾಗಿದೆ. ಸಾಲು ಎಂದರೆ 'ಪಠ್ಯ' ಎಂದರ್ಥ. ಮಂಟೇಸ್ವಾಮಿಗಳು ಕಲ್ಯಾಣದಿಂದ ದಕ್ಷಿಣಾಭಿಮುಖವಾಗಿ ಹೊರಟು ಬೊಪ್ಪೆಗೌಡನಪುರದ ಮಡಿವಾಳ ಮಾಚಯ್ಯನ ಹುಬ್ಬೆ ಒಲೆಯಲ್ಲಿ "ಅಮೃತ

ಮಣ್ಣನ್ನು" ಗುರುತಿಸಿ ಅಲ್ಲಿ ಮಠಮಾನ್ಯಗಳನ್ನು ಸ್ಥಾಪಿಸಿದ್ದರ ಕುರಿತು ಚರ್ಚಿಸುವುದು ಧರೆಗೆ ದೊಡ್ಡವರ ಸಾಲು. ಸಿದ್ದಪ್ಪಾಜಿಯನ್ನು ಶಿಷ್ಯನನ್ನಾಗಿ ಪಡೆದು ತಮ್ಮ ದಳವಾಯಿಯನ್ನಾಗಿ ಧರೆಗೆ ದೊಡ್ಡವರು ಮಾಡಿಕೊಂಡಿದ್ದು, ಕಲಿಪುರುಷನ ಸುಳಿವನ್ನು ಕಂಡಕೂಡಲೇ ತಾವು ಪಾತಾಳಬಾವಿಯಲ್ಲಿ ಪವಡಿಸಲು ಇಚ್ಛಿಸಿ ತಕ್ಕ ಅನುಕೂಲಗಳನ್ನೊದಗಿಸಲು "ಸಿದ್ದಪ್ಪಾಜಿ"ಯನ್ನು ಕೇಳಿದ್ದು, ಸಿದ್ದಪ್ಪಾಜಿ ಹಾಗಲೂರು ಪವಾಡನ್ನು ಗೆದ್ದು ಅಲ್ಲಿನ ಪಾಂಚಾಳರನ್ನು ಮಂಟೇಸ್ವಾಮಿ ಮಠದ ಶಿಷ್ಯರನ್ನಾಗಿ ಮಾಡಿರುವುದು ಈ ಪಠ್ಯದಲ್ಲಿನ ವಿಷಯವು ತಿಳಿಯಪಡಿಸುತ್ತದೆ. ರಾಚಪ್ಪಾಜಿ ಸಾಲು "ಗುರುವಿನ ಆದೇಶದಂತೆ ರಾಚಪ್ಪಾಜಿಯವರು ಬೊಪ್ಪೆಗೌಡನಪುರದಿಂದ ಹೊರಟು, ದೊಡ್ಡಮ್ಮತಾಯಿ, ಮುಟ್ಟನಹಳ್ಳಿಯ ತೋಪಿನ ಬಳಿ ಮುಟ್ಟಾಗಲು, ಅಲ್ಲಿಯೇ ನೆಲೆ ನಿಲ್ಲಿಸಿ, ಮೈಸೂರಿನ ಮೂಲಕ ಎಡೆತೊರೆದು ಸಮೀಪದ ಕಪ್ಪಡಿಕ್ಷೇತ್ರಕ್ಕೆ ಬಂದು ನೆಲೆಸಿದ್ದು ಮುಂತಾದ ವಿಚಾರಗಳನ್ನು ಕುರಿತು ತಿಳಿಯಪಡಿಸುತ್ತದೆ. ಸಿದ್ದಪ್ಪಾಜಿಯವರು ಗುರುವನ್ನು ಬೀಳ್ಕೊಟ್ಟು ಪೂರ್ವಾಭಿಮುಖವಾಗಿ ಹೊರಟು ಚಿಕ್ಕಲ್ಲೂರು ಕ್ಷೇತ್ರಕ್ಕೆ ಬಂದು ಅಲ್ಲಿ ಅನೇಕ ಪವಾಡಗಳನ್ನೆಸಗಿ ಮುತ್ತತ್ತಿರಾಯನ ಕ್ಷೇತ್ರವನ್ನು ಪಡೆದು ಅಲ್ಲಿಯೇ ನೆಲೆಯೂರಲು ಯತ್ನಿಸಿದ ವಿಚಾರಗಳನ್ನು ಚಿಕ್ಕಲ್ಲೂರು ಸಾಲು ಪಠ್ಯದಲ್ಲಿ ಕಾಣಬಹುದು.[೨೮]

ಸಂಪಾದನೆ ಕೃತಿಯಾದ ಮಂಟೇಸ್ವಾಮಿ ಕಾವ್ಯದ ಹಿನ್ನೆಲೆಯನ್ನು ಆಧರಿಸಿ ಅಧ್ಯಯನ ಮಾಡಿದಾಗ ೧೨ನೇ ಶತಮಾನದೊಂದಿಗೆ ಅವಿನಾಭಾವ ಸಂಬಂಧಗಳನ್ನು ಕಲ್ಪಿಸುವ ಪಠ್ಯವು ಕಾಣಿಸಿಕೊಳ್ಳುತ್ತದೆ. ಶೂದ್ರರ ಹಕ್ಕು, ಅಧಿಕಾರ, ಸ್ವಾತಂತ್ರ್ಯಗಳನ್ನು ಪ್ರಶ್ನಿಸುತ್ತಿದ್ದ ಎಲ್ಲ ವರ್ಗ, ಮಠಗಳನ್ನು ತನ್ನ ಮಾಂತ್ರಿಕತೆಯ ಮೂಲಕ ಮಂಟೇಸ್ವಾಮಿ ಮಣಿಸುತ್ತಲೇ ಹೋಗುತ್ತಾನೆ. ಊಳಿಗಕ್ಕೆ ಬಿದ್ದು ಅಲ್ಲಿಂದ ಗೆದ್ದು ಬರುತ್ತಾನೆ. ಹಾಗಾಗಿಯೇ ಕುರುಬ, ಬೇಡ, ಒಕ್ಕಲಿಗ, ಸೋಲಿಗ, ಪಾಂಚಾಳ ಪರಿವಾರದವರನ್ನು ಗೆಲ್ಲುವ ಮೂಲಕ ಒಕ್ಕಲು ಮಾಡಿಕೊಳ್ಳುವ ಮೂಲಕ ಮತ್ತು ತಮ್ಮ ಅನುಯಾಯಿಗಳಾಗಿ ಪಂಥಗಳನ್ನು ಬೆಳೆಸುತ್ತಾ ಹೋಗುತ್ತಾನೆ. ಈ ಜಾಯಮಾನ ಮಂಟೇದರ ಮತ್ತು ಮಾದಪ್ಪ ಇವರೀರ್ವರಲ್ಲೂ ಕಂಡುಬರುತ್ತದೆ.[೨೯] ವಚನ ಚಳವಳಿಯ ಶೂದ್ರಾತಿಶೂದ್ರ ಶರಣರನ್ನು ತನ್ನ ಕಡೆ ಸೆಳೆದುಕೊಳ್ಳುವ ಪ್ರಸ್ತಾಪವನ್ನು ಪಠ್ಯದಲ್ಲಿ ಈ ರೀತಿ ಇದೆ :

ಹೊಲೆಯರ ಹೊನ್ನಪ್ಪ
ಅವನೊಬ್ಬ ಶಿವಶರಣ
ಮಾದಿಗರ ಚನ್ನಯ್ಯಾ
ಅವನೊಬ್ಬ ಶಿವಶರಣ
ನನ್ನ ಮಡಿವಾಳ ಮಾಚಪ್ಪ
ಒಬ್ಬ ಶಿವಶರಣ
ಸುವ್ವಾ ಬಾ ಚನ್ನಬಸವಣ್ಣ ಸುವ್ವಾ ಬಾ[೩೦]

ಮಂಟೇಸ್ವಾಮಿ ಕೈಗೊಳ್ಳುವ ಕಲ್ಯಾಣದ ಶರಣರ ಪರೀಕ್ಷೆಯನ್ನು ೧೪-೧೫ನೆಯ ಶತಮಾನಗಳಲ್ಲಿ ದಲಿತ ದೃಷ್ಟಿಕೋನದಿಂದ ನಡೆದ ಶರಣ ಚಳವಳಿಯ ಸಮಗ್ರ ಮೌಲ್ಯಮಾಪನವೆಂದು ನೋಡಬಹುದು. ಈ ಅಂಶವನ್ನು

ಡಿ.ಆರ್. ನಾಗರಾಜ ತಮ್ಮ ಕೃತಿಯಲ್ಲಿ ವಿಶ್ಲೇಷಿಸಿದ್ದಾರೆ. ೧೭ನೇ ಶತಮಾನದ ತರುವಾಯ ಪುನಃ ಸಮಾಜದ ಶ್ರೇಣೀಕೃತ ವ್ಯವಸ್ಥೆಯನ್ನು ಕಂಡು ಕೆಂಡಾಮಂಡಲವಾದವರು. ಅಲ್ಲಿನ ಜಂಗಮರ ಲಿಂಗಗಳನ್ನು ಮಾಯಮಾಡಿ ಅವರ ಡೋಂಗಿತನವನ್ನು ಬಯಲಿಗೆಳೆದವರು. ಮಂಟೇಸ್ವಾಮಿ ಪರೀಕ್ಷೆಯಲ್ಲಿ ಹೊಲೆಯರ ಹೊನ್ನಪ್ಪ, ಮಾದಿಗರ ಚೆನ್ನಯ್ಯ, ಮಡಿವಾಳ ಮಾಚಪ್ಪ ಇತ್ಯಾದಿ ಕೆಳವರ್ಗದ ಶರಣರು.[೧೬೪] ಇವೆಲ್ಲಾ ಹಿನ್ನೆಲೆಗಳ ಆಧಾರದ ಮೇಲೆ ವಿಜಯನಗರ, ಮೈಸೂರು ಪ್ರದೇಶ, ವಿವಿಧ ಜನಸಮುದಾಯಗಳು, ವಿವಿಧ ಬಗೆಯ ಸಾಮಾಜಿಕ ಸಂಘರ್ಷಗಳು ಈ ಕಾವ್ಯದಲ್ಲಿ ಸಮ್ಮಿಳಿತವಾಗಿವೆ. ಮುಖ್ಯವಾಗಿ ದಲಿತರಿಂದ ಕಟ್ಟಲಾದ ಕಥನವಾಗಿದೆ.

**೩.೮.೪. ಜುಂಜಪ್ಪ**

ಕಾಡುಗೊಲ್ಲರ ಜೀವನದಲ್ಲಿ ಹಾಸುಹೊಕ್ಕಾಗಿರುವ ಜುಂಜಪ್ಪನ ಪುರಾಣವು ಕುತೂಹಲಕಾರಿವಾದುದು. ಇದು ಕನ್ನಡದ ಅತ್ಯುತ್ತಮ ಜನಪದ ಕಾವ್ಯಗಳಲ್ಲೊಂದು. ಕಾಡುಗೊಲ್ಲರು ಎಂಬ ಹಿಂದುಳಿದ ಬುಡಕಟ್ಟಿನ ಸಾಂಸ್ಕೃತಿಕ ವೀರ ಹಾಗೂ ಆರಾಧ್ಯ ದೈವವೇ ಜುಂಜಪ್ಪ. ಮೂಲತಃ ಗೊಲ್ಲರಲ್ಲಿ ಎರಡು ಪಂಗಡಗಳಿವೆ. ಕಾಡುಗೊಲ್ಲರು ಮತ್ತು ಊರುಗೊಲ್ಲರು. ಊರುಗೊಲ್ಲರು ಊರುಗಳಲ್ಲಿ ವಾಸ ಮಾಡುವುದರಿಂದ ಇತರ ಜಾತಿಯ ಜನಸಮುದಾಯಗಳೊಂದಿಗೆ ಸೇರಿ ಹೋಗಿದ್ದಾರೆ. ಊರುಗೊಲ್ಲರು ಕಾಡುಗೊಲ್ಲರಿಗಿಂತ ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಪ್ರಬಲರಾಗಿದ್ದಾರೆ. ಆದುದರಿಂದ ಕಾಡುಗೊಲ್ಲರು ಹಿಂದುಳಿದವರಾಗಿದ್ದು, ಹಿಂದುಳಿದ ಬುಡಕಟ್ಟುಗಳ ಪಟ್ಟಿಯಲ್ಲಿ ಸೇರುತ್ತಾರೆ. ಇವರಲ್ಲಿ ಅನೇಕ ಉಪವರ್ಗಗಳಿವೆ. *ಚಿತ್ತಮುತ್ತಿದವರು, ಚಂದಮುತ್ತಿದವರು ಮತ್ತು ರಾಮೇಗೌಡನ ಕುಲದವರು.* ಇವರಲ್ಲಿ ಚಿತ್ತಮುತ್ತಿ ಕುಲದ ಕರಡಿಗೊಲ್ಲರ ಆರಾಧ್ಯ ದೈವ ಜುಂಜಪ್ಪ.[೧೬೫] *ಕಾಟಮಲಿಂಗ, ಚಿತ್ರಲಿಂಗ, ಕ್ಯಾತಾರಲಿಂಗ, ಪಾತೇಲಿಂಗ, ಹೆತ್ತಪ್ಪ, ರಂಗನಾಥ, ತಿಮ್ಮಪ್ಪ, ಕರಿಯಮ್ಮ, ಭೂತಪ್ಪ* ಪ್ರಮುಖವಾಗಿವೆ.

ಜುಂಜಪ್ಪನ ಭಕ್ತರು ಕರ್ನಾಟಕದುದ್ದಕ್ಕೂ ಕಾಣಿಸಿಕೊಳ್ಳುತ್ತಾರೆ. ದಕ್ಷಿಣ ಮತ್ತು ಉತ್ತರ ಕರ್ನಾಟಕದಲ್ಲಿ ಜುಂಜಪ್ಪನ ಸಂಪ್ರದಾಯಗಳಲ್ಲಿ ಕೆಲವು ವ್ಯತ್ಯಾಸಗಳನ್ನು ಗಮನಿಸಬಹುದು. ಕರ್ನಾಟಕದ ದಕ್ಷಿಣ ಭಾಗದಲ್ಲಿ ಜುಂಜಪ್ಪನ ಪ್ರಜಾಸ್ಥಳಗಳಿದ್ದರೂ, ಅಲ್ಲೆಲ್ಲಿಯೂ ಅವನಿಗಾಗಿ ಕಟ್ಟಿಸಿದ ದೇವಾಲಯ ಅಥವಾ ಮೂರ್ತಿಗಳು ಕಂಡುಬರುವುದಿಲ್ಲ. ಆದರೆ ಉತ್ತರ ಭಾಗದಲ್ಲಿ ಅವನ ಪ್ರತ್ಯೇಕ ಮೂರ್ತಿಗಳು ಹಾಗೂ ದೇವಾಲಯಗಳಿವೆ. ಕಾಡುಗೊಲ್ಲರಲ್ಲಿ ಜುಂಜಪ್ಪನ ಕಾವ್ಯವನ್ನು ಹಾಡುವ ಕಲಾವಿದರಿಗೆ ಗಣೆಯವರು ಎಂದು ಕರೆಯುತ್ತಾರೆ. ಜುಂಜಪ್ಪನ ಕಾವ್ಯ ಸಂಪಾದನೆಯಲ್ಲಿ ಚಲುವರಾಜು ಅವರು ಬರೆದಿರುವಂತೆ 'ಗಣೆ' ಎಂದರೆ ಸುಮಾರು ನಾಲ್ಕು ಅಡಿ ಉದ್ದದ 'ಗಳು' ಇದಕ್ಕೆ ಒಂದು ತುದಿಯಲ್ಲಿ ಕೊಳಲಿನಂತೆ ಊದುವ ನುಡಿಸುವ ಐದು ಸಣ್ಣ ರಂದ್ರಗಳನ್ನು ಕೊರೆದಿರುತ್ತಾರೆ. ಜುಂಜಪ್ಪನ ಹೆಸರಿನಲ್ಲಿ ಕಾಣಿಕೆ ಮತ್ತು ಹರಕೆಯನ್ನು ಸಂಗ್ರಹಿಸುವವರನ್ನು 'ಕಾಣಿಕೆ'ಯವರು ಎಂದು ಕರೆಯುತ್ತಾರೆ.[೧೬೬] ತುಮಕೂರು, ಚಿತ್ರದುರ್ಗ, ಬೆಂಗಳೂರು, ಕೋಲಾರ, ಮಂಡ್ಯ ಹಾಗೂ ಬಳ್ಳಾರಿ ಜಿಲ್ಲೆಗಳಲ್ಲಿ ಕಾಡುಗೊಲ್ಲರ ಸಂಖ್ಯೆ ಹೆಚ್ಚಾಗಿದೆ. ಗೋವುಗಳ ರಕ್ಷಣೆ, ಹಾಲು, ಬೆಣ್ಣೆ, ತುಪ್ಪವನ್ನು ಮಾರುವುದು

ಒಂದು ಕಾಲಕ್ಕೆ ಈ ಸಮುದಾಯದ ಮುಖ್ಯ ಕಸುಬಾಗಿತ್ತು. ಈ ಸಮುದಾಯಕ್ಕೆ ಸೇರಿದ ಜುಂಜಪ್ಪನ ಕಾವ್ಯದಲ್ಲಿ ಕಥೆಯು ಮೂರು ಮೂಲಗಳಿಂದ ಲಭ್ಯವಾಗುವುದೆಂದು ಜೀಶಂಪ ಹೇಳುತ್ತಾರೆ. ೧. ಗಣೆಯವರು ಊರಾಡಲು ಹೋದಾಗ ಹೇಳುವ ಪಠ್ಯ ಹಾಗೂ ಗದ್ಯಯುಕ್ತ ಕಾವ್ಯ ೨. ಗೊಲ್ಲಗೌಡರು ಗಣೆಯೊಡನೆ ಹಾಡುವ ತ್ರಿಪದಿ ಸಾಹಿತ್ಯ ೩. ಹೆಣ್ಣುಮಕ್ಕಳು ಹಾಡುವ ತ್ರಿಪದಿ ಸಾಹಿತ್ಯ.

ಜೀಶಂಪ ಅವರು ಉತ್ತರ ಸಂಪ್ರದಾಯ ಮತ್ತು ದಕ್ಷಿಣ ಸಂಪ್ರದಾಯ ಎಂದು ಕರೆದಿದ್ದಾರೆ. ಸಿರಾ, ಹಿರಿಯೂರು, ಚಳ್ಳಕೆರೆ ಮುಂತಾದ ಭಾಗಗಳಲ್ಲಿ ಪ್ರಚಲಿತವಾಗಿರುವ ಸಂಪ್ರದಾಯವನ್ನು ಉತ್ತರ ಸಂಪ್ರದಾಯವೆಂದೂ, ಗುಬ್ಬಿ, ತಿಪಟೂರು, ತುರವೇಕೆರೆ, ಚನ್ನರಾಯಪಟ್ಟಣ ಮುಂತಾದ ಪ್ರದೇಶಗಳಲ್ಲಿ ಪ್ರಚಲಿತವಾಗಿರುವ ಸಂಪ್ರದಾಯವನ್ನು ದಕ್ಷಿಣ ಸಂಪ್ರದಾಯವೆಂದು ಕರೆದಿದ್ದಾರೆ. ಉತ್ತರ ಸಂಪ್ರದಾಯವರು ಕಳುವಾರಹಳ್ಳಿ ಕ್ಷೇತ್ರಕ್ಕೂ, ದಕ್ಷಿಣ ಸಂಪ್ರದಾಯದವರು ಹಾಗಲವಾಡಿ ಕ್ಷೇತ್ರಕ್ಕೂ ನಡೆದುಕೊಳ್ಳುತ್ತಾರೆ.[೧೭೭] ಉತ್ತರ ಸಂಪ್ರದಾಯ ಕಾವ್ಯಾಂಶಕ್ಕಿಂತ ಹೆಚ್ಚಾಗಿ ಸಾಂಸ್ಕೃತಿಕ ಅಂಶಗಳು ಲಭ್ಯವಾಗುತ್ತವೆ. ಹಾಗೆಯೇ ಕಾಡುಗೊಲ್ಲರ ಉಡುಪು, ಕಸುಬು, ಜೀವನ ವಿಧಾನಕ್ಕೆ ಸಂಬಂಧಿಸಿದ ವಿಷಯಗಳಿವೆ. ಸುಮಾರು ಏಳು ತಲೆಮಾರುಗಳಷ್ಟು ಹಳೆಯದಾದ ಈ ಕಾವ್ಯ ವಿವಿಧ ಸಂದುಗಳಿಂದ ಕೂಡಿದೆ. ಸಿತ್ತಯ್ಯಾ ಕಾಟುಮುಲಿಂಗರ ಹುಟ್ಟಿನ ಸಂದು, ಗೊಲ್ಲರ ಕುಲದ ಹುಟ್ಟಿನ ಸಂದು, ಕೆಂಗರು ಮಲ್ಲೇಗೌಡ ಸಂದು, ಜುಂಜಪ್ಪನ ಹುಟ್ಟಿನ ಸಂದು, ಸಿನ್ನಮ್ಮನ ಸತ್ಯಪರೀಕ್ಷೆ ಸಂದು, ಮಾರಕ್ಕನ ಮದುವೆ ಸಂದು ಇತ್ಯಾದಿ.[೧೭೮]

ಈ ಕಾವ್ಯಗಳಲ್ಲಿ ಅವನು ಅನೇಕ ಹುಲ್ಲುಗಾವಲುಗಳನ್ನು ಗೆಲ್ಲುತ್ತಾನೆ. ಚೇಳೂರು ದೊರೆಗಳನ್ನು ಗೆಲ್ಲುತ್ತಾನೆ. ಶ್ರೀಮಂತರಾದ ತನ್ನ ಮಾವಂದಿರ ಕುತಂತ್ರವನ್ನು ಬಯಲು ಮಾಡುತ್ತಾನೆ. ಇಷ್ಟೆಲ್ಲದರ ನಡುವೆ ಅವನು ಅನಾಥನಾಗಿ ಗೋಚರಿಸುತ್ತಾನೆ. ಆದರೆ ಅವನ ಛಲ, ಆತ್ಮವಿಶ್ವಾಸ, ತಾಳ್ಮೆ, ವೃತ್ತಿಯಲ್ಲಿನ ಪ್ರಾಮಾಣಿಕತೆ ಅವನನ್ನು ನಾಯಕನೆನಿಸಿದೆ. ಪ್ರಸ್ತುತ ವಿಷಯದಲ್ಲಿ ಜುಂಜಪ್ಪನ ಹುಟ್ಟು ಮತ್ತು ಬಾಲ್ಯ ಹಾಗೂ ಚೇಳೂರು ರಂಗಣ್ಣನನ್ನು ಸೋಲಿಸಿದ ಪ್ರಸಂಗವನ್ನು ಸಂಕ್ಷಿಪ್ತವಾಗಿ ವಿಶ್ಲೇಷಿಸಲು ಯತ್ನಿಸಲಾಗಿದೆ.[೧೭೯] ಕಾವ್ಯದಲ್ಲಿ ವ್ಯಕ್ತವಾಗಿರುವಂತೆ ಚಿನ್ನಮ್ಮ ಮತ್ತು ಕೆಂಗುರಿ ಮಲ್ಲೇಗೌಡನಿಗೆ ಮದುವೆಯಾಯಿತು. ಗಂಡ ಮೂಡಲಗಿರಿ ತಿಮ್ಮಪ್ಪನ ಕಾವಲಲ್ಲಿ ದನಗಳನ್ನು ಮೇಯಿಸಿಕೊಂಡು ಹೆಂಡತಿಯನ್ನು ಮರೆತುಬಿಟ್ಟ. ಚಿನ್ನಮ್ಮ ಒಂಟಿ ಜೀವನ ನಡೆಸಬೇಕಾಯಿತು. ಜನತೆ ಚಿನ್ನಮ್ಮನನ್ನು ಬಂಜೆ ಎಂದು ಹಾಸ್ಯ ಮಾಡತೊಡಗಿದರು. ಕೊನೆಗೆ ಅವಳು ದೇವರ ಮೊರೆ ಹೋದಳು. ಯಾವ ದೇವರು ಸಹ ಫಲ ನೀಡಲಿಲ್ಲ. ಕೊನೆಗೆ ಈಶ್ವರನ ಮಗಳಾದ ಗೌರಸಮುದ್ರದ ಮಾರಿ ಕನಸಿನಲ್ಲಿ ಬಂದು ವಿಚಾರಿಸಿದಾಗ ಕೊನೆಗೆ ಈಶ್ವರನ ಮಗನಾದ ವೀರಭದ್ರನನ್ನು ಜುಂಜಪ್ಪನ ಅವತಾರದಲ್ಲಿ ಚಿನ್ನಮ್ಮನ ಮಗು ಹುಟ್ಟಲು ಈಶ್ವರ ಕೃಪೆ ತೋರಿದ, ಕೆಲವು ಷರತ್ತುಗಳೊಂದಿಗೆ ಮನೆದೇವರಾದ ಚಿತ್ತಯ್ಯನನ್ನು ನೆನೆದು ಜುಂಜಪ್ಪನ ಜನನವಾಯಿತು.[೧೮೦]

ಗೌರಿಸಂದ್ರದು ಮಾರಿಗೆ
ಕಣಿಯನ್ನು ಕೇಳುವಾಗ
ಆಯಮ್ಮ ಳುತಾಳೆ
ಕೇಳಿರಲೆ ದಗಡಿ ಮಕ್ಕಳಿಗಾ
ದ್ಯಾವುದು ದ್ಯೆಮಾರುವೆಂಬ
ಅಜ್ಜನು ಹೊಟ್ಟೆ ಒಳಗ[೮೮]

ಕಾವ್ಯವಲ್ಲಿ ಚಿನ್ನಮ್ಮ ಗೌರಸಂದ್ರದ ಮಾರಿಯನ್ನು ಮಕ್ಕಳಾಗುವಂತೆ ಕೇಳುವ ಸಂಗತಿಯನ್ನು ಕಾಣಬಹುದು. ಜುಂಜಪ್ಪನ ಜನನದ ನಂತರ ತಾಯಿ ಅನೇಕ ಸಂಕಷ್ಟಗಳನ್ನು, ನಿಂದನೆಗಳನ್ನು ತನ್ನ ಮಗನಿಂದಲೆ ಅನುಭವಿಸಬೇಕಾಯಿತು. ಚಿನ್ನಮ್ಮ ಮದುವೆಯಾಗಿ ಹನ್ನೆರಡು ವರ್ಷ ಆಯಿತಾದರೂ ಗಂಡನೊಂದಿಗೆ ಒಂದುಗೂಡಿಲ್ಲ. ಈ ಮಗು ತುರುಕರಿಗೆ ಹುಟ್ಟಿದೆಯೊ? ತುಂಟರಿಗೆ ಹುಟ್ಟಿದೆಯೊ? ಬೇಡರಿಗೆ ಹುಟ್ಟಿದೆಯೊ? ಕೊರಚರಿಗೆ ಹುಟ್ಟಿದೆಯೊ? ಎಂದು ಜನತೆ ಮೂದಲಿಸುತ್ತಿದ್ದರು. ತದನಂತರ ಚಿನ್ನಮ್ಮನಿಗೆ ಮಾರಣ್ಣ, ಮೈಲಣ್ಣ, ಮಾರಕ್ಕ ಈ ಮೂವರು ಜನನವಾಗುತ್ತಾರೆ. ತರುವಾಯ ಜುಂಜಪ್ಪ ತನ್ನ ತಾಯಿಯ ಪತಿವ್ರತೆಯನ್ನು ಅನೇಕ ವಿಧಾನಗಳ ಮುಖಾಂತರ ಪರೀಕ್ಷಿಸುತ್ತಾನೆ. ಈ ಜೀವನದ ಪರೀಕ್ಷೆಗಳಲ್ಲಿ ಚಿನ್ನಮ್ಮ ಯಶಸ್ವಿಯಾಗುತ್ತಾಳೆ. ಜುಂಜಪ್ಪನ ತಾಯಿಗೆ ಆವರಿಸಿದ್ದ ಕಷ್ಟಗಳೆಲ್ಲ ನಿವಾರಣೆಯಾಗುತ್ತವೆ. ಈಗ ಮತ್ತೆ ಸಂತೋಷದಾಯಕ ಜೀವನ ನಡೆಸಲು ಚಿನ್ನಮ್ಮ ಮುಂದಾದಳು.

ಜುಂಜಪ್ಪನ ಕಾರ್ಯಪ್ರವೃತ್ತಿಗಳನ್ನು ಅರ್ಥಮಾಡಿಕೊಳ್ಳಲು ಚೇಳೂರು ರಂಗಣ್ಣನನ್ನು ಸೋಲಿಸಿದ ಪ್ರಸಂಗ ಗಮನ ಸೆಳೆಯುತ್ತದೆ. ರಂಗಣ್ಣನ ಕಾವಲು ಹುಲ್ಲುಗಾವಲಿನಿಂದ ಸಮೃದ್ಧವಾಗಿ ಬೆಳೆದಿತ್ತು. ಅದನ್ನು ಮುಚ್ಚಲೋರ ನಾಯಕರು ಕಾವಲು ಕಾಯುತ್ತಿದ್ದರು. ಆ ಸಂದರ್ಭದಲ್ಲಿ ಜುಂಜಪ್ಪ ದನಗಳಿಗೆ ಬಂದಿದ್ದ ಕಾಯಿಲೆಯನ್ನು ವಾಸಿಮಾಡಲು ಗಿಡಮೂಲಿಕೆಗೆ ಕಾವಲಿನತ್ತ ದಾವಿಸಿದ. ನಾಯಕ ಹುಡುಗರನ್ನು ಮನವೊಲಿಸಿ ಕಾವಲಿನೊಳಕ್ಕೆ ಹೋಗಿ ಗಿಡಮೂಲಿಕೆ ತೆಗೆದುಕೊಂಡು ಕಾವಲು ಹುಡುಗರನ್ನು ತನ್ನತ್ತ ಮನಸೆಳೆದ. ಮಾರಣ್ಣ ಮತ್ತು ಮೈಲಣ್ಣ ದನಗಳನ್ನು ಹೊಡೆದುಕೊಂಡು ಹೋಗತೊಡಗಿದರು. ಜುಂಜಪ್ಪನಿಗೆ ಕೇಡುನಿದ್ರೆ ಬಂದು ಎಲ್ಲವನ್ನು ಮರೆತ. ದನಗಳು ರಂಗಣ್ಣನ ಕಾವಲಿನಿತ್ತ ಬರತೊಡಗಿದವು. ದನಗಳು ರಂಗಣ್ಣನ ಕಾವಲಿಗೆ ಹೋಗದಂತೆ ತಡೆಯತೊಡಗಿದರು. ಕಾರಣ, ಅವನು ಭಯಂಕರ ಶಿಕ್ಷೆ ಕೊಡುತ್ತಾನೆ ಎಂಬ ನಂಬಿಕೆ. ಆದರೂ, ದನಗಳು ಕಾವಲಿಗೆ ನುಗ್ಗಿ ಸಮೃದ್ಧವಾಗಿ ಬೆಳೆದಿದ್ದ ಹುಲ್ಲನ್ನು ತಿಂದು ಕಾಲ ಕಳೆಯತೊಡಗಿದವು. ರಂಗಣ್ಣನಿಗೆ ಈ ವಿಷಯ ತಿಳಿಯಲೇ ಇಲ್ಲ. ಕೊನೆಗೆ ಜುಂಜಪ್ಪನ ಸೋದರಮಾವಂದಿರು ಬಹುದಿನಗಳ ಹಿಂದೆ ರಂಗಣ್ಣನಿಗೆ ಸಾಲ ಕೊಟ್ಟಿದ್ದರು. ಅದು ಮರಪಾವತಿಯಾಗಲೇ ಇಲ್ಲ. ದಾರಿಯಲ್ಲಿ ಬರುವಾಗ ಚೇಳೂರು ರಂಗಣ್ಣನ ಕಾವಲಿನಲ್ಲಿ ಜುಂಜಪ್ಪನ ದನಗಳು ಮೇಯುತ್ತಿದ್ದುದನ್ನು ಕಂಡು ಇವು ಜುಂಜಪ್ಪನಿಗೆ ಸೇರಿದ ದನಗಳೆಂದು ರಂಗಣ್ಣನಿಗೆ ವಿಷಯ ಮುಟ್ಟಿಸಿದರು. ದನಗಳನ್ನು ಕೊಲ್ಲುವುದಾದರೆ ತಾವು ಏನು ಬೇಕಾದರೂ ಸಹಾಯ

ಮಾಡಲು ಸಿದ್ಧವಿರುವುದಾಗಿ ತಿಳಿಸಿದಾಗ, ರಂಗಣ್ಣ ತಯಾರಾಗಿ ದನಗಳ ಮೇಲೆ ಒಂದೆ ಸಮನೆ ಗುಂಡಿನ ಸುರಿಮಳೆಗೈದ. ಆದರೆ ದನಗಳಿಗೆ ಯಾವ ಅಪಾಯವು ಇಲ್ಲದಂತೆ ಮೇಯತೊಡಗಿದವು. ಇದಕ್ಕೆ ವ್ಯತಿರಿಕ್ತವಾಗಿ ರಂಗಣ್ಣನಿಗೆ ನಿನ್ನ ದಂಡು ದನಗಳ ಮೇಲೆ ಆಕ್ರಮಣ ಮಾಡಿದ್ದಾಯಿತು. ಈಗ ನನ್ನ ದನಗಳಿಗೆ ಅವಕಾಶ ಕೊಡಿ ಎಂದು ಕೇಳಿದಾಗ ಅದಕ್ಕೆ ಒಪ್ಪಿದ ರಂಗಣ್ಣ, ಕ್ಷಣಾರ್ಧದಲ್ಲಿ ದನಗಳು ರಂಗಣ್ಣನ ದಂಡಿನ ಮೇಲೆ ನೆಗೆದು ಸಿಗಿದುಹಾಕಿದವು.[೧೮೨]

ಜುಂಜಪ್ಪನಿಗೆ ಆವರಿಸಿದ್ದ ಮೂರು ತಿಂಗಳ ನಿದ್ರೆ ದೂರವಾಯಿತು. ಈ ವೇಳೆಗಾಗಲೆ ಮಾರಣ್ಣ ಮತ್ತು ಮೈಲಣ್ಣರನ್ನು ಗೌರಸಂದ್ರದ ಮಾರಕ್ಕ ಸಂರಕ್ಷಿಸಿದಳು. ಈ ವೇಳೆಗೆ ಚೇಳೂರು ರಂಗಣ್ಣ ಜುಂಜಪ್ಪನನ್ನು ಜೂಜಾಡಲು ಆಹ್ವಾನಿಸಿದ. ಕೆಲವು ಷರತ್ತುಗಳೊಂದಿಗೆ ಜುಂಜಪ್ಪ ಜೂಜಾಡಲು ಒಪ್ಪಿಕೊಂಡ. ಜೂಜಿನಲ್ಲಿ ಚೇಳೂರ ರಂಗಣ್ಣ ಸೋತುಹೋದ. ಜುಂಜಪ್ಪನ ಮಾವಂದಿರಿಗೂ ಅವಮಾನವಾಯಿತು. ಆದರೆ ಜುಂಜಪ್ಪನ ಮಾವಂದಿರು ಚಿನ್ನಮ್ಮನಿಗೆ ಜೂಜಿನಲ್ಲಿ ಜುಂಜಪ್ಪ ಸೋತಿದ್ದರಿಂದ ಮಾರಣ್ಣ, ಮೈಲಣ್ಣ ಮತ್ತು ಜುಂಜಪ್ಪನನ್ನು ಸಿಗಿದು ಹೆಬ್ಬಾಲಿಗೆ ತೋರಣ ಕಟ್ಟಿದ್ದಾನೆ ಎಂದು ಸುದ್ದಿ ತಿಳಿಸಿದರು. ಸತ್ಯ ಎಂದು ನಂಬಿದ ಚೆನ್ನಮ್ಮ ಕೊಂಡದಲ್ಲಿ ಬೀಳಲು ಮುಂದಾದಳು. ಆದರೆ ಈ ವಿಷಯದ ಬಗ್ಗೆ ಮಾದಿಗರ ಹರಳಯ್ಯನಿಂದ ನಿಜ ಸುದ್ದಿ ತಿಳಿದಮೇಲೆ ಮರುಜೀವ ಬಂದಂತಾಯಿತು. ಮಾವಂದಿರು ಸೋತು ಸುಣ್ಣವಾದರು. ರಂಗಣ್ಣನು ಕೂಡ ನೆಲ ಕಚ್ಚಿದ. ಈ ರೀತಿಯ ಕಾರ್ಯತಂತ್ರಗಳಿಂದ, ಪವಾಡಗಳಿಂದ ಅಂದಿನ ಪ್ರಬಲ ಶಕ್ತಿಗಳನ್ನು, ದಬ್ಬಾಳಿಕೆ ಪ್ರವೃತ್ತಿಯನ್ನು ಬಹಳ ಜಾಣತನದಿಂದ ಎದುರಿಸಿ ಅವುಗಳನ್ನು ನಿರ್ನಾಮ ಮಾಡಲು ಯತ್ನಿಸಿ ಯಶಸ್ವಿಯಾಗುತ್ತಾನೆ. ಕಾವ್ಯದುದ್ದಕ್ಕೂ ಈ ರೀತಿಯ ವಿವರಗಳನ್ನು ಅಪೇಕ್ಷಿಸಬಹುದಾಗಿದೆ. ಈ ಹಿನ್ನೆಲೆಯಲ್ಲಿ ಅಂದಿನ ಸಮಾಜದ ಎಲ್ಲ ರೀತಿಯ ಸಾಂಸ್ಕೃತಿಕ ವೈರುಧ್ಯಗಳನ್ನು ಗುರುತಿಸಲು ಸಹಾಯಕವಾಗುತ್ತದೆ.

### ೩.೮.೫. ಮೈಲಾರಲಿಂಗ

ದಕ್ಷಿಣ ಕರ್ನಾಟಕದ ಪ್ರಮುಖ ಬುಡಕಟ್ಟು ಕಾವ್ಯಗಳಲ್ಲಿ ಮೈಲಾರಲಿಂಗನ ಕಾವ್ಯ ಒಂದಾಗಿದೆ. 'ಗೊರವ ಸಂಪ್ರದಾಯವೆಂದು ಕರೆಯಲ್ಪಡುವ ಮೈಲಾರಲಿಂಗನ ಸಂಪ್ರದಾಯಕ್ಕೆ ಸೇರಿದವರು ಕರ್ನಾಟಕದಾದ್ಯಂತ ಏಕರೂಪಿ ಧಾರ್ಮಿಕ ಸ್ಥಾನಮಾನ ಹೊಂದಿದ್ದರೂ, ಉತ್ತರ ಮತ್ತು ದಕ್ಷಿಣ ಕರ್ನಾಟಕಕ್ಕೆ ಹೋಲಿಸಿದರೆ ಅಲ್ಪಸ್ವಲ್ಪ ಬದಲಾವಣೆಗಳನ್ನು ಕಾಣಬಹುದು. ದಕ್ಷಿಣ ಭಾರತದಲ್ಲಿ ಮೈಲಾರನಿಗೆ ಸಂಬಂಧಿಸಿದ ಕ್ಷೇತ್ರಗಳು ಬಹಳಷ್ಟಿವೆ. ಮೈಲಾರಲಿಂಗನ ಕ್ಷೇತ್ರಗಳು ಕರ್ನಾಟಕದ ರಾಯಚೂರು ಜಿಲ್ಲೆಯ ಆನೆಗೊಂದಿ, ಬೆಳಗಾವಿಯ ಕಾರಿಮನಿ, ಶಿವಮೊಗ್ಗದ ಕುಬಟೂರು, ಧಾರವಾಡದ ದೇವರಗುಡ್ಡ ಮತ್ತು ಮೇಲಾರ ದೇವರಗುಡ್ಡ, ಬೀದರ್ ಜಿಲ್ಲೆಯ ಮೈಲಾರಪುರ, ಬಳ್ಳಾರಿಯ ಮಣ್ಣೆ ಮೈಲಾರ, ಬೆಳಗಾಂನ ಮಂಗಸೂಳಿ, ಮಂಡ್ಯದ ನಾಗಮಂಗಲ ತಾಲೂಕಿನ ಮೈಲಾರಪಟ್ಟಣ ಮುಖ್ಯವಾಗಿವೆ. ಜೀ.ಶಂ.ಪ. ಅವರ ಪ್ರಕಾರ ದೇವರಗುಡ್ಡ ಕ್ಷೇತ್ರವೇ ಈ ನೆಲೆಗಳಲ್ಲಿ ಮುಖ್ಯವಾದವು. ಆದ್ದರಿಂದ ಇದನ್ನು 'ಹಿರಿಯ ಮೈಲಾರ' ಎಂದು ಕರೆಯಲಾಗುತ್ತಿದೆ.[೧೮೩]

ಮೈಲಾರನನ್ನು ಕುರಿತು ಲಿಖಿತ ದಾಖಿಲೆಗಳಲ್ಲಿ ಅನೇಕ ಕುರುಹುಗಳು ಸಿಗುತ್ತವೆ. ಹರಿಹರನ ಶಂಕರ ದಾಸಿಮಯ್ಯನ ರಗಳೆಯಲ್ಲಿ ಮೈಳೆಯ, ಬಸವಣ್ಣನವರ ವಚನದಲ್ಲಿ ಮೈಲುಗ ಎಂಬ ರೂಪಗಳು ಸಿಗುತ್ತವೆ. ಮೈಲಾರನಿಗೆ *ಮೈಲರಿ, ಮೈಲಾರಿ, ಮಲ್ಹಾರಿ, ಮಲ್ಲಯ್ಯ, ಮಾರ್ತಂಡ, ಮಾಲತೇಶ, ಖಂಡೋಬಾ* ಹೆಸರುಗಳೊಂದಿಗೆ ಮಾರ್ತಾಂಡ ಭೈರವ ಎಂಬ ಸಂಯುಕ್ತ ಹೆಸರು ಕೂಡ ಬಳಕೆಯಲ್ಲಿದೆ. ಮೈಲಾರನ ಹೆಂಡತಿ ಮಾಳಚಿ. ಮೈಲಾರನ ಪ್ರಥಮ ಉಲ್ಲೇಖ ನಮಗೆ ಸಿಗುವುದು ಕ್ರಿ.ಶ. ೧೧೧೨ರ ನಯಸೇನನ ಧರ್ಮಾಮೃತ ಕೃತಿಯಲ್ಲಿ[೧೮೪] ಮೈಲಾರಲಿಂಗನ ಭಕ್ತರನ್ನು ಗೊರವರೆಂದು ಕರೆಯಲಾಗುತ್ತಿದೆ. ಕ್ರಿ.ಶ. ೧೦ನೇ ಶತಮಾನಕ್ಕೆ ಮುಂಚಿನಿಂದಲೂ ಮೈಲಾರ ಕ್ಷೇತ್ರ ಪ್ರಸಿದ್ಧವಾಗಿದ್ದು, ಬಹುಶಃ ಗೊರವರಿಗೆ ಒಂದು ಸಾವಿರ ವರ್ಷದ ಇತಿಹಾಸವಿದೆ ಎನ್ನುವುದು ಜೀ.ಶಂ. ಪರಮಶಿವಯ್ಯ ಅವರ ಅಭಿಪ್ರಾಯ. ಗೊರವ ಶಬ್ದಕ್ಕೆ ಕಿಟಲ್ ಅವರ ಅರ್ಥಕೋಶದಲ್ಲಿ (ಎ ಕ್ಲಾಸ್ ಆಫ್ ಶೈವ ಬೆಗ್ಗರ್ಸ್) ಎಂದಷ್ಟೇ ಕೊಡಲಾಗಿದೆ. ಗುರು ಶಬ್ದವೇ ಇದಕ್ಕೆ ಮೂಲವಾಗಿರಬೇಕು. ಗೊಗ್ಗ ಎಂಬ ಶಬ್ದಕ್ಕೆ ಮೈಲಾರಲಿಂಗನ ಹಿಂಬಾಲಕರು ಎಂಬ ವಿವರಣೆಯನ್ನು ಕಿಟಲ್ ಕೋಶ ಕೊಡುತ್ತದೆ. ಮಕ್ಕಳನ್ನು ಹೆದರಿಸಲು ಈಗಲೂ 'ಗೊಗ್ಗ', ಗೊಗ್ಗಯ್ಯ ಶಬ್ದಗಳನ್ನು ಬಳಸಲಾಗುತ್ತದೆ. ಉಗ್ಗು ಅಥವಾ 'ಗುಕ್ಕು' ಎಂದರೆ ಸ್ಪಷ್ಟ ಧ್ವನಿಮಾಡು ಎಂದರ್ಥದ ಪದಗಳಿಂದ ಈ ರೂಪ ಉಂಟಾಗಿರಬಹುದೆಂದು ಎಂದು ಶ್ರೀನಿವಾಸ ರಿತ್ತಿಯವರು ಅಭಿಪ್ರಾಯಪಡುತ್ತಾರೆ. ಅವರು ಹೇಳುವಂತೆ 'ಗೊರವ' ಶಬ್ದವೇ ಗೊಗ್ಗಯ್ಯ ಆಗಿರುವ ಸಂದರ್ಭವು ಇರಬಹುದೆಂದು ಊಹಿಸಿದ್ದಾರೆ.

ದೇವರಗುಡ್ಡರಂತೆ, ನೀಲಗಾರರಂತೆ ಮೈಲಾರಲಿಂಗನ ಸಂಪ್ರದಾಯ ಗೊರವರಿಗೆ ದೀಕ್ಷೆ ಕೊಡುವುದು, ಹಾಲು ಮತದವರೇ ಇರುವ ಈ ಸಂಪ್ರದಾಯದಲ್ಲಿ ಹರಿಜನರು ಇತರ ಮತದವರು ವಿರಳವಾಗಿ ಕಂಡುಬರುತ್ತಾರೆ. ಕತೆಯ ಪ್ರಕಾರ ಮೈಲಾರಲಿಂಗನ ಘಟನೆಗಳು ಈ ರೀತಿಯಾಗಿ ಬಿಚ್ಚಿಕೊಳ್ಳುತ್ತವೆ. ತುಪ್ಪದ ಮಾಳಮ್ಮ ಸಿರಿವಂತರ ಮನೆಯ ಹೆಣ್ಣುಮಗಳು, ತನ್ನ ಐದು ಮಂದಿ ಅಣ್ಣಂದಿರಿಗೆ ಬುತ್ತಿಯನ್ನು ಹೊತ್ತು ತರುವಾಗ, ಏಳು ಸಿರಸಿನ ಸರ್ಪ ಅವಳ ಸಿಂಬಿ. ಆ ಸಂದರ್ಭದಲ್ಲಿ ಮೈಲಾರಲಿಂಗ ಗಂಗೆಮಾಳಿಯೊಡನೆ ತನಗೊಂದು ಮದುವೆಯಾಗಿದೆ, ತನ್ನ ಲಿಂಗಕ್ಕೊಂದು ಮದುವೆಯಾಗಬೇಕೆಂದು ತುಪ್ಪದ ಮಾಳಮ್ಮನನ್ನು ತಡೆದನು. ಅವಳು ತನ್ನ ಅಣ್ಣಂದಿರನ್ನು ಕೂಗಿಕೊಂಡಾಗ *ಸಿಕ್ಕಿಸಿದ್ದ, ದೊಡ್ಡಸಿದ್ದ, ಬೀರಜ್ಜ, ಕರಿಯಾಲ, ಕೆಂದಾಲ* ಅವಳತ್ತ ಧಾವಿಸಿದರು. ತುಪ್ಪದ ಮಾಳಮ್ಮ ಮತ್ತು ಅಣ್ಣಂದಿರು ಮೈಲಾರಲಿಂಗನೊಂದಿಗೆ ಮಾತಿನ ಚಕಮಕಿ ನಡೆಸಿದರು. ಇದ್ಯಾವುದಕ್ಕೂ ಮೈಲಾರಲಿಂಗ ಜಗ್ಗಲಿಲ್ಲ.[೧೮೫] ತನ್ನ ಪವಾಡಗಳಿಂದ ತೊಂದರೆಗಳನ್ನು ದೂರ ಮಾಡಲು ಯತ್ನಿಸಿದ ಏನಯ್ಯ ಕೆಟ್ಟಗೊರವ, ಹುಚ್ಚಗೊರವ, ನಾಯಿಗಳು ಬರುತ್ತಿವೆ, ಒಂದೆ ಪೆಟ್ಟಿಗೆ ಸಿಗಿದು ತಿಂದುಬಿಡುತ್ತವೆ. ಮಾಯವಾಗಿ ಗಿಡದ ಮಗ್ಗಿಲಿಗೆ ಹೋಗು ಎಂದಳು. ಆಗ ಮೈಲಾರಲಿಂಗ ನಿಮ್ಮ ಅಣ್ಣನ ನಾಯಿಗಳು ಏನು ಮಾಡಲಾರವು ಎಂದು ಪ್ರತಿಕ್ರಿಯಿಸಿದ. ಮಾಳಮ್ಮನ ಅಣ್ಣಂದಿರು ಓಡಿಬಂದು ದೊಣ್ಣೇಲಿ ಒಂದೊಂದು ಪೆಟ್ಟುಹಾಕಿದರು. ಗೊರವನ ಮೈಮೇಲೆ ಪೆಟ್ಟುಬೀಳದೆ ಮಾಳಮ್ಮನ ಮೈಮೇಲೆ ರೆಟ್ಟೆ ಬಾಸುಂಡೆ ಮೂಡಿದವು. ಆತನನ್ನು ಹೊಡಿಬ್ಯಾಡಿ, ಏಟು ನನ ಮೈಮೇಲೆ ಬೀಳ್ತಾ ಇದೆ ಎಂದಳು. ನೀನು ಯಾಕೆ ಬಂದೆ ಎಂದು ಅಣ್ಣಂದಿರು

ಕೇಳಿದಾಗ ನಿಮ್ಮ ತಂಗಿ ತುಪ್ಪದ ಮಾಳಮ್ಮನನ್ನು ಮದುವೆ ಆಗಾಕೆ ಬಂದಿದ್ದೀನಿ ಎಂದ ಗೊರವ. ಅಷ್ಟು ಶಕ್ತಿ ನಿನಗಿದೆಯೇ ಎಂದು ಮಾಳಮ್ಮನ ಅಣ್ಣಂದಿರು ಕೇಳಿದರು. ಈ ರೀತಿಯ ಷರತ್ತುಗಳನ್ನು ಮೈಲಾರಲಿಂಗನ ಮೇಲೆ ಹಾಕಿದರು. ಅದಕ್ಕೆ ಗೊರವಯ್ಯ ಒಪ್ಪಿಕೊಂಡ.[೧೪೬]

ತುಪ್ಪದ ಮಾಳಮ್ಮನನ್ನು ಲಗ್ನವಾಗುವುದರಲ್ಲಿ ಮೈಲಾರಲಿಂಗ ತನ್ನ ಮಹಿಮೆಯನ್ನು ಎರೆದ ಪ್ರಸಂಗವೇ ವರ್ಣಿತವಾಗಿದೆ. ತಮ್ಮ ಆದಿದೈವದ ಮಹಿಮಾ ವಿಶೇಷಗಳನ್ನು ಸ್ಥಾಪಿಸುವ ಸನ್ನಿವೇಶಗಳು ಕಾವ್ಯದಲ್ಲಿ ಕಾಣಿಸಿಕೊಳ್ಳುತ್ತವೆ. ಮೈಲಾರನ ಚರಿತ್ರೆಯು ಹೆಚ್ಚಾಗಿ ಶೈವ ಪರಂಪರೆಯೊಳಗೆ ಸೇರಿಕೊಂಡಿರುವುದು ಮೇಲಿನ ಸಾರಾಂಶದಿಂದ ಸ್ಪಷ್ಟವಾಗುತ್ತದೆ. ಮೈಲಾರ ಶೈವ ಸಂಪ್ರದಾಯದ ದೇವತೆಯಾಗಿ ಮಾರ್ಪಾಡಾದ ನಂತರ ಮೈಲಾರ ಮಹಾತ್ಮೆ ವೈದಿಕ ಚೌಕಟ್ಟಿನೊಳಗೆ ಬೆಳೆಯಲಾರಂಭಿಸಿತು. ಶಿವನು ದೈತ್ಯರನ್ನು ಸಂಹಾರ ಮಾಡುವುದಕ್ಕೋಸ್ಕರ ಮೈಲಾರನ ರೂಪ ತೊಟ್ಟು ಬಂದು, ಬ್ರಾಹ್ಮಣ ಸಂಸ್ಕೃತಿಯನ್ನು ಎತ್ತಿಹಿಡಿದ ಎನ್ನುವ ವ್ಯಾಖ್ಯಾನಗಳು ಕಾಣಿಸಿಕೊಂಡವು. ಹದಿಮೂರನೇ ಶತಮಾನದ ನಂತರ ಮೈಲಾರದೇವತೆಯ ಬ್ರಾಹ್ಮಣ, ಲಿಂಗಾಯತ, ಜೈನ ಹಾಗೂ ಇತರೆ ಕೃಷಿ ಸಮಾಜಗಳ ಕುಲದೇವತೆಯಾಗಿ ಮಾರ್ಪಾಡಾಗಿರುವುದು ಕಂಡುಬರುತ್ತದೆ.[೧೪೭]

ಮಧ್ಯಕಾಲೀನ ಕರ್ನಾಟಕದ ಸಂದರ್ಭದಲ್ಲಿ ಬಹುತೇಕ ಬುಡಕಟ್ಟು ಕಾವ್ಯಗಳು ಹುಟ್ಟಿನೊಂದಿಗೆ ಅಂದಿನ ಸಾಂಸ್ಕೃತಿಕ ವೈರುಧ್ಯಗಳನ್ನು ಅರ್ಥಮಾಡಿಕೊಳ್ಳಲು ಸಹಾಯಕವಾಗುತ್ತದೆ. ಕೇವಲ ಅವುಗಳು ಕೆಲವೆ ಸಮುದಾಯಗಳಿಗೆ ಸೀಮಿತವಾಗದೆ ಸಮಾಜದ ಒಟ್ಟು ಸಾಂಸ್ಕೃತಿಕ ಚಿತ್ರಣ ಗ್ರಹಿಸಲು ಅನುವು ಮಾಡಿಕೊಡುತ್ತವೆ. ಮೈಲಾರಲಿಂಗನ ಕಾವ್ಯವು ಸಹ ಇದಕ್ಕೆ ಹೊರತಾಗಿಲ್ಲ. ಆ ಸಮಯದಲ್ಲಿ ಇತರೆ ಕೆಲವು ದೇವತೆಗಳೊಂದಿಗೆ ಹಾಗೂ ಪಂಥಗಳೊಂದಿಗೆ ಸಂಬಂಧ ಹೊಂದಿರುವ ಸಾಧ್ಯತೆಗಳು ಹೆಚ್ಚಾಗಿವೆ ಎಂದು ರಾಜಾರಾಮ ಹೆಗಡೆ ಅಭಿಪ್ರಾಯಪಡುತ್ತಾರೆ. ಮುಖ್ಯವಾಗಿ ಮೈಲಾರ ದೇವತೆಯ ಸಂಬಂಧಿಸಿ ಗೊರವ ಸಂಪ್ರದಾಯ ಇನ್ನೂ ಮುಂದುವರೆದುಕೊಂಡು ಬಂದಿದೆ. ಮೈಲಾರ ಮಲ್ಲಣ್ಣ ಮಲ್ಲಿಕಾರ್ಜುನ ದೇವತೆಗಳಿಗೆ ಸಂಬಂಧವಿದ್ದ ಹಾಗೆ ಗೊರವರಿಗೂ ಕಾಳಾಮುಖರಿಗೂ ಸಂಬಂಧ ಇರಬಹುದು. ಕಾಳಾಮುಖರನ್ನು ಗೊರವರೆಂದು ಕರೆದ ಉದಾಹರಣೆಗಳಿವೆ ಎಂದು ಹೇಳುತ್ತಾರೆ. ಅದೇ ರೀತಿಯಾಗಿ ಚಿದಾನಂದಮೂರ್ತಿಯವರು ಕಾಳಾಮುಖರು ಗೊರವ ಸಂಪ್ರದಾಯದ ಹಿನ್ನೆಲೆ ಹೊಂದಿರಬಹುದೆಂದು ತರ್ಕಿಸುತ್ತಾರೆ.[೧೪೮] ಈ ಕಾವ್ಯವನ್ನು ಹೆಚ್ಚಾಗಿ 'ಗೊರವರು' ಹೇಳುತ್ತಾರೆ. ಗೊರವ ಶಬ್ದಕ್ಕೆ ಮೂಲ 'ಗುರು' ಎಂಬುದಾಗಿ ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಉತ್ತರ ಕರ್ನಾಟಕದಲ್ಲಿ ಗ್ವಾರಪ್ಪ, ವಗ್ಗಯ್ಯ, ವಾಗ್ಯಾ ಎಂದೆಲ್ಲಾ ಕರೆಸಿಕೊಳ್ಳುವ ಗೊರವರನ್ನು ದಕ್ಷಿಣ ಕರ್ನಾಟಕದಲ್ಲಿ ಗೊರವ, ಗೊಗ್ಗಯ್ಯ, ಗಡಬಡಯ್ಯ ಎಂದು ಕರೆಯುತ್ತಾರೆ.[೧೪೯]

ಕುರುಬರು, ಗೊಲ್ಲರು, ಒಕ್ಕಲಿಗರು, ಬೇಡರು, ಬೆಸ್ತರು (ಅಂಬಿಗರು), ಮಡಿವಾಳರು, ಲಂಬಾಣಿ, ಹೊಲೆಯ-ಮಾದಿಗರು, ಲಿಂಗಾಯತ, ಮುಸ್ಲಿಂ, ಬ್ರಾಹ್ಮಣರಾದಿಯಾಗಿ ಮೈಲಾರನಿಗೆ ನಡೆದುಕೊಳ್ಳುತ್ತಾರೆ. ಈ ಕಾರಣಕ್ಕಾಗಿ ಮೈಲಾರ ಸೆಕ್ಯೂಲರ್ ಆದಂತಹ ದೇವರು. ಮೈಲಾರ ಯಾವುದೇ ವರ್ಗದ ದೈವರಾದರೂ ಆತ ಮೂಲದಲ್ಲಿ ಪ್ರಧಾನವಾಗಿ ವಲಸೆಗಾರ ಪಶುಪಾಲಕ ಕುರುಬರ ಇಲ್ಲವೆ ಗೊಲ್ಲರ ಸಾಂಸ್ಕೃತಿಕ ವೀರನೇ

ಆಗಿದ್ದಾನೆ. ಮೈಲಾರನಿಗೆ ಹಲವು ವರ್ಗಗಳು ಒಕ್ಕಲಾಗಿರುವಂತೆ ಹೊಲೆಯ ಮಾದಿಗರು ಕೂಡ ಮೈಲಾರನ ಒಕ್ಕಲು ಹಾಗೂ ಕುರುಬರಾದಿಯಾಗಿ ಹಲವು ವರ್ಗಗಳಿಗೆ ಮನೆ ಮಕ್ಕಳಾಗುವ ಮೂಲಕ ಒಂದು ಸಾಮಾಜಿಕ, ಆರ್ಥಿಕ ಹಾಗೂ ಸಾಂಸ್ಕೃತಿಕ ಸಂಬಂಧಗಳನ್ನು ಇಂದಿಗೂ ಇಟ್ಟುಕೊಂಡಿದ್ದಾರೆ.[೧೯೦]

ಮಾದಿಗರ ಒಂದು ಗುಂಪಾದ 'ಕುಂಚಾವಾರ'ರಂತೂ ಇಡಿಯಾಗಿ ಮೈಲಾರನಿಗೆ ತಮ್ಮನ್ನು ಅರ್ಪಿಸಿಕೊಂಡಿರುವಂತೆ ಕಾಣಿಸುತ್ತಾರೆ. ಈ ವರ್ಗ ಎಂತಹ ಕಟ್ಟು ನಿಟ್ಟಿನಲ್ಲಿದೆ ಎಂದರೆ ಇವರಲ್ಲಿ ಗೋಮಾಂಸ, ಮದ್ಯಪಾನವಿಲ್ಲ. ಮಡಿ ಮೈಲಿಗೆ ಕಟ್ಟುನಿಟ್ಟು. ತಮ್ಮ ಕ್ಷೇತ್ರದಲ್ಲಿಯೇ ಹೆಣ್ಣು ತರುವುದು ಕೊಡುವುದು. ಆ ಕ್ಷೇತ್ರ ಬಿಟ್ಟು ಹೊರಗಡೆಯಿಂದ ತಂದರೆ ಒಡೆಯರಲ್ಲಿ ಶುದ್ಧೀಕರಣಗೊಳಿಸಬೇಕು. ಅಂದು ಆ ಹೆಣ್ಣು ಉಪವಾಸವಿದ್ದು ಸ್ನಾನ ಮಾಡಿ ಮಡಿಯಿಂದ ದೇವಸ್ಥಾನಕ್ಕೆ ಹೋಗಬೇಕಾಗುತ್ತದೆ. ಅವಳ ಬಾಯಲ್ಲಿ ಅಭಿಷೇಕ, ತೀರ್ಥ ಮತ್ತು ಭಂಡಾರ ಹಾಕಿ ನಾಲಿಗೆಯನ್ನು ಊದಿನ ಕಡ್ಡಿಯಿಂದ ಸುಡುವ ಮೂಲಕ ಕುಲ ಶುದ್ಧಿಗೊಳಿಸುತ್ತಾರೆ. ಇದು ಕಂಚಾವೀರರ ಜೀವನ ಕ್ರಮವಷ್ಟೇ. ಇದು ಸಹಜವಾಗಿ ಸುತ್ತಲಿನ ಸಾಮಾಜಿಕ ಸಂಬಂಧಗಳ ಪ್ರಭಾವದಿಂದ ಆಗಿರುವ ಸಾಧ್ಯತೆಯಿದೆ. ಇದು ಮೈಲಾರನ ಪ್ರಭಾವವೋ ಇಲ್ಲವೆ ಅರ್ಚಕರಾದ ಒಡೆಯರ ಪ್ರಭಾವವೋ, ಬ್ರಾಹ್ಮಣರ ಪ್ರಭಾವವೋ ಆಗಿರುವ ಸಾಧ್ಯತೆಯುಂಟು. ಬಹುಶಃ ಮೈಲಾರ ತನ್ನ ಆಡಳಿತಕ್ಕೆ ಬೆಂಗಾವಲಾಗಿ ಈ ವರ್ಗವನ್ನು ಇಟ್ಟುಕೊಂಡಿರುವ ಸಾಧ್ಯತೆಗಳುಂಟು. ಮುಸಲ್ಮಾನರರು ಮೈಲಾರನನ್ನು *ಮುಲ್ಲುಖಾನ್*, *ಅಜಮತಖಾನ್* ಎಂದೆ ಪೂಜಿಸುವುದುಂಟು.[೧೯೧]

ಮೈಲಾರನಿಗೆ ಸಂಬಂಧಿಸಿದ ಮೂರು ಮದುವೆಗಳು, ಚರಿತ್ರೆಯ ವಿವಿಧ ಘಟ್ಟಗಳಲ್ಲಿ ಭಿನ್ನ ಸಮುದಾಯಗಳೊಂದಿಗೆ ಸಂಘರ್ಷ ಮತ್ತು ಸಮನ್ವಯ. ದಲಿತ ವರ್ಗ, ಕುರುಬವರ್ಗ ಮತ್ತು ವರ್ತಕ ವರ್ಗದೊಂದಿಗೆ ಸಮೀಕೃತವಾಗಿದೆ.

ಗೋಣಿಬಸವ : ಹದಿನೈದು ಮತ್ತು ಹದಿನಾರನೇ ಶತಮಾನಗಳ ಮಧ್ಯಕರ್ನಾಟಕ ಭಾಗದಲ್ಲಿ ವಚನ ಚಳುವಳಿಯ ಮುಂದುವರಿದ ಒಂದು ಭಾಗವಾಗಿ ಜನಸಮುದಾಯಗಳ ಸಂಕರ ಮತ್ತು ಆರಾಧನೆಯಿಂದ ಜನಪದ ದೈವಗಳ ರೂಪದಲ್ಲಿ ಸಾಂಸ್ಕೃತಿಕ ವೀರರು ಕಂಡುಬರುತ್ತಾರೆ. ಅಂತಹ ಸಾಂಸ್ಕೃತಿಕ ವೀರರಲ್ಲಿ ನಾಯಕನಹಟ್ಟಿ ತಿಪ್ಪೇಸ್ವಾಮಿ, ಕೊಟ್ಟೂರು ಗುರುಬಸವ, ಕೂಲಹಳ್ಳಿ ಮದ್ದಾನೇಶ ಹಾಗೂ ಮರುಳಸಿದ್ಧ. ಐದು ಮಂದಿ ಶರಣರಲ್ಲಿ ಒಬ್ಬನಾದ ಮದ್ದಾನೇಶ (ಇವನು ಮೂಲತಃ ಲಿಂಗಾಯಿತ) ಬೇಡರ ಕನಕಮ್ಮನನ್ನು ಮದುವೆಯಾಗುತ್ತಾನೆ. ಇವರಿಬ್ಬರಿಗೆ ಹುಟ್ಟಿದವನೇ ಗೋಣಿ ಬಸವ. ಅಸ್ಪೃಶ್ಯ ಬಾಲಬಸವ ಸಮುದಾಯದವರಾದ ಈ ಸಾಂಸ್ಕೃತಿಕ ನಾಯಕರನ್ನು ತಮ್ಮ ಪೂರ್ವಿಕರೆಂದು ಕರೆದುಕೊಂಡು ಅವನ ಜೀವನ ವಿವರಗಳನ್ನು ಕಟ್ಟಿ ಹಾಡುವುದರ ಮೂಲಕ ಒಂದು ಮೌಖಿಕ ಪರಂಪರೆಯನ್ನು ಬೆಳೆಸುತ್ತಾರೆ.[೧೯೨]

ಬಾಲಬಸವರು ಮೂಲತಃ ಮಾದಿಗ ಕುಲದವರು. ಬಸವಣ್ಣನ ದತ್ತು ಪುತ್ರರೆಂದು ಕರೆದುಕೊಳ್ಳುತ್ತಾರೆ. ಇವರು ಯಾವ ಕಾಲಘಟ್ಟದಲ್ಲಿ ವೀರಶೈವ ಧರ್ಮಕ್ಕೆ ಸೇರಿಕೊಂಡರು ಎಂಬುದು ತಿಳಿದು ಬಂದಿಲ್ಲ. ಕಲ್ಯಾಣ

ಕ್ರಾಂತಿಯ ನಂತರ ವೀರಶೈವರನ್ನು ಅನುಸರಿಸಿ ತಾನೇ ಲಿಂಗಧಾರಣೆಯನ್ನು ಮಾಡಿಕೊಂಡು ಮಾಂಸಾಹಾರವನ್ನು ತ್ಯಜಿಸಿ, ಮಾದಿಗರ ಮನೆಯಲ್ಲಿ ಉಣ್ಣುವುದನ್ನು ಬಿಟ್ಟು, ಹೆಣ್ಣನ್ನು ತಂದು ಅವಳನ್ನು ಮಾದಿಗ ಕುಲದಿಂದ ಪ್ರತ್ಯೇಕಗೊಳಿಸುವುದು. ಇವರು ವೃತ್ತಿಯಿಂದ ಕಾಲಜ್ಞಾನವನ್ನು ಸಾರುವ ಹಾಡುವ ಕುಲದವರು. ಈ ತರಹದ ಒಂದು ಜೀವನಕ್ರಮಕ್ಕೆ ಈಡಾದಾಗ ಸಹಜವಾಗಿ ಮಾದಿಗ ಸಮುದಾಯದಿಂದ ಪ್ರತ್ಯೇಕಗೊಂಡ ಅವರು ಗುರುಸ್ಥಾನದಲ್ಲಿದ್ದಾರೆ. ವೀರಶೈವರಾಗಿ ಪರಿವರ್ತನೆಗೊಂಡರೂ ಇವರಿಗೆ ವೀರಶೈವರ್‍ಯಾರೂ ಹೆಣ್ಣು ಕೊಟ್ಟು ಸಂಬಂಧ ಬೆಳಸುವುದಿಲ್ಲ. ಮಾದಿಗರ ಮನೆಯಿಂದ ಹೆಣ್ಣು ಪಡೆದು ಅವಳನ್ನು ವೀರಶೈವೀಕರಣಗೊಳಿಸಿಕೊಂಡು ಗಂಡು ಮಕ್ಕಳಿಗೆ ಮದುವೆ ಮಾಡಿಕೊಳ್ಳುತ್ತಾರೆ. ಆದರೆ ಇವರ ಹೆಣ್ಣು ಮಕ್ಕಳನ್ನು ಮಾದಿಗರ ಮದುವೆ ಮಾಡಿಕೊಂಡು ಮಾದಗೀಕರಣಗೊಳಿಸುವ ಅಗತ್ಯ ಬರಲಿಲ್ಲ. ಈ ಹಿನ್ನೆಲೆಯಲ್ಲಿ ಬಾಲಬಸಪ್ಪಗಳಿಗೆ ಹುಟ್ಟಿದ ಹೆಣ್ಣು ಸಂತಾನವೆಲ್ಲ ದೇವದಾಸಿಯರಾಗುವುದು ಒಂದು ಪದ್ಧತಿಯಂತೆ ಬೆಳೆದುಬಂದಿದೆ. ಇವರನ್ನು ಬಾಲಬಸವಿಯರೆಂದು ಕರೆಯುತ್ತಾರೆ. ಭಿಕ್ಷೆ ಬೇಡುವುದಕ್ಕೆ ಇವರು ಒಗ್ಗಿ ಹೋಗಿದ್ದಾರೆ. ಬಳ್ಳಾರಿ, ದಾವಣಗೆರೆ, ಹಾವೇರಿ, ಗದಗ, ಧಾರವಾಡ, ಶಿವಮೊಗ್ಗ, ಚಿತ್ರದುರ್ಗ ಜಿಲ್ಲೆಗಳಲ್ಲಿ ಹೆಚ್ಚಾಗಿ ವಾಸಿಸುತ್ತಿದ್ದಾರೆ.[೧೯] ಇವರ ಬಗ್ಗೆ ವೆಂಕಟೇಶ ಇಂದ್ವಾಡಿಯವರು ಹೆಚ್ಚಿನ ಸಂಶೋಧನೆ ನಡೆಸುತ್ತಿದ್ದಾರೆ.

## ೩.೯. ತುಳುನಾಡು

ಕರ್ನಾಟಕದ ಸಾಂಸ್ಕೃತಿಕ ಚರಿತ್ರೆಯನ್ನು ಗುರುತಿಸುವ ಸಂದರ್ಭದಲ್ಲಿ ತುಳುನಾಡಿಗೆ ವಿಶಿಷ್ಟ ಸ್ಥಾನವಿದೆ. ಈ ಪ್ರದೇಶದ ಜನತೆಯ ಚರಿತ್ರೆಯನ್ನು ಕಟ್ಟಿಕೊಡುವಲ್ಲಿ ಶಾಸನಗಳು ಸೇರಿದಂತೆ ಜನಪದ ಕಾವ್ಯಗಳು ಸಹ ಸಹಕಾರಿಯಾಗಿವೆ. ಐತಿಹಾಸಿಕವಾಗಿ ಈ ನಾಡನ್ನು ಕ್ರಿ.ಶ. ೭ನೇ ಶತಮಾನದಿಂದ ೧೮ನೇ ಶತಮಾನದವರೆಗೆ ವಿವಿಧ

ರಾಜವಂಶಗಳು ಆಳ್ವಿಕೆ ನಡೆಸಿವೆ. ಆಳುಪರು, ವಿಜಯನಗರದ ಅರಸರು, ಕೆಳದಿನಾಯಕರು, ಹೈದರಾಲಿ-ಟಿಪ್ಪು ಮತ್ತು ಐರೋಪ್ಯದ ಆಳ್ವಿಕೆಯಲ್ಲಿ ಈ ಪ್ರದೇಶ ಅಧೀನವಾಗಿತ್ತು. ಆಳುಪರು ಸುಮಾರು ಹದಿನಾಲ್ಕನೇ ಶತಮಾನದವರೆಗೆ ಆಳ್ವಿಕೆ ನಡೆಸಿದ್ದಾರೆ.[೯೯] ಮಂಗಳೂರು ಇವರ ರಾಜಧಾನಿಯಾಗಿತ್ತು. ಬಾರಕೂರು ಮತ್ತು ಮಂಗಳೂರು ರಾಜ್ಯ ಎಂದು ವಿಜಯನಗರ ಆಳ್ವಿಕೆಯ ಕಾಲವಲ್ಲಿ ವಿಂಗಡಿಸಿಕೊಳ್ಳಲಾಗಿತ್ತು. ಈ ಅವಧಿಯಲ್ಲಿ *ಕಳಸ, ಕಾರ್ಕಳ, ಚೌಟ, ಬಂಗ* ಮುಂತಾದ ಜೈನ ಅರಸರು ಆಳ್ವಿಕೆ ನಡೆಸಿದ್ದಾರೆ. ಈ ಪ್ರದೇಶದಲ್ಲಿ ಪ್ರಾಚೀನ ಕಾಲದಿಂದಲೂ ವಿಭಿನ್ನ ಭಾಷೆಗಳನ್ನಾಡುವ ಜನತೆಯಿರುವಂತೆ ಜಾತಿ, ಧರ್ಮ, ಪಂಗಡಗಳಿಗೆ ಸೇರಿದ ಜನತೆ ಕೂಡ ಕಂಡುಬರುತ್ತಾರೆ.

ತುಳುನಾಡಿನಲ್ಲಿ ಬೆಳೆದು ಬಂದಿರುವ ಜನಪದ ಸಾಹಿತ್ಯವನ್ನು ಪಾಡ್ದನ (*ಸಂಧಿ*), ಕಬಿತ (*ಹಾಡು*), ಉರಲ್ (*ಒಂದೆರಡು ಸಾಲಿನ ಚಮತ್ಕಾರದ ಉಕ್ತಿಗಳು*), ಗಾದೆಗಳು, ಒಗಟುಗಳು, ಐತಿಹ್ಯಗಳು ಪ್ರಾರ್ಥನೆಯ ಸೊಲ್ಲುಗಳು ಮುಂತಾದ ಪ್ರಕಾರಗಳಲ್ಲಿ ಕಾಣಬಹುದು. ಪಾಡ್ದನಗಳಿಗೆ 'ಪಳಮೆ' ಎಂಬ ಹೆಸರು ಕೂಡ ಇದೆ.

ಈ ಪಾಡ್ದನಗಳನ್ನು *ಪಂಬದ, ಪರವ, ನಲ್ಕೆ, ಪಾಣಾರ* ಮುಂತಾದವರು ಹಾಡುತ್ತಾರೆ. ತುಳು ಪಾಡ್ದನಗಳು ದೈವಾರಾಧನೆಯ ಪೂರಕ ಸಾಹಿತ್ಯ ಸಾಮಗ್ರಿಗಳಾದುದರಿಂದ ಶಿಷ್ಟ ಪುರಾಣ ಕಾವ್ಯಗಳಿಗಿಂತ ಭಿನ್ನವಾಗಿವೆ. ಜನಪದ ಕಾವ್ಯಗಳು ವೈಶಿಷ್ಟ್ಯವೇ ಹೀಗೆ. ಜನಸಾಮಾನ್ಯರ ಘಟನೆಗಳನ್ನು ಆಧರಿಸಿ ಬಹುಮುಖ ಸ್ವರೂಪದಲ್ಲಿ ಚರಿತ್ರೆಯನ್ನು ಕಟ್ಟಲು ಯತ್ನಿಸುತ್ತವೆ. ಈ ಪ್ರದೇಶದ ಪಾಡ್ದನಗಳಲ್ಲಿ ಅವುಗಳನ್ನು ಯಾರು, ಯಾರಿಗೆ, ಯಾವ ಸಂದರ್ಭದಲ್ಲಿ ಯಾಕಾಗಿ ಹೇಳಿದರೆನ್ನುವ ವಿವರಗಳನ್ನು ಅಪೇಕ್ಷಿಸುವುದು ಕಷ್ಟವಾಗುತ್ತದೆ.[೧೯೪] ಆದರೂ ಸಹ ಅವುಗಳು ಜನರ ಚರಿತ್ರೆಯ ವೈಶಿಷ್ಟ್ಯತೆಗಳನ್ನು ಗರ್ಭೀಕರಿಸಿಕೊಂಡಿವೆ. ಪವಾಡ ಶಕ್ತಿ, ಪೌರುಷ ಪ್ರಕಾಶನ, ಅಸಾಧಾರಣ ವ್ಯಕ್ತಿತ್ವ ಮುಂತಾದ ಅಂಶಗಳ ಬಗ್ಗೆ ಗಮನ ಸೆಳೆಯುತ್ತವೆ.

### ೩.೯.೧. ಪಾಡ್ದನಗಳು ಮತ್ತು ಚರಿತ್ರೆ

ತುಳುನಾಡಿನ ಸಮಗ್ರ ಚರಿತ್ರೆಯನ್ನು ಪಾಡ್ದನಗಳು ಹಿಡಿದಿಟ್ಟುಕೊಂಡಿವೆ. ಅವು ಸಮಕಾಲೀನ ಸಂದರ್ಭದ ಸಮಾಜದ ಆಗುಹೋಗುಗಳನ್ನು ಕುರಿತು ಚರ್ಚಿಸಲು ಅನುವು ಮಾಡಿಕೊಡುತ್ತವೆ. ಕರಾವಳಿ ಕರ್ನಾಟಕವೆಂದು ಗುರುತಿಸುವ ಭೂ ಪ್ರದೇಶದಲ್ಲಿ ಪಾಡ್ದನಗಳ ಕಾರ್ಯಕ್ಷೇತ್ರ ವ್ಯಾಪಿಸಿಕೊಂಡಿದೆ. ಈ ಪಾಡ್ದನಗಳಲ್ಲಿ ಮೌಖಿಕ ಆಕರಗಳೊಂದಿಗೆ ಸಮ್ಮಿಳಿತವಾಗಿವೆ. ಹೆಚ್ಚು ಕಡಿಮೆ ಮಧ್ಯಕಾಲೀನ ಕರ್ನಾಟಕದ ಚಾರಿತ್ರಿಕ ವಿಷಯಗಳು ಕೇವಲ ಮೌಖಿಕ ರೂಪದಲ್ಲಿ ಮಾತ್ರವಲ್ಲದೇ ಲಿಖಿತ ರೂಪದಲ್ಲಿ ಸಹ ಉಲ್ಲೇಖಗೊಂಡಿರುವುದು ಗಮನಾರ್ಹ. ಆದರೆ ನಿರ್ದಿಷ್ಟವಾಗಿ ಕಾಲವನ್ನು ನಿಗದಿಪಡಿಸಿಕೊಳ್ಳುವುದು ಕಷ್ಟಸಾಧ್ಯ. ಬೇರೆ ಬೇರೆ ಕಾಲಘಟ್ಟಗಳಲ್ಲಿ ಅವುಗಳು ರೂಪುಗೊಂಡಿರಬೇಕೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಈ ಕುರಿತಂತೆ ಗುರುರಾಜ ಭಟ್, ವಸಂತ ಮಾಧವ, ವಿವೇಕ ರೈ ಮುಂತಾದವರು ಸುಮಾರು ಹದಿನಾಲ್ಕನೆ ಶತಮಾನದಿಂದ ಹದಿನೇಳನೇ ಶತಮಾನದವರೆಗೆ ಪಾಡ್ದನಗಳ ಕಾಲವನ್ನು ನಿಗದಿಪಡಿಸುತ್ತಾರೆ.[೧೯೫]

ತುಳುನಾಡಿನಲ್ಲಿ ಕಂಡುಬರುವ ಪಾಡ್ದನಗಳಲ್ಲಿ ಅನೇಕ ಜಾತಿಗಳು ಮತ್ತು ಸಮಾಜಗಳನ್ನು ಕಾಣುತ್ತೇವೆ. *ಬೈದ್ಯ, ಬಂಟ, ಮೂಲ್ಯ, ಬಲ್ಯಾಯ, ಜೈನ, ಬ್ರಾಹ್ಮಣ, ಮೊಗೇರ, ಪಂಬದ, ಪರವ, ನಂಬಿಕೆ, ಮೇರ, ಬಾಕುಡ, ಮುಂಡಾಲ, ಮಣ್ಣ, ಕೊರಗ, ಜೋಗಿ, ಕ್ಷೌರಿಕ, ಮೊಯಿಲಿ, ಮಡಿವಾಳ, ಗಾಣಿಗ, ಅಕ್ಕಸಾಲೆ, ಮಾಪಿಳ್ಳೆ* ಹಾಗೂ ಕುಟುಂಬ ಎಂಬ ಕ್ರೈಸ್ತ ಸಮುದಾಯದವರನ್ನು ಕುರಿತು ಉಲ್ಲೇಖ ಮಾಡಿರುವುದು ಕಂಡುಬರುತ್ತದೆ. ಪಾಡ್ದನಗಳು ಕೆಳಜಾತಿಗಳ, ದಲಿತ ಸಮುದಾಯಗಳ ಚರಿತ್ರೆಯನ್ನು ಕುರಿತಂತೆ, ಜಾತೀಯತೆ, ದೌರ್ಜನ್ಯ, ಅಸ್ಪೃಶ್ಯತೆ, ದಬ್ಬಾಳಿಕೆ ಪ್ರವೃತ್ತಿ, ಮೋಸ ವಂಚನೆ ಇತ್ಯಾದಿ ಕ್ರೂರ ಪದ್ಧತಿಗಳ ಕುರಿತು ಚರ್ಚಿಸುತ್ತವೆ.[೧೯೬] ಕೊರಗರು, ಪಂಬದರು, ಬಾಕುಡರು, ಮನ್ಸರು ಮುಂತಾದ ಹೊಲೆಯರ ವಿಚಾರಗಳು ಇವುಗಳಲ್ಲಿ ಅಡಕವಾಗಿವೆ. ಕೊರಗ ತನಿಯ ವಿಚಾರ 'ಕೋಟಿ ಚೆನ್ನಯ್ಯ' ಪಾಡ್ದನದಲ್ಲಿ ಮೂಲ ಹೊಲೆಯರ ಬಗೆಗೆ ಉಲ್ಲೇಖಗಳು ಕಂಡುಬರುತ್ತವೆ (ಒಬ್ಬ ಯಜಮಾನನ ಕೆಳಗೆ ವಂಶ ಪಾರಂಪರ್ಯವಾಗಿ ಜೀತದಾಳುಗಳಂತೆ ದುಡಿಯುವ ಹೊಲೆಯರೇ ಮೂಲದ ಹೊಲೆಯರು.) ಹರಿಜನರ ಇನ್ನೊಂದು ವರ್ಗವಾದ 'ಬಾಕುಡರ' ವಿಚಾರವು ಪಾಡ್ದನದಲ್ಲಿದೆ. ಕೊರಗರ ವಾಸಸ್ಥಾನ ಕೊಪ್ಪ ಆಗಿರುವಂತೆ, ಬಾಕುಡರ ವಾಸಸ್ಥಾನ 'ಬೈಲು' ಎಂದು

ಗೊತ್ತಾಗುತ್ತದೆ. ಹಾಗೆಯೆ ಈಜೊ ಮಂಜೊಟ್ಟಿಗೋಣ, ಕೋಡದಬ್ಬು ಮುಂತಾದ ಪಾಡ್ದನಗಳಲ್ಲಿ ದಲಿತ ಕುರಿತ ವಿಚಾರಗಳು ಅಡಕವಾಗಿವೆ.[೧೯೮]

ಭೂತಾರಾಧನೆಯ ಬಗೆಗೆ ಸಮಗ್ರ ಅಧ್ಯಯನ ಮಾಡಿರುವ ಕೆ. ಚಿನ್ನಪ್ಪಗೌಡರು ಅಭಿಪ್ರಾಯಪಡುವಂತೆ ಪ್ರಾಚೀನ ಕಾಲದ ತುಳುನಾಡಿನ ಭೌಗೋಳಿಕ ಪರಿಸ್ಥಿತಿ, ಪ್ರಾಕೃತಿಕ ವಿಕೋಪಗಳು, ಹುಟ್ಟು ಮತ್ತು ಸಾವುಗಳ ಆಚೆಯ ಜಗತ್ತಿನ ಕುರಿತಾದ ನಂಬಿಕೆ, ಸತ್ತವರನ್ನು ಮತ್ತೆ ಬರ ಮಾಡಿಕೊಂಡು ನೋಡುವ ಬಯಕೆ, ದುಷ್ಟ ಪ್ರಾಣಿಗಳ ಮುಂತಾದ ವಿಚಾರಗಳ ಕುರಿತು ವೀರಾರಾಧನೆ ಪರಿಕಲ್ಪನೆಯನ್ನು ಕಾಣಬಹುದು. ಭೂತಗಳ ಬಗೆಗೆ ಎ. ಶ್ರೀಧರ್ ಅವರ ಅಭಿಪ್ರಾಯ ಹೀಗಿದೆ. ಹಿಂದೆ ಕೆಳವರ್ಗದ ಜಾತಿಗಳಲ್ಲಿ ಸಾಮಾನ್ಯ ಮನುಷ್ಯರಾಗಿ ಹುಟ್ಟಿ, ಕೆಳವರ್ಗದವರಿಗೆ ಕಂಟಕಪ್ರಾಯವಾಗಿದ್ದ ವ್ಯವಸ್ಥೆಯ ವಿರುದ್ಧ ಪ್ರತಿಭಟನೆ, ವೀರಮರಣ ಹೊಂದಿದವರು. ಮತ್ತೆ ಅವರು ಭೂತಗಳಾಗಿ ಈ ಕೆಳವರ್ಗದವರ ರಕ್ಷಕರಾಗಿದ್ದುಕೊಂಡು ಕೆಳವರ್ಗದವರಿಗೆ ಕಿರುಕುಳ ನೀಡುವ ಊಳಿಗದೊರೆಗಳನ್ನು ಅಥವಾ ಗುತ್ತಿನ ಮನೆಯವರನ್ನು ಪೀಡಿಸಿ ಅವರಿಂದ ಆರಾಧನೆಯ ಮುಖಾಂತರ ತೃಪ್ತರಾಗುತ್ತಾರೆ.[೧೯೯] ತುಳುನಾಡಿನ ಪ್ರದೇಶದಲ್ಲಿ ವ್ಯವಸ್ಥೆಯ ವಿರುದ್ಧ ಬಂಡೆದ್ದ 'ಸಿರಿ', 'ಕೋಟಿ ಚೆನ್ನಯ್ಯ' ಮತ್ತು 'ಕಲ್ಕುಡ-ಕಲ್ಲುರ್ಟಿ' ಮುಂತಾದ ಸಾಂಸ್ಕೃತಿಕ ವೀರರು ಕಾಣಿಸಿಕೊಳ್ಳುತ್ತಾರೆ.

ಪಾಡ್ದನಗಳ ಅಧ್ಯಯನದಿಂದ ಭೂತಗಳ ಉಗಮವನ್ನು ಪರಿಶೀಲಿಸಿದಾಗ ಹೆಚ್ಚಿನ ಭೂತಗಳು ಅಕಾಲ ಮರಣವನ್ನು ಹೊಂದಿದ ಮನುಷ್ಯರ ರೂಪಾಂತರ ಎನ್ನುವ ಸಂಗತಿ ತಿಳಿಯುತ್ತದೆ. ಈ ರೀತಿ ಬೇರೆ ಬೇರೆ ಕಾರಣದಿಂದ ಅಕಾಲ ಮರಣವನ್ನಪ್ಪಿದ ವ್ಯಕ್ತಿಗಳು ಭೂತಗಳಾಗಿ ಮಾರ್ಪಟ್ಟು ಆರಾಧನೆಯನ್ನು ಪಡೆಯುವ ದೈವಗಳಾಗಿ ಕಾಣಿಸಿಕೊಳ್ಳುತ್ತಾರೆ. ಉದಾಹರಣೆಗೆ *ಬೊಬ್ಬಯ್ಯ, ಕಾಂತಾ ಬಾರೆ ಬೂದಾಬಾರೆ, ಕೊರಗ ತನಿಯ, ಕೊಡ್ದಬ್ಬು, ತನ್ನಿ ಮಾನಿಗ, ಅಕ್ಕೆರಸು ಪೂಂಜೆದಿ, ಸೊನ್ನೆ, ಗಿಂಡೆ, ಅಬ್ಬಗೆದಾರಗ, ಕೋಟಿಪೂಂಜ, ಒಕ್ಕುಬಲ್ಲಾಳ, ನಾಡು, ಜೋಗಿ ಪುರುಷ, ಬಸ್ತಿನಾಯಕ, ತೋಮಜ್ಜ, ಮದಾಮಾಳ್, ಚಕ್ರಮೇಲಾಂಟ, ಮಾಯಂದಾಳ್, ಕಂಬೇರ್ಲಿ, ಗುರ್ಕಾರ ಭೂತ* ಇತ್ಯಾದಿ ಭೂತಗಳೆಲ್ಲಾ ಬೇರೆ ಬೇರೆ ಕಾರಣಗಳಿಂದ ಅಕಾಲ ಮರಣವನ್ನು ಹೊಂದಿದ ಮಾನವ ವ್ಯಕ್ತಿಗಳು.[೨೦೦] ದಲಿತ ಚರಿತ್ರೆಯನ್ನು ಅಭ್ಯಾಸಮಾಡುವ ಈ ನಿಟ್ಟಿನಲ್ಲಿ ಕೊರಗ ತನಿಯ ಮತ್ತು ತನ್ನಿಮಾನಿಗ ಸಾಂಸ್ಕೃತಿಕ ವೀರರ ಕುರಿತು ಚರ್ಚಿಸಲು ಯತ್ನಿಸಲಾಗಿದೆ. ಈ ಪಾಡ್ದನಗಳ ಅಂದಿನ ಸಮಾಜದ ಬರ್ಬರ ಹತ್ಯೆಗಳು, ಅಕ್ರಮಗಳು ಮನುಷ್ಯನ ವ್ಯಕ್ತಿತ್ವವನ್ನೆ ಕಲುಕುವಷ್ಟು ಕಠೋರವಾಗಿವೆ. ಒಂದಲ್ಲಾ ಒಂದು ಕಾರಣದಿಂದ ತುಳುನಾಡಿನ ಸಾಮಾಜಿಕ ಜೀವನವನ್ನೆ ತಲ್ಲಣಗೊಳಿಸಿವೆ.

### ೩.೯.೨. ಕೊರಗ ತನಿಯ

ತುಳುನಾಡಿನಲ್ಲಿ ದಲಿತ ಜಾತಿಯ ಹಲವು ವ್ಯಕ್ತಿಗಳು ಅಕಾಲ ಮರಣಹೊಂದಿ ಭೂತವಾಗಿ ಮಾರ್ಪಟ್ಟು ಘಟನೆಗಳು ಇಂದಿಗೂ ಕೂಡ ಮೌಖಿಕ ಪರಂಪರೆಯಲ್ಲಿ ಕಾಣಬಹುದು. ಪಾಡ್ದನಗಳು ಇಂತಹ ಅನೇಕ ಸನ್ನಿವೇಶಗಳನ್ನು ತಮ್ಮ ಮಡಿಲಲ್ಲಿ ಗರ್ಭೀಕರಿಸಿಕೊಂಡಿವೆ. ಹೊಲೆಯರ *(ಕೊರಗ)* ತನಿಯ ಈ ಮೇಲಿನ

ಸನ್ನಿವೇಶಕ್ಕೆ ಉತ್ತಮ ಉದಾಹರಣೆ. ಕೊರಗ ತನಿಯನಿಗೆ ಸಂಬಂಧಿಸಿದ ಹಲವು ಪಾಡ್ದನಗಳಲ್ಲಿ ಅಲ್ಪಸ್ವಲ್ಪ ಬದಲಾವಣೆಗಳಿದ್ದರೂ ಕಥೆಯ ಸಾರಾಂಶದಲ್ಲಿ ಹೆಚ್ಚಿನ ವ್ಯತ್ಯಾಸಗಳನ್ನು ಕಾಣಲಾಗುವುದಿಲ್ಲ. 'ಭೂತಪ್ರಪಂಚವು ಬ್ರಾಹ್ಮಣರಿಂದ ತೊಡಗಿ ಕೊರಗರವರೆಗಿನ ಭಿನ್ನ ಭಿನ್ನ ಸಮಾಜಗಳ ವ್ಯಕ್ತಿಗಳನ್ನು ಬೇರೆ ಬೇರೆ ರೀತಿಯಲ್ಲಿ ತನ್ನ ತೆಕ್ಕೆಗೆ ಎತ್ತಿಕೊಂಡಿದೆ. ಕೊರಗ ತನಿಯನ ಪಾಡ್ದನವು, ಸಮಾಜದ ಅತ್ಯಂತ ಕೆಳಸ್ತರಕ್ಕೆ ಸೇರಿದ ಅನಾಥ ಬಾಲಕನೊಬ್ಬ ಪರಾಶ್ರಯದಲ್ಲಿ ಬೆಳೆದರೂ ಆತ್ಮವಿಶ್ವಾಸವನ್ನು, ದೇಹಬಲವನ್ನು ಬೆಳೆಯಿಸಿಕೊಳ್ಳಬೇಕೆನ್ನುವಷ್ಟರಲ್ಲೆ ದೈವಗಳ (ಅಂದರೆ ಸಮಾಜದ) ಕಿಡಿಗಣ್ಣಿಗೆ ಬಲಿಯಾಗಿ ಹೇಗೆ ದುರಂತವನ್ನು ಅಪ್ಪಿದ ಎಂಬುದನ್ನು ಬಣ್ಣಿಸುತ್ತದೆ. ಶ್ರೇಣೀಕೃತ ಸಮಾಜ ವ್ಯವಸ್ಥೆಯ ನಿಷ್ಠುರವಾದ ಕಟ್ಟುಪಾಡು, ಅದರ ಅಂಗವಾದ ಅಸ್ಪೃಶ್ಯತೆಯ ಆಚರಣೆ ಹೇಗೆ ಸಹಜ ಮಾನವೀಯತೆಯನ್ನು ಕೊಂದು ಕೂಗುತ್ತದೆನ್ನುವುದಕ್ಕೆ ಕೊರಗ ತನಿಯನ ಕಥಾನಕವೂ ಸಾಕ್ಷಿಯಾಗುತ್ತದೆ.[೨೦೧]

ಕೊರಗ ತನಿಯ ಒಬ್ಬ ಹೊಲೆಯರ ಹುಡುಗ. ತಂದೆ-ತಾಯಿಯನ್ನು ಚಿಕ್ಕ ವಯಸ್ಸಿನಲ್ಲಿ ಕಳೆದುಕೊಂಡವ. ಅವನನ್ನು ಸಾಕುವವಳು ಕಳ್ಳು ಮಾರುವ 'ಮೈರಕ್ಕೆ ಬೈದ್ಯದ'. ಒಂದು ಬಾರಿ ಕದ್ರಿಯ ದೇವಸ್ಥಾನಕ್ಕೆ ಆತ ಹೋಗಿ ಗೋಪುರದ ಮಾಡಿಗೆ ಬಾಗಿದ್ದ ಮಾದಳದ ಹಣ್ಣನ್ನು ಕದ್ದು ತಿನ್ನಲು ಪ್ರಯತ್ನಿಸಿದಾಗ ಮಾಯವಾಗುತ್ತಾನೆ. ಕಲ್ಲಾಗುತ್ತಾನೆ. ಆಮೇಲೆ ಭೂತವಾಗುತ್ತಾನೆ. ಹೊಲೆಯರ ಕೇರಿಗಳಲ್ಲಿ ಕೊರಗ ತನಿಯನ ಸ್ಥಾನಗಳು (ಗುಡಿಗಳು) ಹೆಚ್ಚಾಗಿ ಕಾಣಿಸುತ್ತವೆ. ಪಣಂಬೂರು ಪಟ್ಟ ಸಾಲೆಯಲ್ಲಿ ಪರವರ ಓಡಿ ಎಂಬುವವನು ಇದ್ದನು. ಅವನ ಪತ್ನಿ ಅಚುಮೈರೆ. ಅವರಿಗೊಬ್ಬ ಮಗ ತನಿಯ. ಇವನು ಚಿಕ್ಕವನಿದ್ದಾಗಲೆ ತನ್ನ ತಾಯಿಯನ್ನು ಕಳೆದುಕೊಂಡವನು. ಕೊನೆಗೆ ದೇಶಾಂತರ ಹೊರಟುಬಂದಾಗ 'ಮೈರಕ್ಕೆ ಬೈದ್ಯದಿ' ಮತ್ತು ಅವಳ ಮಗ ಚನ್ನಯ್ಯ. ಕಳ್ಳು ಹೊತ್ತುಕೊಂಡು ಬರುವಾಗ ಪರಿಚಯವಾಗುತ್ತದೆ. ಬೈದ್ಯದಿ ಮಗಳು ಇವನು ಯಾರು? ಎಂದು ಕೇಳಿದಾಗ ಕಲ್ಲಾಪುವಿನಲ್ಲಿ ಸಿಕ್ಕಿದ ಎಂದು ಸಮಂಜಸ ಉತ್ತರ ಕೊಡುತ್ತಾಳೆ. ಕಳ್ಳನ್ನು ಮಾರುತ್ತಿದ್ದ ಬೈದ್ಯದಿ ಕದ್ರಿ ದೇವಸ್ಥಾನಕ್ಕೆ ಹೋಗಿ "ಈ ನನ್ನ ಮಗ ತನಿಯ ತಂದ ಕಳ್ಳು ಮುಗಿದರೆ ಕಂಚಿನ ಹೊದಿಕೆ ಇರಿಸುತ್ತೇನೆ"- ಎಂದು ಹರಕೆ ಹೊತ್ತಳು. ಕೆಲವೇ ನಿಮಿಷಗಳಲ್ಲಿ ಈ ಕಳ್ಳು ಮಾರಾಟವಾಯಿತು. ಹೀಗೆ ಒಡತಿಯ ಮನೆಯ ಕೊಟ್ಟಿಗೆಯಲ್ಲಿ ಜೀವನ ಮಾಡುತ್ತಿದ್ದ ತನಿಯ. ಒಂದು ದಿನ ಬೈದ್ಯದಿ ಕದ್ರಿ ದೇವಸ್ಥಾನಕ್ಕೆ ಏಳು ಹೊರೆಯನ್ನು ಕೊಂಡು ಹೋಗಲು ಇದೆ ಎಂದು ತನಿಯನಿಗೆ ತಿಳಿಸಿದಳು. ಏಳು ಜನರನ್ನು ಸಿದ್ಧ ಮಾಡು ಎಂದು ಹೇಳಿದಾಗ ಏಳು ಜನರ ಕೆಲಸವನ್ನು ನಾನೇ ಮಾಡುತ್ತೇನೆ. ಅವರಿಗೆ ಕೊಡುವ ಊಟ ನನಗೆ ಕೊಡಿ ಎಂದು ಮನೆಯ ಒಡತಿಗೆ ಹೇಳಿದನು. ಇದಕ್ಕೆ ಅವಳು ಒಪ್ಪಿದಳು. ಹೊರೆಯನ್ನು ಹೊತ್ತುಕೊಂಡು ಬಂದ ತನಿಯ ಕದ್ರಿಯ ದೇವಸ್ಥಾನಕ್ಕೆ ಹೊರಗಿನಿಂದಲೇ ಎಸೆದನು. ಅವನಿಗೆ ಒಳಗೆ ಪ್ರವೇಶವಿರಲಿಲ್ಲ. ಕಾರಣ ಸಮಾಜದ ಕೆಳಜಾತಿಯಿಂದ ಬಂದವನು. ಹೊಲೆಯ ಜಾತಿಗೆ ಸೇರಿದವನು. ಆ ಸಮಯದಲ್ಲಿ ಗೋಪುರದ ಮಾಡಿಗೆ ಮಾದಳದ (ಕೈಪುರದ) ಹಣ್ಣೊಂದು ಮರದಿಂದ ಬಾಗಿಕೊಂಡಿತ್ತು. ನನ್ನ ತಾಯಿಗೆ ಮಾದಳದ ಹಣ್ಣು ಎಂದರೆ ಇಷ್ಟ ಎಂದು ಕೇಳಲು ಗೋಪುರಕ್ಕೆ ಕಾಲಿಟ್ಟನು. ತರುವಾಯ ಅಲ್ಲಿಯೇ ಮಾಯವಾದನು ಎಂದು ಪಾಡ್ದನ ತಿಳಿಸುತ್ತದೆ.[೨೦೨]

ಜಾತಿ ಪದ್ಧತಿಯು ತುಳುನಾಡಿನಲ್ಲಿ ಪ್ರಬಲವಾಗಿರುವುದರ ಜೊತೆಗೆ ಕೆಳಜಾತಿಗಳಿಗೆ ಮಾರಣಹೋಮವಾಗಿ ಪರಿಣಮಿಸಿದ್ದಿತು ಎಂಬ ಅಭಿಪ್ರಾಯವನ್ನು ಈ ಮೇಲಿನ ಪಾಡ್ದನದಿಂದ ಅರ್ಥೈಸಬಹುದಾಗಿದೆ. ಭೂತಸ್ಥಾನ ದೇವಸ್ಥಾನಗಳಿಗೆ ಸೇರಿದ ವಸ್ತುಗಳಾಗಲಿ ಅಥವಾ ಅವೆಷ್ಟೇ ಕ್ಷುಲ್ಲಕ ವಸ್ತುಗಳಾಗಲಿ ಸ್ವಂತಕ್ಕೆ ಬಳಸಬಾರದು ಎಂಬುದು ಅಂದಿನ ಸಮಾಜದ ಪ್ರಬಲವಾದ ನಂಬಿಕೆಯಾಗಿದ್ದಿರಬೇಕು. ಅಸ್ಪೃಶ್ಯನಾಗಿದ್ದು ದೈವದ ಗುಡಿಯ ಮುಗುಳಿಯ ಮೇಲೆ ಕಾಲಿಟ್ಟ ಅಪರಾಧಕ್ಕೆ ಇನ್ನಷ್ಟು ತೀವ್ರತೆಯನ್ನು ಕೊಡುತ್ತದೆ. ಅಂದರೆ ಕದ್ರಿದೇವಸ್ಥಾನಕ್ಕೆ ಹೊಲೆಯರ ಪ್ರವೇಶ ನಿಷಿದ್ಧ. ಈ ಮಹಾ ಅಪರಾಧವೆಂಬಂತೆ ಸಮಾಜ ಅವನನ್ನು ಸಾವಿನ ರೂಪದಲ್ಲಿ ಶಿಕ್ಷೆ ಕೊಟ್ಟಿರಬಹುದು. ಸಮಾಜವು ಈ ಕೃತ್ಯವನ್ನು ಭೂತಗಳಿಗೆ, ದೇವರ ಮಾಯೆ ಎಂಬ ಅತಿಮಾನುಷ ಸ್ವರೂಪಕ್ಕೆ ಕೊಂಡೊಯ್ಯುವುದು. ಹೊಲೆಯರ ಸಮಾಜವು ಈ ದುರಂತವನ್ನು ಪಾಡ್ದನಗಳ ರೂಪದಲ್ಲಿ ರಚಿಸಿ ಭೂತದ ಕಲ್ಪನೆಯನ್ನು ಕೊರಗ ತನಿಯನಿಗೆ ಕೊಟ್ಟಿರಬೇಕು. ಚಾರಿತ್ರಿಕ ದೃಷ್ಟಿಕೋನದಿಂದ ಗಮನಿಸಿದರೆ ಲಿಖಿತ ಆಧಾರಗಳು ಇಲ್ಲದೇ ಇದ್ದರೂ ಮೌಖಿಕ ಚರಿತ್ರೆಯಲ್ಲಿ ತುಳುನಾಡಿನ ಚರಿತ್ರೆ ಕೆಳಜಾತಿಗಳ ಮಟ್ಟಿಗೆ ಕಂಟಕಪ್ರಾಯವಾಗಿದ್ದಿತು ಎಂದು ಅರಿಯಬಹುದು.

### ೩.೯.೩. ಕೋಡ್ದಬ್ಬು-ತನ್ನಿಮಾನಿಗ

ಹೊಲೆಯ ಜಾತಿಗೆ ಸೇರಿದ ಹುಡುಗನೊಬ್ಬ ತನ್ನ ಸ್ವಸಾಮರ್ಥ್ಯದಿಂದ ಮೇಲೇರುತ್ತ ಸಮಾಜದ ವಕ್ರದೃಷ್ಟಿಗೆ ಗುರಿಯಾಗಿ ಅಮಾನವೀಯ ರೀತಿಯಲ್ಲಿ ಕೊಲೆಯಾಗುತ್ತಾನೆ. ಈ ಹಿಂದೆ ಕೊರಗ ತನಿಯ ಯಾವ ರೀತಿಯಲ್ಲಿ ಕೊಲೆಯಾದನೋ ಅದೇ ರೀತಿಯಲ್ಲಿ ತನ್ನಿಮಾನಿಗ ಕೂಡ ನಾಗರಿಕ ಪ್ರಪಂಚದಿಂದ ದೂರವಾಗುತ್ತಾನೆ. ಈ ರೀತಿಯ ಘಟನೆಗಳು ತುಳುನಾಡಿನ ಪಾಡ್ದನಗಳನ್ನು ಯಥೇಚ್ಛವಾಗಿ ಕಂಡುಬರುತ್ತವೆ. ಇವುಗಳಲ್ಲಿ ಅತಿಮಾನುಷ ಶಕ್ತಿಗಳ ಸ್ವರೂಪವಿದ್ದರೂ ಅವುಗಳು ನಡೆದಿರುವ ಬಗ್ಗೆ ಗೊಂದಲಗಳು ಇದ್ದಂತೆ ಕಂಡುಬರುವುದಿಲ್ಲ.

ದಲಿತ ಸಮಾಜದಿಂದ ಬಂದ ಒಬ್ಬ ತನ್ನ ಸಾಧನೆ ಪರಾಕ್ರಮದಿಂದ ತುಳುನಾಡಿನಲ್ಲಿ ಗಮನ ಸೆಳೆಯುತ್ತಾನೆ. ಇಂದಿಗೂ ಕೂಡ ಸಾಂಸ್ಕೃತಿಕ ಪುರುಷನೆಂದು ಕರೆಸಿಕೊಂಡು ಆರಾಧನೆಗೆ ಒಳಪಟ್ಟಿದ್ದಾನೆ. ಇದರಿಂದ ಮತ್ಸರಗೊಂಡ ಮೇಲ್ಜಾತಿಗಳು ಅಥವಾ ಕಡುವಿರೋಧಿಗಳು ಅವರನ್ನು ಬಾವಿಗಿಳಿಸಿ ಕಲ್ಲು ಹಾಸಿದ್ದು, ತನ್ನಿಮಾನಿಗ ಎಂಬಾಕೆಯಿಂದ ರಕ್ಷಿಸಲ್ಪಟ್ಟಿದ್ದು ಅದನ್ನು ಗಮನಿಸಿದ ಸಮಾಜ ಅವರನ್ನು ದೂರಮಾಡಿದ್ದು ಅಥವಾ ಅವರೇ ಆತ್ಮಹತ್ಯೆ ಮಾಡಿಕೊಂಡರು ಎಂಬಂತೆ ಬಿಂಬಿಸತೊಡಗಿತು. ತುಳುನಾಡಿನಲ್ಲಿ ಕೊಡದಬ್ಬು (ಕೋಟಿದ ಬಬ್ಬು) ದೈವದ ಸ್ಥಾನಗಳು ಅನೇಕ ಇವೆ. ಕೊಡದಬ್ಬುವಿನ ಜೊತೆಯಲ್ಲಿ ಆರಾಧಿಸಲ್ಪಡುವ ಇನ್ನೊಂದು ಹೆಣ್ಣುದೈವ ತನ್ನಿಮಾಣಿಗ. ಕಲ್ಕುಡ ಕಲ್ಲುರ್ಟಿ ಒಡಹುಟ್ಟಿದವರಾದರೆ ಕೋಡದಬ್ಬು ತನ್ನಿಮಾನಿಗ ಬೇರೆ ಬೇರೆ ಸಮಾಜಗಳಿಗೆ ಸೇರಿದವರು. ಕೊಡದಬ್ಬು *ಮುಂಡಾಲ* ವರ್ಗದವನಾದರೆ, ತನ್ನಿಮಾನಿಗ ಮುಗೇರ *(ಮೇರ)* ವರ್ಗಕ್ಕೆ ಸೇರಿದವಳು. ಸಾಹಚರ್ಯದಿಂದ ಇವರು ಅಣ್ಣತಂಗಿ ಎನಿಸಿದ್ದಾರೆ. ತನ್ನಿಮಾನಿಗಗೆ ಮಾನಿಬಾಲೆ, ಕಿನ್ನಿಬಾನಿ ಎಂಬ ನಾಮಾಂತರಗಳು ಇವೆ.[೨೦೧]

ಕೊಡಂಗೆ ಬನ್ನಾರು ಕಾಂತುಲ್ಲಾರು ಎಂಬ ಯಜಮಾನನಿಗೆ ಒಂದು ದಿನ ಮುಗೇರರ ಪಟ್ಟೆನಲ್ಲಿ ಪೋಷಕರಿಲ್ಲದ ಹೆಣ್ಣುಮಗುವೊಂದು ಸಿಗುತ್ತದೆ. ಅದಕ್ಕೆ 'ಬಾಲಿಕಚ್ಚಿರಮಾಲ್ಜಿ' ಎಂದು ಹೆಸರಿಡುತ್ತಾರೆ. ಅಕಸ್ಮಾತ್ ದೈವಾನುಗ್ರಹದಿಂದ ಈಕೆ ಗರ್ಭವತಿಯಾದಾಗ ಇಡೀ ಊರೆ ಹೀಯಾಳಿಸಿತು. ಅವಳು ಅನೇಕ ಸತ್ವ ಪರೀಕ್ಷೆಗಳನ್ನು ಎದುರಿಸುತ್ತಾಳೆ. ಅದರಲ್ಲಿ ಆಕೆ ಗಂಡು ಮಗುವೊಂದಕ್ಕೆ ಜನ್ಮ ನೀಡುವುದು ಕೂಡ ಒಂದು. ಈ ಹುಡುಗ ನಂಬಲು ಅಸಾಧ್ಯವಾದ ಅಥವಾ ಸಾಹಸಮಯ ಕೆಲಸಗಳನ್ನು ಮಾಡುವುದು ಇತ್ಯಾದಿ. ಇವನಿಗೆ 'ಬಾರಗದವನು' ಎಂದು ಹೆಸರು. ಅತಿಮಾನುಷ ಶಕ್ತಿಗಳಿಂದ ಪ್ರಸಿದ್ಧನಾದ ಇವನು ಪಿಶಾಚಿ ಬಾಧೆಗಳನ್ನು ದೂರ ಮಾಡುವತ್ತ ಪ್ರಸಿದ್ಧಿಯಾಗಿದ್ದನು. ಇದನ್ನು ಸಹಿಸದ ಕುತಂತ್ರಿಗಳು ಒಂದು ಬಾವಿ ತೋಡಿಸಿ ನೀರು ತರಲು ಹೇಳುವುದು, ನೀರು ತರಲು ಹೋದಾಗ ಮೊದಲೆ ಸಿದ್ಧಪಡಿಸಿ ಮಂತ್ರವಾದಿಗ ಹಾಸು ಕಲ್ಲನ್ನು ಅವನ ಮೇಲೆ ಹಾಕುವುದು. ಕೊನೆಗೆ ಆ ದಾರಿಯಲ್ಲಿ ಬರುತ್ತಿದ್ದ ತನ್ನಿಮಾನಿಗಳು ಈ ಘಟನೆಯನ್ನು ಕಂಡು ತನ್ನ ಕುಲದೈವರನ್ನು ಪ್ರಾರ್ಥಿಸುವುದು, ಅವಳ ಉಟ್ಟ ಸೀರೆಯ ಸೆರಗನ್ನು ಬಾವಿಯೊಳಗೆ ಇಳಿಬಿಟ್ಟ ಬಾಲೆಬಾರಗನನ್ನು ಮೇಲಕ್ಕೆತ್ತುವುದು. ಆ ಸಂದರ್ಭದಲ್ಲಿ ತನ್ನಿಮಾನಿಗಳು ಅವನಲ್ಲಿ ನಾವು ಯಾವಾಗಲೂ ಅಣ್ಣತಂಗಿಯಾಗಿರಬೇಕೆಂದು ಹೇಳಿದಾಗ, ಅದಕ್ಕೆ ಅವನು ಮೂಡಗಿರಿಯಲ್ಲಿ ಕಾಳ ಭೈರವನು, ಕಲ್ಕುಡ ಎಂಬ ದೈವವಾಗುತ್ತಾನೆ. ನೀನು ಅದಕ್ಕೆ ಆದಿಯಲ್ಲಿ ಸಿರಿ, ಆಮೇಲೆ ಕಾಲರಕಾಯಿ, ದೈವವಾಗುತ್ತಾರೆ. ಆದ್ದರಿಂದ ನಾವು ಊರನ್ನು ಬಿಟ್ಟು ಗಟ್ಟದ ಮೇಲೆ ಹೋಗಿ, ತುಳುನಾಡಿಗೆ ಬೇರೆ ದೈವಗಳು ಬಾರದಂತೆ ಕೋಟೆ ಕಟ್ಟಲೆ ಎಂದು ಮಾಯವಾಗಿ ಗಟ್ಟಕ್ಕೆ ಹೋಗಿ ಏಳು ಕೋಟೆ ಕಟ್ಟಿ, 'ಕೋಟಿದ ಬಬ್ಬು' ಎಂಬ ಹೆಸರಿನಿಂದ ತನ್ನಿ ಮಾನಿಗಳೊಂದಿಗೆ ಇರುವುದು.[೨೦೪]

ದಲಿತ ವರ್ಗದ ಕೊರಗ ತನಿಯನಿಗಿಂತ ಕೋಡದಬ್ಬುವಿನ ಕಥೆ ವಿಸ್ತೃತವೂ ನಾನಾ ಸಮಸ್ಯೆ ಜಟಿಲವೂ ಸಂಕೀರ್ಣವೂ ಆಗಿದೆ. ಕೋಡದಬ್ಬುವಿನ ಜೀವನಗಾಥೆ ಒಂದು ಜನಪದ ಮಹಾಕಾವ್ಯವೇ ಆಗಿದೆ ಎನ್ನಬಹುದು. ಇವರಿಬ್ಬರು ಮೇಲ್ವರ್ಗದವರ ಆಶ್ರಯದಲ್ಲಿ ಬಾಳುತ್ತಿದ್ದರು. ಅಸ್ಪೃಶ್ಯತೆಯ ತೊಡಕು ಇದ್ದರೂ ಅದನ್ನು ಮೀರಿದ ಕೆಲವೊಮ್ಮೆ ಆತ್ಮೀಯ ಸಂಬಂಧ ಸಮಾಜದಲ್ಲಿ ಉಂಟಾಗುತ್ತಿತ್ತು ಎಂಬುದಕ್ಕೆ ಈ ಸಾಂಸ್ಕೃತಿಕ ವೀರರ ಆರಾಧನೆಗಳೇ ಮುಖ್ಯ ಸಾಕ್ಷಿಯಾಗುತ್ತವೆ. ಮೇಲ್ಜಾತಿಗಳೊಂದಿಗೆ ಏನೇ ಅತ್ಯುತ್ತಮ ಸಂಬಂಧವಿದ್ದರೂ ಅದು ಒಂದಲ್ಲಾ ಒಂದು ಬಗೆಯಲ್ಲಿ ಕೆಳಜಾತಿಗಳಿಗೆ ಕಂಟಕಪ್ರಾಯವೆಂದು ಕೊರಗತನಿಯ ಕಥಾಪ್ರಸಂಗದಿಂದ ತಿಳಿದುಬರುತ್ತದೆ. ಏಕೆಂದರೆ ದೇವಸ್ಥಾನದ ಒಳಗಡೆ ದಲಿತ ವರ್ಗದವರಿಗೆ ಪ್ರವೇಶ ನಿಷೇಧ ಎಂದು ಗೊತ್ತಿದ್ದರೂ ಅವನನ್ನು ಹಣ್ಣನ್ನು ಕೀಳಲು ಪ್ರೇರೇಪಿಸಿದ್ದು ಹಲವು ಸಂಶಯಗಳಿಗೆ ಎಡೆಮಾಡಿಕೊಟ್ಟಿದೆ. ಈ ರೀತಿಯ ಪ್ರಸಂಗಗಳನ್ನು ಕಲ್ಕುಡ ಕಲ್ಲುರ್ಟಿ ತುಸು ಉಗ್ರ ಸ್ವರೂಪದ ದೈವಗಳು ಜೀವಂತವಾಗಿರುವಾಗ ಅಸಹಾಯಕರಾಗಿದ್ದ ಶೋಷಿತ ವರ್ಗದ ಇಬ್ಬರು ಅಣ್ಣತಂಗಿಯರ ಅದಮ್ಯ ಯಾತನೆ ದ್ವೇಷದ ರೂಪತಾಳಿ ಶೋಷಕ ಅಥವಾ ಪ್ರತಿಷ್ಠಿತ ವರ್ಗದ ಕಾರ್ಕಳ ಅರಸನನ್ನು ಭೂತದ ಸಂಕೇತ ಮೂಲಕ ಪೀಡಿಸುವ, ಹಿಂಸಿಸುವ ಛಲ ಪಾಡ್ದನಗಳಲ್ಲಿ ಕಾಣಬಹುದು.

### ೩.೯.೪. ಕಲ್ಕುಡ-ಕಲ್ಲುರ್ಟಿ

ಕೊರಗ ತನಿಯ, ಕೋಡ್ದಬ್ಬು ತನ್ನಿಮಾನಿಗ ದೈವಗಳಂತೆ ಕಲ್ಕುಡ ಕಲ್ಲುರ್ಟಿ ತುಸು ಉಗ್ರ ಸ್ವರೂಪದ ದೈವಗಳೆಂದು ಹೇಳಲಾಗಿದೆ. ಈ ಪಾಡ್ದನದಲ್ಲಿ ಪ್ರಭುತ್ವದ ವಿರುದ್ಧ ಶೋಷಿತ ವರ್ಗ ತಮ್ಮ ನೋವು, ಅಪಮಾನಗಳಿಂದ ತತ್ತರಿಸಿ ಪ್ರತಿಷ್ಠಿತ ವರ್ಗದವರಿಗೆ ಭೂತದ ಮೂಲಕ ಹಿಂಸಿಸುವ, ಪೀಡಿಸುವುದನ್ನು ಇಲ್ಲಿ ಗಮನಿಸಬಹುದಾಗಿದೆ. 'ಕಲ್ಕುಡ' ಎಂದರೆ 'ಬೀರು ಕಲ್ಕುಡ', 'ಕಲ್ಲುರ್ಟಿ' ಎಂದರೆ ಅವನ ತಂಗಿ ಕಾಳಮ್ಮ. ಈ ಅಣ್ಣ ತಂಗಿ ದೈವಗಳು ಪಾಡ್ದನದಲ್ಲಿ ಮತ್ತು ಆರಾಧನೆಯಲ್ಲಿ ಜೊತೆಜೊತೆಯಾಗಿಯೇ ಕಾಣಿಸಿಕೊಳ್ಳುತ್ತಾರೆ. ಶಂಬುಕಲ್ಕುಡ ಹಾಗೂ ಇರಾವತಿ ಎಂಬ ದಂಪತಿಗಳಿಗೆ ಜನಿಸಿದ ಎಲ್ಕಣ್ಣ ಬಡಗಿಯಾದರೆ, ಮಲ್ಲಣ್ಣ ಕಮ್ಮಾರನಾದ. ಬೀರು ಅಕ್ಕಸಾಲಿಯಾದ, ಬಿಕ್ಕರು ತಾಮ್ರದ ಕೆಲಸಗಾರನಾದ ಹಾಗೂ ನಂದುವು ಕಲ್ಲುಕುಟಿಗನಾದ. ಈ ನಂದುವೇ ಮುಂದೆ ಕಲ್ಕುಡನೆಂದು ಹೆಸರಾದವನು.[೨೦೫] ಈ ಕಥಾನಕದಲ್ಲಿ ಕೆಲವೊಂದು ಚಾರಿತ್ರಿಕ ಘಟನೆಗಳು ಹೆಣೆದುಕೊಂಡಿವೆ. ಮುಖ್ಯವಾಗಿ ಕನ್ನಡನಾಡಿನ ಮೂರು ಪ್ರಸಿದ್ಧ ಗೊಮ್ಮಟಮೂರ್ತಿಗಳ ನಿರ್ಮಾಣ ಇದರಲ್ಲಿ ಉಲ್ಲೇಖವಾಗಿದೆ. ಇವು ಶ್ರವಣಬೆಳಗೊಳ, ಕಾರ್ಕಳ, ವೇಣೂರು. ಚಾರಿತ್ರಿಕವಾಗಿ ಈ ವಿಗ್ರಹಗಳು ನಿರ್ಮಾಣವಾದ ಕಾಲ ಸಾಕಷ್ಟು ಅಂತರವುಳ್ಳದ್ದು. ಪಾಡ್ದನಕಾರ ಈ ಮೂರು ಸಂಗತಿಗಳನ್ನು ಒಂದೇ ಕಥೆಯೊಳಗೆ ಪೋಣಿಸಿಕೊಂಡು ಕಥಾ ಕಾಲಘಟ್ಟವನ್ನು ಎರಡೇ ತಲೆಮಾರಿಗೆ ಸೀಮಿತಗೊಳಿಸಿದ್ದಾನೆ. ಶಿಲ್ಪಕಲೆಗೆ ಹೆಸರಾದ ಗೆಲ್ಲುತ್ತ ಮಾರ್ನಾಡಿನ ಒಂದು ಪ್ರಸಿದ್ಧ ಶಿಲ್ಪ ಮನೆತನದ ಬೇರೆ ಬೇರೆ ವ್ಯಕ್ತಿಗಳು ಬೇರೆ ಬೇರೆ ಕಾಲಘಟ್ಟದಲ್ಲಿ ಈ ವಿಗ್ರಹಗಳನ್ನು ಕೆತ್ತಿರುವುದು ಸಾಧ್ಯ. ಜನಪದ ಕವಿಗೆ ಕಾಲಮಾನದ ವ್ಯತ್ಯಾಸ ಮುಖ್ಯವಾಗುವುದಿಲ್ಲ. ಬೀರು ಕಲ್ಕುಡ ದೈವವಾದುದು ಹೇಗೆ ಎಂಬುದು ಆತನಿಗೆ ಮುಖ್ಯ ವಿಚಾರ.[೨೦೬]

ಶಂಭು ಕಲ್ಕುಡನಿಗೆ ಅರಸನಿಂದ ಕಲ್ಲಿನ ಆನೆ ಮತ್ತು ಗೊಮ್ಮಟೇಶ್ವರನ ಒಂದು ದೊಡ್ಡ ಮೂರ್ತಿಯನ್ನು ನಿರ್ಮಿಸಿಕೊಡಬೇಕೆಂದು ಆಜ್ಞೆ ಬರುತ್ತದೆ. ಇದಕ್ಕೆ ಒಪ್ಪಿದ ಶಂಭು ಕಲ್ಕುಡ ಅರಸನ ಅಗತ್ಯಗಳನ್ನು ಪೂರೈಸುತ್ತಾನೆ. ಆ ಸಂದರ್ಭದಲ್ಲಿ ಅವನಿಗೆ ಗಂಡ-ಹೆಣ್ಣು ಅವಳಜವಳಿ ಮಕ್ಕಳು ಹುಟ್ಟುತ್ತಾರೆ. ಅವರೇ ಕಲ್ಕುಡ-ಕಲ್ಲುರ್ಟಿ ಎಂಬ ಅಣ್ಣ ತಂಗಿಯರು. ದಿನದಿಂದ ದಿನಕ್ಕೆ ಕಲ್ಕುಡ ದೊಡ್ಡವನಾಗಿರುವಾಗಲೆ ತಂದೆ ಇಲ್ಲದವನೆಂದು ಇತರೆ ಮಕ್ಕಳು ಅವನನ್ನು ಮೂದಲಿಸಿದಾಗ, ಸಮಸ್ಯೆಯನ್ನು ತಾಯಿಯೊಂದಿಗೆ ಚರ್ಚಿಸುವನು. ಕಲ್ಕುಡನ ತಾಯಿ ರಾಜನ ಆಜ್ಞೆಯಂತೆ ಮೂರ್ತಿಯನ್ನು ಕೆತ್ತಲು ಹೋಗಿರುವನೆಂದು ತಿಳಿಸುವಳು. ಪ್ರಭುತ್ವದ ಆಜ್ಞೆಗೆ ಮೀರುವಂತಿಲ್ಲವೆಂಬಂತೆ ಅತ್ತ ಶಂಬು ಕಲ್ಕುಡ ಕೆಲಸ ಮುಗಿಯುವವರೆಗೆ ತನ್ನೂರಿನತ್ತ ಬರುವಂತಿರಲಿಲ್ಲ. ಆದರೆ ಕಲ್ಕುಡನು ತನ್ನ ತಂದೆಯನ್ನು ನೋಡಲು ತುದಿಕಾಲ ಮೇಲೆ ನಿಂತಿದ್ದರಿಂದ ತಾಯಿಯ ಆಶೀರ್ವಾದದಿಂದ ಕುದುರೆಯ ಮೇಲೆ ಹೊರಟನು. ಕೊನೆಗೆ ಅಪ್ಪನನ್ನು ಭೇಟಿಯಾದ ಕಲ್ಕುಡ ಕಲಾಕೃತಿಗಳನ್ನು ಕಂಡು ಬೆರಗಾಗುವುದರ ಬದಲಿಗೆ ಅವುಗಳಲ್ಲಿ ನ್ಯೂನತೆಯ ಕುರುಹುಗಳನ್ನು ಗುರುತಿಸಿದನು. ಮತ್ತೆ ರಾಜಾಜ್ಞೆಯಂತೆ ಗೊಮ್ಮಟ ವಿಗ್ರಹ, ಕೊಲ್ಲೂರಿನ ಮೂಕಾಂಬಿಕಾ ವಿಗ್ರಹ, ಸಾವಿರ ಕಂಬಗಳ ಬಸದಿ ಮುಂತಾದ ವಸತಿಯನ್ನು ನಿರ್ಮಿಸಿದನು. ತದನಂತರ "ತನ್ನ ಕೆಲಸ ಮುಗಿಯಿತೆಂದು ಅರಸನಿಗೆ ತಿಳಿಸಿ ಊರಿಗೆ ಧಾವಿಸಲು ಸಿದ್ಧನಾಗಿರುವಾಗ

ತನ್ನ ರಾಜ್ಯದಲ್ಲಿ ಕೆಲಸ ಮಾಡಿದ ಕಲ್ಕುಡನು ಇನ್ನೊಂದು ರಾಜ್ಯದಲ್ಲಿ ಕೆಲಸ ಮಾಡಬಾರದು ಎನ್ನುತ್ತಾ ಅವನ ಎಡಗೈ ಮತ್ತು ಬಲಗಾಲನ್ನು ಕಡಿದು ಹಾಕಿದನು. ಇದರಿಂದ ಅವನ ಜೀವನವೇ ಮುರಿದು ಜಿದ್ದಂತಾಯಿತು. ಕೊನೆಗೆ ವೇಣೂರಿನ ತಿಮ್ಮಣ್ಣಾಜಿ ಎಂಬ ಅರಸನಲ್ಲಿಗೆ ಬಂದು ತನ್ನ ಪ್ರತಿರೂಪವುಳ್ಳ" ಬಂಟ ಕಂಬವನ್ನು ಕೆತ್ತಿದನು.

ಇತ್ತ ಕಡೆ ತನ್ನ ಮಗನು ಬರಲಿಲ್ಲ ಎಂದು ತಾಯಿ ಕಂಗಾಲಾದಳು. ಕಲ್ಕುಡನ ತಂಗಿಯು ಕೊನೆಗೆ ಹುಡುಕಿಕೊಂಡು ಬರುವಾಗ ತನ್ನ ಪ್ರತಿರೂಪವನ್ನು ಸ್ತಂಭದಲ್ಲಿ ಕೆತ್ತುತ್ತಿದ್ದ ಕಲ್ಕುಡನನ್ನು ಕಂಡು ರೋಧಿಸಿದಳು. ಕಾರ್ಕಳದ ಭೈರರಸನ ವಿರುದ್ಧ ಸೇಡು ತೀರಿಸಿಕೊಳ್ಳಲು ಶಪಥ ಮಾಡಿದಳು. ಇಬ್ಬರು ಅಲ್ಲಿಯೇ ಮಾಯವಾದರು. 'ಮಾಯವಾದರು' ಎಂದರೆ 'ಆತ್ಮಹತ್ಯೆ'ಯನ್ನು ಮಾಡಿಕೊಂಡಿರಬಹುದು ಎಂದು ಅಭಿಪ್ರಾಯಪಡಲಾಗಿದೆ. ಮುಂದೆ ಆ ರಾಜ್ಯದಲ್ಲಿ ಇವರಿಬ್ಬರು ಭೂತಗಳಾಗಿ ಕಾಡತೊಡಗಿದರು. ರಾಜನು ಏನೆಲ್ಲಾ ಶತಪ್ರಯತ್ನಗಳನ್ನು ಮಾಡಿದರೂ ಬಿಡಿಸಲಾರದ ತೊಂದರೆಗಳನ್ನು ಕೊಡಲು ಪ್ರಾರಂಭಿಸಿದರು. ಇಡೀ ಕಾರ್ಕಳ ನಗರವೇ ಸುಟ್ಟುಹೋಯಿತು. ಕಲ್ಕುಡ ಕಲ್ಲುರ್ಟಿಯರು ಕಾರ್ಕಳದ ಅರಸರ ಹಾಸಿಗೆಗೆ ಬೆಂಕಿ ಹಚ್ಚಿ ಆಭರಣದ ಪೆಟ್ಟಿಗೆಯನ್ನು ಅಡಗಿಸಿದ್ದರು.[೨೦೬] ಈ ರೀತಿಯ ವಿವರಗಳನ್ನು ಪಾಡ್ದನಗಳಲ್ಲಿ ಕಾಣಬಹುದು. ಇದು ಅಂದಿನ ದೌರ್ಜನ್ಯ ಪ್ರತಿಫಲವಾಗಿ ಇವರಿಬ್ಬರು ಅರಸನನ್ನು ಭಯಂಕರವಾಗಿ ಕಾಡಿದರು. ಪ್ರಭುತ್ವ ತನಗೆ ತೋರಿದಂತೆ ಜನಸಾಮಾನ್ಯರ ಮೇಲೆ ಅಧಿಕಾರ ಚಲಾಯಿಸುತ್ತಿತ್ತು ಎನ್ನುವುದಕ್ಕೆ ಈ ಮೇಲಿನ ಕಲ್ಕುಡ ಕಲ್ಲುರ್ಟಿ ವಿಷಯಗಳು ಮನದಟ್ಟು ಮಾಡುತ್ತವೆ. ಶೋಷಿತರು ಭೂತಗಳಾದ ಮೇಲೆ ಜನಸಾಮಾನ್ಯರ ಪರವಾಗಿ ಪ್ರಭುತ್ವದ ವಿರುದ್ಧ ಹೋರಾಡುವ, ಪ್ರತಿಭಟಿಸುವ, ಸಂಕೇತಗಳಾಗಿ ಕಾಣಿಸಿಕೊಳ್ಳುತ್ತಾರೆ.

## ೩.೧೦. ಕೊಡಗು ಪ್ರದೇಶ

ಕರ್ನಾಟಕ ಪ್ರದೇಶ ಎಂದಾಕ್ಷಣ ಏಕರೂಪ ಸಂಸ್ಕೃತಿಯನ್ನು ಕಾಣಲಾಗುವುದಿಲ್ಲವೆಂದು ಈಗಾಗಲೇ ಗಮನಿಸಿದ್ದೇವೆ. ಬಹುಭಾಷಿಕ ಸಮುದಾಯಗಳು, ಸಂಸ್ಕೃತಿಗಳು, ಇಲ್ಲಿನ ಚರಿತ್ರೆಯೊಂದಿಗೆ ಬೆರತುಹೋಗಿವೆ. ಈ ಭಾಷಿಕ ಸಮುದಾಯಗಳಲ್ಲಿ ಬುಡಕಟ್ಟುಗಳು ಅಧ್ಯಯನಕಾರರ ಗಮನವನ್ನು ಸೆಳೆಯುತ್ತವೆ. ಕೊಡಗು ಪ್ರದೇಶದಲ್ಲಿ ಸುಮಾರು ಹದಿನೇಳು ರೀತಿಯ ಬುಡಕಟ್ಟು ಸಮುದಾಯಗಳನ್ನು ಕಾಣಬಹುದು. ಮೇಲ್ನೋಟಕ್ಕೆ ಕೊಡಗು ಎಂದರೆ ಕೊಡವರು ಎಂದು ಉತ್ತರಿಸುತ್ತೇವೆ. ಇದುವರೆಗೆ ಹೆಚ್ಚಿನ ಅಧ್ಯಯನಗಳು ಕೊಡಗನ್ನು ಈ ರೀತಿಯಲ್ಲಿ ಅರ್ಥೈಸಲು ಯತ್ನಿಸಿವೆ. ಆದರೆ ಇಲ್ಲಿನ ತಳಸಮುದಾಯಗಳು ಕೂಡ ಕೊಡಗಿನ ಚರಿತ್ರೆಯ ಭಾಗವಾಗಿ ಕಾಣಿಸಿಕೊಳ್ಳುತ್ತವೆ. ಜನಸಾಮಾನ್ಯರು, ವಿವಿಧ ಜಾತಿ ಮತ್ತು ಬುಡಕಟ್ಟುಗಳನ್ನು ಇಲ್ಲಿ ಕಾಣುತ್ತೇವೆ. ಕೊಡಗು ಎಂದರೆ ಬ್ರಿಟಿಷ್ ಸಂಸ್ಕೃತಿಯ ಪ್ರಭಾವವಿರುವ ಪ್ರದೇಶ ಎಂದು ಹೇಳುವಾಗ ಅಲ್ಲಿನ ಬುಡಕಟ್ಟುಗಳು ಉಳಿದ ಪ್ರದೇಶಗಳ ಪರಿಸ್ಥಿತಿಗಿಂತ ಭಿನ್ನವಾಗಿಯೇನು ಕಾಣುವುದಿಲ್ಲ.

ಕೊಡಗು ಎನ್ನುವ ಪ್ರಾಂತ್ಯ ಬ್ರಿಟಿಷರು ಆಡಳಿತ ವಹಿಸಿಕೊಳ್ಳುವವರೆಗೂ ಒಂದೇ ರೀತಿಯ ಭೂಪ್ರದೇಶವನ್ನು ಹೊಂದಿರಲಿಲ್ಲ. ಬೇರೆ ಬೇರೆ ಕಲಾಘಟ್ಟದಲ್ಲಿ ಕೊಡಗು ವಿಭಿನ್ನ ಭೌಗೋಳಿಕ ಅಸ್ತಿತ್ವವನ್ನು ಹಾಗೂ ರಾಜಕೀಯ ಹಿನ್ನೆಲೆ ಹೊಂದಿತ್ತು. ಪ್ರಾಚೀನ ಕಾಲದಿಂದ ಬ್ರಿಟಿಷರವರೆಗೆ ಗಂಗ, ಚೋಳ, ಕದಂಬ, ಹೊಯ್ಸಳ, ಚಾಲುಕ್ಯ, ವಿಜಯನಗರ, ಕೊಂಗಾಳ್ವ ಮತ್ತು ಚೆಂಗಾಳ್ವರು, ಹಾಲೇರಿ ವಂಶಸ್ಥರು ಹಾಗೂ ಹೈದರ್‌ಅಲಿ ಮತ್ತು ಟಿಪ್ಪುಸುಲ್ತಾನ್ ಕೂಡ ಕೊಡಗನ್ನು ಆಳಿದರು. ೧೮೩೪ರಲ್ಲಿ ಬ್ರಿಟಿಷರು ಕೊಡಗನ್ನು ಆಕ್ರಮಿಸಿಕೊಂಡರು.[೨೦೮] ಕೊಡಗಿನ ಜನಪದ ಪ್ರಪಂಚ ಎಂದಾಗ ನಮ್ಮೆದುರಿಗೆ ಬರುವುದು ೧೯೨೪ರಲ್ಲಿ ನಡಿಕೇರಿಯಂಡ ಚಿಣ್ಣಪ್ಪನಂದು ಪ್ರಕಟಿಸಿದ ಪಟ್ಟೋಲೆ ಪಳಮೆ. ಕೊಡಗಿನ ಸಂಸ್ಕೃತಿ ಹಾಗೂ ಜನಪದ ಚರಿತ್ರೆ ಕುರಿತು ಈ ಕೃತಿ ಪ್ರಕಟವಾಗುವವವರೆಗೂ ದೇಶಿಯೊಬ್ಬನ ಮೂಲಕ ಕೊಡಗಿನ ಬಗ್ಗೆ ಮಾಹಿತಿ ದೊರಕಿರಲಿಲ್ಲ. ಸುಮಾರು ಹದಿನೇಳು ಸಮುದಾಯಗಳಿಗೆ ಸಂಬಂಧಿಸಿದ ಪದ್ಧತಿ, ಪರಂಪರೆ, ಜನಪದ ಗೀತೆಗಳು ಸಂಗ್ರಹವನ್ನು ಪಟ್ಟೋಲೆ ಪಳಮೆಯ ಹೆಸರಿನಲ್ಲಿ ದಾಖಲೂ ಮಾಡಿದ್ದರೂ ಕ್ರಮೇಣ ಅದು ಕೊಡಗಿನ ಪ್ರಬಲ ಸಮುದಾಯದ ಕೊಡವ ಜಾತಿಯ ಸಾಂಸ್ಕೃತಿಕ ಅಭಿವ್ಯಕ್ತಿಯಾಗಿ ಮಾರ್ಪಾಡಾಯಿತು. ಪ್ರಸ್ತುತ ವಿಷಯದಲ್ಲಿ ಕೊಡಗಿನ ಬುಡಕಟ್ಟು ಸಮುದಾಯವೊಂದರ ಜನಪದ ಕಾವ್ಯವನ್ನು ಕುರಿತು ಸ್ಥೂಲವಾಗಿ ಚರ್ಚಿಸಲು ಯತ್ನಿಸಲಾಗಿದೆ. ಇಲ್ಲಿನ ಕೆಲವು ವಿಚಾರಗಳಿಗೆ ಕೊಡಗಿನ ಮೇಲೆ ಕೆಲಸ ಮಾಡಿದ ಅಧ್ಯಯನಕಾರರ ಬರವಣಿಗೆಗಳನ್ನು ಬಳಸಿಕೊಳ್ಳಲಾಗಿದೆ.[೨೦೯] ಈಗಾಗಲೇ ಗಮನಿಸಿದಂತೆ ಕೊಡಗು ಹಲವು ಬುಡಕಟ್ಟು ಸಮುದಾಯಗಳನ್ನು ಹೊಂದಿದೆ. ೧೮೩೪ರಲ್ಲೇ ಫ್ರೇಜರ್ ಎಂಬ ಅಧಿಕಾರಿಯು ಹದಿನಾರು ಗುಲಾಮ ಜಾತಿಗಳನ್ನು ಗುರುತಿಸಿದ್ದ. ೧೮೪೩ರಲ್ಲಿ ಕೊಡಗಿನ ಸೂಪರಿಂಡೆಂಟ್ ಹದಿಮೂರು ಜಾತಿಗಳ ಪಟ್ಟಿ ಮಾಡಿದ್ದು ಕಂಡುಬರುತ್ತದೆ. ಕೆಂಬಟ್ಟೆಗಳು, ಪಾಲೆಗಳು ಮತ್ತು ಕಾಪಾಳರು ಕೊಡಗಿನ ಮೂಲ ನಿವಾಸಿಗಳು (ಗುಲಾಮ) ಎಂದು ರಿಕ್ಟರ್ ಗುರುತಿಸುತ್ತಾನೆ. ಕೆಂಬಟ್ಟೆ ಹೊಲೆಯರು, ಮಾರಂಗಿ ಹೊಲೆಯರು, ಕೂಟ ಹೊಲೆಯರು, ಬಲಗೈ ಹೊಲೆಯರು, ಕಾಕಿಯವರು, ಜೇನು ಕುರುಬರು, ಬೆಟ್ಟ ಕುರುಬರು, ಫಣಿಯರವರು ಮತ್ತು ಮಾಯರರು.[೨೧೦] ಹೀಗೆ ಹತ್ತು ಹಲವು ಜಾತಿ ಮತ್ತು ಬುಡಕಟ್ಟು ಸಮುದಾಯಗಳು ಕೊಡಗಿನಲ್ಲಿ ನೆಲೆಸಿವೆ. ಪ್ರಸ್ತುತ ಅಧ್ಯಯನ ಭಾಗದಲ್ಲಿ ಫಣಿ ಯರವರಿಗೆ ಸಂಬಂಧಿಸಿದ ಜನಪದ ಕಾವ್ಯವನ್ನು ಕುರಿತು ಚರ್ಚಿಸಲಾಗಿದೆ.

### ೩.೧೦.೧. ಫಣಿಯರವರು

ಫಣಿಯರವರು ಗುಡಲೂರಿನಿಂದ ವಿರಾಜಪೇಟೆವರೆಗೆ ವ್ಯಾಪಿಸಿದ್ದಾರೆ. ಇವರ ಭಾಷೆ 'ಎರವ', 'ಫಣಿಯನ್' ಎಂದೂ ಕರೆಯುತ್ತಾರೆ. ಇದು ತಮಿಳು ಹಾಗೂ ಕೊಡಗು ಭಾಷೆಯನ್ನು ಹೋಲುತ್ತದೆ. ಈ ಮಹಾಕಾವ್ಯವು ಕೊಡಗಿನ 'ತಿತಿಮತಿ' ಬಳಿಯ ಭದ್ರಗೋಳ ಗಿರಿಜನ ಕಾಲೊನಿಯ ಕರಿಯ ಮತ್ತು ಅಚ್ಚುಕಟ್ಟು ಎನ್ನುವ ಫಣಿಯರವ ಸಮುದಾಯದ ಗಿರಿಜನರು ನಿರೂಪಿಸಿದ್ದಾಗಿದೆ. ಎನ್.ಪಿ. ಶಂಕರನಾರಾಯಣರಾವ್ ಅವರು ಫಣಿಯೆರವರ ಹಾಡು ಅಥವಾ ಪಾಟಗಳನ್ನು ತಮ್ಮ ಕೃತಿಯಲ್ಲಿ ದಾಖಲಿಸಿದ್ದಾರೆ. ಅವರ ದೇವರುಗಳಾದ ಅಂಜಲಾತ್ತು, ಅಪ್ಪೆಮುತ್ತಿ, ಪಾಪಲಾತ್ತು ಮುಖ್ಯವಾಗಿ ಕಾಣಿಸಿಕೊಳ್ಳುತ್ತಾರೆ. ಈ ದೇವರುಗಳು ಫಣಿಯರವರ

ಕುಲದ ಮೂಲ ಪುರುಷರು.[೨೧೧] ೧೮೩೪ರಲ್ಲೇ ಫ್ರೇಜರ್ ಎಂಬ ಅಧಿಕಾರಿಯು ಹದಿನಾರು ಗುಲಾಮ ಜಾತಿಗಳನ್ನು ಗುರುತಿಸಿದ್ದು ಕೊಡಗಿನ ಸೂಪರಿಟೆಂಡೆಂಟ್ ಹದಿಮೂರು ಗುಲಾಮ ಜಾತಿಗಳ ಪಟ್ಟಿಮಾಡಿದ್ದು ಕಂಡುಬರುತ್ತವೆ. ಕೆಂಬಟ್ಟೆಗಳು, ಪಾಲೆಗಳು ಮತ್ತು ಕಾಪಾಳರು ಕೊಡಗಿನ ಮೂಲ ನಿವಾಸಿಗಳು (ಗುಲಾಮ) ಎಂದು ರಿಕ್ಟರ್ ಗುರುತಿಸುತ್ತಾನೆ. ಕೆಂಬಟ್ಟೆ ಹೊಲೆಯರು, ಮಾರಂಗಿ ಹೊಲೆಯರು, ಕೂಟ ಹೊಲೆಯರು, ಬಲಗೈ ಹೊಲೆಯರು, ಬರಿಗ ಅಥವಾ ಕಾಕಿಯರವರು, ಫಣೆಯರವರು ಮುಂತಾದವರು ಜೀವನ ಸಾಗಿಸುತ್ತಿರುವುದು ಕಾಣಬಹುದು. ಫಣೆಯರವರ ಕಾವ್ಯದ ಒಂದು ಭಾಗದಲ್ಲಿ ಈ ಸಮುದಾಯವು ಒಂದು ಕಡೆ ನೆಲೆ ನಿಂತು 'ಖಾಸಗೀ ಸೊತ್ತಿನ' ಬಗ್ಗೆ ಆಲೋಚನೆ ಮಾಡುವ ರೀತಿಯ ದೃಶ್ಯಗಳು ಕಂಡುಬರುತ್ತವೆ. ತಮ್ಮದೇ ಭೂಮಿ ತಮ್ಮದೇ ಎತ್ತುಗಳೊಂದಿಗೆ ಉಳುಮೆ ಮಾಡಿ ಸಂತೋಷಪಡುವ ದಿನಗಳು ಅವರಿಗೆ ಹೆಚ್ಚು ದಿನ ಉಳಿಯಲಿಲ್ಲ. ಈ ಸಮುದಾಯವು ಗದ್ದೆ ಕೆಲಸಗಳನ್ನು ಮಾಡಲು ಆರಂಭಿಸಿದ ಭಾಗಗಳು ವರ್ಣರಂಜಿತವಾಗಿವೆ.

ಫಣೆಯರವರ ಜನಪದ ಗೀತೆ ವಿವರಿಸುವ ಹಾಗೆ ಹಳೆಯ ಮಾನಾತುರಗಳು ಮುಂದೆ ಹೊಸ ಮಾನಾತುರಗಳು ಹಿಂದೆ ನಿಂತು ಎತ್ತುಗಳ ಸೊಂಟಕ್ಕೆ ನೊಗಕಟ್ಟಿ ನೋಡಿದರು. ಪ್ರಯೋಜನವಾಗಲಿಲ್ಲ. ಬಾಲಕ್ಕೆ ಕಟ್ಟಿನೋಡಿದರೂ ಪ್ರಯೋಜನವಾಗಲಿಲ್ಲ. ಈ ಸಂದರ್ಭದಲ್ಲಿ 'ಕೊಯಿಲಪ್ಪ'ನ ಪ್ರವೇಶವಾಗುತ್ತದೆ. ಪಿರಾಮೆ ಕೊಯಿಲಡು ಒಂದು ರೀತಿಯ ಪ್ರವಾದಿಯ ವ್ಯಕ್ತಿತ್ವವುಳ್ಳವನು. ಅವನು "ಅಯ್ಯೋ ಮಕ್ಕಳೆ, ಕೊರಳಿನ ಮೇಲೆ ನೊಗ ಇಟ್ಟು ಬಲದಿಂದ ಎಡಕ್ಕೆ, ಎಡದಿಂದ ಬಲಕ್ಕೆ ಕಟ್ಟಿ" ಎಂದು ಏರು ಹೂಡುವ ಕೆಲಸ ಹೇಳಿಕೊಟ್ಟ.[೨೧೨]

ಹೀಗೆ ಕೆಲಸ ಕಲಿತ ಮಾನಾತುರಗಳು ಚುರುಕಾಗಿ ಕೃಷಿಕಾರ್ಯ ಮಾಡಲಾರಂಭಿಸಿದರು. ಆದರೆ ಬಲಿಷ್ಟ ಸಮುದಾಯಗಳಿಂದಾಗಿ ಇವರು ತಮ್ಮ ಭೂಮಿಯ ಮೇಲಿನ ಹಿಡಿತ ಕಳೆದುಕೊಂಡು ಕಣ್ಣೀರಿನಲ್ಲಿ ಗಂಜಿ ಕಾಯಿಸಬೇಕಾಯಿತು. ಎದುರಿಸಿ ನಿಂತು ಹೋರಾಡಲಾರದೇ, ಆ ಬವಣೆಯನ್ನು ತಾಳಿಕೊಂಡು ಇರಲಾರದೇ ಅವರೆಲ್ಲಾ ಓಡಿ ಹೋದರು. ಹೀಗೆ ಜನಪದ ಕಾವ್ಯವು ಎಲ್ಲವನ್ನು ಕಳೆದುಕೊಂಡಿತು ಎಂದು ಚಿತ್ರಿಸುತ್ತದೆ. ೧೯ನೇ ಶತಮಾನದಲ್ಲಿ ಕಾಫಿ, ಟೀ ತೋಟಗಳನ್ನು ಯೂರೋಪಿಯನ್ನರು ಅಭಿವೃದ್ಧಿಪಡಿಸಿದಾಗ ಆ ತೋಟಗಳ ಕಾರ್ಮಿಕರ ಹೇಯ ಸ್ಥಿತಿಯನ್ನು ಕುರಿತು ವರದಿ ಮಾಡಿದಾಗ ಬಹುಶಃ ಯೂರೋಪಿಯನ್ನರ ದಬ್ಬಾಳಿಕೆಯಿಂದ ಫಣೆಯರವರು ಓಡಿಹೋದರು ಎಂದು ಶಂಕರನಾರಾಯಣರಾವ್ ಅವರ ವಾದಕ್ಕೆ ವಿಜಯ್ ಪೂಣಚ್ಚ ತಂಬಂಡ ಅವರು ಹೇಳುವಂತೆ ಫಣೆಯರವರನ್ನು ಒಳಗೊಂಡಂತೆ ಬಡಗ, ಮರದ, ಪಂಜಿಯರವ, ಪಾಲೆ, ಕುಕ್ಕ ಹೊಲೆಯ, ಮಾರಾತ ಹೊಲೆಯ, ಮಾರೆ ಹೊಲೆಯ, ಕಾಪಾಲ, ಮಾದಿಗ, ಮೇದ, ಬೆಟ್ಟ ಕುರುಬ, ಜೇನು ಕುರುಬ ಸಮುದಾಯಗಳು "ಒಕ್ಕಲು ಜಮ್ಮದಾಳು"ಗಳಾಗಿದ್ದರು.[೨೧೩] "ಜಮ್ಮ" ಭೂಮಿಯನ್ನು ಊಳಲು ಸರಕಾರ ಜಮ್ಮದಾಳುಗಳನ್ನು ಕೊಡುತ್ತಿತ್ತು. ಅಂಥ ಜಮ್ಮದಾಳುಗಳಲ್ಲಿ "ಭೂಮಿ ಜಮ್ಮದಾಳು" ಮತ್ತು "ಒಕ್ಕಲು ಜಮ್ಮದಾಳು"ಗಳಿರುತ್ತಿದ್ದರು. ಫಣೆಯರವರು ಒಕ್ಕಲು ಜಮ್ಮದಾಳುಗಳಲ್ಲಿ ಪ್ರಮುಖವಾದದ್ದು. ಬ್ರಿಟೀಷ್ ದಾಖಲೆಗಳಲ್ಲಿ ಕೊಡಗನ್ನು ವಶಪಡಿಸಿಕೊಂಡ ನಂತರ ಜಮ್ಮದಾಳುಗಳ ಕುರಿತು ವರದಿಯನ್ನು ತಯಾರಿಸಲಾಯಿತು. ಇದರಿಂದ ಫಣೆಯರವರು ಜೀತ ಮಾಡಿಕೊಂಡಿದ್ದ ಕೊಡಗಿನ ಭೂ ಹಿಡುವಳಿದಾರರಲ್ಲಿಯೇ ಹೊರತು,

ಖಂಡಿತವಾಗಿಯೂ ಯೂರೋಪಿನವರ ತೋಟಗಳಲ್ಲಿ ಅಲ್ಲ ಎಂಬುದನ್ನು ಅರ್ಥೈಸುತ್ತದೆ.[೨೧೪] ಫಣಿಯರ ಸಮುದಾಯದವರನ್ನು ವಿವಿಧ ಬಗೆಯ ಶೋಷಣೆಗೆ ಒಳಪಡಿಸಲಾಗಿತ್ತು ಎಂಬುದು ಸರ್ವವಿದಿತ. ಬ್ರಿಟೀಷರು ಕೊಡಗು ಪ್ರದೇಶಕ್ಕೆ ಬರುವುದಕ್ಕಿಂತ ಮುಂಚೆ ಅಸ್ತಿತ್ವದಲ್ಲಿತ್ತು ಎಂಬುದನ್ನು ದಾಖಲೆಗಳು ಸ್ಪಷ್ಟಪಡಿಸುತ್ತವೆ.

ಈ ರೀತಿಯ ವಿವರಗಳನ್ನು ಗಮನಿಸಿದಾಗ ಕರ್ನಾಟಕದ ಇತರೆ ಪ್ರದೇಶಗಳಂತೆ ಕೊಡಗು ಪ್ರದೇಶವು ಸಹ ಶೋಷಣೆ, ದಬ್ಬಾಳಿಕೆ ನೀತಿಯಿಂದ ಮುಕ್ತವಾಗಿರಲಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಈ ಕುರಿತು ದೇಶೀಯ ಚರಿತ್ರೆಕಾರರು ಮತ್ತು ವಸಾಹತುಶಾಹಿ ಚರಿತ್ರೆಕಾರರು ಕೊಡಗು ಮೇಲೆ ಬರೆದಿರುವ ವಿವರಣೆಗಳು ಭಿನ್ನವಾದ ಅಂಶಗಳನ್ನು ವ್ಯಕ್ತಪಡಿಸಿರುವುದು ಸ್ಪಷ್ಟವಾಗಿದೆ. ಹದಿನೇಳು ಮತ್ತು ಹದಿನೆಂಟನೆ ಶತಮಾನದ ಸುಮಾರಿಗೆ ಈ ಪ್ರದೇಶವು ಹಲವು ವೈರುಧ್ಯಗಳನ್ನೇ ಸೃಷ್ಟಿಸಿಕೊಂಡಿದೆ. ಇದಕ್ಕೆ ಯೂರೋಪಿಯನ್ನರಾದ ಬ್ರಿಟೀಷರು ಕೊಡಗನ್ನು ಆಕ್ರಮಿಸಿಕೊಂಡ ಸಾಮಾಜಿಕ ಮತ್ತು ಆರ್ಥಿಕ ಕ್ಷೇತ್ರಗಳು ಬದಲಾವಣೆಯ ಸ್ವರೂಪಕ್ಕೆ ಒಳಗಾಗಿದ್ದು. ಬಹುತೇಕವಾಗಿ ಬುಡಕಟ್ಟುಗಳು ಮತ್ತು ವಿವಿಧ ಕೆಳಜಾತಿಗಳು ಹಿಂಸೆಯ ಸ್ವರೂಪವನ್ನು ಅನುಭವಿಸಿದವು.

ಪ್ರಾಚೀನ ಸಮಾಜದಲ್ಲಿ ವರ್ಣ ವ್ಯವಸ್ಥೆ ನಿರ್ಧಾರಕ ಪಾತ್ರ ವಹಿಸುತ್ತಿತ್ತು. ಆದರೆ ವರ್ಣ ವ್ಯವಸ್ಥೆ ಮುಂದೆ ಜಾತಿಗಳಿಗೆ ಎಡೆಮಾಡಿಕೊಟ್ಟ ಮೇಲೆ ಸಮಾಜದಲ್ಲಿ ಜಾತಿ ನಿರ್ಧಾರಕ ಅಂಶವಾಗಿ ಪರಿಣಮಿಸಿತು. ಈ ಹೇಳಿಕೆಯಿಂದ ಮಧ್ಯಕಾಲೀನ ಕರ್ನಾಟಕವು ಹೊರತಾಗಿಲ್ಲ. ಆ ಸಮಯದಲ್ಲಿ ಬಹುತೇಕ ಜಾತಿಗಳು ಸಮಾಜದ ಮುಖ್ಯವಾಹಿನಿಗೆ ಬರಲು ಯತ್ನಿಸಿದವು. ಸಮಾಜದಲ್ಲಿ ಇಂತಿಷ್ಟೆ ಜಾತಿಗಳಿದ್ದವು ಎಂಬುದನ್ನು ಹೇಳಲು ಸಾಧ್ಯವಾಗದಿದ್ದರೂ ಹದಿನೆಂಟು ಜಾತಿಗಳು ಎಂದು ಸಾಮಾನ್ಯ ಅರ್ಥದಲ್ಲಿ ಹೇಳಲಾಗಿದೆ. ಇದರಲ್ಲಿ ಅಸ್ಪೃಶ್ಯ ಜಾತಿಗಳು ಸೇರ್ಪಡೆಯಾಗಿದ್ದವು. ಜಾತಿಗಳಲ್ಲಿ ವಿಪ್ರ ಪ್ರಥಮವಾಗಿ ಅಂತ್ಯಜ ಕೊನೆಯದಾಗಿ ಕಾಣಿಸಿಕೊಳ್ಳುತ್ತಾನೆ. ಇದರಿಂದ ವೈದಿಕರು ಸಮಾಜದ ಉನ್ನತ ಸ್ಥಾನದಲ್ಲಿದ್ದರು ಎಂಬುದು ಸರ್ವವಿದಿತ. ಸಾಮಾಜಿಕ ಆಗು ಹೋಗುಗಳಿಗೆ ಅಸ್ಪೃಶ್ಯರು ಊರಿನೊಳಕ್ಕೆ ನೇರವಾಗಿ ಬರುವಂತಿರಲಿಲ್ಲವೆಂಬುದನ್ನು ಗಮನಿಸಬಹುದು. ಇದು ಅವರು ಒಟ್ಟು ಜೀವನದ ಚಿತ್ರಣವನ್ನು ಪ್ರತಿಬಿಂಬಿಸುತ್ತದೆ. ಅವರ ಜೀವನ ವಿಧಾನ ಮತ್ತು ಆಹಾರ ಪದ್ಧತಿಯಿಂದ ಮತ್ತಷ್ಟು ಜಾತಿ ಶ್ರೇಣೀಕರಣವು ಸ್ಥಿರವಾಗಿತ್ತು ಎಂಬುದು ಅಧ್ಯಯನದಿಂದ ವೇದ್ಯವಾಗುತ್ತದೆ. ಜಾತೀಯತೆ, ಅಸ್ಪೃಶ್ಯತೆ ವಿರುದ್ಧ ಮೊದಲು ಪ್ರತಿಭಟಿಸಿದ್ದು ಬೌದ್ಧಧರ್ಮ. ಭಾರತದಲ್ಲಿ ಹುಟ್ಟಿ ಬೆಳೆದ ಈ ಧರ್ಮವು ಶೋಷಣೆಯ ವಿರುದ್ಧ ಧ್ವನಿ ಎತ್ತಿದ ಪ್ರಥಮ ಧರ್ಮ. ಇದಕ್ಕೆ ಸಹಮತ ವ್ಯಕ್ತಪಡಿಸಿದ್ದು ಜೈನಧರ್ಮ. ತರುವಾಯ ಭಾರತದಲ್ಲಿ ಮೂಢ ನಂಬಿಕೆಗಳ ವಿರುದ್ಧ, ಜನಸಾಮಾನ್ಯರನ್ನು ನಿಕೃಷ್ಟ ಪದ್ಧತಿಗಳಿಂದ ವಿಮುಕ್ತಿಗೊಳಿಸಲು ಭಕ್ತಿ ಚಳವಳಿಗಳು ಕಾಣಿಸಿಕೊಂಡವು. ಅವುಗಳ ಪ್ರಭಾವದಿಂದ ಸಾಮಾಜಿಕ ಮತ್ತು ದಾರ್ಮಿಕ ಆಂದೋಲನಗಳಾಗಿ ಮಾರ್ಪಟ್ಟು ಈ ಚಳವಳಿಗಳು ಸಮಾನತೆಯ ಮೂಲತತ್ವಕ್ಕೆ ಒತ್ತು ಕೊಟ್ಟು ಶ್ರಮಿಸಿದವು. ವಚನ ಚಳವಳಿ, ಸೂಫಿ ಚಳವಳಿ, ಹರಿದಾಸ ಚಳವಳಿ ಅವುಗಳಲ್ಲಿ ಪ್ರಮುಖವಾದವುಗಳು. ಇವು ಜನಸಾಮಾನ್ಯರಲ್ಲಿ ಆತ್ಮವಿಶ್ವಾಸವನ್ನು ಮೂಡಿಸುವುದಲ್ಲದೆ, ಸಮಾಜದ ತೀರ ಕೆಳಸ್ತರದಲ್ಲಿದ್ದವರ ಜೀವನವನ್ನು ಸುಧಾರಿಸುವುದರ ಕಡೆಗೆ ಒಲವು ತೋರಿಸಿದವು. ಇದರ ಪರಿಣಾಮವಾಗಿ ವೀರಶೈವದಂತಹ ಕೆಲವು ಜಾತಿಗಳು ಕೆಳಜಾತಿಗಳ ಪಾಲಿಗೆ

ಆಶಾದಾಯಕ ಜೀವನ ನಡೆಸಲು ಸಹಕಾರಿಯಾಗಿವೆ. ಆ ಮುಖಾಂತರ ತಮ್ಮ ಧರ್ಮದತ್ತ ಸೆಳೆಯುವಲ್ಲಿ ಯಶಸ್ವಿಯಾಗಿವೆ ಎಂದರೆ ತಪ್ಪಾಗಲಾರದು. ಮಧ್ಯಕಾಲೀನ ಸಂದರ್ಭದಲ್ಲಿ ಬಹುತೇಕ ಕೆಳಜಾತಿ-ಜನಾಂಗಗಳು ಸಮಾಜದ ಮೇಲ್ಜಾತಿ ಸಂಪ್ರದಾಯಗಳ ಕಡೆಗೆ ಒಲವು ತೋರಿಸಿ, ತರುವಾಯ ಹೊಸದಾಗಿ ಒಪ್ಪಿಕೊಂಡ ಜಾತಿ ಅಥವಾ ಧರ್ಮದ ವ್ಯಾಪ್ತಿಯಲ್ಲಿ ಮುನ್ನಡೆಯುವುದು ಕಂಡುಬರುತ್ತದೆ. ಕೇವಲ ವೀರಶೈವ ಧರ್ಮಕ್ಕೆ ಮಾತ್ರವಲ್ಲದೆ ದಲಿತರು ಜೈನಧರ್ಮ, ಇಸ್ಲಾಂ ಧರ್ಮ, ಕ್ರಿಶ್ಚಿಯನ್ ಧರ್ಮ ಹೀಗೆ ಹೊಸ ಧರ್ಮಗಳಿಗೆ ಮತಾಂತರವಾಗಿರುವುದನ್ನು ಗಮನಿಸಬಹುದು. ೧೨ನೇ ಶತಮಾನದ ತರುವಾಯ ಬಲಾಢ್ಯ ಜಾತಿಗಳ ವಿರುದ್ಧ ಸಿಡಿದೆದ್ದ ಕೆಲವು ಬುಡಕಟ್ಟು ಸಮುದಾಯಗಳ ನಾಯಕರು, ತಮಗೆ ಕೂಡ ಒಂದು ಚರಿತ್ರೆಯಿದೆ ಎಂದು ನಿರೂಪಿಸಿದರು. ಇವರನ್ನು ಚರಿತ್ರೆಯಲ್ಲಿ ಸಾಂಸ್ಕೃತಿಕ ವೀರರೆಂದು ಗುರುತಿಸಲಾಗಿದೆ. ಮಲೆಮಾದೇಶ್ವರ, ಮಂಟೇಸ್ವಾಮಿ, ಜುಂಜಪ್ಪ, ಕೊರಗ ತನಿಯ, ಕೋಡ್ದಬ್ಬು ತನ್ನಿಮಾನಿಗ ಮುಂತಾದವರು. ಇವರು ಪ್ರಭುತ್ವದ ವಿರುದ್ಧ, ಭೂಮಾಲೀಕರ ವಿರುದ್ಧ ಪ್ರತಿಭಟಿಸಿದ ರೂಪ ಮಾತ್ರ ಸ್ಪಷ್ಟವಾಗಿದೆ.

ಅರ್ಥವ್ಯವಸ್ಥೆ ಒಂದು ಸಮಾಜದ ಜೀವನ ವಿಧಾನವನ್ನು ನಿರ್ಧರಿಸಬಲ್ಲದು ಎಂಬುದನ್ನು ಅಧ್ಯಯನದಿಂದ ಮಾತ್ರವಲ್ಲದೆ ವಾಸ್ತವಿಕ ಜಗತ್ತಿನಲ್ಲಿ ಕೂಡ ಸ್ಪಷ್ಟಪಡಿಸಿಕೊಳ್ಳಬಹುದಾಗಿದೆ. ಅಧ್ಯಯನದ ಅವಧಿಯ ಸಂದರ್ಭದಲ್ಲಿ ಗುಲಾಮ ಪದ್ಧತಿ, ದಲಿತರ ಮಾರಾಟ, ಜೀತಗಾರಿಕೆ, ತೆರಿಗೆ, ಭೂಮಾಲೀಕರು ಮತ್ತು ದಲಿತರು ವಿಚಾರಗಳು ಚರಿತ್ರೆಕಾರರನ್ನು ದಂಗುಬಡಿಸುತ್ತವೆ. ಏಕೆಂದರೆ ಅಂದಿನ ನಿಕೃಷ್ಟ ಪದ್ಧತಿಗಳು ಜನಸಾಮಾನ್ಯರನ್ನು ಹಿಂಸಿಸಿರುವುದು ಮಾತ್ರವಲ್ಲದೆ ವರ್ತಮಾನದಲ್ಲಿ ಕೂಡ ಅದರ ವಿಸ್ತೃತ ರೂಪಗಳು ಮುಂದುವರಿಯುತ್ತಿರುವುದು ಆತಂಕಕಾರಿಯಾಗಿದೆ. ಹಾಗೆಯೇ ದಲಿತರ ಮತ್ತು ರಾಜ್ಯದ ಕುರಿತಾದ ವಿಚಾರಗಳು ಚರಿತ್ರೆಯಲ್ಲಿ ಸ್ಪಷ್ಟವಾಗಿ ದಾಖಲಾಗದಿದ್ದರೂ ಅದು ಸಮಾಜದ ಸರ್ವತೋಮುಖ ಬೆಳವಣಿಗೆಗೆ ಪ್ರಭುತ್ವವು ದಲಿತರನ್ನು ಬಳಸಿಕೊಂಡಿದೆ ಎಂಬುದನ್ನು ಸ್ಪಷ್ಟಪಡಿಸಿಕೊಳ್ಳಬಹುದಾಗಿದೆ.

# ಟಿಪ್ಪಣಿಗಳು

೧. ಶ್ಯಾಮಾಚರಣ ದುಬೆ, (ಅನು: ಅನಂತರಾಮಯ್ಯ ಆರ್.ಎಲ್)., *ಭಾರತೀಯ ಸಮಾಜ*, ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ, ಹೊಸದೆಹಲಿ, ೧೯೯೦, ಪು.೫೪

೨. ಚಿದಾನಂದಮೂರ್ತಿ ಎಂ., *ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ*, ಸ್ವಪ್ನ ಬುಕ್ ಹೌಸ್, ಬೆಂಗಳೂರು, ೨೦೦೨, ಪು. ೪೭೮-೮೦

೩. ಮೋಹನ್‌ಕೃಷ್ಣ ರೈ, *ಜನತೆ ಮತ್ತು ಪ್ರಭುತ್ವ*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫, ಪು.೬೧

೪. ಶ್ರೀನಿವಾಸಮೂರ್ತಿ ಎಚ್.ವಿ., ರಾಮಕೃಷ್ಣನ್ ಆರ್., *ಸಮಗ್ರ ಕರ್ನಾಟಕ ಚರಿತ್ರೆ*, ಓರಿಯಂಟ್ ಲಾಂಗಮನ್, ಬೆಂಗಳೂರು, ೧೯೯೫, ಪು. ೧೪೯

೫. ಶಿವಣ್ಣ ಕೆ.ಎಸ್., (ಸಂ), *ಕರ್ನಾಟಕ ಚರಿತ್ರೆ*, ಸಂ. ೩, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭, ಪು. ೨೪೧

೬. ಅದೇ, ಪು. ೨೪೬-೪೭

೭. ಅದೇ, ಪು. ೨೬೦-೬೦

೮. ಅದೇ. ಪು.೨೬೨

೯. ಶ್ರೀಕಂಠಯ್ಯ, *ವಿಜಯನಗರ ಕಾಲದ ಕನ್ನಡ ಸಾಹಿತ್ಯದಲ್ಲಿ ಜನಜೀವನ ಚರಿತ್ರೆ*, ಗೀತಾ ಬುಕ್ ಹೌಸ್, ಮೈಸೂರು, ೧೯೮೩, ಪು. ೨೫೫

೧೦. ಶಿವಣ್ಣ ಕೆ.ಎಸ್., (ಸಂ), ಹಿಂದೆ ಉಲ್ಲೇಖಿಸಿದ್ದು, ಪು. ೨೪೮, ಪಂಗಡವಾದ ಮಾಲರು ಯಾವ ಕಾಲಘಟ್ಟದಿಂದ ಬೇರೆಯಾದರು, ಯಾವ ಕಾರಣಕ್ಕಾಗಿ ಇವರಲ್ಲಿ ಭಿನ್ನತೆ ಉಂಟಾಯಿತು ಎಂಬುದರ ಬಗ್ಗೆ ಹೆಚ್ಚಿನ ಸಂಶೋಧನೆಗಳು ಆಗಬೇಕಾಗಿದೆ.

೧೧. ಅಂಬೇಡ್ಕರ್ ಬಿ.ಆರ್., (ಅನು: ಕುಮಾರ ವೆಂಕಣ್ಣ)., *ಅಸ್ಪೃಶ್ಯರು*, ವಸಂತ ಪ್ರಕಾಶನ, ಬೆಂಗಳೂರು, ೧೯೭೩, ಪು.

೧೨. ಶರ್ಮ ಆರ್.ಎಸ್., (ಅನು: ಶಂಕರನಾರಾಯಣರಾವ್ ಎನ್.ಪಿ.), *ಪ್ರಾಚೀನ ಭಾರತ*, ನವಕರ್ನಾಟಕ, ಪು. ೨೧೧-೧೨

೧೩. ಚಿದಾನಂದಮೂರ್ತಿ ಎಂ., *ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ*, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೫, ಪು.೪೩, ದಲಿತರು ಊರ ಹೊರಗಡೆ ವಾಸ ಮಾಡುತ್ತಿದ್ದರೆಂದು ಶಾಸನಗಳು ಉಲ್ಲೇಖ ಮಾಡುತ್ತವೆ. ಎ.ಕ., .. ಪು. ೫೪; ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೨, ಕ್ರಿ.ಶ. ೧೫೫೭, ಪು. ೧೫೭; ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೭, ಕ್ರಿ.ಶ. ೧೨೨೩, ಪು. ೧೦೦; ನಂಜುಂಡ ಕವಿಯ 'ರಾಮನಾಥ ಚರಿತೆ'ಯು ಹೊಸ ಮಲೆದುರ್ಗ ಪುರದ ಕೇರಿಗಳ ವರ್ಣನೆಯನ್ನು ಮಾಡುವಾಗ ವಿವಿಧ

ವೃತ್ತಿ, ವರ್ಗ ಮತ್ತು ಜಾತಿಗಳಿಗೆ ಅನುಗುಣವಾಗಿ ಜನರು ವಾಸ ಮಾಡುತ್ತಿದ್ದರೆಂದು ಉಲ್ಲೇಖಿಸುತ್ತದೆ. ಅಡಪವಳ್ಳಿಯ ಕೇರಿ (ಕ್ಷೌರಿಕರು ಕೇರಿ), ಕಮ್ಮಾರ ಕೇರಿ, ಪಡಿಯರರ ಕೇರಿ (ಬಾಗಿಲು ಕಾಯುವವರು), ಬೆಸದಾಳುಗಳ ಕೇರಿ, ಮಡಿವಾಳರ ಕೇರಿ, ಕಲ್ಕುಟಿಗರ ಕೇರಿ, ಸಂಚುಗಾರರ ಕೇರಿ, ಕಂಚುಗಾರರ ಕೇರಿ, ಬಡಗಿಗಳ ಕೇರಿ, ಮಾಲೆಗಾರರ ಕೇರಿ ಮತ್ತು ಸಮ್ಮಗಾರರ ಕೇರಿ; ಗೋರ್ಟಾದ ಕ್ರಿ.ಶ. ೧೦೮೨ರ ಶಾಸನವೊಂದರಲ್ಲಿ ಕಲ್ಕುಟಿಗಕೇರಿ, ಜಗದೇಕಮಲ್ಲನ ಆಳ್ವಿಕೆಯ ಕಾಲದಲ್ಲಿ ಸಿಂಪಿಗಗೇರಿ ಉಲ್ಲೇಖ, ರಂಜೋಳದ ಶಾಸನವೊಂದರಲ್ಲಿ ಗೊರವ ಕೇರಿಯ ಉಲ್ಲೇಖ ಬಂದಿದೆ. (ಬೀದರ್ ಜಿಲ್ಲೆ ಶಾಸನ ಸಂಪುಟ ಪ್ರಸ್ತಾವನೆ ಭಾಗ)

೧೪. ಚಿದಾನಂದಮೂರ್ತಿ ಎಂ., ಪೂರ್ವೋಕ್ತ, ಪು. ೩೯೪

೧೫. *ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ,* ಪು. ೩೫

೧೬. ಅದೇ, ಪು.೩೭

೧೭. ಅದೇ, ಪು.೩೮

೧೮. ನಾಗೇಗೌಡ ಎಚ್.ಎಲ್.(ಸಂ), *ಪ್ರವಾಸಿ ಕಂಡ ಇಂಡಿಯಾ,* ಸಂ. ೧, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೮೩, ಪು. ೧೬೫

೧೯. ಚಿದಾನಂದಮೂರ್ತಿ ಎಂ., ಪೂರ್ವೋಕ್ತ, ಪು. ೩೧

೨೦. ಶರ್ಮ ಆರ್.ಎಸ್., ಪೂರ್ವೋಕ್ತ, ಪು. ೧೫೭

೨೧. ಷೇಕ್ ಅಲಿ ಬಿ, *ಹಿಸ್ಟರಿ ಆಫ್ ವೆಸ್ಟನ್ ಗಂಗಾಸ್,* ಯುನಿರ್ವಸಿಟಿ ಆಫ್ ಮೈಸೂರು, ಮೈಸೂರು, ೧೯೭೬, ಪು. ೨೫೭

೨೨. ಎ.ಕ., VII, ಕ್ರಿ.ಶ. ೧೨೩೦

೨೩. ವೆಂಕಟರಮಣಯ್ಯ ಎನ್., *ಸ್ಟಡೀಸ್ ಇನ್ ದಿ ಹಿಸ್ಟರಿ ಆಫ್ ಥರ್ಡ್ ಡೈನಾಸ್ಟಿ ವಿಜಯನಗರ,* ಗ್ಯಾನ್ ಪಬ್ಲಿಕೇಷನ್ಸ್, ಪಬ್ಲಿಷಿಂಗ್ ಹೌಸ್, ನ್ಯೂ ಡೆಲ್ಲಿ, ೧೯೮೬, ಪು.೩೪೯-೩೫೧

೨೪. ಶಿವಣ್ಣ ಕೆ.ಎಸ್.(ಸಂ), ಪೂರ್ವೋಕ್ತ, ಪು. ೨೪೬ ೪೮

೨೫. ಚಿದಾನಂದಮೂರ್ತಿ ಎಂ., *ಹೊಸತು ಹೊಸತು,* ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೧೯೯೮,ಪು. ೩೯೦-೯೫

೨೬. ಘುರ್ಯೆ ಜಿ.ಎಸ್., *ಕ್ಯಾಸ್ಟ್ ಅಂಡ್ ರೇಸ್ ಇನ್ ಇಂಡಿಯಾ,* ಪಾಪುಲರ್ ಪ್ರಕಾಶನ, ಬಾಂಬೆ, ೧೯೯೦, ಪುಟ.೩೨೧

೨೭. ನಾಗೇಗೌಡ ಎಚ್.ಎಲ್., *ಪ್ರವಾಸಿ ಕಂಡ ಇಂಡಿಯಾ,* ಸಂ. ೨, ಪು. ೮೪-೮೫

೨೮. ಶ್ರೀಕಂಠಯ್ಯ, ಪೂರ್ವೋಕ್ತ, ಪು. ೨೫೧೫೨

೨೯. ಶರ್ಮ ಆರ್.ಆಸ್., ಪೂರ್ವೋಕ್ತ, ಪು.೨೨೧

೩೦. ಚಿದಾಂದಮೂರ್ತಿ ಎಂ., ಪೂರ್ವೋಕ್ತ, ಪು. ೪೯

೩೧. ಅದೇ, ಪು. ೪೮

೩೨. ಐಯ್ಯರ್ ಎಲ್.ಕೆ.ಎ., *ದಿ ಮೈಸೂರು ಟ್ರೈಬ್ಸ್ ಅಂಡ್ ಕ್ಯಾಸ್ಟ್ಸ್,* ಸಂಪುಟ ೪, ಮಿತ್ತಲ್ ಪಬ್ಲಿಕೇಷನ್ಸ್, ಡೆಲ್ಲಿ, ೧೯೮೮, ಪು.೧೬೮

೩೩. ಚಿದಾಂದಮೂರ್ತಿ ಎಂ., ಪೂರ್ವೋಕ್ತ, ಪು. ೪೯

೩೪. ಗೋಪಾಲ ಬಿ.ಆರ್. (ಸಂ), *ವಿಜಯನಗರ ಇನ್‌ಸ್ಕ್ರಿಪ್‌ಶನ್ಸ್*, ಗೌರ್ನಮೆಂಟ್ ಆಫ್ ಕರ್ನಾಟಕ, ಮೈಸೂರು, ಪು.೧೨೧

೩೫. ಶಿವಣ್ಣ ಕೆ.ಎಸ್.(ಸಂ), ಪೂರ್ವೋಕ್ತ, ಪು. ೨೫೧-೫೨

೩೬. ಕೋಟಗಾನಹಳ್ಳಿ ರಾಮಯ್ಯ, *ಸಿಂದ್ ಮಾದಿಗರ ಸಂಸ್ಕೃತಿ* ಪು. ೮೬-೮೭

೩೭. ಷೇಕ್ ಆಲಿ ಬಿ(ಸಂ), *ಕರ್ನಾಟಕ ಚರಿತ್ರೆ*, ಸಂಪುಟ-೪, ಪು.೨೪೫

೩೮. *ಡಾ. ಬಾಬಾ ಸಾಹೇಬ್ ಅಂಬೇಡ್ಕರ್ ಬರಹಗಳು* ಮತ್ತು *ಭಾಷಣಗಳು*, ಸಂಪುಟ-೫, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೯೬, ಪು.೨೧೧

೩೯. ಅದೇ, ಪು.೨೧೨

೪೦. *ಭಾರತೀಯ ಸಮಾಜ*, ಪು.೫೯

೪೧. ಅದೇ, ಪು.೬೦

೪೨. *ಧರ್ಮ ವಿಶ್ವಕೋಶ*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೨೩೨

೪೩. ಅದೇ, ಪು. ೨೩೪

೪೪. ಕೊಸಾಂಬಿ ಡಿ.ಡಿ. (ಅನು: ವೇಣುಗೋಪಾಲ್ ಟಿ.ಎಸ್. ಶೈಲಜಾ), *ಪುರಾಣ* ಮತ್ತು *ವಾಸ್ತವ*, ಚಿಂತನ ಪ್ರಕಾಶನ, ಶಿರಸಿ, ೨೦೦೩, ಪು.೪೭-೪೮

೪೫. ಅದೇ, ಪು.೪೮

೪೬. ಅದೇ, ಪು.೪೯

೪೭. *ಧರ್ಮ ವಿಶ್ವಕೋಶ*, ಪು. ೨೩೮

೪೮. ಚಿದಾನಂದಮೂರ್ತಿ ಎಂ., ಪೂರ್ವೋಕ್ತ, ಪು. ೬೫

೪೯. ಅದೇ, ಪು. ೬೫

೫೦. ಅದೇ, ಪು. ೬೬

೫೧. ಗಣಪತಿರಾವ್ ಐಗಳ್ ಎಂ., *ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ*, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ, ೨೦೦೪, ಪು. ೫೧-೫೨

೫೨. *ಧರ್ಮ ವಿಶ್ವಕೋಶ*, ಪು. ೩

೫೩. ಗಣಪತಿರಾವ್ ಐಗಳ್ ಎಂ, ಪೂರ್ವೋಕ್ತ, ಪು. ೫೧-೫೭

೫೪. *ಮಧ್ಯಕಾಲೀನ ಕನ್ನಡ ಸಾಹಿತ್ಯ* ಮತ್ತು *ಅಸ್ಪೃಶ್ಯತೆ*, ಪು. ೬೬

೫೫. ಸುರೇಂದ್ರರಾವ್ ಬಿ.(ಸಂ), ಸಂಪುಟ-೨, ಪು. ೨೨೩-೨೭

೫೬. ಮೋಹನ್‌ಕೃಷ್ಣ ರೈ., ಪೂರ್ವೋಕ್ತ, ಪು. ೧೫೯-೬೦

೫೭. ಹಿರೇಮಠ ಎಸ್.ಎಸ್., *ಸಮಾಜ ಸಂಸ್ಕೃತಿ ಸಂಘರ್ಷ*, ಸಿವಿಜಿ ಪಬ್ಲಿಕೇಷನ್ಸ್, ಬೆಂಗಳೂರು, ೨೦೦೫, ಪು. ೩೪

೫೮. ಅದೇ, ಪು. ೩೫

೫೯. ಮೋಹನ್‌ಕೃಷ್ಣ ರೈ., ಪೂರ್ವೋಕ್ತ, ಪು. ೧೬೨

೬೦. ಅದೇ, ಪು. ೧೬೪

೬೧. ಅದೇ, ಪು. ೧೬೪

೬೨. *ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ,* ಪು.೬೭

೬೩. ಕಲಬುರ್ಗಿ ಎಂ.ಎಂ.(ಸಂ), ವಚನ ಸಂಪುಟ-೧

೬೪. ಅದೇ, ಪು.

೬೫. ಸುರೇಂದ್ರರಾವ್ ಬಿ.(ಸಂ), *ಕರ್ನಾಟಕ ಚರಿತ್ರೆ,* ಸಂ.೨, ಪು.೨೩೩

೬೬. ಅದೇ, ಪು.೨೩೨

೬೭. ಅದೇ, ಪು.೨೩೩

೬೮. ಅದೇ, ಪು.೨೩೩

೬೯. ಚಿದಾನಂದಮೂರ್ತಿ ಎಂ., *ವಚನಸಾಹಿತ್ಯ,* ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೭೫

೭೦. ವಿದ್ಯಾಶಂಕರ ಎಸ್.(ಸಂ), *ಸಂಕೀರ್ಣ ವಚನ,* ಸಂಪುಟ-೨, ಪು.೩೫೪

೭೧. ಜವರಯ್ಯ ಮ.ನ., *ದಲಿತವರ್ಗದ ಶರಣರು ಮತ್ತು ಶರಣೆಯರು ಒಂದು ಅಧ್ಯಯನ,* ಸಿದ್ಧಾರ್ಥ ಗ್ರಂಥಮಾಲೆ, ಮೈಸೂರು

೭೨. *ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ* ಪು.೭೦

೭೩. ಅದೇ, ಪು.೭೩

೭೪. ಬಸವರಾಜ ಸಬರದ, *ವಚನಕಾರರು ಮತ್ತು ದಲಿತ ಸಂವೇದನೆ,* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪, ಪು.೭

೭೫. ವೀರಣ್ಣ ರಾಜೂರ (ಸಂ), *ಸಂಕೀರ್ಣ ವಚನ ಸಂಪುಟ-೫,* ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೯೩, ಪು.೨೦೫

೭೬. ಅಮರೇಶ ನುಗಡೋಣಿ (ಸಂ), *ಬಸವಣ್ಣನ ವಚನಗಳು ಸಾಂಸ್ಕೃತಿಕ ಮುಖಾಮುಖಿ,* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪, ಪು.೪೮

೭೭. ಎಂ.ಎಂ. ಕಲಬುರ್ಗಿ (ಸಂ), *ಹರಿಹರನ ರಗಳೆಗಳು,* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.

೭೮. *ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ,* ಪು.೧೧೬-೧೭

೭೯. ಲಕ್ಷ್ಮಣ್ ತೆಲಗಾವಿ (ಸಂ), *ಸಂಶೋಧನೆ,* ಚಿದಾನಂದಮೂರ್ತಿ ಅಭಿನಂದನಾ ಸಂಪುಟ, ಪು. ೨೨೬-೨೭

೮೦. ನಾವಡ ಎ.ವಿ., ಗಾಯತ್ರಿ ನಾವಡ (ಸಂ), *ಸಾವಿರಾರು ಕೀರ್ತನೆಗಳು,* ಅಂಕಿತ ಪುಸ್ತಕ, ಬೆಂಗಳೂರು, ೨೦೦೨, ಪು. ೧೪

೮೧. ರಾಮಶೇಷನ್ ಎನ್.ಕೆ., *ಹರಿದಾಸ ಆಂದೋಲನ,* ಮೈಸೂರು, ೧೯೯೧, ಪು.೪೧

೮೨. ಅದೇ, ಪು. ೪೨; ಸುಳಾದಿ ಎಂದರೆ ಸಂಗೀತದ ರಾಗಮಾಲಿಕೆಯಲ್ಲಿ 'ತಾಳ' ಒಂದೇ ಆಗಿ ವಿವಿಧ ರಾಗಗಳು ಸಮಾವೇಶವಾದರೆ, ಸುಳಾದಿಗಳಲ್ಲಿ ರಾಗ ಏಕವಾಗಿ ವಿವಿಧ ತಾಳಗಳು ಸಮಾವೇಶ ಹೊಂದಿರುತ್ತವೆ; ಭಾವಪ್ರಧಾನವಾದ ಗೀತೆಗಳಿಗೆ ಉಗಾಭೋಗವೆಂದಾದರೆ; ಒಂದು ಪದ ಹಾಗೂ ಒಂದು ಶ್ಲೋಕ ಇರುವ ಛಂದೋಸೂಚನೆಯು ವೃತ್ತನಾಮವೆಂದು ಕರೆಸಿಕೊಳ್ಳುತ್ತದೆ; ದಂಡಕ ಸರಳ ರಗಳೆಯ ರೀತಿ ಮುಂದುವರಿಯುವ ಪ್ರಕಾರ. ಗದ್ಯ ಪದ್ಯದ ನಡುವಿನ ಶೈಲಿ.

೮೩. ನಾವಡ ಎ.ವಿ., ಗಾಯತ್ರಿ ನಾವಡ(ಸಂ), ಪೂರ್ವೋಕ್ತ, ಪು. ೧೪

೮೪. ರಾಮಚಂದ್ರರಾವ್ ಸಾ.ಕೃ., *ದಾಸಸಾಹಿತ್ಯ ಮತ್ತು ಸಂಸ್ಕೃತಿ*, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೩, ಪು. ೩೦೫

೮೫. ಅದೇ, ಪು. ೩೦೬

೮೬. ಅದೇ, ಪು. ೨೯೮

೮೭. ಸುಧಾಕರ (ಸಂ), *ಕನಕದಾಸರ ಕೀರ್ತನೆಗಳು*, ಸಂಪುಟ-೫, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಪು. ೫೫

೮೮. ಶಿವಣ್ಣ ಕೆ.ಎಸ್.(ಸಂ), ಹಿಂದೆ ಉಲ್ಲೇಖಿಸಿದ್ದು, ಪು. ೨೫೧

೮೯. ಅದೇ, ಪು. ೨೫೧

೯೦. ಅದೇ, ಪು. ೨೫೩

೯೧. *ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ*, ಪು.೧೯೮

೯೨. ಅದೇ, ಪು. ೧೯೯

೯೩. ಇಸ್ಮಾಯಿಲ್ ಕೆ., *ಕರ್ನಾಟಕ ಟೆಂಪಲ್ಸ್: ದೇರ್ ರೋಲ್ ಅಂಡ್ ಸೋಷಿಯೋ ಎಕನಾಮಿಕ್ ಲೈಫ್*, ಸಂದೀಪ ಪ್ರಕಾಶನ, ಡೆಲ್ಲಿ, ೧೯೮೪, ಪು.೧೧೧

೯೪. ಅದೇ. ಪು. ೧೨೦

೯೫. ಮೋಹನ್‌ಕೃಷ್ಣ ರೈ, ಪು. ೧೩೧-೩೨

೯೬. *ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ*, ಪು. ೨೦೬-೭

೯೭. ಕನ್ನಡ ಅಧ್ಯಯನ ತ್ರೈಮಾಸಿಕ ಪತ್ರಿಕೆ, ಸಂಪುಟ-೮, ಸಂಚಿಕೆ-೪, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨, ಪು.೮೧

೯೮. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೨೦೮

೯೯. ಶಿವಾನಂದ (ಸಂ), *ಹೈದರಾಬಾದ್ ಕರ್ನಾಟಕ ಭಾಗದ ಕನ್ನಡ ಶಾಸನಗಳು*, ಪ್ರಸ್ತಾವನೆ ಭಾಗ

೧೦೦. *ಇತಿಹಾಸ ದರ್ಶನ*, ಸಂಪುಟ-೧೬, ೨೦೦೧, ಪು. ೨೩೬-೩೭

೧೦೧. ಅದೇ, ಪು. ೨೩೭

೧೦೨. *ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ*, ಪು. ೨೦೦

೧೦೩. ಮೋಹನ್‌ಕೃಷ್ಣ ರೈ., ಪು. ೧೩೪

೧೦೪. ಚನ್ನಕ್ಕ ಎಲಿಗಾರ, ಪೂರ್ವೋಕ್ತ, ಪು. ೪೯೫೫

೧೦೫. ಅದೇ, ಪು. ೬೧

೧೦೬. ಅದೇ, ಪು. ೬೩

೧೦೭. ಶಿವಣ್ಣ ಕೆ.ಎಸ್.(ಸಂ), *ಕರ್ನಾಟಕ ಚರಿತ್ರೆ*, ಸಂ.೩, ಪು. ೨೫೯

೧೦೮. *ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ*, ಕೊಪ್ಪಳ ಜಿಲ್ಲೆ, ಕ್ರಿ.ಶ. ೧೧೭೭

೧೦೯. ಕಲಬುರ್ಗಿ ಎಂ.ಎಂ., *ಮಾರ್ಗ-೪*, ಸ್ವಪ್ನ ಬುಕ್ ಹೌಸ್, ಬೆಂಗಳೂರು, ೨೦೦೪, ಪು. ೩೪೫-೪೭

೧೧೦. ಚಿದಾನಂದಮೂರ್ತಿ ಎಂ., *ಜನ ಜನಪದ ಜಾನಪದ*, ಸ್ವಪ್ನ ಬುಕ್ ಹೌಸ್, ಬೆಂಗಳೂರು, ೧೫೬-೫೯

೧೧೧. *ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ*, ಪು.೧೪೫

೧೧೨. ಕಲಬುರ್ಗಿ ಎಂ.ಎಂ., ಪೂರ್ವೋಕ್ತ, ಪು. ೩೪೭

೧೧೩. ಚಿದಾನಂದಮೂರ್ತಿ ಎಂ., ಪೂರ್ವೋಕ್ತ, ಪು. ೧೪೭

೧೧೪. ಸಾವುಕಾರ್ ಎಸ್. ಕಾಂಬಳೆ, *ಲಿಂಗಾಯತ ಅಸ್ಪೃಶ್ಯರು ಒಂದು ಅಧ್ಯಯನ*, ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಗದಗ, ೨೦೦೩, ಪು.೨೪-೨೭

೧೧೫. *ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ*, ಪು. ೧೪೬-೪೭

೧೧೬. ಬಸವರಾಜ ಕಲ್ಗುಡಿ, *ಅನುಭಾವ : ಸಾಂಸ್ಕೃತಿಕ ಸಮಸ್ಯೆ ಮತ್ತು ಹುಡುಕಾಟ*, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೧, ಪು. ೨೦೩-೦೪

೧೧೭. *ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ*, ಪು. ೧೪೭

೧೧೮. ವಿದ್ಯಾಶಂಕರ ಎಸ್., *ವಚನಾನುಶೀಲನ*, ಸ್ನೇಹ ಪ್ರಕಾಶನ, ಬೆಂಗಳೂರು, ೧೯೮೯, ಪು.

೧೧೯. ಅದೇ, ಪು.೩೮೬-೮೮

೧೨೦. ಅದೇ, ಪು.೩೮೯

೧೨೧. ಅದೇ, ಪು.೩೯೦

೧೨೨. *ಲಿಂಗಾಯತ ಅಸ್ಪೃಶ್ಯರು*, ಪು.೮೭

೧೨೩. ಅದೇ, ಪು.೮೭

೧೨೪. ಅದೇ, ಪು.೮೮

೧೨೫. ಅದೇ, ಪು.೨೮-೨೯

೧೨೬. ಅದೇ, ಪು.೩೦-೩೧

೧೨೭. ಕಲಬುರ್ಗಿ ಎಂ.ಎಂ., *ಮಾರ್ಗ-೪*, ಪು. ೨೩೯; ವಡ್ಡಾರಾಧನೆ ಕೃತಿ ಧಾರ್ಮಿಕ ಕಥೆಗಳಿಂದ ಕೂಡಿದ್ದರೂ, ಒಳಪದರಿನಲ್ಲಿ ಅನ್ಯ ಧರ್ಮೀಯರನ್ನು ಮತ ವರ್ಣಗಳಿಗೆ ಸಂಬಂಧಿಸಿದ ಜನರನ್ನು ಮತಾಂತರಿಸಿಕೊಳ್ಳುವ ತಂತ್ರವನ್ನು ಪಾಠ ಮಾಡುತ್ತವೆ. ಇದು ಜೈನಧರ್ಮೀಯರಿಗೆ ಸಂಬಂಧಿಸಿದ ಮಾತಾದರೂ ವಿಭಿನ್ನ ಮತ, ಧರ್ಮ ವರ್ಣಗಳ ಜನತೆಗೆ ಭಿನ್ನವಾದ ರೀತಿಯಲ್ಲಿ ಪರಿಣಾಮವನ್ನು ಕೊಡುತ್ತವೆ. ಜೊತೆಗೆ "ಜೈನ ಧರ್ಮಕ್ಕೆ ಮತಾಂತರಗೊಂಡರೆ ಪಾಪದಿಂದ ಮುಕ್ತರಾಗುತ್ತೀರಿ" ಎನ್ನುವ ಸಂದೇಶವನ್ನು ಕೊಡುತ್ತವೆ. ಜೀವನ ಪಾಪದಿಂದ ನರಕವನ್ನು, ಪ್ರಾಣಿ ಜನ್ಮಗಳನ್ನೂ ಪಡೆಯುತ್ತವೆ. ಧರ್ಮದಿಂದ ದೇವಲೋಕವನ್ನು ಪಡೆಯುತ್ತಾನೆ. ಪಾಪ-ಪುಣ್ಯ ಮಿಶ್ರಣದಿಂದ ಮನುಷ್ಯತ್ವವನ್ನು ಪಡೆಯುತ್ತಾನೆ. ಮತ್ತೆ ಅವೆರಡರ ನಾಶದಿಂದ ಮೋಕ್ಷವನ್ನು ಹೊಂದುತ್ತಾನೆ. ಈ ಕೃತಿಯಲ್ಲಿ ದಾಖಲಾಗಿರುವಂತೆ ಘೋರವಾದ ಪಾಪವನ್ನು ಮಾಡಿದವನು ಹೊಲೆಯ ಮಾದಿಗರ ಜಾತಿಯಲ್ಲಿ ಹುಟ್ಟುತ್ತಾರೆ. ಅಂದರೆ ಜೈನಧರ್ಮದವರು ಜಾತಿವ್ಯವಸ್ಥೆಯನ್ನು ಒಪ್ಪಿಕೊಳ್ಳುತ್ತಾರೆ. ಒಂದರ್ಥವಾದರೆ, ಪ್ರಸ್ತುತದ ಇನ್ನೊಂದು ಅರ್ಥದಲ್ಲಿ ಬದುಕಿರುವ ಹೊಲೆಯ-ಮಾದಿಗರಿಗೆ ಆ ಜಾತಿಯ ಬದುಕಿನ ಬಗ್ಗೆ ಹೇಸಿಗೆ ಹುಟ್ಟುವಂತೆ ಹೇಳಿ, ಪಾಪ ಪ್ರಜ್ಞೆಯನ್ನು ಜಾಗೃತಗೊಳಿಸಿ ಅವರನ್ನು ತಮ್ಮ ಧರ್ಮಕ್ಕೆ ಮತಾಂತರಗೊಳ್ಳಲು ಮಾರ್ಗ ಮಾಡಿಕೊಳ್ಳುತ್ತಾರೆ (ಬಿ.ಎಂ. ಪುಟ್ಟಯ್ಯ (ಸಂ), ವಡ್ಡಾರಾಧನೆ: ಸಾಂಸ್ಕೃತಿಕ ಮುಖಾಮುಖಿ, ಪು.೧೨೭).

೧೨೮. ಅದೇ, ಪು. ೨೪೦;

ಕೌಸಂಬಿಯೆಂಬ ಪೊಳಲೊಳ್ ಮಿಳಿಯ ಬಿದಿರ
ಮೇಗೇರೆಯಾಕಾಶದೊಳಾಡುವ ವಿದ್ಯಾಧರಲಲಂಗಿಗರ

ಮನೆಯೊಳ್ ಪೆಣ್ಗತ್ತೆಯಾಗಿ ಪುಟ್ಟಿಪರಿಯವಪ್ಪ ಪೊಳೆಗಳ
ಪೊತ್ತು ಪೋಗಿ... ಪೇಪಂದಿಯಾಗಿ ಪುಟ್ಟಿ ಸತ್ತು ಮತ್ತು
ಮಗಧಯೆಂಬುದು ನಾಡಲ್ಲಿ ಚಂಪಾನಗರಮೆಂಬುದು
ಪೊಳಲಲ್ಲಿ ಪೆಣ್ಣಾಯಾಗಿ ಮಾದೆಗರ ಮಾನೆಯೊಳ್ ಪುಟ್ಟಿ
ಸತ್ತು ಮತ್ತಮಾ ಪೊಳಲೋಳ್ ಮಾದೆಗರ ಪ್ರಧಾನನಪ್ಪ
ನೀಳನೆಂಬ ಮಾದೆಗಂಗಂ ಕೇಶಿಯೆಂಬ ಮಾದೆಗಿಗಂ ಮಗಳ್
ದುರೋಪೆ ದುರ್ವರ್ಣೆ ದುರ್ಗಂಧೆ ದುಸ್ಸ್ವರಿರೆ ಪುಟ್ಟುಂಗುರುಡಿ
ಪೊಲತಿಯಾಗಿ ಪುಟ್ಟಿ ವ್ಯಾಧಿಪೀಡಿತೆ ಕ್ಷುಧಾಗ್ನಿಯಿಂ ಬಳ್ದ
ಳೊಂದು ದಿವಸಮುದ್ಯಾನವನಕ್ಕೆ ಪೋಗಿ ನೇರಿಲ
ಪಣ್ಗಳಂ ತಡವರಿಸಿಯಾಯ್ದು ತಿನ್ನುತ್ತರ್ಪಳ್

ಈ ಮೇಲಿನ ಪಠ್ಯದಿಂದ 'ಹೊಲೆಯ' ಮತ್ತು 'ಮಾದಿಗ' ಎನ್ನುವ ಶಬ್ದಗಳು ಬಳಕೆಯಾಗಿದ್ದು ಅವುಗಳನ್ನು ಸಮಾನ ಅರ್ಥದಲ್ಲಿ ಬಳಸಿರುವುದು ಗಮನಿಸಬಹುದು. ಹಾಗೆಯೇ ಜೈನಧರ್ಮದ ತಾತ್ವಿಕ ವಿಚಾರಗಳನ್ನು ಕುರಿತು ಚರ್ಚಿಸುವಾಗ ಈ ಧರ್ಮವು ಜಾತಿ ವ್ಯವಸ್ಥೆಯನ್ನು ಒಪ್ಪಿಕೊಳ್ಳುತ್ತದೆ ಮತ್ತು ಕೆಳಜಾತಿಯವರನ್ನು ಪಾಪದ ಪ್ರಜ್ಞೆಯನ್ನು ಜಾಗೃತಿಗೊಳಿಸಿ ಅವರನ್ನು ಜೈನ ಧರ್ಮದತ್ತ ಮನಸೆಳೆಯುವ ಪ್ರಯತ್ನವಿದೆ. ಹೀಗಾಗಿಯೇ ಕೀಳುಜಾತಿಯವರು ಕೆಟ್ಟ ಜಾತಿಯವರಾಗಿ, ಕುರೂಪಿಗಳಾಗಿ ಪುಟ್ಟು ಕುರುಡರಾಗಿ ಮೂಡಿಬರುತ್ತಾರೆ. (ಬಿ.ಎಂ. ಪುಟ್ಟಯ್ಯ (ಸಂ), *ವಡ್ಡಾರಾಧನೆ ಸಾಂಸ್ಕೃತಿಕ ಮುಖಾಮುಖಿ*, ಪು.೧೨೮)

೧೨೯. *ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ*, ಪು.೧೪೮

೧೩೦. *ಧರ್ಮ ವಿಶ್ವಕೋಶ*, ಪು.೨೫೨

೧೩೧. *ಕರ್ನಾಟಕ ಚರಿತ್ರೆ*, ಸಂಪುಟ-೩, ಪು.

೧೩೨. ವಸಂತ ಮಾಧವ ಕೆ.ಜಿ., *ರಿಲೀಜಿಯಸ್ ಇನ್ ಕೋಸ್ಟಲ್ ಕರ್ನಾಟಕ*, ಇಂಟರ್ ಇಂಡಿಯಾ ಪಬ್ಲಿಕೇಷನ್, ನ್ಯೂ ಡೆಲ್ಲಿ, ೧೯೮೫, ಪು.೧೦೧

೧೩೩. ಅದೇ, ಪು.೧೦೨

೧೩೪. *ಪಿಂಜಾರರು*, ಉಪಸಂಸ್ಕೃತಿ ಮಾಲೆ, ಪು. ೭೪

೧೩೫. ಅದೇ, ಪು. ೭೭

೧೩೬. ಎಚ್ಚೆಸ್ಕೆ, *ಅವಲೋಕನ*, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ಪು.೧೯೫

೧೩೭. ಶಿವಣ್ಣ ಕೆ.ಎಸ್. (ಸಂ), *ಕರ್ನಾಟಕ ಚರಿತ್ರೆ*, *ಸಂಪುಟ-೩*, ಪು.೨೬೧-೬೨

೧೩೮. *ವೆಸ್ಟರ್ನ್ ಕರ್ನಾಟಕ*, ಪು.೫೨

೧೩೯. ಮಹಾಲಿಂಗಂ ಟಿ.ವಿ., *ಅಡ್ಮಿನಿಸ್ಟ್ರೇಷನ್ ಅಂಡ್ ಸೋಷಿಯಲ್ ಲೈಫ್ ಅಂಡರ್* ವಿಜಯನಗರ, ಮದ್ರಾಸ್, ೧೯೭೫, ಪು.೨೦೯

೧೪೦. *ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ*, ಪು.೧೩೯-೪೦

೧೪೧. *ಕರ್ನಾಟಕ ಪರಂಪರೆ*, ಸಂ.೨, ಮೈಸೂರು ರಾಜ್ಯ ಸರ್ಕಾರ, ಬೆಂಗಳೂರು, ೧೯೭೦, ಪು.೨೮೧-೮೨

೧೪೨. *ಕೆಳದಿ ಸಂಸ್ಥಾನದ ಸಮಗ್ರ ಅಧ್ಯಯನ*, ಪು.೨೨೫-೨೨೬

೧೪೩. ನಾಗೇಗೌಡ ಎಚ್.ಎಲ್. (ಸಂ), *ಪ್ರವಾಸಿ ಕಂಡ ಇಂಡಿಯಾ*, ಸಂ.೬, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೭, ಪು.೨೪೩

೧೪೪. ಅದೇ, ಪು.೨೪೪

೧೪೫. ಅದೇ, ಪು.೨೪೪

೧೪೬. ಚಿದಾಂದಮೂರ್ತಿ ಎಂ., ಪು. ೫೨-೫೪

೧೪೭. ಅಂಬೇಡ್ಕರ್ ಬಿ.ಆರ್., ಪೂರ್ವೋಕ್ತ, ಪು. ೮೭-೮೯

೧೪೮. ಜವರಯ್ಯ ಮ.ನ., *ಅಂಬೇಡ್ಕರ್ ಮತ್ತು ಸಾಮಾಜಿಕ ನ್ಯಾಯ*, ಸಿದ್ಧಾರ್ಥ ಗ್ರಂಥಮಾಲೆ, ಮೈಸೂರು, ೧೯೯೬, ಪು. ೧೨೦

೧೪೯. ಹಿರೇಮಠ ಎಸ್.ಎಸ್., *ಜಾತ್ರೆಗಳು ಭಾಗ-೨*, ಸಮತಾ ಪ್ರಕಾಶನ, ಹೊಸಪೇಟೆ, ೧೯೯೩, ಪು. ೨೦೦-೦೧

೧೫೦. ಚಿದಾನಂದಮೂರ್ತಿ, ಪೂರ್ವೋಕ್ತ, ಪು. ೫೩-೫೪

೧೫೧. ಕಲಬುರ್ಗಿ ಎಂ.ಎಂ., *ಮಾರ್ಗ-೨*, ಪು.೨೩೧

೧೫೨. ಮೋಹನ್‌ಕೃಷ್ಣ ರೈ., ಪೂರ್ವೋಕ್ತ, ಪು. ೧೪೨

೧೫೩. ಸಿದ್ಧಲಿಂಗಯ್ಯ, *ಗ್ರಾಮ ದೇವತೆಗಳು*, ಪು. ೧೫೨

೧೫೪. ಮಂಜುನಾಥ ಬೇವಿನಕಟ್ಟಿ, *ಮಾತಂಗಿ*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೬, ಪು.೩

೧೫೫. ಅದೇ, ಪು. ೫

೧೫೬. ಬೋರಲಿಂಗಯ್ಯ ಹಿ.ಚಿ., *ಉಜ್ಜನಿ ಚೌಡಮ್ಮ*, ದಿನಕರ ಪ್ರಕಾಶನ, ಪು. ೨೦-೨೨

೧೫೭. ಅದೇ, ಪು. ೭೯

೧೫೮. ಕಾಳೇಗೌಡ ನಾಗವಾರ, ಹುಚ್ಚಪ್ಪ ಮಾಸ್ತಾರ (ಸಂ.), *ಗಿರಿಜನ ಸಂಸ್ಕೃತಿ*, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೨೦೦೦, ಪು. ೨-೪

೧೫೯. ಅದೇ, ಪು.೧೨೬

೧೬೦. ಮೊಗಳ್ಳಿ ಗಣೇಶ್, *ಮೌಖಿಕ ಕಥನ*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬, ಪು.೭೦

೧೬೧. ಪರಮಶಿವಯ್ಯ ಜೀ.ಶಂ., *ದಕ್ಷಿಣ ಕರ್ನಾಟಕದ ಜನಪದ ಕಾವ್ಯ ಸಂಪ್ರದಾಯಗಳು*, ಮೈಸೂರು ವಿಶ್ವವಿದ್ಯಾನಿಲಯ, ಪ್ರಸಾರಾಂಗ, ಮೈಸೂರು, ೧೯೭೯, ಪು.೮೫

೧೬೨. ಹಿರೇಮಠ ಎಸ್.ಎಸ್., *ಜನಪದ ಸಮಾಜ ಸಂಸ್ಕೃತಿ*, ಸೂರ್ಯ ಪ್ರಕಾಶನ, ಮಲ್ಲಾಡಿಹಳ್ಳಿ, ೨೦೦೫, ಪು.

೧೬೩. ಪರಮಶಿವಯ್ಯ ಜೀ.ಶಂ., ಪೂರ್ವೋಕ್ತ, ಪು.೧೧೬

೧೬೪. ವಿಜಯ್ ಪೂಣಚ್ಚ ತಂಬಂಡ, *ಪಳಮೆ*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫, ಪು.೧೭

೧೬೫..ಬೋರಲಿಂಗಯ್ಯ ಹಿ.ಚಿ.(ಸಂ.), *ಮಲೆ ಮಾದೇಶ್ವರ*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭, ಪು.೧೧೨

೧೬೬. ವಿಜಯ್ ಪೂಣಚ್ಚ ತಂಬಂಡ, ಪೂರ್ವೋಕ್ತ, ಪು. ೧೯

೧೬೭. ಕೇಶವನ್ ಪ್ರಸಾದ್ ಕೆ.(ಸಂ.), *ಮಲೆಮಾದೇಶ್ವರ*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭, ಪು. ೧೧೪-೧೧೭

೧೬೮. ವಿಜಯ್ ಪೂಣಚ್ಚ ತಂಬಂಡ, ಪೂರ್ವೋಕ್ತ, ಪು.೧೩೩

೧೯೯. ಬೋರಲಿಂಗಯ್ಯ ಹಿ.ಚಿ. (ಸಂ.), *ಮಂಟೇಸ್ವಾಮಿ ಪರಂಪರೆ,* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭, ಪು.೭೫

೧೭೦. ವಿಜಯ್ ಪೂಣಚ್ಚ ತಂಬಂಡ, ಪೂರ್ವೋಕ್ತ, ಪು.೧೩೩

೧೭೧. ಅದೇ, ಪು.೨೫

೧೭೨. ಬೋರಲಿಂಗಯ್ಯ ಹಿ.ಚಿ.(ಸಂ), ಪೂರ್ವೋಕ್ತ, ಪು. ೯೭

೧೭೩. ಅದೇ, ಪು.೯೯

೧೭೪. ವೆಂಕಟೇಶ ಇಂದ್ವಾಡಿ (ಸಂ), *ಮಂಟೇಸ್ವಾಮಿ ಕಾವ್ಯ,* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪, ಪು.೭೨

೧೭೫. ವೃಷಭೇಂದ್ರಸ್ವಾಮಿ(ಸಂ.), *ಜಾನಪದ ಸಾಹಿತ್ಯ ದರ್ಶನ-೯,* ಜುಂಜಪ್ಪ, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೮, ಪು.೭೨

೧೭೬. ವಿಜಯ್ ಪೂಣಚ್ಚ ತಂಬಂಡ, ಪೂರ್ವೋಕ್ತ, ಪು.೩೦ ೩೧

೧೭೭. ವೃಷಭೇಂದ್ರಸ್ವಾಮಿ (ಸಂ.), ಪೂರ್ವೋಕ್ತ, ಪು. ೭೩-೭೪

೧೭೮. ಚಲುವರಾಜು (ಸಂ.), *ಜುಂಜಪ್ಪ,* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೭೯

೧೭೯. ತೀ.ನಂ. ಶಂಕರನಾರಾಯಣ, *ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು,* ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ೧೯೮೨, ಪು.೬೧

೧೮೦. ಚಲುವರಾಜು (ಸಂ.), ಪೂರ್ವೋಕ್ತ, ಪು. ೮೦

೧೮೧. ಶಂಕರನಾರಾಯಣ ತೀ.ನಂ., ಪೂರ್ವೋಕ್ತ, ಪು.೭೦

೧೮೨. ಅದೇ, ಪು. ೭೩-೭೫

೧೮೩. ವಿಜಯ್ ಪೂಣಚ್ಚ ತಂಬಂಡ, ಪೂರ್ವೋಕ್ತ, ಪು.೩೫

೧೮೪. ಕಲಬುರ್ಗಿ ಎಂ.ಎಂ., ಮಾರ್ಗ-೨, ಪು. ೨೩೬

೧೮೫. ಪರಮಶಿವಯ್ಯ ಜೀ.ಶಂ., ಪೂರ್ವೋಕ್ತ, ಪು.೨೪೭

೧೮೬. ಮೋಹನ್‌ಕೃಷ್ಣ ರೈ, ಪೂರ್ವೋಕ್ತ, ಪು.೧೪೬

೧೮೭. ಅದೇ, ಪು.೧೪೬

೧೮೮. ರಾಜಾರಾಮ ಹೆಗಡೆ, *ಲೌಕಿಕ-ಅಲೌಕಿಕ,* ಅನಂದಕಂದ ಗ್ರಂಥಮಾಲೆ, ಮಲ್ಲಾಡಿಹಳ್ಳಿ, ೨೦೦೧, ಪು.೧೪೪

೧೮೯. ಮಂಜುನಾಥ ಬೇವಿನಕಟ್ಟಿ(ಸಂ.), *ಮೈಲಾರಲಿಂಗನ ಕಾವ್ಯ,* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಬಸವಣ್ಣನ ವಚನಗಳಲ್ಲಿ, ಉರಿಲಿಂಗಪೆದ್ದಿಯ ವಚನದಲ್ಲಿಯೂ ಮೈಲಾರನ ಉಲ್ಲೇಖವಿದೆ. ಈ ಹಿನ್ನೆಲೆಯಲ್ಲಿ ಸ್ಪಷ್ಟವಾಗಿ ಐತಿಹಾಸಿಕ ಪುರುಷನೆಂಬುವುದಕ್ಕೆ ಯಾವ ಅನುಮಾನವೂ ಇಲ್ಲ. ಪಿ.ಬಿ. ದೇಸಾಯಿಯವರು 'ಮಲೆ' ಎಂಬ ಶಬ್ದದಿಂದ ಮೈಲಾರ ಹುಟ್ಟಿಕೊಂಡಿದೆ ಎಂದು ಅಭಿಪ್ರಾಯಪಡುತ್ತಾರೆ (ಚಿದಾನಂದಮೂರ್ತಿ ಎಂ., ಜನ ಜನಪದ ಜಾನಪದ, ಪು.೨೫೫-೬೭).

೧೯೦. ಮುದೇನೂರು ನಿಂಗಪ್ಪ, *ಜನಪದ ಮಹಾಕಾವ್ಯಗಳಲ್ಲಿ ಸಾಂಸ್ಕೃತಿಕ ವೀರರು,* ಪು.೯೨

೧೯೧. ಅದೇ, ಪು.೯೬

೧೯೨. ವೆಂಕಟೇಶ ಇಂದ್ವಾಡಿ (ಸಂ.), *ಗೋಣಿ ಬಸಪ್ಪನ ಕಾವ್ಯ*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬, ಪು.೨೭-೨೮

೧೯೩. ಅದೇ, ಪು. ೨೯-೩೧

೧೯೪. ವಿವೇಕ ರೈ ಬಿ.ಎ., *ತುಳು ಜಾನಪದ ಸಾಹಿತ್ಯ*, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೫, ಪು.೭-೧೦

೧೯೫. ಅಮೃತ ಸೋಮೇಶ್ವರ (ಸಂ.), *ತುಳು ಪಾಡ್ದನ ಸಂಪುಟ*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭, ಪು.೨-೬

೧೯೬. ವಿಜಯ್ ಪೂಣಚ್ಚ ತಂಬಂಡ, ಪೂರ್ವೋಕ್ತ, ಪು. ೧೦೩; ಕೇವಲ ಮೌಖಿಕ ಪರಂಪರೆಯಲ್ಲಿ ಮಾತ್ರವಲ್ಲದೆ ಲಿಖಿತ ದಾಖಲೆಗಳಲ್ಲಿ ಸಹ ಪಾಡ್ದನಗಳ ವಿಚಾರಗಳು ಉಲ್ಲೇಖವಾಗಿವೆ. ತುಳುನಾಡಿನಲ್ಲಿ ಕ್ರಿ.ಶ. ೪ನೇ ಶತಮಾನದಿಂದ ೧೬ನೇ ಶತಮಾನದವರೆಗೆ ವೀರಗಲ್ಲುಗಳು ಕಂಡುಬರುತ್ತವೆ. ಕ್ರಿ.ಶ. ೧೪೫೦ ನಂದಳಿಕೆ ಶಾಸನ ಮತ್ತು ೧೫೫೫ರ ಶಾಸನದಲ್ಲಿ ವಿಟ್ಲದ ಅರಸನಾದ ಡೊಂಬ ಹೆಗಡೆಯವರ ಮಲೆರಾಯ ಭೂತಕ್ಕೆ ಉಂಬಳಿ ಬಿಟ್ಟ ಉಲ್ಲೇಖವಿದೆ. ಭೂತಗಳ ಬಗ್ಗೆ ೧೩೭೬, ೧೫೪೬, ೧೫೫೪, ೧೫೬೩, ೧೫೬೬ ಮತ್ತು ೧೬೩೦ರಲ್ಲಿ ದೊರೆತ ಶಾಸನಗಳನ್ನು ಭೂತಗಳ ಬಗ್ಗೆ ವಿವರವಿದೆಯೆಂದು ವಸಂತ ಮಾಧವ ಅವರು ತಿಳಿಸಿದ್ದಾರೆ. (ಅದೇ.),

೧೯೭. ಅಮೃತ ಸೋಮೇಶ್ವರ (ಸಂ.), ಪೂರ್ವೋಕ್ತ, ಪು.೨೪

೧೯೮. ವಿವೇಕ ರೈ ಬಿ.ಎ., ಪೂರ್ವೋಕ್ತ, ಪು.೧೪೦

೧೯೯. ವಿಜಯ್ ಪೂಣಚ್ಚ ತಂಬಂಡ, ಪೂರ್ವೋಕ್ತ, ಪು.೯೯-೧೦೨

೨೦೦. ವಿವೇಕ ರೈ., ಪೂರ್ವೋಕ್ತ, ಪು. ೧೪೧

೨೦೧. ಅಮೃತ ಸೋಮೇಶ್ವರ(ಸಂ), ಪೂರ್ವೋಕ್ತ, ಪು. ೫೭; ಕರ್ನಾಟಕ ಸರ್ಕಾರ ಇವರನ್ನು ಗಿರಿಜನ ಎಂಬುದಾಗಿ ಗುರುತಿಸಿದೆ. ೧೯೮೫-೮೬ರಲ್ಲಿ ಕೇಂದ್ರ ಸರ್ಕಾರ ಆದಿವಾಸಿ ಜನಾಂಗ (Primitive Tribe) ಎಂದು ಗುರುತಿಸಿದೆ. ಬೆಟ್ಟಗುಡ್ಡಗಳಲ್ಲಿ ವಾಸ ಮಾಡಿಕೊಂಡಿದ್ದ ಆದಿವಾಸಿಗಳಾಗಿರಬೇಕೆಂದು ಬಿ.ಎ. ಸಾಲೆತೊರೆ ಅಭಿಪ್ರಾಯಪಡುತ್ತಾರೆ. ಹರಿಜನ ಅಥವಾ ಹೊಲೆಯರಲ್ಲಿ ಇವರದು ಒಂದು ಪ್ರಭೇದವಾಗಿರಬಹುದು. ಇವರಲ್ಲಿ ಸುಮಾರು ನಾಲ್ಕರಿಂದ ಐದು ಪ್ರಭೇದಗಳಿದ್ದಂತೆ ಕಂಡುಬರುತ್ತದೆ. ಅಂಡೆಕೊರಗ, ಸೊಪ್ಪು ಕೊರಗ, ಒಂಟಿ ಕೊರಗ, ಕಪಡ ಕೊರಗ ಮುಂತಾದವುಗಳು. ಬ್ರಿಟಿಷರು ಭಾರತಕ್ಕೆ ಬರುವ ಮೊದಲು ಇವರು ಇತರೆ ಜನಸಮುದಾಯಗಳು ವಾಸಿಸುವ ಪ್ರದೇಶಕ್ಕೆ ಬರಬೇಕಾದರೆ ಮೇಲು ಜಾತಿಯವರ ಪ್ರವೇಶ ಪಡೆಯಬೇಕಾಗಿದ್ದಿತು. ಕೊರಳಿಗೆ ಬಿದಿರಿನ ಅಂಡೆಯನ್ನಾಗಲಿ, ತೆಂಗಿನ ಕರಟವನ್ನಾಗಲಿ ಕಟ್ಟಿಕೊಳ್ಳಬೇಕಾಗಿತ್ತಂತೆ, ಹಾಗೆ ಕಟ್ಟಿಕೊಂಡರೆ ಅಂಡೆ ಕೊರಗರು (ನಾವಡ ಎ.ವಿ., ಜಾನಪದ ಸಮಾಲೋಚನೆ, ೧೯೯೩, ಪು. ೧೪೯-೫೩), ಕೊರಗರು ಯುದ್ಧ ವೀರರೆಂದು ಇತಿಹಾಸಕಾರ ವಿಲ್ಕ್ಸ್ ಅಭಿಪ್ರಾಯಪಡುತ್ತಾರೆಂದು ಬಿ.ಎ. ಸಾಲೆತೊರೆ ಹೇಳುತ್ತಾರೆ.

೨೦೨. ವಿವೇಕ ರೈ., ಪೂರ್ವೋಕ್ತ, ಪು.೯೫

೨೦೩. ಅಮೃತ ಸೋಮೇಶ್ವರ(ಸಂ.), ಪೂರ್ವೋಕ್ತ, ಪು.೬೧; ತುಳುನಾಡಿನ ಪರಿಸರದಲ್ಲಿ ಹೆಚ್ಚು ಕಂಡುಬರುವ ಪರಿಶಿಷ್ಟ ಜಾತಿಗಳಲ್ಲಿ ಮುಗೇರರು ಅಸ್ಪೃಶ್ಯರೆಂದು ಕರೆಸಿಕೊಂಡಿದ್ದಾರೆ. ಪುತ್ತೂರು, ಸುಳ್ಯ, ಬೆಳ್ತಂಗಡಿ ಪ್ರದೇಶಗಳಲ್ಲಿ ಹೆಚ್ಚಾಗಿ ವಾಸಿಸುತ್ತಾರೆ. ಇವರಿಗೆ ಮೇರರೆಂದು ಕರೆಯಲಾಗಿದೆ. ಇವರ ಸಾಂಸ್ಕೃತಿಕ ವೀರರಾದ ಮುದ್ದುಕಳಲ ಅಥವಾ ಎಣ್ಮೂರದೆಯ್ಯು ಬೇಟೆಯಾಡುವುದರಲ್ಲಿ ನಿಪುಣರಿರಬಹುದೆಂದು ನಿರ್ಧರಿಸಲಾಗಿದೆ. ತುಳುನಾಡಿನ

ದಲಿತರನ್ನು ಮೂರು ಗುಂಪುಗಳಾಗಿ ವಿಂಗಡಿಸಬಹುದು. ಮೂಲದಲಿತರು ಮುಗೇರ, ಮುಂಡಾಲ, ಬಾಕುಡ, ಗೊಡ್ಡ, ಮನ್ಸ ಮತ್ತು ಮಾಯಿಲರು; ನಲಿಕೆ, ಪಾಣಾರ, ಪಂಬದ, ಕೋಪಾಳ; ಭೈರರು (ಅಭಯ ಕೌಕ್ರಾಡಿ, ಮುಗೇರರು, ೧೯೯೭, ಪು.೨೫, ೨೬೩-೬೪)

೨೦೪. ವಿವೇಕ ರೈ., ಪೂರ್ವೋಕ್ತ, ಪು.೧೦೦

೨೦೫. ಅದೇ, ಪು.೧೦೨

೨೦೬. ಅಮೃತ ಸೋಮೇಶ್ವರ(ಸಂ.), ಪೂರ್ವೋಕ್ತ, ಪು. ೨೭

೨೦೭. ವಿಜಯ್ ಪೂಣಚ್ಚ ತಂಬಂಡ, ಪೂರ್ವೋಕ್ತ, ಪು. ೧೨೨

೨೦೮. ರಾಜಾರಾಮ ಹೆಗಡೆ, ಅಶೋಕ ಶೆಟ್ಟರ್(ಸಂ.), *ಮಲೆ ಕರ್ನಾಟಕದ ಅರಸು ಮನೆತನಗಳು*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧, ಪು.೩೦೪

೨೦೯. ಆಧುನಿಕ ಕೊಡಗು, ಪು.೪೭

೨೧೦. ಪಳಮೆ, ಪು.೮೬

೨೧೧. ಅದೇ, ಪು.೮೭-೮೮

೨೧೨. ಅದೇ, ಪು.೮೮

೨೧೩. ಅದೇ, ಪು.೮೯

೨೧೪. ಅದೇ, ಪು.೯೦

# ದಲಿತರು ಮತ್ತು ಅರ್ಥವ್ಯವಸ್ಥೆ

ಅರ್ಥವ್ಯವಸ್ಥೆ ಒಂದು ರಾಜ್ಯದ ಸ್ಥಿತಿಗತಿಯನ್ನು ನಿರ್ಧರಿಸುತ್ತದೆ. ಕೃಷಿ ಆಧರಿತ ಪ್ರಕ್ರಿಯೆಯು ಇತ್ತೀಚಿನ ದಿನಮಾನಗಳಲ್ಲಿ ಬೆಳೆದು ಬಂದ ಪ್ರಕ್ರಿಯೆ ಅಲ್ಲ. ಇದು ಪ್ರಾಚೀನ ಕಾಲದಿಂದಲೂ ಹಂತ ಹಂತವಾಗಿ ಭಾರತದಲ್ಲಿ ಬೆಳೆದುಕೊಂಡು ಬಂದಿದೆ. ರಾಜ್ಯದ ಆರ್ಥಿಕ ಭದ್ರತೆಗೆ ಮತ್ತು ಬೆಳವಣಿಗೆಗೆ ಕೇವಲ ಬಂಡವಾಳ ಮಾತ್ರವಿದ್ದರೆ ಸಾಲದು, ಉತ್ಪಾದನಾ ಅಂಗಗಳು ರಾಜ್ಯದ ಬೆನ್ನೆಲುಬು. ಈ ಅಂಗಗಳು ಬಂಡವಾಳಶಾಹಿಗಳಿಗೆ ಮುಖ್ಯ ಸರಕು. ರಾಜ್ಯದ ಸುಸ್ಥಿತಿಗೆ ಮತ್ತು ದುಸ್ಥಿತಿಗೆ ಈ ಅಂಗಗಳೆ ಪ್ರಮುಖ ಕಾರಣ. ಭೂಮಾಲೀಕರಿಗೆ, ಮಧ್ಯವರ್ತಿಗಳಿಗೆ ಅತ್ಯಾವಶ್ಯಕವಾಗಿ ಬೇಕಾದ ಉತ್ಪಾದನಾ ಅಂಗಗಳು, ಕಾಲದಿಂದ ಕಾಲಕ್ಕೆ ಆಗುವಂತಹ ಬದಲಾವಣೆಗೆ ಉತ್ಪಾದನಾ ಅಂಗಗಳು ಪ್ರಮುಖ ಕಾರಣವಾಗುತ್ತವೆ. ಎಲ್ಲಾ ಕಾಲಕ್ಕೂ ಮತ್ತು ಎಲ್ಲಾ ಸಮಾಜಗಳಲ್ಲಿ ಮೇಲ್ವರ್ಗ, ಮಧ್ಯಮ ವರ್ಗ ಮತ್ತು ಕೆಳವರ್ಗವೆಂದು ಶ್ರೇಣೀಕರಣವನ್ನು ಕಾಣುತ್ತೇವೆ. ಕೆಳಜಾತಿ/ಜನಾಂಗಗಳು ದೈಹಿಕ ದುಡಿಮೆಗೆ ಹೆಚ್ಚು ಹೊಂದಿಕೊಂಡವರಾಗಿದ್ದು ರಾಜ್ಯದ ಅಭ್ಯುದಯಕ್ಕೆ ಪ್ರಮುಖ ಕೊಡುಗೆ ನೀಡಿದ್ದಾರೆ ಮತ್ತು ನೀಡುತ್ತಿದ್ದಾರೆ. ರೈತರು, ಜನಸಾಮಾನ್ಯರು, ಕಾರ್ಮಿಕರು, ಬುಡಕಟ್ಟು ಸಮುದಾಯದವರು, ದಲಿತರು ಮುಂತಾದವರು ರಾಜ್ಯದ ಅವಿಭಾಜ್ಯ ಅಂಗವಾಗಿದ್ದು ಪ್ರಾಚೀನ ಕಾಲದಿಂದ ಇವತ್ತಿನವರೆಗೂ ರಾಜ್ಯದ ಒಂದು ಭಾಗವಾಗಿದ್ದಾರೆ. ಈ ಹಿನ್ನೆಲೆಯಲ್ಲಿ ಗುಲಾಮ ಪದ್ಧತಿ, ತೊತ್ತು ಪದ್ಧತಿ, ದಲಿತರ ಮಾರಾಟ, ಮಲೆನಾಡು ಪ್ರದೇಶ ಮತ್ತು ದಲಿತ ಮಹಿಳೆ, ಕೆನರಾ ಕರಾವಳಿಯಲ್ಲಿ ಪೋರ್ಚುಗೀಸರು, ಕೊಡಗು ಪ್ರದೇಶ, ಗುಲಾಮರ ವೃತ್ತಿ, ಜೀತಗಾರಿಕೆ, ವೃತ್ತಿಗಳು, ತೆರಿಗೆ ಪದ್ಧತಿ, ತೆರಿಗೆ ನಿರಾಕರಣೆ ಸಂದರ್ಭಗಳು, ಭೂಮಾಲೀಕರು ಮತ್ತು ದಲಿತರು, ಬಾರಾಬಲೂತಿ ಪದ್ಧತಿ ಮುಂತಾದ ವಿಚಾರಗಳನ್ನು ಕುರಿತು ಪ್ರಸ್ತುತ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಸಮಾಜದ ಕೆಳಜಾತಿಗಳಿಗೆ ಸೇರಿದ ಜನತೆ ರಾಜ್ಯದ ಅಭಿವೃದ್ಧಿಯ ಹೆಸರಿನಲ್ಲಿ ಪ್ರತ್ಯೇಕ ದುಡಿಯುವ ವರ್ಗವಾಯಿತು. ದುಡಿಮೆಗೆ ತಕ್ಕ ಪ್ರತಿಫಲವಿದ್ದರೆ ಮಾತ್ರ ದುಡಿಯುವ ಶಕ್ತಿಗಳಿಗೆ ಮತ್ತು ರಾಜ್ಯಕ್ಕೆ ಶ್ರೇಯಸ್ಕರ. ಇಲ್ಲದಿದ್ದರೆ ಅದು ಬಂಡವಾಳಶಾಹಿಗಳಿಗೆ ಅನುಕೂಲಕರ. ಕೃಷಿಕಾರ್ಮಿಕರ ಹೆಚ್ಚಿನ ದುಡಿಮೆಯಿಂದ ಭೂಮಾಲೀಕರು ಆರ್ಥಿಕವಾಗಿ ಸಶಕ್ತರಾಗುತ್ತಿದ್ದಾರೆ ವಿನಃ ಕೃಷಿಕಾರ್ಮಿಕರಲ್ಲ. ಇಂದಿಗೂ ಕೂಡ ಈ ವ್ಯವಸ್ಥೆಯೇನು ಬದಲಾವಣೆಗೊಂಡಿಲ್ಲ. ಬಹುತೇಕ ದಲಿತ ಸಮುದಾಯಗಳು ಕೃಷಿಕಾರ್ಮಿಕರಾಗಿ ತೊಡಗಿಕೊಂಡಿದ್ದು ನಿಕೃಷ್ಟ ಜೀವನ ಸಾಗಿಸುತ್ತಿದ್ದಾರೆ. ಈ ಸಮುದಾಯಗಳನ್ನು ಆರ್ಥಿಕ ದೃಷ್ಟಿಕೋನದಿಂದ ಗಮನಿಸಿದಾಗ ವೃತ್ತಿಗಳಲ್ಲಿ ಯಾವ ಬದಲಾವಣೆಗಳು ಗಮನಾರ್ಹವಾಗಿ ಕಾಣಬರುವುದಿಲ್ಲ. ಪರಿಸರ ಮತ್ತು ಸಮಯ ಮಾತ್ರ ಬದಲಾವಣೆಗೊಂಡಿದೆಯೇ ವಿನಃ ಉಳಿದ ಯಾವ ವ್ಯತ್ಯಾಸಗಳು ಕಂಡುಬರುವುದಿಲ್ಲ.

ಈ ಕುರಿತಂತೆ ಅಖಿಲ ಭಾರತ ಮಟ್ಟದಲ್ಲಿ ತಕ್ಕ ಅಧ್ಯಯನಗಳು ನಡೆದಿವೆ. ಡಿ.ಡಿ.ಕೊಸಾಂಬಿ ಅವರ *ಆನ್ ಇಂಟ್ರೊಡಕ್ಷನ್ ಟು ದಿ ಸ್ಟಡಿ ಆಫ್ ಇಂಡಿಯನ್ ಹಿಸ್ಟರಿ* (೧೯೭೫), ಆರ್.ಎಸ್.ಶರ್ಮ ಅವರ *ಪ್ರಾಚೀನ ಭಾರತ* (೨೦೦೪), ಬರ್ಟನ್ ಸ್ಟೀನ್ ಅವರ *ಪೆಸಂಟ್ ಸ್ಟೇಟ್ ಆಂಡ್ ಸೊಸೈಟಿ ಇನ್ ಮಿಡ್‌ವೆಲ್ ಸೌತ್ ಇಂಡಿಯಾ* (೧೯೯೪), ಕೆ.ಎ.ನೀಲಕಂಠಶಾಸ್ತ್ರಿ ಅವರ *ಎ ಹಿಸ್ಟರಿ ಆಫ್ ಸೌತ್ ಇಂಡಿಯಾ* (೧೯೯೧), ಎ.ಎಸ್.ಅಲ್ತೇಕರ್ ಅವರ *ದಿ ರಾಷ್ಟ್ರಕೂಟಾಸ್ ಆಂಡ್ ದೇರ್ ಟೈಮ್ಸ್* (೧೯೬೭), ಮುಂತಾದ ಚರಿತ್ರಕಾರರು ಕೆಳಜಾತಿಗಳ, ಬುಡಕಟ್ಟುಗಳ, ದಲಿತರ, ಕಾರ್ಮಿಕರ, ಜನಸಾಮಾನ್ಯರ ಚರಿತ್ರೆಯನ್ನು ರಚಿಸುವಲ್ಲಿ ಪ್ರಮುಖ ಪಾತ್ರ ವಹಿಸಿದ್ದಾರೆ. ಇವರ ಬರವಣಿಗೆಗಳಿಂದ ಪ್ರಾಚೀನ ಮತ್ತು ಮಧ್ಯ ಕಾಲೀನ ಭಾರತದ ಆರ್ಥಿಕ ವ್ಯವಸ್ಥೆಯನ್ನು ಅರ್ಥಮಾಡಿಕೊಳ್ಳಲಿಕ್ಕೆ ಸಹಾಯಕವಾಗುತ್ತದೆ. ಅದೇ ರೀತಿಯಾಗಿ ಮಧ್ಯಕಾಲೀನ ಭಾರತದ ಅರ್ಥವ್ಯವಸ್ಥೆಯು ಕರ್ನಾಟಕದ ಮೇಲೆ ಪರಿಣಾಮ ಬೀರಿದ್ದು, ಈ ಅವಧಿಯ ಕುರಿತಂತೆ ಅಧ್ಯಯನಗಳು ಚರಿತ್ರಕಾರರ ಗಮನ ಸೆಳೆದಿವೆ. ಜಿ.ಎಸ್.ದೀಕ್ಷಿತ್ ಅವರ *ಲೋಕಲ್ ಸೆಲ್ಫ್ ಗೌರ್ನಮೆಂಟ್ ಇನ್ ಮಿಡಿವೆಲ್ ಕರ್ನಾಟಕ* (೧೯೭೪), ಎಸ್.ಗುರುರಾಜಾಚಾರ್ ಅವರ *ಸಮ್ ಆಸ್ಪೆಕ್ಟ್ಸ್ ಆಫ್ ಎಕನಾಮಿಕ್ಸ್ ಆಂಡ್ ಸೋಷಿಯಲ್ ಲೈಫ್ ಇನ್ ಕರ್ನಾಟಕ* (೧೯೭೪), ಪಿ.ಬಿ.ದೇಸಾಯಿ ಅವರ *ಎ ಹಿಸ್ಟರಿ ಆಫ್ ಕರ್ನಾಟಕ* (೧೯೭೦), ಕೆ.ವಿ.ರಮೇಶ್ ಅವರ *ಎ ಹಿಸ್ಟರಿ ಆಫ್ ಸೌತ್ ಕೆನರಾ* (೧೯೭೦), ಕೆ.ಎಸ್.ಶಿವಣ್ಣ ಅವರ *ದಿ ಅಗ್ರೇರಿಯನ್ ಸಿಸ್ಟಮ್ ಆಫ್ ಕರ್ನಾಟಕ* (೧೯೮೩), ಬಿ.ಷೇಕ್‌ಅಲಿ ಅವರ ಸಂಪಾದಕತ್ವದ ನೇತೃತ್ವದಲ್ಲಿ *ಕರ್ನಾಟಕ ಚರಿತ್ರೆ ಸಂಪುಟಗಳು* (೧೯೯೭), ಎಂ. ಚಿದಾನಂದಮೂರ್ತಿ ಅವರ *ಮಧ್ಯಕಾಲೀನ ಕನ್ನಡ ಸಾಹಿತ್ಯದಲ್ಲಿ ಅಸ್ಪೃಶ್ಯತೆಯ ಪರಿಕಲ್ಪನೆ ಮತ್ತು ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ* (೧೯೮೫; ೨೦೦೨), ರಾಜಾರಾಮ ಹೆಗಡೆ ಮತ್ತು ಅಶೋಕ್ ಶೆಟ್ಟರ್ ಅವರ ಸಂಪಾದಕತ್ವದಲ್ಲಿ *ಮಲೆ ಕರ್ನಾಟಕದ ಅರಸು ಮನೆತನಗಳು* (೨೦೦೧), ಹೆಚ್.ವಿ.ಶ್ರೀನಿವಾಸಮೂರ್ತಿ ಮತ್ತು ಆರ್. ರಾಮಕೃಷ್ಣನ್ ಅವರ *ಸಮಗ್ರ ಕರ್ನಾಟಕ ಚರಿತ್ರೆ* (೧೯೯೫), ವಿಜಯ್ ಪೂಣಚ್ಚ ತಂಬಂಡ ಅವರ *ಆಧುನಿಕ ಕೊಡಗು* (೨೦೦೦), ಜಿ.ಆರ್. ಕುಪ್ಪುಸ್ವಾಮಿ ಅವರ *ಎಕನಾಮಿಕ್ ಕಂಡಿಶನ್ಸ್ ಇನ್ ಕರ್ನಾಟಕ* (೧೯೭೫), ಕೃಷ್ಣಯ್ಯ ಅವರ *ಕೊಡಗಿನ ಇತಿಹಾಸ* (೧೯೯೫), ಎಸ್.ಎಸ್. ಹಿರೇಮಠ ಅವರ *ದಲಿತ ಸಂಸ್ಕೃತಿ* (೨೦೦೧), ಸಾಕಿ ಅವರ *ಮೇಕಿಂಗ್ ಹಿಸ್ಟರಿ* (೧೯೯೮), ಮೋಹನ ಕೃಷ್ಣ ರೈ ಅವರ *ಪ್ರಭುತ್ವ ಮತ್ತು ಜನತೆ* (೨೦೦೫), ವಿರೂಪಾಕ್ಷಿ ಪೂಜಾರಹಳ್ಳಿ ಅವರ *ಕರ್ನಾಟಕದಲ್ಲಿ ತಳವಾರಿಕೆ* (೨೦೦೬) ಮುಂತಾದವರ ಬರವಣಿಗೆಗಳು ಮಧ್ಯಕಾಲೀನ ಕರ್ನಾಟಕ ಚರಿತ್ರೆಯನ್ನು ಅರ್ಥಮಾಡಿಕೊಳ್ಳಲು ಸಹಾಯಕವಾಗಿವೆ. ಈ ಅಧ್ಯಾಯವನ್ನು ರೂಪಿಸಲು ಈ ಮೇಲಿನ ವಿದ್ವಾಂಸರ ಕೃತಿಗಳನ್ನು ಬಳಸಿಕೊಳ್ಳಲಾಗಿದೆ. ಹಾಗೆಯೇ ಪ್ರವಾಸಿ ವರದಿಗಳು, ಗ್ಯಾಸೆಟಿಯರ್‌ಗಳು, ಶಾಸನಗಳು, ಪ್ರಾಚೀನ ಕನ್ನಡ ಪಠ್ಯಗಳನ್ನು ಬಳಸಿಕೊಳ್ಳಲಾಗಿದೆ. ಇವೆಲ್ಲವುಗಳು ಸಹ ಮಧ್ಯಕಾಲೀನ ಕರ್ನಾಟಕ ಚರಿತ್ರೆಯನ್ನು ಅರ್ಥೈಸಲು ಮತ್ತು ಪುನರ್‌ರಚಿಸಲು ಸಹಕಾರಿಯಾಗಿವೆ.

ಭೂಮಿಯನ್ನು ಕೃಷಿ ಮಾಡುವುದರಿಂದ ಉತ್ಪಾದನೆ ಹೆಚ್ಚಾಗುವುದರ ಜೊತೆಗೆ ಇದೇ ಪ್ರಕ್ರಿಯೆಯಿಂದ ಗುಲಾಮ ಪದ್ಧತಿ, ಜೀತ ಪದ್ಧತಿಗಳು ಭದ್ರವಾಗಿ ತಳವೂರಲು ಕಾರಣವಾಯಿತು. ಈ ಪದ್ಧತಿಯು ಕಾಲದಿಂದ

ಕಾಲಕ್ಕೆ ಬದಲಾಗುತ್ತ ಬಂದರೂ ಮೂಲ ಆಶಯಗಳಲ್ಲಿ ಯಾವ ಬದಲಾವಣೆಯು ಕಾಣಲಿಲ್ಲ. ಪ್ರಾಚೀನ ಕಾಲದಲ್ಲಿ ಗುಲಾಮ ಪದ್ಧತಿ ತದನಂತರ ಜೀತ ಪದ್ಧತಿ ಮತ್ತು ಆಧುನಿಕ ಕಾಲಘಟ್ಟದಲ್ಲಿ ಈ ಪದ್ಧತಿಗೆ ಒಳಪಟ್ಟಿರುವವರು ಕೃಷಿಕಾರ್ಮಿಕರಾಗಿ, ಕೂಲಿಕಾರರಾಗಿ ಬದಲಾವಣೆಗೊಂಡರು. ಈ ಕುರಿತಂತೆ ಈ ಅಧ್ಯಾಯದ ಮುಂದಿನ ಭಾಗದಲ್ಲಿ ವಿಸ್ತೃತವಾಗಿ ಚರ್ಚಿಸಲಾಗಿದೆ.

## ೪.೧ ಗುಲಾಮ ಪದ್ಧತಿ

ಪ್ರಾಚೀನ ಸಮಾಜದಲ್ಲಿ ಗುಲಾಮ ಪದ್ಧತಿ ಅಸ್ತಿತ್ವದಲ್ಲಿತ್ತು ಎನ್ನುವುದಕ್ಕೆ ಚರಿತ್ರೆಯಿಂದ ಸ್ಪಷ್ಟ. ಈಜಿಪ್ಟ್, ಬ್ಯಾಬಿಲೋನಿಯ, ಗ್ರೀಸ್, ರೋಮ್‌ಗಳ ಸಾಮಾಜಿಕ ಮತ್ತು ರಾಜಕೀಯ ಆಯಾಮಗಳಲ್ಲಿ ಕಾಣಿಸಿಕೊಂಡ ನಂತರ ವಿಶ್ವದ ಇತರೆ ಭಾಗಗಳಿಗೆ ಕಾಲಿಟ್ಟಿತು. ಯೂರೋಪ್ ಸೇರಿದಂತೆ ಏಷ್ಯಾದ ಬಹುತೇಕ ರಾಷ್ಟ್ರಗಳಲ್ಲಿ ಈ ಪದ್ಧತಿ ತಾಂಡವಾಡುತ್ತಿದ್ದರಿಂದ ಆ ಕಾಲವನ್ನು 'ಗುಲಾಮಗಿರಿಯ ಯುಗ'ವೆಂದು ಅಭಿಪ್ರಾಯಪಡಲಾಗಿದೆ. ಇದಕ್ಕೊಂದು ಹೊಸ ಆಯಾಮ ಜಟಿಲವಾಗಲು ಕಾರಣವಾಗಿದ್ದು ಯೂರೋಪಿನ ರಾಷ್ಟ್ರಗಳು ಅಮೆರಿಕಾದಲ್ಲಿ ತನ್ನ ವಸಾಹತುಗಳನ್ನು ಸ್ಥಾಪಿಸಿಕೊಂಡಾಗ. ಇವರನ್ನು ಆಫ್ರಿಕಾದಿಂದ ತರಿಸಿಕೊಂಡು ಅಮೆರಿಕಕ್ಕೆ ಸಾಗಿಸಿ ಅಲ್ಲಿನ ಕೃಷಿಯಲ್ಲಿ ತೊಡಗಿಸುತ್ತಿದ್ದರು.[೧] ಈ ಪದ್ಧತಿಯು ಭಾರತದಲ್ಲಿ ಅಸ್ತಿತ್ವದಲ್ಲಿತ್ತೆ ಅಥವಾ ಬೇರೆ ಸ್ವರೂಪದಲ್ಲಿ ತಾಂಡವಾಡುತ್ತಿತ್ತೆ ಎಂಬ ವಿಚಾರಗಳು ಚರ್ಚೆಗೆ ಅವಕಾಶ ಮಾಡಿಕೊಡುತ್ತವೆ. ಇದು ಭಾರತಕ್ಕೆ ಗೊತ್ತಿರದ ವಿಚಾರವೇನು ಆಗಿರಲಿಲ್ಲ.

ಗುಲಾಮಗಿರಿ ಆಗ ರೂಢಿಯಲ್ಲಿ ಇದ್ದದ್ದು ನಿಜ. ಶೂದ್ರನು ಇತರ ಮೂರು ವರ್ಣಗಳ ಸೇವೆಯನ್ನು ಮಾಡುವಂತಹ ಸಂದರ್ಭ ನಿರ್ಮಾಣವಾಯಿತು. ಅಂದರೆ ಶೂದ್ರರೆಲ್ಲ ಗುಲಾಮರೆಂದು ಹೇಳುತ್ತಿಲ್ಲ. ಅಮರಕೋಶದಲ್ಲಿ ಇದಕ್ಕೆ ಸ್ಪಷ್ಟ ಉದಾಹರಣೆಗಳಿವೆ. ಉದಾಹರಣೆಗೆ ರಸ್ತೆ ಬಾಗಿಲುಗಳನ್ನು ಗುಡಿಸುವುದು, ಎಂಜಲು ತೆಗೆಯುವುದು, ಮಾಲೀಕರ ಹೊಲಗದ್ದೆಗಳಲ್ಲಿ ದುಡಿಯುವುದು ಇತ್ಯಾದಿ. ಸ್ತ್ರೀ ಗುಲಾಮರು ಹಾಗೂ ಹೆಣ್ಣಾಳುಗಳು ಶ್ರೀಮಂತರ ಮನೆಗಳಲ್ಲಿ ದುಡಿಯುತ್ತಿದ್ದರು ಎನ್ನುವುದಕ್ಕೆ ಸೂಚನೆಗಳಿವೆ. "ದಾಸಿಸಭಂ ಬಹು ಸಂಖ್ಯೆಯ ಸ್ತ್ರೀ ಗುಲಾಮರು" ಎನ್ನುವ ಪ್ರಯೋಗವನ್ನು ಕಾಣಬಹುದು. ಕೆಲವೊಮ್ಮೆ ಬುಡಕಟ್ಟು ಜನರನ್ನು ಹಿಡಿದು ತರಲಾಯಿತೆಂದು ತಿಳಿದುಬರುತ್ತದೆ.[೨] ಅರ್ಥಶಾಸ್ತ್ರದ ಪ್ರಕಾರ ಮೌರ್ಯರ ಕಾಲದಲ್ಲಿ ಕೃಷಿಕಾರ್ಯಗಳಿಗೆ ದಾಸರನ್ನು ಬಳಸಿಕೊಳ್ಳುತ್ತಿದ್ದರು. ಆದರೆ ಮೆಗಾಸ್ತನೀಸನು ತಾನು ಭಾರತದಲ್ಲಿ ಎಲ್ಲಿಯೂ ದಾಸರನ್ನು ಕಾಣಲಿಲ್ಲವೆಂದು ಹೇಳುತ್ತಾನೆ. 'ದಾಸ'ರೆಂದರೆ *ಗುಲಾಮ* ಎನ್ನುವ ಅರ್ಥದಲ್ಲಿ ಹೇಳುತ್ತಾನೆ. ಆದರೆ ವೇದಕಾಲದಿಂದಲೂ ಭಾರತದಲ್ಲಿ ಮನೆಗೆಲಸದ ದಾಸರಿದ್ದರು. ಮೌರ್ಯರ ಕಾಲದಲ್ಲಿ ಈ ದಾಸರನ್ನು ಬೃಹತ್ ಪ್ರಮಾಣದಲ್ಲಿ ಕೃಷಿಗೆ ಹಚ್ಚಲಾಯಿತು. ರಾಜಪ್ರಭುತ್ವವೇ ಭೂಮಿಯನ್ನು ತನ್ನ ನಿಯಂತ್ರಣದಲ್ಲಿ ಇಟ್ಟುಕೊಂಡಿದ್ದರಿಂದ ದಾಸರು ಮತ್ತು ಕೂಲಿಯಾಳುಗಳು ದುಡಿಮೆಯಲ್ಲಿ ತೊಡಗಿಸಿಕೊಂಡಿದ್ದರು.[೩] ಸಂಸ್ಕೃತದ 'ದಾಸ' ಎಂಬ ಪದಕ್ಕೆ ಸಮಾನವಾದ ಕನ್ನಡ 'ತೊತ್ತು'. ಈ *ತೊತ್ತು* ವಚನಗಳಲ್ಲಿ ತೊತ್ತು ಮತ್ತು ತೊಂಡ

ಪದಗಳು ಬಳಕೆಯಾಗಿವೆ. ಈ ಪದಗಳು ಶಾಸನಗಳಲ್ಲಿ ಉಲ್ಲೇಖವಾಗಿರುವುದರಿಂದ ಆ ಕಾಲದ ತೊತ್ತುಗಳ ಒಟ್ಟು ಪರಿಸ್ಥಿತಿಯನ್ನು ಅರ್ಥೈಸಿಕೊಳ್ಳಲು ಸಾಧ್ಯವಿದೆ.

ಚರಿತ್ರೆಯ ಅನುಪಸ್ಥಿತಿಯಲ್ಲಿ ಸಾಹಿತ್ಯ ಹೇಗೆ ಚರಿತ್ರೆಯನ್ನು ಕಟ್ಟಿಕೊಡುತ್ತದೆ ಎಂಬುದನ್ನು ಗಮನಿಸಬಹುದು. ಪ್ರಾಚೀನ ಕರ್ನಾಟಕದಲ್ಲಿ ಗುಲಾಮರನ್ನು ಮಾರಾಟ ಮಾಡುತ್ತಿದ್ದರೆಂದು ಚರಿತ್ರೆ ತಿಳಿಸುತ್ತದೆ. ಆದರೆ ಹೇಗೆ ಮಾರಾಟ ಮಾಡುತ್ತಿದ್ದರು ಎಂಬುದನ್ನು ತಿಳಿಯಪಡಿಸುವುದಿಲ್ಲ. ಇಂತಹ ಸಂದರ್ಭದಲ್ಲಿ ಕನ್ನಡ ಕಾವ್ಯಗಳು ಅನುಪಸ್ಥಿತಿಯ ಚರಿತ್ರೆಯನ್ನು ಕಟ್ಟಿಕೊಡುತ್ತವೆ. ಗುಲಾಮ ಪದ್ಧತಿಯ ಕುರಿತು ಹೇಳುವುದಾದರೆ ಮನುವಿನ ಕಾಲಕ್ಕಾಗಲೇ ಸಮಾಜದಲ್ಲಿ ಅಸ್ತಿತ್ವದಲ್ಲಿತ್ತು. "ಗುಲಾಮಗಿರಿ ಶೂದ್ರನ ಎಡೆಬಿಡದೆ ವಿಧಿ ಎಂಬ ತತ್ವವನ್ನು ನಿರೂಪಿಸಿದವರಲ್ಲಿ ಮನು ಮೊದಲಿಗನು". ಹಣ ಕೊಟ್ಟು ಶೂದ್ರನನ್ನು ಖರೀದಿ ಮಾಡಿರಲಿ ಅಥವಾ ಹಾಗೆ ಮಾಡದೆ ಇರಲಿ, ಅವನನ್ನು ಗುಲಾಮ ಸ್ಥಾನಕ್ಕೆ ಇಳಿಸಬೇಕು. ದಾಸ್ಯದಿಂದ ಅವನನ್ನು ಬಿಡುಗಡೆ ಮಾಡಲು ಸಾಧ್ಯವಾಗದು. ಏಕೆಂದರೆ ದಾಸ್ಯಗುಣ ಅವನಲ್ಲಿ ನೈಸರ್ಗಿಕವಾಗಿ ಬಂದಿದೆ ಎಂದವನು ಹೇಳುತ್ತಾನೆ. ಸ್ಪಷ್ಟವಾಗಿ ಗುಲಾಮ ಮತ್ತು ಶೂದ್ರ ಪದಗಳನ್ನು ವಿಂಗಡಿಸುತ್ತಾನೆ. ವಿಚಿತ್ರವೆಂದರೆ ಶೂದ್ರರೆ ಕೆಲವು ಸಂದರ್ಭಗಳಲ್ಲಿ ಗುಲಾಮರನ್ನು ಹಿಡಿದಿಟ್ಟುಕೊಳ್ಳುತ್ತಿದ್ದರು. ಇನ್ನು ಮುಂದುವರಿದು ದ್ವಿಜಾತಿ ಮತ್ತು ಗುಲಾಮ ನಡುವಿನ ಅಂತರ ಶೂದ್ರ ಮತ್ತು ಗುಲಾಮನ ನಡುವೆ ಇರುತ್ತಿರಲಿಲ್ಲ.

### ೪.೧.೧ ತೊತ್ತುಗಳು

'ತೊತ್ತು' ಎಂಬ ಶಬ್ದವು ಪ್ರಾಚೀನ ಕನ್ನಡ ಕಾವ್ಯಗಳು ಮತ್ತು ಶಾಸನಗಳಲ್ಲಿ ಉಲ್ಲೇಖವಾಗಿದೆ. ಇದರ ಪ್ರಥಮ ಉಲ್ಲೇಖ ಕೇಶಿರಾಜನ 'ಶಬ್ದಮಣಿದರ್ಪಣ'ದಲ್ಲಿ ಕಂಡುಬರುತ್ತದೆ.[೪] 'ತೊತ್ತು'ಗಳೆಂದರೆ ಸಾಮಾನ್ಯ ಅರ್ಥದಲ್ಲಿ ಸೇವಕರು, ಗುಲಾಮರು, ದಲಿತರು, ಕೆಳಜಾತಿಗಳ ಜನರು. Slave ಎನ್ನುವ ಮಾತಿಗೆ ಈಗ ಕನ್ನಡದಲ್ಲಿ ಬಳಕೆಯಲ್ಲಿರುವ ಶಬ್ದ ಗುಲಾಮ. 'ಗುಲಾಮ' ಎಂಬ ಶಬ್ದ ಮೂಲತಃ *ಅರೇಬಿಕ್* ಭಾಷೆಯಾಗಿದ್ದು, ಅದು ಹಿಂದಿ ಅಥವಾ ಮರಾಠಿ ಮೂಲಕ್ಕೆ ಕನ್ನಡದಿಂದ ಬಂದಿದೆ. ವೇದ ಮತ್ತು ಸ್ಮೃತಿಕಾರರಲ್ಲಿ ಇದರ ಅರ್ಥಗಳ ಬಳಕೆಯಾಗಿದೆ. ಕನ್ನಡದ *ಗುಲಾಮ* ಅಥವಾ *ದಾಸ* ಎಂಬರ್ಥದ 'ತೊತ್ತು' ಪದವು ಬಳಕೆಯಲ್ಲಿತ್ತು. ತೊತ್ತು ಶಬ್ದವು ಗಂಡಸಾಗಲಿ, ಹೆಂಗಸಾಗಲಿ, ಸೇವಕಿ ಅಥವಾ ಸೇವಕ ಎಂಬ ಸಾಮಾನ್ಯ ಅರ್ಥವನ್ನು ಪಡೆದಿದೆ. Slavery ಮನುಷ್ಯರು ಇತರ ಮನುಷ್ಯರನ್ನು ಆಸ್ತಿಯಾಗಿ ಹೊಂದಿರುವ ಪದ್ಧತಿಯನ್ನು ಹೇಳುತ್ತದೆ. ಈ ಪದ್ಧತಿಯು ಇತಿಹಾಸಪೂರ್ವ ಕಾಲಕ್ಕೆ ಹೋಗುತ್ತದೆ. ಕ್ರಿ.ಶ.೧೮೬೫ರಲ್ಲಿ ಅಮೆರಿಕಾದಲ್ಲಿ ಕಾನೂನು ತಂದು ಗುಲಾಮಗಿರಿಯನ್ನು ರದ್ದುಪಡಿಸಲಾಯಿತು.[೫] ಸಂಸ್ಕೃತದ 'ದಾಸ' ಎಂಬ ಪದಕ್ಕೆ ಸಮಾನವಾದ ಕನ್ನಡದ ಪದ 'ತೊಟ್ಟು'. ಈ 'ತೊತ್ತು' ಎಂಬ ಪದವು ವಚನಗಳಲ್ಲಿ *ತೊತ್ತು* ಮತ್ತು *ತೊಂಡ* ಪದಗಳು ಬಳಕೆಯಾಗಿವೆ.[೬] ಈ ಪದಗಳು ಕಾವ್ಯಗಳು ಮತ್ತು ಶಾಸನಗಳಲ್ಲಿ ಉಲ್ಲೇಖವಾಗಿರುವುದರಿಂದ ಅವರ ಪರಿಸ್ಥಿತಿಯನ್ನು ಅರ್ಥೈಸಿಕೊಳ್ಳಲು ಸಾಧ್ಯವಿದೆ.

ಈ ತೊತ್ತುಗಳು ಯಾವ ಜಾತಿ ಹಿನ್ನೆಲೆಯಿಂದ ಬಂದವರು? ತೊಟ್ಟುಗಳ ಸಾಮಾಜಿಕ-ಆರ್ಥಿಕ ಪರಿಸ್ಥಿತಿಗಳೇನು? ಸಮಾಜವು ಅವರನ್ನು ನೋಡುತ್ತಿದ್ದ ದೃಷ್ಟಿಕೋನ ಎಂತಹದ್ದು, ಈ ಪ್ರಕ್ರಿಯೆಯನ್ನು ಪೋಷಿಸಿಕೊಂಡು ಬರುತ್ತಿದ್ದ ವರ್ಗಗಳಾವುವು? ಮುಂತಾದ ಪ್ರಶ್ನೆಗಳು ಉದ್ಭವಿಸುವುದು ಸಹಜವಾಗಿವೆ. ಕರ್ನಾಟಕದ ಮಟ್ಟಿಗೆ ಹೇಳುವುದಾದರೆ ದಲಿತರು ಗುಲಾಮರಾಗಿ, ಜೀತದಾಳುಗಳಾಗಿ, ಸೇವಕರಾಗಿ ದುಡಿದಿರುವ ವಿವರಗಳು ಸಿಗುತ್ತವೆ. 'ತೊತ್ತು'ಗಳೆಂದು ಹೊಲೆಯರೆಂದೆ ತರ್ಕಿಸಿದ್ದಾರೆ ಎಂ. ಚಿದಾನಂದಮೂರ್ತಿಯವರು. ಈ ವಿಚಾರದಲ್ಲಿ ಶೂದ್ರ ಮತ್ತು ಅತಿಶೂದ್ರ ಜಾತಿಸಮುದಾಯಗಳೆನ್ನುವ ಜನತೆ ಹೆಚ್ಚಿನದಾಗಿ ಈ ಗುಂಪಿಗೆ ಸೇರುತ್ತಿದ್ದರು.

*ಹುಟ್ಟಾಳು, ಹೊಲೆಮಗ, ಮನೆಮಾದಿಗ, ಮನೆಮಗತಿನ್, ಆಳ್ಮಗ, ಆಳುಮಗ, ಮನೆಯಮಗ, ಮನೆವೆಗ್ಗಡೆ, ಮನೆದೊತ್ತು, ದಾಸ, ಗುಲಾಮ, ಬೆಸದಾಳು* ಮುಂತಾದ ಶಬ್ದಗಳು ಸೇವಕ ಪ್ರವೃತ್ತಿಯ ಸಂಕೇತಗಳು. ಇವರೆಲ್ಲರು ಮಾಲೀಕರ ಅಧೀನದಲ್ಲಿ ದುಡಿಯಬೇಕಾಗಿದ್ದಿತು. ಒಡೆಯರು ಇವರನ್ನು ತನಗೆ ಮನಬಂದಂತೆ ಬಳಸಿಕೊಳ್ಳುತ್ತಿದ್ದರು. ಪ್ರಾಣಿಗಳಿಗಿಂತ ಕಡೆಯಾಗಿದ್ದರು. ಸಕಲೇಶಪುರ ಪ್ರದೇಶದಲ್ಲಿರುವ 'ಗಡ್ಡೆ ಮಂಡೆ ಪದ್ಧತಿ' ಪ್ರಕಾರ ಊರಿನ ಗೌಡನ ಕೆಲಸಕ್ಕೆ ಮೀಸಲಾದ 'ಹುಟ್ಟಾಳು ಹೊಲೆಯರು' ಇರುತ್ತಾರೆ. ಇವರು ಹುಟ್ಟಿನಿಂದಲೇ ಗೌಡನ ಆಳು. ಗೃಹಪ್ರವೇಶದ ದಿನ ಬಲಿ ತೆಗೆಯಲು ಹಾಕಿದ ಅನ್ನ ಹುಟ್ಟಾಳು ಹೊಲೆಯರಿಗೆ ಸೇರುತ್ತದೆ. ಗೌಡ ಸತ್ತಾಗ ಅವನು ಗಡ್ಡ ಮಂಡೆಗಳನ್ನು ಬೋಳಿಸಿಕೊಳ್ಳುತ್ತಾನೆ.[೬] ಈ ರೀತಿಯ ಕೆಲವು ಪದ್ಧತಿಗಳಿಂದ ಅವರ ಶೋಚನೀಯ ಸ್ಥಿತಿಯನ್ನು ಅರ್ಥ ಮಾಡಿಕೊಳ್ಳಬಹುದಾಗಿದೆ. ತೊತ್ತುಗಳ ವಿಚಾರದಲ್ಲಿ ಗಂಡಸರ ಜೊತೆಗೆ ಸ್ತ್ರೀಯರು ಹೆಚ್ಚಿನ ಸಂಖ್ಯೆಯಲ್ಲಿ ಶೋಷಣೆಗೆ ಒಳಗಾಗುತ್ತಿದ್ದರು. ಹೆಣ್ಣು ತೊತ್ತುಗಳನ್ನು ದೈಹಿಕವಾಗಿ ಶೋಷಣೆ ಮಾಡಲಾಗುತ್ತಿತ್ತು. ವಿಚಿತ್ರವೆಂದರೆ ಮಾಲೀಕರ ಮನೆಯ ಹತ್ತಿರ ತೊತ್ತುಗಳಿಗೆ ಪ್ರತ್ಯೇಕ ಸಣ್ಣ ಮನೆಯನ್ನು ಕಟ್ಟಿಸಿಕೊಟ್ಟು ತನಗೆ ಮನಬಂದಂತೆ ಉಪಯೋಗಿಸಿಕೊಳ್ಳುತ್ತಿದ್ದರು. ಶೋಷಣೆಗೆ ಒಳಗಾದ ಹೆಣ್ಣಿನ ಪತಿಗೆ ವಿಷಯ ಗೊತ್ತಿದ್ದರೂ ಯಾವುದೇ ರೀತಿಯಲ್ಲಿ ಪ್ರತಿಭಟಿಸುವುದಕ್ಕೆ ಆಸ್ಪದವಿರಲಿಲ್ಲ. ಕೆಲವೊಮ್ಮೆ ಹೆಣ್ಣು ತೊತ್ತುಗಳು ತಲೆಯನ್ನು ಬೋಳಿಸಿಕೊಳ್ಳಬೇಕಾಗಿತ್ತು. ಈ ಪದ್ಧತಿಯು ಸಕಲೇಶಪುರ ಪ್ರದೇಶದ 'ಮಂಡೆ' ಪದ್ಧತಿಗೆ ಹೋಲಿಕೆಯಾಗುತ್ತದೆ. ಅವಳಲ್ಲಿ ಜನಿಸಿದ ಸಂತಾನಕ್ಕೆ ಆಸ್ತಿಯಲ್ಲಿ ಪಾಲು ಕೊಡುತ್ತಿದ್ದರು. ಉದಾಹರಣೆಗೆ ದೊಡ್ಡಗದ್ದುಂಬಳ್ಳಿಯ ಸಿಂಗೆಯ್ಯ, ಮಂಚಯ್ಯ ಚವ್ರಡಯ್ಯ ಮುಂತಾದ ದಾಯಾದ್ಯರಿಗೆ ಸಂಬಂಧಿಸಿದ ೮೦೦ ಮರದ ಅಡಿಕೆ ತೋಟವನ್ನು ಪೆರುಮಾಳಿಸೇವನೆಂಬವ ಕೊಂಡು ಆ ತೋಟದಲ್ಲಿ ಆಚಾರ್ಯಪ್ಪನ ಭಾಗದ ೪೦೦ ಮರದ ಆಶ್ರಯವನ್ನು ಮಕ್ಕಳು, ಮಕ್ಕಳು ತಪ್ಪದೆ ತೊತ್ತಿನ ಮಕ್ಕಳಿಗೆ ಬಿಟ್ಟುಕೊಟ್ಟ ವಿಷಯವಿದೆ.[೭] ಬೌರಿಂಗ್‌ಪೇಟೆ ಶಾಸನದಲ್ಲಿ ಸಂತೆಯಲ್ಲಿ ತೊತ್ತುಗಳ ಮಾರಾಟ ನಡೆಯುತ್ತಿದ್ದ ವಿಷಯವಿದೆ.[೮] ಹಾಗೆಯೇ ಮಾಲೀಕರ ಮತ್ತು ತೊಟ್ಟುಗಳ ನಡುವೆ ವೈಮನಸ್ಸು ಉಂಟಾಗುತ್ತಿದ್ದವು ಎಂಬುದಕ್ಕೆ ಮಾಲೀಕರು ಕೊಡುತ್ತಿದ್ದ ಶಿಕ್ಷೆಯ ಪ್ರಮಾಣಗಳೇ ಮುಖ್ಯ ಕಾರಣಗಳಾಗುತ್ತಿದ್ದವು. ತೊತ್ತುಗಳ ವಿಚಾರದಲ್ಲಿ ಕೆಲವು ಕನ್ನಡ ಕಾವ್ಯಗಳು ಚರಿತ್ರೆಯ ಅನುಪಸ್ಥಿತಿಯನ್ನು ತುಂಬಬಲ್ಲವು ಎಂಬುದಕ್ಕೆ ಹರಿಶ್ಚಂದ್ರಕಾವ್ಯದೇ ಮುಖ್ಯ

ಸಾಕ್ಷಿ.[೧೦] ಶಾಸನಗಳಲ್ಲಿ 'ತೊತ್ತುತನ' 'ತೊತ್ತು' ಎಂದು ಉಲ್ಲೆಖಗಳು ಸಿಗುತ್ತವೆ.[೧೧] ಈ ರೀತಿಯ ಉದಾಹರಣೆಗಳು ಮಧ್ಯಕಾಲೀನ ಕರ್ನಾಟಕದುದ್ದಕ್ಕೂ ಸಿಗುತ್ತವೆ.

### ೪.೧.೨ ದಲಿತರ ಮಾರಾಟ

ಪ್ರಾಚೀನ ಸಮಾಜವು ಹಲವು ವೈರುಧ್ಯಗಳನ್ನೆ ಕಂಡಿದೆ. ಈ ವೈರುಧ್ಯಗಳಿಗೆ ಸಾಮಾಜಿಕ, ಆರ್ಥಿಕ, ಧಾರ್ಮಿಕ ಹಾಗೂ ನೈತಿಕ ಮನೋಧೋರಣೆಗಳು ಪ್ರಮುಖ ಕಾರಣಗಳಾಗಿ ಕಾಣಿಸುತ್ತವೆ. ಅಂದು ಸಮಾಜವು ಎದುರಿಸಿದ ಅನೇಕ ಸಮಸ್ಯೆಗಳು ಇಂದಿಗೂ ಯಾವ ಬದಲಾವಣೆಯಾಗದೆ ಮುಂದುವರಿಯುತ್ತಿವೆ. ಅಧ್ಯಯನದ ಅವಧಿಯು ಕರ್ನಾಟಕದ ಮಟ್ಟಿಗೆ ಬಹಳ ಸೂಕ್ಷ್ಮ ಮತ್ತು ಸಂಕೀರ್ಣ ಕಾಲಘಟ್ಟ. ಈ ಕಾಲಾವಧಿಯಲ್ಲಿ ರಾಜಕೇಂದ್ರಿತ, ಶ್ರೀಮಂತರ, ಭೂಮಾಲೀಕರ ಕಾರ್ಯಭಾರಗಳೆ ಹೆಚ್ಚು ಕಂಡುಬಂದವು. ಜನಸಾಮಾನ್ಯರು, ರೈತರು, ಬುಡಕಟ್ಟುಗಳು, ಕೆಳಜಾತಿಗಳು ಮತ್ತು ದಲಿತ ಸಮುದಾಯದವರು ಉಳ್ಳವರಿಗೆ ಅಡಿಯಾಳುಗಳಾಗಿ ಜೀವನ ಸಾಗಿಸಬೇಕಾಗಿದ್ದಿತು. ಸಮಾಜಕ್ಕೆ ಅವಶ್ಯಕ ಸೇವೆಯನ್ನು ಸಲ್ಲಿಸುತ್ತಿದ್ದರೂ ಸಮಾಜದಿಂದ ಈ ಜಾತಿಗಳು ಅಲ್ಪವನ್ನು ನಿರೀಕ್ಷಿಸುವಂತಿರಲಿಲ್ಲ. ಗುಲಾಮ ಪದ್ಧತಿ, ಜೀತ ಪದ್ಧತಿ ಮತ್ತು ಬಲವಂತ ದುಡಿಮೆ ಕೆಳಜಾತಿಗಳವರಿಗೆ ಕಂಟಕಪ್ರಾಯವಾಗಿದ್ದವು. ಸಮಾಜವು ಎಷ್ಟು ಹೀನಸ್ಥಿತಿಗೆ ತಲುಪಿತ್ತೆಂದರೆ ಶೂದ್ರರು ಸೇರಿದಂತೆ ದಲಿತರನ್ನು ಮಾರುಕಟ್ಟೆಯಲ್ಲಿ ಮಾರಾಟ ಮಾಡಲಾಗುತ್ತಿತ್ತು. ಅವರಲ್ಲಿ ಬಹುಪಾಲು ಸ್ತ್ರೀಯರೆ ಅಧಿಕ ಸಂಖ್ಯೆಯಲ್ಲಿರುತ್ತಿದ್ದರು. ಸಂತೆಯಲ್ಲಿ ವಸ್ತುಗಳನ್ನು ಮಾರಾಟ ಮಾಡುವಂತೆ ಜನರನ್ನು ಮಾರುತ್ತಿದ್ದರು ಎಂದರೆ ಅಂದಿನ ಸಮಾಜದ ವಾಸ್ತವ ಬದುಕನ್ನು ಅರ್ಥೈಸಿಕೊಳ್ಳಲು ಸಾಧ್ಯವಿದೆ.

ಯೂರೋಪ್ ಮತ್ತು ಉತ್ತರ ಅಮೆರಿಕಾದಲ್ಲಿ ಗುಲಾಮರನ್ನು ಮಾಲೀಕರು ಮನಬಂದಂತೆ ನಡೆಸಿಕೊಳ್ಳುವುದರ ಜೊತೆಗೆ ಮಾರಾಟ ಮಾಡುತ್ತಿದ್ದರು. ಅದೇ ರೀತಿಯಾಗಿ ಭಾರತದಲ್ಲಿ ಸಹ ಜನರನ್ನು ಮಾರುತ್ತಿದ್ದರು ಎಂಬುದಕ್ಕೆ ಶಾಸನಗಳು, ಕನ್ನಡ ಕಾವ್ಯಗಳು ಆಧಾರ ಒದಗಿಸುತ್ತವೆ. ಕೃಷಿ ಜೀತದಾಳುಗಳಲ್ಲಿ ದಲಿತವರು ವರ್ಗದ ಹೆಚ್ಚಿನ ಸಂಖ್ಯೆಯಲ್ಲಿರುತ್ತಿದ್ದರಿಂದ ಈ ಪ್ರಕ್ರಿಯೆಗೆ ಹೆಚ್ಚು ಒಳಪಡುತ್ತಿದ್ದರು. ಇದರ ಹಿಂದೆ ಶೋಷಣೆ ಎಂಬುದು ಉಗ್ರ ಸ್ವರೂಪಿಯಾಗಿತ್ತು. *ಹುಟ್ಟಾಳು, ಹೊಲೆಮಗ, ಮನೆಮಾದಿಗ, ಮನೆಮಗತಿನ್*[೧೨] ಮುಂತಾದ ಶಬ್ದಗಳು ಸೇವಕ ಪ್ರವೃತ್ತಿಯ ಸಂಕೇತಗಳು. ಇವರೆಲ್ಲ ಇಡೀ ಜೀವನವನ್ನೆ ಮಾಲೀಕರ ಅಧೀನದಲ್ಲಿ ಕಳೆಯಬೇಕಾಗಿತ್ತು. ಭೂಮಾಲೀಕರು ಜನಸಾಮಾನ್ಯರ ಬದುಕಿಗಿಂತ ತನ್ನ ಸ್ವಾರ್ಥಕ್ಕೆ ಇತರರನ್ನು ಬಲಿತೆಗೆದುಕೊಳ್ಳುತ್ತಿದ್ದರು. ಕೂಲಿಕಾರ್ಮಿಕರು ಜೀವನ ನಿರ್ವಹಣೆಗೆ ಅನಿವಾರ್ಯವಾಗಿ ಮಾಲೀಕರ ಹೊಲಗಳಲ್ಲಿ ದುಡಿಯಬೇಕಾಗಿತ್ತು. ಇನ್ನು ಗುಲಾಮರ, ಜೀತದಾಳು ಬದುಕು ನರಕಸದೃಶ್ಯವೇ ಸರಿ. ದಲಿತರು ಭೂ ಒಡೆಯರ ಜಮೀನುಗಳಲ್ಲಿ ದುಡಿಯುತ್ತಿರುವುದು ಇವತ್ತಿನ ಜಾಯಮಾನವೇನಲ್ಲ. ಭೂ ಒಡೆಯರು ಜಮೀನು ಮಾರುವ ಸಂದರ್ಭದಲ್ಲಿ ಅಲ್ಲಿ ಕೆಲಸ ಮಾಡುವ ದಲಿತರನ್ನು ಇನ್ನೊಬ್ಬರಿಗೆ ಮಾರಬಹುದಿತ್ತು. ಅಂದರೆ ಇವರನ್ನು ಪಶುಗಳಂತೆ ನೋಡಿಕೊಂಡಿರುವ ಸಂದರ್ಭಗಳು ಚರಿತ್ರೆಯಲ್ಲಿ ಸಿಗುತ್ತವೆ. ದಲಿತರನ್ನು ಯಾವ ಕಾರಣಕ್ಕಾಗಿ ಮಾರುತ್ತಿದ್ದರು? ಯಾರು ಮಾರಾಟ ಮಾಡುತ್ತಿದ್ದರು, ಅದರ ಹಿಂದಿನ ಉದ್ದೇಶಗಳೇನು? ಮುಂತಾದ ಪ್ರಶ್ನೆಗಳು ಉದ್ಭವಿಸುತ್ತವೆ.

ಮುಖ್ಯವಾಗಿ ಎರಡು ಆಯಾಮಗಳನ್ನು ಇಟ್ಟುಕೊಂಡು ಈ ಕುರಿತು ಚರ್ಚೆಯನ್ನು ಮುಂದುವರಿಸಬಹುದು. ಒಂದು; ಭೂಮಾಲೀಕರು ತಮಗೆ ತೋಚಿದಾಗ ಇವರನ್ನು ಮಾರಾಟ ಮಾಡಬಹುದಿತ್ತು. ಎರಡು; ಸ್ವತಃ ಮಾರಾಟಕ್ಕೆ ಒಳಗಾಗುವವರು ಬಡತನದ ಬವಣೆಯನ್ನು ನೀಗಿಸಲಾರದೆ ತಮ್ಮ ಮಕ್ಕಳನ್ನೆ ಮಾರಾಟ ಮಾಡಿರುವ ಸಂದರ್ಭಗಳು ಕಾಣಸಿಗುತ್ತವೆ. ಸಮಾಜವು ಕೂಡ ಇದನ್ನು ಮನ್ನಿಸಿತ್ತು ಎನ್ನುವಾಗ ಈ ಘೋರಕೃತ್ಯಗಳನ್ನು ಕುರಿತು ಯಾವ ವೈಚಾರಿಕ ಪಂಥಗಳಾಗಲಿ, ಚಳುವಳಿಯಾಗಲಿ ಗಂಭೀರವಾಗಿ ಪರಿಗಣಿಸಿರಲಿಲ್ಲವೆಂದು ಹೇಳಬೇಕಾಗುತ್ತದೆ.

ಪಾಶ್ಚಿಮಾತ್ಯ ದೇಶಗಳಲ್ಲಿ ಗುಲಾಮರನ್ನು ಮಾರುತ್ತಿದ್ದಂತೆ, ಭಾರತದಲ್ಲಿ ದಲಿತರನ್ನು ಅಷ್ಟು ನಿಕೃಷ್ಟವಾಗಿ ಮಾರುತ್ತಿರಲಿಲ್ಲ ಎಂಬ ಗ್ರಹಿಕೆಯಿದೆ. ಆದರೆ ಸೂಕ್ಷ್ಮವಾಗಿ ಅವಲೋಕನ ಮಾಡಿದಾಗ ದಲಿತರನ್ನು ಸಂತೆಗಳಲ್ಲಿ ಮಾರುತ್ತಿದ್ದರು ಎನ್ನುವುದೇ ಅವರ ಒಟ್ಟು ಜೀವನ ಚಿತ್ರಣವನ್ನು ಅರ್ಥೈಸಿಕೊಳ್ಳಬಹುದಾಗಿದೆ. ಕರ್ನಾಟಕದ ಮಟ್ಟಿಗೆ ಹೇಳುವುದಾದರೆ ಕ್ರಿ.ಶ.೧೨ನೇ ಶತಮಾನದ ವೇಳೆಗೆ ಈ ಪ್ರಕ್ರಿಯೆಯು ಭರದಿಂದ ನಡೆಯುತ್ತಿತ್ತು ಎಂಬುದನ್ನು ನೋಡಬಹುದು. ನಗರದ ಬೀದಿಗಳಲ್ಲಿ ನಿಲ್ಲಿಸಿ ವಸ್ತುಗಳಂತೆ ಮಾರಾಟ ಮಾಡುತ್ತಿದ್ದರು. ಶಾಸನಗಳಲ್ಲಿ ತೊತ್ತುಗಳ ಮಾರಾಟವೆಂದೇ ಉಲ್ಲೇಖವಿದೆ. ಎಂ.ಚಿದಾನಂದಮೂರ್ತಿಯವರು ತೊತ್ತುಗಳೆಂದರೆ 'ಅಸ್ಪೃಶ್ಯ'ರೆಂದೆ ತರ್ಕಿಸಿದ್ದಾರೆ. ಇದರಾಚೆಗೆ ಕೂಡಾ ಶೂದ್ರ ಸಮುದಾಯಗಳಿಗೆ ಸೇರಿದ ವ್ಯಕ್ತಿಗಳು ಕೂಡಾ ಸೇರಿರುವ ಸಾಧ್ಯತೆಗಳು ಕೂಡಾ ಇವೆ. ಆದುದರಿಂದ ತೊತ್ತುಗಳೆಂದರೆ ಕೇವಲ ಅಸ್ಪೃಶ್ಯರು ಮಾತ್ರವಾಗಿರದೆ ಕೆಳಸಮುದಾಯಗಳ ವ್ಯಕ್ತಿಗಳು ಸಹ ಸೇರುತ್ತಿದ್ದರು.

ಈ ವಿಚಾರದ ಬಗೆಗೆ ೧೨ನೇ ಶತಮಾನದ ಜೈನ ಕವಿ ಬಾಲಚಂದ್ರದೇವನ 'ತತ್ವರತ್ನ ಪ್ರದೀಪಿಕೆ', ನಯಸೇನನ 'ಧರ್ಮಾಮೃತ', ಹರಿಹರನ ರಗಳೆಗಳು, ರಾಘವಾಂಕನ 'ಹರಿಶ್ಚಂದ್ರಕಾವ್ಯ'ಗಳಲ್ಲಿ ತೊತ್ತಿನ ವಿಚಾರಗಳು ದಾಖಲಾಗಿವೆ. 'ಜೀರ್ಣೋದ್ಧಾರಕ್ಕೆಂದು ಕೊತ್ತಂಗೆರೆಯ ಓರಿಯೂರ ಒಳವಾರು ಹೊರವಾರು ತೋಟ, ಎಮ್ಮೆ, ಎತ್ತು, ಪಶು, ತೊತ್ತು ಕಟ್ಟಿದ ಬಂಡಿ ಬೆಳ್ದಂಡಿವ ಹಣ ಅಗಸ' ಎಂದು ವ್ಯಾಪಾರ ಸಾಮಗ್ರಿಗಳ ಪಟ್ಟಿ ಕೊಡುವಾಗ ಬಂಡಿಗೆ ಕಟ್ಟಿದ ತೊತ್ತುಗಳನ್ನು ಸೇರಿಸಿದ್ದಾರೆ. ಶ್ರೀಮಂತರು ತಮ್ಮ ಜಮೀನಿನಲ್ಲಿ ದುಡಿಯುವ ಕೆಲಸಕ್ಕೆ ಹೊಲೆಯರನ್ನು(ತೊತ್ತುಗಳನ್ನು) ಆಯ್ದುಕೊಳ್ಳುತ್ತಿದ್ದರು. ದೇವಾಲಯಗಳಿಗೆ ದತ್ತಿ ಕೊಡುವಾಗ ಆಳುಗಳನ್ನು ಸೇರಿಸಿ ಕೊಡುತ್ತಿದ್ದರು. ಒಬ್ಬ ಮಾದಿಗ ಜಾತಿಗೆ ಸೇರಿದ ವ್ಯಕ್ತಿ ಭೈರವದೇವರಿಗೆ ಆಳಾಗಿ ಕೆಲಸ ಮಾಡಿಕೊಂಡಿದ್ದು ಮಡಿದ ವಿಷಯ ಶಾಸನದಲ್ಲಿ ಉಲ್ಲೇಖವಾಗಿದೆ. ರೆಬ್ಬಕಬ್ಬೆ ಎಂಬಾಕೆ ತನ್ನ ತೊತ್ತು ಮಾಚಬ್ಬೆಯನ್ನು ಸಕಳೇಶ್ವರ ದೇವರಿಗೆ ಬಿಟ್ಟ ವಿಷಯವನ್ನು ಶಾಸನ ತಿಳಿಸುತ್ತದೆ. ಶಾಸನಗಳಲ್ಲಿ ಬರುವ ಬೆಸವಾಗ (ಬೆಸನ್=ಅಪ್ಪಣೆ) ಎಂಬುದೂ ತೊತ್ತಿನ ಸೂಚಕ. 'ಬೆಸವಾಗ'ವು ಇಂದಿನ 'ಅಳ್ಮಗ'ವನ್ನು ಹೋಲುತ್ತದೆ. ಈ ಆಳ್ಮಕ್ಕಳು ಸಾಮಾನ್ಯವಾಗಿ ವಂಶಪಾರಂಪರ್ಯವಾಗಿ ಯಜಮಾನನಿಗೆ ಸೇರಿರುವ ಹೊಲೆಯರು.

ದೇವಗಿರಿಯ ಯಾದವರ (ಸೇವುಣರು) ಕಾಲದಲ್ಲಿಯೂ ದಾಸ್ಯ ಪದ್ಧತಿ ತಾಂಡವಾಡುತ್ತಿತ್ತು. ಮಹಾರಾಷ್ಟ್ರದಿಂದ ಓಡಿಸಿ ತಂದ ದಾಸಿಯರನ್ನು ಮಾರುತ್ತಿದ್ದರೆಂದು 'ಲೇಖಪದ್ಧತಿ' ಎಂಬ ಕೃತಿ ತಿಳಿಯಪಡಿಸುತ್ತದೆ. ೧೩ನೇ

ಶತಮಾನದ ಸೇವುಣರ ಮಂತ್ರಿ ಹೇಮಾದ್ರಿ 'ಚತುರ್ವರ್ಗ ಚಿಂತಾಮಣಿ' ಎಂಬ ಕೃತಿಯನ್ನು ರಚಿಸಿದ್ದು ಅದರಲ್ಲಿ ಈ ಕುರಿತು ಗಮನಾರ್ಹ ವಿಚಾರಗಳನ್ನು ಪ್ರಸ್ತಾಪಿಸಿದ್ದಾನೆ. ನಂಜುಂಡನು 'ರಾಮನಾಥ ಚರಿತೆ'ಯಲ್ಲಿ ಹೊಸಮಲೆಯನ್ನು ವರ್ಣಿಸುತ್ತಾ ವಿವಿಧ ಕಸುಬುದಾರರ ಕೇರಿಗಳನ್ನು ವರ್ಣಿಸುತ್ತಾನೆ. ಕಂಚುಗಾರ, ಕಲ್ಕುಟಿಗ, ಬಡಗಿ, ಕಮ್ಮಾರ, ಅಂಚುಗಾರ, ಸಮಗಾರ(=ಚಮ್ಮಾರ) ವರ್ಣಿಸುವಾಗ ಬೆಸದಾಳುಗಳ ಕೇರಿಯನ್ನು ಹೇಳುತ್ತಾನೆ. 'ಬೆಸಮಕ್ಕಳಾಗುವ ಮೈಬೆಮರಿಂದಾ ಬಿಂದಿಕೆಸರ್ವಡೆದಿಹುದನವರಿತ' ಬೆಸದಾಳು ಅಥವಾ ಬೆಸಮಕ್ಕಳು (=ಆಳುಮಕ್ಕಳು) ಬೆವರಿಂದ ಹೊಸಮಲೆ ನಗರದ ಬೀದಿಗಳು ಕೆಸರಾಗಿದ್ದವು.[೧೭] ಈ ಆಳ್ಮಕ್ಕಳು ಒಡೆಯರ ಆಜ್ಞೆಯಂತೆ ನಡೆದುಕೊಳ್ಳುವುದರ ಜೊತೆಗೆ ಅವರ ಶ್ರೇಯಸ್ಸಿಗೆ ದುಡಿಯಬೇಕಾಗಿತ್ತು. ವಿಜಯನಗರ ಕಾಲಾವಧಿಯು ಈ ಬಗೆಯ ಅನಿಷ್ಟ ಪದ್ಧತಿಗಳಿಂದ ಮುಕ್ತವಾಗಿರಲಿಲ್ಲವೆಂದು ಶಾಸನಗಳು ಮತ್ತು ವಿದೇಶಿ ಪ್ರವಾಸಿಗರ ಬರವಣಿಗೆಗಳಿಂದ ಸ್ಪಷ್ಟವಾಗುತ್ತದೆ. ಗ್ರಾಮೀಣ ಪ್ರದೇಶವು ಸೇರಿದಂತೆ ನಗರಕೇಂದ್ರಿತ ಪ್ರದೇಶದಲ್ಲಿ ಗುಲಾಮ ಮತ್ತು ಜನರ ಮಾರಾಟ ಪ್ರಕ್ರಿಯೆ ಚಾಲ್ತಿಯಲ್ಲಿತ್ತು. ಅಬ್ದುಲ್‌ರಜಾಕ್, ನಿಕೊಲೊಕೊಂಟಿ, ಬಾರ್ಬೋಸ ಅವರು ಈ ಪದ್ಧತಿಗಳು ಸಮಾಜದ ಮೇಲೆ ಗಾಢವಾದ ಪರಿಣಾಮ ಬೀರುತ್ತಿದ್ದವು ಎಂದು ಅಭಿಪ್ರಾಯಪಡುತ್ತಾರೆ. ಬೀದರ್‌ನಲ್ಲಿ ಕಪ್ಪು ಜನರನ್ನು ಮಾರಾಟ ಮಾಡಲಾಗುತ್ತಿತ್ತು. ಕ್ರಿ.ಶ.೧೪೭೦ ಶಾಸನವು 'ಬಸವಾಗ'(Bond-Servant)ದಲ್ಲಿ ಸ್ತ್ರೀ ಜೀತದಾಳುಗಳು ಸೇರಿದ್ದರು ಎಂದು ತಿಳಿಸುತ್ತದೆ. ಹೊಲೆಯರು ಒಡೆಯರ ಸೇವಕರಾಗಿ[೧೮] ಮುಂದುವರಿಯುತ್ತಿದ್ದರು.

ಬರಗಾಲ ಮತ್ತು ತುರ್ತುಪರಿಸ್ಥಿತಿಯ ಸಂದರ್ಭದಲ್ಲಿ ಈ ಪ್ರಕ್ರಿಯೆಯು ಹೆಚ್ಚಾಗಿ ನಡೆಯುತ್ತಿತ್ತು. ಕೋರಮಂಡಲ ತೀರಪ್ರದೇಶದಲ್ಲಿ ನೂರಾರು ಮಂದಿ ಹಸಿವಿನಿಂದ ಅಸುನೀಗಿದರು. ಸಮಾಜದ ಆರ್ಥಿಕ ಪರಿಸ್ಥಿತಿ ಎಷ್ಟು ಹೀನಾಯ ಸ್ಥಿತಿಯಲ್ಲಿತ್ತು ಎನ್ನುವುದಕ್ಕೆ ಪೋಷಕರು ತಮ್ಮ ಮಕ್ಕಳನ್ನೆ ನಾಲ್ಕು ಅಥವಾ ಐದು ಪನಾಮ (Panams)ಗಳಿಗೆ ಒಬ್ಬರಂತೆ ಮಾರಾಟ ಮಾಡುತ್ತಿದ್ದರು. ಕ್ರಿ.ಶ.೧೬೩೦ರ ಸಮಯದಲ್ಲಿ ವಿಪರೀತ ಬರಗಾಲ ಸಂಭವಿಸಿತು. ಹಸಿವು ತಡೆಯಲಾರದೆ ತಮ್ಮ ಮಕ್ಕಳನ್ನೆ ಅಕ್ಕಿಗಾಗಿ ಮಾರಾಟ ಮಾಡಿದ ವಿವರಗಳು ಸಿಗುತ್ತವೆ. ಈ ಪ್ರಕ್ರಿಯೆಯಲ್ಲಿ ಗುಲಾಮರು ಸೇರಿದಂತೆ ಭಾರತದ ಇತರೆ ಭಾಗಗಳಿಗೆ ಸಾಗಿಸುತ್ತಿದ್ದರೆಂದು ಬರ್ಬೋಸ್[೧೯] ತಿಳಿಸುತ್ತಾನೆ. ಬೆಸಬಾಗ, ಮಾನವರ ಮಾರಾಟ, ಜೀತ ಪದ್ಧತಿಗಳು ಸರ್ವೇ ಸಾಮಾನ್ಯವಾಗಿದ್ದವು. ವೀರಬಣಜಿಗರ ಅಧೀನದಲ್ಲಿ ಹೊಲೆಯರು ಇದ್ದರು. ದಿವಾಳಿಯಾದ ಸಾಲಗಾರರನ್ನು ಸಾಲಕೊಟ್ಟವರ ಆಸ್ತಿ ಎಂದು ತೀರ್ಮಾನಿಸಲಾಗುತ್ತಿತ್ತು ಎಂದು ನಿಕೊಲೊಕೊಂಟಿ ಹೇಳಿದ್ದಾನೆ.[೨೦] ಬಡತನದ ಬವಣೆ ಮನುಷ್ಯನನ್ನು ಎಂತಹ ಹೇಯ ಕೃತ್ಯಗಳನ್ನು ಮಾಡಿಸುತ್ತದೆ ಎಂಬುದಕ್ಕೆ ಚರಿತ್ರೆಯೆ ಸಾಕ್ಷಿ. ನಂಜುಂಡ ಕವಿಯ 'ರಾಮನಾಥ ಚರಿತ'ದಲ್ಲಿ ದೆಹಲಿ ಸುಲ್ತಾನನ ಓಲಗವನ್ನು ವರ್ಣಿಸುವಾಗ 'ಬಾಲಗುಲಾಮರನ್ನು ಕುರಿತ ಒಂದು ಸಂದರ್ಭ ಬರುತ್ತದೆ'. 'ಕಾಲಕುಪ್ಪಸದ ಕಬಾಯಿಯ ಕಟ್ಬಡ ಮೇಲು ರನ್ನದ ದಶರಥಿಯ ಬಾಲಗುಲಾಮರು ಮೆರೆದರು ಸುರತಾಳ ನೋಲಗದೊಳಗೆಡವಿದೆ'[೨೧] ಎಂದು ಹೇಳುತ್ತಾನೆ.

ಗುಲಾಮರನ್ನು, ಕೃಷಿ ಜೀತದಾಳುಗಳನ್ನು, ಕೆಳಜಾತಿಗಳಿಗೆ ಸೇರಿದ ಆರ್ಥಿಕವಾಗಿ ದುಃಸ್ಥಿತಿಯಲ್ಲಿರುವ ಬಹುತೇಕ ಜನರನ್ನು ಕೃಷಿ ಕೂಲಿಯಾಳುಗಳನ್ನಾಗಿ ನೇಮಿಸಿಕೊಳ್ಳಲಾಗುತ್ತಿತ್ತು. ಸರ್ಕಾರಕ್ಕೆ ಸಂಬಂಧಿಸಿದ

ಭೂಮಿಯನ್ನು ಗೇಣಿದಾರರಿಗೆ ವಹಿಸಿಕೊಟ್ಟರೆ, ಒಡೆತನ ಹೊಂದಿರುವ ಭೂಮಾಲೀಕರು ತಮ್ಮ ಜಮೀನುಗಳನ್ನು ಸಮಾಜದ ಕೆಳಜಾತಿ ಸಮುದಾಯಗಳಿಗೆ ಸೇರಿದ ವ್ಯಕ್ತಿಗಳಿಗೆ ವಹಿಸಿಕೊಡುತ್ತಿದ್ದರು. ಗುಲಾಮರಿಂದ ಮತ್ತು ಕೃಷಿಕೂಲಿಯಾಳುಗಳಿಂದ ಭೂಮಿಯನ್ನು ಉಳುಮೆ ಮಾಡಿಸಲಾಗುತ್ತಿತ್ತು.

ಮಧ್ಯಯುಗದಲ್ಲಿ ದಖನ್ ಪ್ರಾಂತ್ಯಕ್ಕೆ ಸೇರಿದ ಗುಲಾಮರು ಸಮಾಜದ ಉತ್ಪಾದನಾಂಗಕ್ಕೆ ಅವಶ್ಯಕ ಸರಕು ಆಗಿದ್ದರು. ಚರಿತ್ರೆಯಲ್ಲಿ ಇವರನ್ನು ಔದಾರ್ಯದಿಂದ ನೋಡಿಕೊಂಡಿರುವ ಪ್ರಸಂಗಗಳೆ ಎದ್ದುಕಂಡಿಲ್ಲ. ಸಮಾಜದ ಬಲಿಷ್ಠ ಜಾತಿಗಳು ಇವರಿಂದ ಪೋಷಣೆ ಪಡೆಯುತ್ತಿದ್ದರು. ಲಿಂಗಾಯತ, ಒಕ್ಕಲಿಗರು, ಬ್ರಾಹ್ಮಣರು, ಮರಾಠರು, ಮುಸ್ಲಿಂ ಮುಂತಾದ ಜನಾಂಗಗಳು ಕೃಷಿಯಿಂದ ಅಧಿಕ ಪೋಷಣೆ ಪಡೆಯುತ್ತಿದ್ದರು. ಬಹುಮನಿ ಮತ್ತು ಆದಿಲ್‌ಷಾಹಿಗಳ ಕಾಲದಲ್ಲಿ ಭೂಮಿಯನ್ನು ವಿವಿಧ ರೀತಿಯಲ್ಲಿ ಹಂಚಿದ್ದರಿಂದ ಕೃಷಿ ಚಟುವಟಿಕೆಗೆ ಮತ್ತಷ್ಟು ಶಕ್ತಿ ನೀಡಿದಂತಾಯಿತು. ಈ ಅವಧಿಯಲ್ಲಿ ಭೂಮಿಯನ್ನು ಸರ್ಕಾರಿ, ಜಾಗೀರು, ಹಿಂದೂ ನಾಯಕರ ಭೂಮಿಯೆಂದು ವಿಂಗಡಿಸಲಾಗಿತ್ತು.[೨೨] ಬಿಜಾಪುರದ ಸುಲ್ತಾನರ ಆಳ್ವಿಕೆಯಲ್ಲಿಯು ಸಹ ಗುಲಾಮರ ಪಾತ್ರವಿತ್ತು. ಸುಲ್ತಾನರು ಇತರೆ ಕೆಲಸ ಕಾರ್ಯಗಳಿಗೆ ಗುಲಾಮರನ್ನು ನೇಮಿಸಿಕೊಳ್ಳುತ್ತಿದ್ದರು. ಕ್ರಿ.ಶ.೧೬೦೯ ಎರಡನೆ ಇಬ್ರಾಹಿಂ ಆದಿಲ್‌ಷಾನ ಕಾಲದ ನೆಚ್ಚಿನ ಗುಲಾಮರಾದ ಯಕ್ಕೂತ್‌ಖಾನ್ ಮತ್ತು ಫಾಜೀಖಾನ್ ಇಬ್ಬರೂ ಕೊಪ್ಪಳದ ಕೋಟೆ ಅಧಿಕಾರಿಗಳಾಗಿದ್ದರೆಂಬುದು ವಿಶೇಷ.[೨೩] ಅದೇ ರೀತಿಯಾಗಿ ಮಹಮದ್ ಆದಿಲ್‌ಷಾನ ಸೇವಕನಾದ ರಾಘೋಜಿ ಸೆಬ ಬಾಬಾಜಿ ಎಂಬುವನು ಸುಲ್ತಾನ ಹತ್ತಿರ ಕೆಲಸ ಮಾಡುತ್ತಿದ್ದ ಸುಲ್ತಾನರಿಗೆ ಸಹಾಯಕರಾಗಿ ಕೆಲಸ ಮಾಡುತ್ತಿದ್ದರು.[೨೪] ವಿಜಯನಗರ ಸಮಕಾಲೀನ ಸಾಮ್ರಾಜ್ಯವಾದ ಬಹುಮನಿ ಕೂಡ ಉಳಿದ ಪ್ರದೇಶಗಳಿಗಿಂತ ಭಿನ್ನವಾಗಿ ಕಾಣಿಸಲಿಲ್ಲ. ಮುಸ್ಲಿಮ್ ಅರಸರ ಆಳ್ವಿಕೆಯೊಂದನ್ನು ಬಿಟ್ಟರೆ ಉಳಿದೆಲ್ಲಾ ಸಂಪ್ರದಾಯಗಳು ಈ ಪ್ರದೇಶದಲ್ಲಿ ಕೂಡ ಮುಂದುವರೆದಿದೆ.

### ೪.೧.೩ ಮಲೆನಾಡು ಪ್ರದೇಶ ಮತ್ತು ದಲಿತ ಮಹಿಳೆ

ಕರ್ನಾಟಕವು ಪ್ರಾದೇಶಿಕವಾಗಿ ಬೇರೆ ಬೇರೆ ಅರಸರ ಆಳ್ವಿಕೆಗೆ ಒಳಪಟ್ಟಿತ್ತು. ಆ ಅವಧಿಯಲ್ಲಿ ಪ್ರದೇಶದಿಂದ ಪ್ರದೇಶಕ್ಕೆ ಆರ್ಥಿಕ ಭಿನ್ನತೆಯನ್ನು ಗುರುತಿಸಬಹುದಾಗಿದೆ. ಈ ಬದಲಾವಣೆಗೆ ಸಾಮಾಜಿಕ ಮತ್ತು ಆರ್ಥಿಕ ವಿಚಾರಗಳಿಗೆ ನೇರವಾಗಿ ಸಂಬಂಧಪಡುತ್ತಿತ್ತು. ಈ ಬದಲಾವಣೆಗೆ ಭೌಗೋಳಿಕ ಪರಿಸರವು ಕೂಡ ಕಾರಣವಾಗಿತ್ತು. ಮಧ್ಯಕಾಲೀನ ಮತ್ತು ಮಧ್ಯಕಾಲೀನೋತ್ತರ ಸಂದರ್ಭಗಳಲ್ಲಿ ಮಲೆನಾಡು ಪ್ರದೇಶಗಳಲ್ಲಿ ಕೆಲವು ಅನಿಷ್ಟ ಪದ್ಧತಿಗಳಿಗೆ ನಾಂದಿಯಾಯಿತು. ಅವುಗಳಲ್ಲಿ ದಲಿತ ಮಹಿಳೆಯರನ್ನು ಮಾರಾಟ ಮಾಡುವುದೂ ಒಂದಾಗಿತ್ತು. ಸಮಾಜಕ್ಕೆ ತೀರ ಅಗತ್ಯವಾದ ಕೆರೆ, ಬಾವಿ ಮೊದಲಾದವುಗಳ ನಿರ್ಮಾಣ ಕಾರ್ಯದಲ್ಲಿ ರಾಜ್ಯವು ಕೂಲಿಯಾಳುಗಳನ್ನು ನೇಮಿಸಿಕೊಳ್ಳುತ್ತಿತ್ತು. ಪ್ರಿಯಾತ್ರೋದೆಲ್ಲಾವೆಲ್ಲ ತನ್ನ ಪ್ರವಾಸದ ಸಂದರ್ಭದಲ್ಲಿ ಕೂಲಿಯಾಳುಗಳನ್ನು ಕುರಿತು ಬರೆಯುತ್ತಾನೆ. ದಾಸ್ಯ ಅಥವಾ ಗುಲಾಮ ಪದ್ಧತಿಯು ಪ್ರಚಲಿತದಲ್ಲಿತ್ತು. ಹೆಣ್ಣುಗಳನ್ನು ಮಾರಾಟ ಮಾಡುವ, ಕೊಂಡುಕೊಳ್ಳುವ ಪ್ರಕ್ರಿಯೆಯು ವ್ಯಾಪಾರವಾಗಿ ಮಾರ್ಪಟ್ಟಿತು. ಇಕ್ಕೇರಿಯಲ್ಲಿ ಈ ರೀತಿ ಮಾರಾಟ ಮಾಡಿದ ಬಗೆಗೆ ಶಾಸನದಿಂದ ಸ್ಪಷ್ಟವಾಗುತ್ತದೆ.[೨೫] ಶೂದ್ರ ವರ್ಗಕ್ಕೆ ಸೇರಿದ ಮಹಿಳೆಯರು

ಮಠದಲ್ಲಿ ದಾಸ್ಯ ವೃತ್ತಿಯ ಕೆಲಸ ನಿರ್ವಹಿಸುತ್ತಿದ್ದರು. ಮಠದಲ್ಲಿ ಚಾಕರಿ ಮಾಡುವ ಹೆಣ್ಣುಗಳಿಗೆ ಸಂಬಳ ಸಂದಾಯವಾಗುತ್ತಿತ್ತು. ಅನಾಥ ಅಥವಾ ಕೆಟ್ಟ ಹೆಣ್ಣುಗಳನ್ನು ಮಠದಲ್ಲಿ ದಾಸ್ಯ ವೃತ್ತಿಗೆ ನೇಮಕ ಮಾಡಿಕೊಳ್ಳಲಾಗುತ್ತಿತ್ತು. ಕೆಟ್ಟ ಹೆಣ್ಣುಗಳನ್ನು ಭೂಮಿಯ ಮಾಲೀಕರು ಮಠದ ಚಾವಡಿಯಿಂದ ಖರೀದಿಸಿ ಮನೆಯ ಹೊರಗೆಲಸಕ್ಕಾಗಿ ಇಟ್ಟುಕೊಳ್ಳುತ್ತಿದ್ದರೆಂದು ಕೆಳದಿ ಮಠಕ್ಕೆ ಸಂಬಂಧಿಸಿದ ದಾಖಲೆ ಪತ್ರಗಳು ತಿಳಿಯಪಡಿಸುತ್ತವೆ.[೩೬] ಅದೇ ರೀತಿಯಾಗಿ ಶೃಂಗೇರಿ ಮಠದಲ್ಲಿ ನಡೆದ ಹೊಲೆಯಾಳುಗಳ ಮಾರಾಟದ ಬಗ್ಗೆ ಶಾಸನಗಳು ಉಲ್ಲೇಖಿಸಿವೆ. ಈ ಕ್ರಯಪತ್ರಗಳ ಬಗೆಗೆ ಎ.ಕೆ.ಶಾಸ್ತ್ರಿಯವರು ಐ.ಸಿ.ಎಚ್.ಆರ್.ಗೆ ಸಿದ್ಧಪಡಿಸಿರುವ ಅಪ್ರಕಟಿತ ಕೃತಿಯಲ್ಲಿ ವಿವರಗಳಿವೆ.

ಜೈನಕವಿ ಬಾಲಚಂದ್ರದೇವನು ಕೊಡುವ ಉಲ್ಲೇಖಗಳು ಈ ಕುರಿತಂತೆ ಹೆಚ್ಚಿನ ವಿವರಣೆಗಳನ್ನು ಅಪೇಕ್ಷಿಸಬಹುದು. 'ಅಲ್ಲಿ ತೊಳ್ತಿರುಮಂ ಬಂಟರುಮಂ ಈ ದೇಶದಿಂದೊಯ್ದು ಮತ್ತೊಂದು ದೇಶದೊಳ್ ಮಾರಿದೊಡೆ' ಎಂಬ ಪಠ್ಯವು ಸ್ಪಷ್ಟವಾಗಿ ಜನಸಾಮಾನ್ಯರನ್ನು, ಸಣ್ಣ ಪುಟ್ಟ ಬಂಟರನ್ನು, ತೊಳ್ತಿರು(ಸೇವಕರು), ಸೈನಿಕರನ್ನು ಯಜಮಾನರು ಅಥವಾ ಚಿಕ್ಕ ಪಾಳೆಯಗಾರರು ಇವರನ್ನು ಮತ್ತೊಂದು ಪ್ರದೇಶಕ್ಕೆ ಕೊಂಡೊಯ್ದು ಮಾರುತ್ತಿದ್ದರು. ಯುದ್ಧಗಳಲ್ಲಿ ಸೆರೆಸಿಕ್ಕ ಸೈನಿಕರನ್ನು, ಗುಲಾಮರನ್ನಾಗಿಸಿ ಅವರನ್ನು ಸಹ ಮಾರುತ್ತಿದ್ದರು[೩೭] ಎಂಬ ನಿಲುವಿಗೆ ಬರಬಹುದು. ಶೃಂಗೇರಿ ಮಠದ ಒಂದು ಕ್ರಯಪತ್ರದಲ್ಲಿ ಕ್ರಿ.ಶ.೧೬.೦೪.೧೭೧೦ರಲ್ಲಿ ಗಣೇಶಭಟ್ಟ ಎಂಬ ವ್ಯಕ್ತಿಗೆ ಅಪ್ಪಯ್ಯ ಹೆಬ್ಬಾರನ ಮಗನಾದ ಮಲ್ಲಯ್ಯ ಹೆಬ್ಬಾರ ಮತ್ತು ಅದೇ ಅಪ್ಪಯ್ಯ ಹೆಬ್ಬಾರನ ಮೊಮ್ಮಗನೂ ತಿಮ್ಮಯ್ಯ ಹೆಬ್ಬಾರನ ಮಗನೂ ಆದ ವೆಂಕಪ್ಪ ಹೆಬ್ಬಾರ ಎಂಬ ಇಬ್ಬರೂ ಸೇರಿ ತಮಗೆ 'ಪಿತ್ರಾರ್ಜಿತ'ವಾಗಿ ಬಂದಿದ್ದ ತಿಮ್ಮ ಹೊಲೆಯ ಆಳನ್ನು ಒಂಬತ್ತು ವರಹಗಳಿಗೆ ಮಾರಿ ಕ್ರಯಪತ್ರ ಬರೆದುಕೊಡುತ್ತಾನೆ.[೩೮] ಕ್ರಿ.ಶ.೧೭೯೪ರಲ್ಲಿ ಬರೆದುಕೊಟ್ಟ ಒಂದು ಕ್ರಯಚೀಟಿಯಲ್ಲಿ ಅಣ್ಣಯ್ಯಭಟ್ಟ ಹದಿನೈದು ಗದ್ಯಾಣಕ್ಕೆ ಒಬ್ಬ ಹೊಲೆಯ ಮತ್ತು ಹೊಲತಿಯನ್ನು ಸುಬ್ಬಯ್ಯನಿಗೆ ಮಾರಿ ಬರೆದು ಕೊಟ್ಟ ವಿವರವಿದೆ. ಹಾಲುಗಾರ ಸುಬೈಗೆ ಹೊಲೆಯಾಳ ಕ್ರಚಿಟ್ಟು, ಪ್ರಮಾದಿಚ ಸಂವತ್ಸರದ ಪ್ರಶ್ಯಶು ೫ರಲ್ಲು ಶ್ರೀ ಮತ್ತು ಹಾಲುಗಾರ ಕುೃಷ್ಣಯ್ಯನ ಮಗ ಸುಬ್ಬೈಯಗೆ ಹಾಲಂದೂರ ಸದಾಶಿವಭಟ್ರ ಮಗ ಅಂಣ್ಣೈಯ ಭಟ್ಟನು ಬರಶಿಕೊಟ್ಟ ಮೆರ ಹೊಲೆಯಾಳ ಕ್ರಯಬಿಟ್ಟಿನ ಕ್ರಮವೆಂತಂದರೆ ಎಂದು ಹೇಳುವುದರಿಂದ ಹೊಲೆಯರನ್ನು ಮಾರಿ ಕ್ರಯ ಚೇಟಿಗಳನ್ನು ಶೃಂಗೇರಿ ಮಠದಲ್ಲಿ ಶೇಖರಿಸುತ್ತಿದ್ದಂತೆ ಕಾಣುತ್ತದೆ[೩೯] ಎಂಬುದು ಸ್ಪಷ್ಟ. ಬರಗಾಲ ಮತ್ತು ಕ್ಷಾಮದ ಪರಿಣಾಮವಾಗಿ ಜನರು ಜನರನ್ನೆ ಮಾರಾಟ ಮಾಡುವ, ತಿನ್ನುವ ಸ್ಥಿತಿಗೆ ತಲುಪಿದ್ದರು ಎಂದು ಶಾಸನ ತಿಳಿಸುತ್ತದೆ.[೪೦] ಇದರಿಂದ ಅಂದಿನ ಸಮಾಜದ ಸಾಮಾಜಿಕ ಮತ್ತು ಆರ್ಥಿಕ ಜನಜೀವನ ಚಿತ್ರವನ್ನು ಅರ್ಥೈಸಲು ಸಾಧ್ಯವಾಗುತ್ತದೆ.

ಶೃಂಗೇರಿ ಮಠದ ಕ್ರಯಪತ್ರಗಳಲ್ಲಿ ದಾಖಲಾಗಿರುವಂತೆ ೨೯.೧.೧೭೫೮ರ ಪ್ರಕಾರ ಕೃಷ್ಣಯ್ಯನಿಗೆ ದುರ್ಗಾಭಟ್ಟ ಬರೆಯಿಸಿಕೊಟ್ಟ ಮೇರರ ಜಾತಿಯ ಹೊಲೆ ಆಳದ ಕ್ರಯಪತ್ರವಿದೆ. ಇವನಿಗೆ ಪಿತ್ರಾರ್ಜಿತವಾಗಿ ಬಂದ ಚನ್ನ ಎಂಬ ಹೊಲಯಾಳನ ಹೆಂಡತಿ, ಬಹುಶಃ ವಿಧವೆ, ಶೀಲವನ್ನು ಕೆಡಿಸಿಕೊಂಡಿದ್ದರಿಂದ ಆಕೆಯನ್ನು

ಶೃಂಗೇರಿ ಮಠ ಮಾರಾಟಕ್ಕೆ ಇಟ್ಟಾಗ ದುರ್ಗಾಭಟ್ಟ ಮತ್ತು ಆತನ ಬಂಧು ಸುಬ್ಬಣ್ಣಯ್ಯ ಇಬ್ಬರೂ ಹಣ ಕೊಟ್ಟು ಆಕೆಯನ್ನು ಬಿಡಿಸಿಕೊಂಡು ತನ್ನ ಆಳು ಮಲ್ಲು ಎಂಬುವನಿಗೆ[೬೪] ಕೊಡುತ್ತಾರೆ.

ಮೇರರು ಎಂಬ ದಕ್ಷಿಣ ಕನ್ನಡ ಜಿಲ್ಲೆಯ ಹೊಲೆಯರು ದಾಸ್ಯ ಪದ್ಧತಿಗೆ ಒಳಗಾಗಿದ್ದರು. ಇದರಲ್ಲಿ 'ಮೂಲಾಳು', 'ಸಾಲದಾಳು' ಎಂಬ ಆಳುಗಳಿದ್ದರು. ಬಹು ಹಿಂದಿನಿಂದಲೇ ಆಳಾಗಿ ಬಂದವನೇ ಮೂಲಾಳು ಹೊಲೆಯ, ಈಚೆಗೆ ಸಾಲ ತೀರಿಸಲಾರದೆ ಆಳಾದವನೇ ಸಾಲದಾಳು ಹೊಲೆಯ. ಕೊಡಗಿನ ವಿರಾಜಪೇಟೆ ತಾಲ್ಲೂಕಿನ 'ಯೆರವ' ಎಂಬ ಜಾತಿಯ ಗಿರಿಜನರನ್ನು(Tribes) ಗುಲಾಮರನ್ನಾಗಿ ಕಳೆದ ಶತಮಾನದವರೆಗೂ ಮಾರಾಟ ಮಾಡುತ್ತಿದ್ದುದು ತಿಳಿದುಬರುತ್ತದೆ. ಯೆರವರಲ್ಲಿ ಫಣಿಯ ಯೆರವ, ದೇಜರಿ ಯೆರವ ಎಂಬ ಎರಡು ಬಗೆಗಳಿವೆ. ಕ್ರಿ.ಶ.೧೮೧೭ರಲ್ಲಿ ಬಲಿಷ್ಠ ಯೆರವ ಗಂಡಸಿನ ಮಾರಾಟದ ಬೆಲೆ ಏಳು ಪಗೋಡಾಗಳು. ಕ್ರಿ.ಶ.೧೮೩೪ರಲ್ಲಿ *ಪಣಿಯ* ಅಥವಾ *ಪಿಂಜರಿ* ಯೆರವ ದಂಪತಿಗಳ ಮಾರಾಟದ ಬೆಲೆ ಆರು ಕಂಠೀರಾಯ ಪಗೋಡಗಳು.[೬೫] ಅಂದಿನ ಸಮಾಜವು ಈ ಪದ್ಧತಿಯನ್ನು ಮಾನ್ಯಮಾಡಿದ್ದು ಕೇವಲ ಕೆಳಜಾತಿ ಮತ್ತು ದಲಿತ ವರ್ಗಗಳಿಗೆ ಮಾತ್ರ ಸೀಮಿತವಾಗದೆ ಬ್ರಾಹ್ಮಣ ಜಾತಿಯ ಒಬ್ಬ ಸ್ತ್ರೀಯನ್ನು ಮಾರಾಟ ಮಾಡುವುದರ ಉಲ್ಲೇಖ ಸಿಗುತ್ತದೆ. 'ಗೊದಿ' ಎಂಬ ಬ್ರಾಹ್ಮಣ ಮನೆತನಕ್ಕೆ ಸೇರಿದವಳನ್ನು ಇರುಳು ತಪ್ಪಿದ್ದಾಳೆ ಎಂದು ತನ್ನ ಅಣ್ಣನೆ ತಂಗಿಯನ್ನು ಕೊಂಡುಕೊಂಡಿದ್ದಾನೆ.[೬೬] ಈ ರೀತಿಯ ವಿವರಗಳು ಶೃಂಗೇರಿ ಮಠ, ಕವಿಲೆದುರ್ಗ ಮಠದಲ್ಲಿನ ಹೊಲೆಯಾಳುಗಳ ಮಾರಾಟ ಮಾಡಿದ್ದರ ಬಗ್ಗೆ ದಾಖಲೆಗಳು ಲಭ್ಯವಿದೆ. ಕೊಡವ ಮನೆತನ ನಾಶವಾದ ಮೇಲೆ ಅವರ ಆಸ್ತಿ ಕೆಂಬಟ್ಟೆ ಹೊಲೆಯರಿಗೆ ಸೇರುತ್ತಿತ್ತು ಎಂದು ಎಂ.ಜಿ.ನಾಗರಾಜ್[೬೭] ಅವರು ತಿಳಿಸುತ್ತಾರೆ.

ಒಮ್ಮೆ ಮಾರಾಟವಾದ ಸ್ತ್ರೀಯ ಮುಂದಿನ ಜೀವನ ದುರಂತಮಯ. ಈ ಬಗೆಗೆ ಹೆಚ್ಚಿನ ಮಾಹಿತಿಗಾಗಿ ಚರಿತ್ರೆ ಕೂಡ ಮೌನ ವಹಿಸುತ್ತದೆ. ಆ ಸ್ತ್ರೀಯಲ್ಲಿ ಹುಟ್ಟಿದ ಮಗು 'ದಾಸ'ನಾಗಿರುತ್ತಿದ್ದ ಎಂಬುದನ್ನು ಊಹಿಸಲು ಅವಕಾಶವಿದೆ. ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ "ಜನ್ಮದಾಸರು" ಬಹುಶಃ ಇವರೇ ಆಗಿರಬಹುದು. ಇದರ ಜೊತೆಗೆ 'ಮೃಚ್ಛಕಟಿಕ' ನಾಟಕದಲ್ಲಿ ದಾಸಿಯರ ಮಾರಾಟ ಉಲ್ಲೇಖ ಕ್ರಿ.ಶ.೩ನೇ ಶತಮಾನದಷ್ಟು ಹಳೆಯದು. ಈ ಪದ್ಧತಿಗೆ ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಹಿಂದುಳಿದಿರುವಿಕೆ ಹಾಗೂ ಬಲಹೀನತೆಯೇ ಮುಖ್ಯ ಕಾರಣಗಳಾಗಿ ಮೇಲ್ನೋಟಕ್ಕೆ ಕಾಣಸುತ್ತವೆ. ಈಗಾಗಲೇ ಗಮನಿಸಿರುವಂತೆ ಸಮಾಜದ ಕೆಳಜಾತಿಗಳ (ಶೂದ್ರ ಮತ್ತು ದಲಿತ ಜಾತಿಗಳ) ಹೆಣ್ಣುಗಳು ಮಾತ್ರ ಮಾರಾಟವಾಗುತ್ತಿದ್ದರೆ ಅಥವಾ ಸಮಾಜದ ಮೇಲ್ಜಾತಿಯರು ಸಹ ಈ ಕೃತ್ಯಕ್ಕೆ ಬಲಿಯಾಗುತ್ತಿದ್ದರೆ ಎಂಬುದನ್ನು ಪರಿಶೀಲಿಸುವಾಗ ಬ್ರಾಹ್ಮಣ ಜಾತಿಗೆ ಸೇರಿದ ಸ್ತ್ರೀಯರು ಈ ಪ್ರಕ್ರಿಯೆಗೆ ಒಳಗಾಗಿದ್ದಾರೆ. ಆದರೆ ಮಾರಾಟವಾಗಿರುವ ವಿಧಾನಗಳಲ್ಲಿ ಗಂಭೀರ ಬದಲಾವಣೆಗಳನ್ನು ಗುರುತಿಸಬಹುದಾಗಿದೆ.

ಆದರೆ ಈ ಸ್ತ್ರೀಯನ್ನು ಮಾರಾಟ ಮಾಡಿದ ವ್ಯಕ್ತಿ ಮಾಲೀಕನಾಗಲಿ, ಒಡೆಯನಾಗಲಿ ಅಥವಾ ಅಪರಿಚಿತ ವ್ಯಕ್ತಿಯಾಗಲಿ ಮಾರಾಟ ಮಾಡದೆ ಒಡಹುಟ್ಟಿದ ಅಣ್ಣನೆ ಮಾರಾಟ ಮಾಡುತ್ತಾನೆ. ಕಾರಣ, ಅನೈತಿಕ ಸಂಬಂಧ ಹೊಂದಿದ್ದಾಳೆ[೬೮] ಎಂಬುದೆ ಪ್ರಮುಖ ವಿಚಾರ. ಒಮ್ಮೆ ಮಾರಾಟವಾದ ಹೆಣ್ಣುಗಳು ಮಾಲೀಕರ ವಸ್ತುಗಳಾಗಿ

ಮಾರ್ಪಾಡುತ್ತಿದ್ದರು. ಮಾಲೀಕರ ಅಥವಾ ಹೊಸದಾಗಿ ಕೊಂಡುಕೊಂಡ ಗುಲಾಮರಾಗಿ, ಆಳುಗಳಾಗಿ ಬದಲಾವಣೆಯಾಗಬೇಕಿತ್ತು. ಬಹುಪಾಲು ಜಮೀನ್ದಾರರು ಈ ಹೆಣ್ಣುಗಳನ್ನು ಭೋಗ ಜೀವನದ ಆಸೆಗಾಗಿ ಉಪಯೋಗಿಸಿಕೊಂಡಿದ್ದಾರೆ. ಸಂಪೂರ್ಣ ಸೇವೆಯನ್ನು ಮಾಲೀಕರಿಗೆ ಒಪ್ಪಿಸಬೇಕಾಗಿತ್ತು. ಈ ರೀತಿಯ ಪ್ರಕ್ರಿಯೆಗಳನ್ನು ಮಧ್ಯಕಾಲೀನ ಕರ್ನಾಟಕದುದ್ದಕ್ಕೂ ಕಾಣಬಹುದು. ಅದೇ ರೀತಿ ಉತ್ತರ ಭಾರತದಲ್ಲಿ ಸಹ ಈ ಅಮಾನವೀಯ ಪದ್ಧತಿಗಳು ಚಾಲ್ತಿಯಲ್ಲಿದ್ದವು ಎನ್ನುವುದನ್ನು ಗಮನಿಸಬಹುದು. ಮುಸ್ಲಿಂ ಆಳ್ವಿಕೆಯಲ್ಲಿ ಇದರ ಪ್ರಭಾವ ಪ್ರಬಲವಾಗಿತ್ತು. ಕೇವಲ ಪ್ಲಾಂಟೇಷನ್‌ಗಳಲ್ಲಿ ಕೆಲಸ ಮಾಡಲು ಮಾತ್ರವಲ್ಲದೆ ಮಾರುಕಟ್ಟೆಗಳಲ್ಲಿ ಪ್ರತ್ಯಕ್ಷವಾಗಿ ಮಾರಾಟ ಮಾಡಲಾಗುತ್ತಿತ್ತು. ಅಲ್ಲಾ-ವುದ್-ದೀನ್ ಆಳ್ವಿಕೆಯ ಕಾಲದಲ್ಲಿ ಸುಮಾರು ನಲವತ್ತು ಸಾವಿರ ಗುಲಾಮರು ವಿವಿಧ ಅರಮನೆಗಳಲ್ಲಿ ಕೆಲಸ ನಿರ್ವಹಿಸುತ್ತಿದ್ದರು. ಇವರನ್ನು ಬಂದಗನ್-ಇ-ಖಾಸ್(Bandagan-i-khas)[೬೬] ಎಂದು ಕರೆಯಲಾಗುತ್ತಿತ್ತು.

### ೪.೧.೪ ಕೆನರಾ ಕರಾವಳಿಯಲ್ಲಿ ಪೋರ್ಚುಗೀಸರು

ಹದಿನೈದು ಮತ್ತು ಹದಿನಾರನೆ ಶತಮಾನದಲ್ಲಿ ಭಾರತದ ಪಶ್ಚಿಮ ಕರಾವಳಿಯಲ್ಲಿ ವ್ಯಾಪಾರ ವಹಿವಾಟುಗಳು ಭರದಿಂದ ಸಾಗಲು ಯೂರೋಪಿಯನ್ನರ ಪ್ರಭಾವ ಪ್ರಮುಖ ಕಾರಣವಾಗಲಾರಂಭಿಸಿತು. ಆ ಪ್ರದೇಶದಲ್ಲಿ ಪೋರ್ಚುಗೀಸರು ಇಲ್ಲಿನ ಸ್ಥಳೀಯ ಅರಸರೊಂದಿಗೆ ಒಪ್ಪಂದಗಳನ್ನು ಮಾಡಿಕೊಂಡು ವಾಣಿಜ್ಯ ವ್ಯವಹಾರಗಳಲ್ಲಿ ತೊಡಗಿದರು. ಯೂರೋಪಿನ ವಿವಿಧ ದೇಶಗಳಲ್ಲಿ ಕೆಲಸ ನಿರ್ವಹಿಸಲು ಆಳುಗಳ ಅವಶ್ಯಕತೆಯಿದ್ದುದರಿಂದ ಇಲ್ಲಿನ ಗುಲಾಮರನ್ನು ಪೋರ್ಚುಗೀಸರು ಸಹ ಕೊಂಡುಕೊಂಡು ತಮ್ಮ ತಾಯ್ನಾಡಿಗೆ ಕೊಂಡೊಯ್ಯುತ್ತಿದ್ದರು. ಕೊಚ್ಚಿನ್‌ನಿಂದ ಪೋರ್ಚುಗಲ್‌ಗೆ ಗುಲಾಮರನ್ನು ಸಾಗಿಸುತ್ತಿದ್ದರು.[೬೭] ಅಂದು ಯಾವ ಭಾರತೀಯ ಅರಸರು ಸಹ ಇಂತಹ ಪದ್ಧತಿಗಳನ್ನು ತೊಡೆದು ಹಾಕುವಲ್ಲಿ ಮುಂದಾಗಲಿಲ್ಲವೆನ್ನುವುದನ್ನು ಗಮನಿಸಬೇಕು. ಇದಕ್ಕೆ ವ್ಯತಿರಿಕ್ತವಾಗಿ ಕ್ರಿ.ಶ.೧೬೭೪ರಲ್ಲಿ ಶಿವಾಜಿ ಒಂದು ಶಾಸನ ಹೊರಡಿಸಿ ಭಾರತದಿಂದ ಯೂರೋಪಿಗೆ ಗುಲಾಮರ ಮಾರಾಟವಾಗದಂತೆ ಆಜ್ಞೆ ಹೊರಡಿಸಿದ.[೬೮] ಗುಲಾಮಗಿರಿ ಪದ್ಧತಿಯ ಪ್ರಕ್ರಿಯೆಯು ಮೂಲತಃ ಜಾತಿಯೊಂದಿಗೆ ತಳಕು ಹಾಕಿಕೊಂಡಿದೆ. ಕೆಳಜಾತಿಯ ಕೃಷಿಕಾರ್ಮಿಕರು, ಶಿಕ್ಷಣದಿಂದ ವಂಚಿತರಾದವರು, ಸಾಮಾಜಿಕ ಮತ್ತು ಆರ್ಥಿಕ ಕ್ಷೇತ್ರದಲ್ಲಿ ದುಡಿಯುವ ವರ್ಗ ಅಥವಾ ಶ್ರಮಿಕ ವರ್ಗಕ್ಕೆ ತಳ್ಳಲ್ಪಟ್ಟರು. ಹಿಂದೂ ಮುಸ್ಲಿಂ ಸಂಹಿತೆಗಳು ಈ ಪದ್ಧತಿಯನ್ನು ಅಂಗೀಕರಿಸಿದ್ದವು. ಸಮಾಜದಲ್ಲಿ ಅತಿ ಹೆಚ್ಚು ಗುಲಾಮರನ್ನು ಹೊಂದುವುದೇ ಹೆಗ್ಗಳಿಕೆಯ ಪ್ರಶ್ನೆಯಾಗಿತ್ತು. ಕರ್ನಾಟಕದ ಕೆನರಾ ಕರಾವಳಿಯಲ್ಲಿ ಗುಲಾಮ ಪದ್ಧತಿ ತುಂಬಾ ಪ್ರಭಾವಶಾಲಿಯಾಗಿತ್ತು ಎನ್ನುವುದಕ್ಕೆ ವಿವರಗಳು ಇವೆ. ಪ್ರಾಚೀನ ಕಾಲದಿಂದ ಕ್ರಿ.ಶ.೧೮೪೩ರವರೆಗೆ ಈ ಭಾಗದಲ್ಲಿ ಅಸ್ತಿತ್ವದಲ್ಲಿತ್ತು. ಇದಕ್ಕೆ ಸಾಮಾಜಿಕ ಮತ್ತು ಆರ್ಥಿಕ ಅಂಶಗಳು ಮುಖ್ಯ ಕಾರಣಗಳಾಗಿ ಕಾಣಿಸಿಕೊಳ್ಳುತ್ತವೆ. ಗಿರಿಕಂದರಗಳಿಂದ ಹಾಗೂ ನಿಸರ್ಗದತ್ತವಾದ ಅರಣ್ಯಪ್ರದೇಶದಿಂದ ಆವೃತ್ತವಾದ ಈ ಪ್ರದೇಶವು ಭೂಮಾಲೀಕರ ಬೆಳವಣಿಗೆಯಿಂದ ಕೃಷಿಕಾರ್ಮಿಕರ ಅವಶ್ಯಕತೆ ಉಂಟಾಯಿತು. ವಿಜಯನಗರ ಮತ್ತು ವಿಜಯನಗರೋತ್ತರ ಅವಧಿಯಲ್ಲಿ ಈ ಪದ್ಧತಿ ಮಲೆನಾಡು ಪ್ರದೇಶದಲ್ಲಿ ಹೆಚ್ಚು ತಾಂಡವಾಡುತ್ತಿತ್ತು. ಟಿಪ್ಪುಸುಲ್ತಾನ್‌ನ ಆಳ್ವಿಕೆಯ ಸಂದರ್ಭದಲ್ಲಿ

ತಾನು ಗೆದ್ದ ಪ್ರದೇಶದ ಸುಮಾರು ಎಪ್ಪತ್ತು ಸಾವಿರ ಕಾರ್ಮಿಕರನ್ನು ಗುಲಾಮರನ್ನಾಗಿ ಸ್ಥಳೀಯ ಒಡೆಯರು ಮಾರ್ಪಡಿಸಿಕೊಂಡರು. ಹಿಂದೂ ಸಂಪ್ರದಾಯವು ಸುಮಾರು ಹದಿನೈದು ರೀತಿಯ ಗುಲಾಮರನ್ನು ಹೆಸರಿಸುತ್ತದೆ. ಸೆರೆಹಿಡಿಯಲ್ಪಟ್ಟ, ಹುಟ್ಟಿನ ಮುಖಾಂತರ, ಮಾರಾಟದ ಗುಲಾಮರು, ಕೊಡುವಿಕೆ(Donation), ಪಿತ್ರಾರ್ಜಿತ, ಸ್ವಯಂ ಶರಣಾಗತ ಅವುಗಳಲ್ಲಿ ಮುಖ್ಯವಾದವುಗಳು. ಕೆನರಾದಲ್ಲಿ ದೇರ್ಸ್ ಅಥವಾ ಹೊಲೆಯರನ್ನು ಸೇವಕ ವೃತ್ತಿಯವರೆಂದು ಗುರುತಿಸಲಾಗುತ್ತಿತ್ತು. ೧೮೦೧ರ ಅವಧಿಗೆ ಕೆನರಾದ ದಕ್ಷಿಣ ವಿಭಾಗೀಯ ಕಲೆಕ್ಟರ್ ಆಗಿದ್ದ ಜೆ.ಜಿ.ರೆವೆನ್‌ಷಾ ಅವರು ಶೇ.೨೦ರಷ್ಟು ಗುಲಾಮರಿದ್ದರೆಂದು[೬] ತಿಳಿಸುತ್ತಾನೆ.

ಜೆ.ಜಿ.ರೆವನ್‌ಷಾ ಅವರು ದೇರ್ಸ್‌ರನ್ನು ಮೂರು ಗುಂಪುಗಳಾಗಿ ವಿಂಗಡಿಸುತ್ತಾನೆ. 'ಮೂಲದಾಳ್', ಮೊಗೇರ, ಮೌರೆದೇರ್ಸ್. ಇವರೆಲ್ಲರು ಅಸ್ಪೃಶ್ಯರು. ಈ ಮೇಲಿನ ಎರಡು ಗುಂಪಿನವರು ದನದ ಮಾಂಸ ಸೇವಿಸುತ್ತಿದ್ದರು. ಆದರೆ ಮುದಲ್‌ದೇರ್ಸ್ ಮೂಲತಃ ಗುಲಾಮರಾಗದಿದ್ದರೂ ದಾಸ್ಯ ಪ್ರವೃತ್ತಿಯಿಂದ ಈ ಪದ್ಧತಿಗೆ ಒಳಪಡುತ್ತಿದ್ದರು. ಮೊಗೇರರು ವಂಶಪಾರಂಪರಿಕ ಗುಲಾಮರು. ೧೮೨೬ ಸುಮಾರಿಗೆ ಗುಲಾಮರ ಪ್ರತಿಯೊಬ್ಬರ ದರ ೧೨ರಿಂದ ೧೬ ರೂಪಾಯಿಗಳಾಗಿತ್ತೆಂದು[೭] ತಿಳಿದುಬರುತ್ತದೆ. ಹದಿನೆಂಟು ಮತ್ತು ಹತ್ತೊಂಬತ್ತನೇ ಶತಮಾನದ ದಿನಮಾನಗಳಲ್ಲಿ ಕರಾವಳಿ ಪ್ರದೇಶ ಗುಲಾಮಗಿರಿಯ ಕುರಿತು ದಾಖಲೆಗಳಲ್ಲಿ ಹೆಚ್ಚಿನ ವಿವರಗಳು ಸಿಗುತ್ತವೆ. ಈ ಬಗೆಗೆ ಬಿ. ಉದಯ ಅವರು ಹೆಚ್ಚಿನ ಅಧ್ಯಯನ ಮಾಡಿದ್ದು ಅವರ ಬರವಣಿಗೆಗಳನ್ನು ಇಲ್ಲಿ ಬಳಸಿಕೊಳ್ಳಲಾಗಿದೆ.

### ೪.೧.೫ ಕೊಡಗು ಪ್ರದೇಶ

ಕರ್ನಾಟಕದ ಸಾಮಾಜಿಕ ಮತ್ತು ಆರ್ಥಿಕ ಚರಿತ್ರೆಯಲ್ಲಿ ಕೊಡಗು ಪ್ರದೇಶ ವಿಶೇಷ ಗಮನ ಸೆಳೆಯುತ್ತದೆ. ಕರ್ನಾಟಕದ ಇತರೆ ಭಾಗಗಳಲ್ಲಿ ಕಂಡುಬರುತ್ತಿದ್ದ ಕೆಲವು ಅನಿಷ್ಟ ಸಂಪ್ರದಾಯಗಳು ಕೊಡಗಿನಲ್ಲಿ ಸಹ ಮುಂದುವರೆದಿದ್ದವು ಎನ್ನುವುದು ಹಲವು ಬರವಣಿಗೆಗಳಿಂದ ವೇದ್ಯವಾಗುತ್ತದೆ. ಕೊಡವರು ಮತ್ತು ಕೊಡವೇತರರು ಎಂದು ಎರಡು ವರ್ಗಗಳನ್ನು ಗುರುತಿಸುವಾಗ ಬಹುತೇಕ ಅಧ್ಯಯನಗಳು ಕೊಡವೇತರರಲ್ಲಿ ಹಲವು ಜಾತಿ ಮತ್ತು ಬುಡಕಟ್ಟುಗಳು ಸೇರ್ಪಡೆಗೊಂಡಿದ್ದರೂ ಒಟ್ಟಾರೆಯಾಗಿ ಕೊಡವರು, ಕೊಡಗು ಪ್ರದೇಶವೆಂದು ಬಿಂಬಿಸುತ್ತವೆ. ಕೊಡಗಿನ ರಾಜರು ತಮ್ಮ ಉಪಯೋಗಕ್ಕೆಂದು ಮೀಸಲಾಗಿಟ್ಟ ಫಲವತ್ತಾದ ಭೂಮಿಯನ್ನು ಪನ್ನವೆಂದು ಕರೆಯಲಾಗುತ್ತಿತ್ತು. ಅಂತಹ ಪನ್ನಗಳು ಕೊಡಗಿನ ಬೇರೆ ಬೇರೆ ಕಡೆಗಳಲ್ಲಿ ಹರಡಿದ್ದನ್ನೂ ನಾವು ಗಮನಿಸಬಹುದು. ಈ ಪನ್ನಗಳನ್ನು ರಾಜನು ನೇಮಿಸಿದ ಮೇಲ್ವಿಚಾರಕನೊಬ್ಬ ನೋಡಿಕೊಳ್ಳುತ್ತಿದ್ದ. ಈ ಪನ್ನಗಳನ್ನು ರೂಢಿಸಲು ಹೆಚ್ಚಿನ ಸಂಖ್ಯೆಯಲ್ಲಿ ಗುಲಾಮರಿದ್ದರು. ರಾಜನು ಬೇಟೆಗೆ ಹೋಗುವ ಸಂದರ್ಭದಲ್ಲಿ ಅವನ ಮತ್ತು ಅವನ ಪರಿವಾರದವರ ಆಯುಧಗಳನ್ನು ಗುಲಾಮರು ಸಾಗಿಸಬೇಕಿತ್ತು. ಇದರೊಂದಿಗೆ ರಾಜನ ಕೋಟೆ ಮತ್ತು ಅರಮನೆಯ ಸುತ್ತಮುತ್ತಲಿನವರು ಉಕ್ಕಡ ರಕ್ಷಣಾಗೃಹಗಳನ್ನು ಪಹರೆ ಮಾಡಬೇಕಿತ್ತು. ಹಲವು ಸಂದರ್ಭಗಳಲ್ಲಿ ರಾಜನು ತನ್ನ ಅಧಿಕಾರಿಗಳ ವಿಶೇಷ ಸೇವೆಯನ್ನು ಮನ್ನಿಸಿ ಅವರಿಗೆ ಜಮ್ಮ, ಜಹಗೀರು

ಮತ್ತು ಉಂಬಳಿ ಇವೆಲ್ಲ ವಿಶೇಷ ಸವಲತ್ತು ಹೊಂದಿರುವ ಭೂ ಒಡೆತನಗಳು ಭೂಮಿಗಳನ್ನು ವಿತರಿಸುವಾಗ ಆ ಭೂಮಿಯನ್ನು ಉಳುಮೆ ಮಾಡಲು ಪನ್ಯದಿಂದ ಗುಲಾಮರನ್ನು ಉಡುಗೊರೆ ಕೊಡುತ್ತಿದ್ದನು.[೪೧]

೧೮೩೪ರಲ್ಲಿ ಕೊಡಗಿನ ಮೊದಲನೆಯ ಸೂಪರಿಡೆಂಟ್ ಕ್ಯಾಪ್ಟನ್ ಲೀ ಹಾರ್ಡಿ ಪನ್ಯ ಗುಲಾಮರನ್ನು *ಯರವರು, ಕೆಂಬಟ್ಟಿ ಹೊಲೆಯರು* ಮತ್ತು ಬಡಗ ಹೊಲೆಯರೆಂದು ಮೂರು ವರ್ಗಗಳಾಗಿ ವಿಂಗಡಿಸುತ್ತಾನೆ. *ಕೆಂಬಟ್ಟಿಗಳು, ಪಾಲೆಗಳು* ಮತ್ತು *ಕಾಪಾಳರು* ಕೊಡಗಿನ ಮೂಲ ನಿವಾಸಿ ಗುಲಾಮರು ಎಂದು ರಿಕ್ಟರ್ ಗುರುತಿಸುತ್ತಾನೆ. ಮೈಸೂರಿನಿಂದ ಬಂದ ಬಡಗ ಹೊಲೆಯರು, ಮಲಬಾರ್‌ನಿಂದ ವಲಸೆ ಬಂದ *ಮರಾತ, ಅಡಿಯ, ಪರವ, ಮಾರಂಗಿ, ಮಲಯರು* ; ತಮಿಳು ದೇಶ ಹಾಗೂ ಮೈಸೂರಿನಿಂದ ವಲಸೆ ಬಂದ ಬಲಗೈ ಹೊಲೆಯರು ತಾತ್ಕಾಲಿಕವಾಗಿ ವಲಸೆ ಬಂದ ಕೂಲಿಕಾರರಾಗಿದ್ದರೆಂದು ವಿಜಯ್ ಪೂಣಚ್ಚ ತಂಬಡ ಅಭಿಪ್ರಾಯ ಪಡುತ್ತಾರೆ.[೪೨] ಕೊಡಗಿನಲ್ಲಿ ಕೆಂಬಟ್ಟಿ ಹೊಲೆಯರಿದ್ದಾರೆ. ಕೊಡಗಿನ ಗದ್ದೆಗಳಲ್ಲಿ ಕೆಂಪು ಬತ್ತವನ್ನು (ಕೆಂಬತ್ತಿ ಬತ್ತ) ಬೆಳೆಯುವುದರಲ್ಲಿ ಅವರು ಪಳಗಿದವರು. ಇದರಿಂದ ಅವರಿಗೆ ಈ ಹೆಸರು ಬಂದಿದೆ. ಕೆಂಬಟ್ಟಿ ಹೊಲೆಯರು ಕೊಡಗಿನ ಮೂಲ ನಿವಾಸಿಗಳೆಂದು ಮೋಗ್ಲಿಂಗ್ ಹೇಳುತ್ತಾನೆ.[೪೩] ಕೊಡಗಿನ ಗುಲಾಮರನ್ನು ಭೂಮಿ ಜಮ್ಮದಾಳುಗಳು ಮತ್ತು ಒಕ್ಕಲು ಜಮ್ಮದಾಳುಗಳು ಎಂದು ವಿಂಗಡಿಸಲಾಗಿದೆ. ಭೂಮಿ ಜಮ್ಮದಾಳುಗಳು ಭೂಮಿಯೊಡನೆ ನೇರ ಸಂಬಂಧವನ್ನು ಹೊಂದಿದ್ದರು ಮತ್ತು ಅವರನ್ನು ಯಾವುದೇ ಕಾರಣದಿಂದ ಆ ಭೂಮಿಯಿಂದ ಬೇರ್ಪಡಿಸುವ ಹಾಗಿರಲಿಲ್ಲ. ಒಂದು ವೇಳೆ ಭೂಮಿಯನ್ನು ಮಾರುವುದಿದ್ದರೆ ಅದರೊಡನೆ ಅವರನ್ನು ಮಾರಲೇಬೇಕಿತ್ತು. ಒಕ್ಕಲು ಜಮ್ಮದಾಳುಗಳು ಯಜಮಾನನ ಖಾಸಗಿ ಸ್ವತ್ತಾಗಿದ್ದು ಅವರನ್ನು ಅವನು ಮಾರಲೂಬಹುದಿತ್ತು ಅಥವಾ ಅಡವಿಡಲೂಬಹುದಿತ್ತು. ಇವರು ಸದಾಕಾಲ ಯಜಮಾನನು ವಲಸೆ ಹೋದಲ್ಲೆಲ್ಲಾ ಹಿಂಬಾಲಿಸಿಕೊಂಡೇ ಇರಬೇಕಿತ್ತು.[೪೪] ಈ ಕುರಿತು ವಿಜಯ್ ಪೂಣಚ್ಚ ತಂಬಂಡ ಅವರು ಹೆಚ್ಚಿನ ಅಧ್ಯಯನ ನಡೆಸಿದ್ದು, ಕೊಡಗಿನ ದಲಿತರು ಮತ್ತು ಬುಡಕಟ್ಟುಗಳ ಬಗೆಗೆ ಅವರ ಬರವಣಿಗೆಗಳಿಂದ ಹೊಸ ವಿಷಯಗಳನ್ನು ಅಪೇಕ್ಷಿಸಬಹುದಾಗಿದೆ.

ಗುಲಾಮರ ಒಟ್ಟಿಗೆ ಇಲ್ಲದೆ ಅವರನ್ನು ಕೊಡಗಿನಿಂದ ಹೊರಗೆ ಕರೆದುಕೊಂಡು ಹೋಗಲು ಸಾಧ್ಯವೇ ಇರಲಿಲ್ಲ ಎಂದು ಫ್ರೇಜರನು ಅಭಿಪ್ರಾಯಪಡುತ್ತಾನೆ. ಜಮ್ಮಗಳೆಂದು ಕರೆಸಿಕೊಳ್ಳುವ ಮೇದರು ಎನ್ನುವ ಗುಲಾಮ ವರ್ಗವು ಒಂದು ನಾಡಿಗೆ ಗುಲಾಮರಾಗಬೇಕಿದ್ದಿತು. ಬುಟ್ಟಿಯನ್ನು ಹೆಣೆಯುವುದನ್ನು ಪ್ರಮುಖ ವೃತ್ತಿಯನ್ನಾಗಿ ಮಾಡಿಕೊಂಡ ಈ ವರ್ಗವು ಕೃಷಿ ಕಾರ್ಮಿಕರಾಗಿ ತಮ್ಮನ್ನು ಬಾಡಿಗೆಗೆ ಕೊಟ್ಟುಕೊಂಡ ಬಗ್ಗೆ ಎಂ.ಎನ್. ಶ್ರೀನಿವಾಸ್ ಬರೆಯುತ್ತಾರೆ. ಗುಲಾಮರ ಮಾರಾಟ ವ್ಯವಸ್ಥೆ ಇಲ್ಲಿ ಗಮನಾರ್ಹವಾದ ವಿಚಾರವಾಗಿದೆ. ಬಿ.ಆರ್.ಸರೀಗ್ ಅವರು ಭಾರತದ ಗುಲಾಮರನ್ನು ಹಣದ ಮೂಲಕ ಕೊಂಡುಕೊಳ್ಳುವ ಪದ್ಧತಿ ಇದ್ದದ್ದು ಬಹಳ ಅಪರೂಪ ಎಂದು ವಾದಿಸುತ್ತಾರೆ. ಆದರೆ ಕೊಡಗಿನಲ್ಲಿ ಕೆಂಬಟ್ಟಿ ಹೊಲೆಯರು, ಮಾದಿಗರು, ಮೇದರು, ಮಾರೆ ಹೊಲೆಯರು, ಯೆರವರು, ಬೆಟ್ಟ ಕುರುಬರು, ಜೇನು ಕುರುಬರು, ಪನಿಯರವರು, ಬಡಗಯವರು, ಪಂಜರ್ಯವರು, ಪಾಲೆಗಳು, ಕುಕ್ಕ ಹೊಲೆಯರು, ಅಡಿಯರು, ಮರಾತ ಹೊಲೆಯರು ಮತ್ತು ಕಾಪಾಳರು

ಮಾರಾಟದ ಪ್ರಕ್ರಿಯೆಗೆ ಒಳಗಾಗಿದ್ದರು ಎಂಬ ಬರವಣಿಗೆಗಳಿಂದ ವೇದ್ಯವಾಗುತ್ತದೆ.[೪೫] ಈ ಮೇಲಿನ ವಿವರಣೆಗಳು ಕರ್ನಾಟಕದ ವಿವಿಧ ಪ್ರದೇಶಗಳಲ್ಲಿ ಗುಲಾಮರ ಮಾರಾಟ ಪ್ರಕ್ರಿಯೆ ಹೇಗೆ ನಡೆಯುತ್ತಿತ್ತು ಎನ್ನುವುದನ್ನು ತಿಳಿಸುತ್ತವೆ. ವಿಶೇಷವಾಗಿ ಕೊಡಗಿನ ಪ್ರದೇಶವು ಸಹ ಗುಲಾಮರನ್ನು ಮಾರಾಟ ಮಾಡುವ ಪ್ರಕ್ರಿಯೆಗೆ ಒಳಗಾಗಿತ್ತು ಎನ್ನುವುದನ್ನು ಗಮನಿಸಬಹುದು. ಹಾಗೆಯೇ ಹಲವು ಬುಡಕಟ್ಟುಗಳು ಈ ಪ್ರದೇಶದಲ್ಲಿ ಗುಲಾಮರ ವೃತ್ತಿಗಳನ್ನು ನಿರ್ವಹಿಸುತ್ತಿದ್ದರು.

### ೪.೧.೬ ಗುಲಾಮರ ವೃತ್ತಿ

ಇಡೀ ಜೀವಮಾನವನ್ನೆಲ್ಲಾ ಪರರ ಅಧೀನದಲ್ಲಿ ಕಳೆಯುವ, ದೈಹಿಕವಾಗಿ ದುಡಿಯುವ ಪ್ರವೃತ್ತಿ ಗುಲಾಮರಲ್ಲಿ ಹುಟ್ಟುವಂತೆ ವ್ಯವಸ್ಥಿತ ರೂಪುರೇಷೆಗಳನ್ನು ನಿರ್ಮಾಣ ಮಾಡುವ ಪ್ರವೃತ್ತಿ ಮಾಲೀಕರಲ್ಲಿತ್ತು. ತಾನು ಗುಲಾಮ ಎಂದೆನಿಸಿಕೊಂಡ ಮೇಲೆ ನಿರ್ದಿಷ್ಟಪಡಿಸಿದ ಕೆಲಸಗಳನ್ನು ಮಾಡಬೇಕಾಗಿತ್ತು. ಸಗಣಿ ಬಳಿಯುವುದು, ನೇಗಿಲು ಹೊಡೆಯುವುದು, ಬಿತ್ತನೆ ಮಾಡುವುದು, ಗದ್ದೆಕೆಲಸ, ಕಳೆ ತೆಗೆಯುವುದು, ಬೆಳೆ ಕಟಾವು ಮಾಡುವುದು, ಭತ್ತದ ತೆನೆ ಹೊಡೆಯುವುದು ಹಾಗೂ ದನಕರುಗಳನ್ನು ಮೇಯಿಸಬೇಕಾಗಿದ್ದಿತು. ಆಹಾರ ದಾನ್ಯಗಳನ್ನು ಸಾಗಿಸಬೇಕಾಗಿದ್ದಿತು. ಇದಲ್ಲದೆ ಒಡೆಯರು ಅಥವಾ ಮಾಲೀಕರು ಕೊಡುವ ಎಲ್ಲಾ ಕಿರುಕುಳಗಳನ್ನು ಸಹಿಸಿಕೊಳ್ಳಬೇಕಾಗಿತ್ತು. ಇವರಿಗೆ ಸಂತೋಷದಾಯಕ ಪರಿಸರವೆ ಬಲು ದೂರ. ಕೇವಲ ಪುರುಷರು ಮಾತ್ರವಲ್ಲದೆ ಸ್ತ್ರೀಯರು ಕೂಡ ಹೊಲಗಳಲ್ಲಿ ದುಡಿಯಬೇಕಾಗಿತ್ತು.[೪೬] ಈ ವಿಚಾರದ ಇತರೆ ವಿವಿಧ ಆಯಾಮಗಳನ್ನು ಕುರಿತು ಈ ಅಧ್ಯಾಯದ ಮುಂದಿನ ಭಾಗದಲ್ಲಿ ಚರ್ಚಿಸಲಾಗಿದೆ.

ಕ್ರಿ.ಶ.೧೮೦೦ರ ಸುಮಾರಿಗೆ ಉತ್ತರ ಕನ್ನಡದಲ್ಲಿ ೧೬,೨೦೧, ದಕ್ಷಿಣ ಕನ್ನಡದಲ್ಲಿ ೪೭,೩೫೮, ಮಲಬಾರ್‌ನಲ್ಲಿ ೧೬,೫೭೪ ಗುಲಾಮರಿದ್ದರೆಂದು ಪ್ರವಾಸಿ ಬರವಣಿಗೆಗಳಿಂದ ತಿಳಿದುಬರುತ್ತದೆ. ಆದರೆ ಈ ಪದ್ಧತಿಯು ಪರೋಕ್ಷವಾಗಿ ಸಮಾಜದಿಂದ ಒಪ್ಪಿತವಾಗಿದ್ದರಿಂದ ನಿವಾರಣ ಕ್ರಮಗಳ ಬಗ್ಗೆ ಚರ್ಚಿಸುವುದು ಕಷ್ಟಸಾಧ್ಯ. ಇದರ ಪರಿಣಾಮವಾಗಿ ಕೆಲವು ಗುಲಾಮರು ತಮ್ಮ ಸ್ವಂತ ಜಾತಿಯನ್ನು ಕಳೆದುಕೊಂಡರೆ ಮತ್ತೆ ಕೆಲವರು ಅದೇ ಜಾತಿಯಲ್ಲಿ ಮುಂದುವರಿದರು. ಗುಲಾಮ ಪದ್ಧತಿ ಮತ್ತು ಅಂತರ್ ವಿವಾಹದ ಪರಿಣಾಮವಾಗಿ ಹೊಸ ಜಾತಿಗಳ ನಾಂದಿಗೆ ಕಾರಣವಾಯಿತೆಂದು ಡಿ.ಡಿ.ಕೊಸಾಂಬಿ ಅಭಿಪ್ರಾಯಪಡುತ್ತಾರೆ.[೪೭] ಈ ಗುಲಾಮರು ಸಮಾಜದ ಮೇಲ್ಜಾತಿಗಳಿಂದ ತಿರಸ್ಕೃತರಾದವರು. ಬಹುಪಾಲು ಕೆಳಜಾತಿ, ಸಮುದಾಯಗಳಿಂದ ಬಂದವರು. ಅದರಲ್ಲಿ ದಲಿತ ಸಮುದಾಯಕ್ಕೆ ಸೇರಿದವರೆ ಅಧಿಕ. ಈ ಪದ್ಧತಿ ಕುರಿತು ಅನೇಕ ಚರಿತ್ರೆಕಾರರು ಅಧ್ಯಯನ ನಡೆಸಿದ್ದಾರೆ. ಅಮೃತ ಡಾಂಗೆ ಅಭಿಪ್ರಾಯಪಡುವಂತೆ ಪ್ರಾಚೀನ ಸಮಾಜದಲ್ಲಿ ಅತ್ಯಂತ ಶೋಷಣೆಯ ರೂಪವೆಂದರೆ ಗುಲಾಮಗಿರಿ. ಇದು ಮಧ್ಯಯುಗದಲ್ಲಿ ಜೀತದ ರೂಪ ಪಡೆಯಿತು. ಇನ್ನು ಮುಂದಿನ ಹಂತದಲ್ಲಿ ಕೂಲಿಯ ರೂಪದಲ್ಲಿ ಪರಿವರ್ತನೆ[೪೮] ಹೊಂದಿತು.

ಗುಲಾಮ ಪದ್ಧತಿ ಮತ್ತು ಅಂತರ್‌ಜಾತಿ ವಿವಾಹದ ಪರಿಣಾಮವಾಗಿ ಹೊಸ ಜಾತಿಗಳ ನಾಂದಿಗೆ ಕಾರಣವಾಯಿತೆಂದು ಹೇಳಬಹುದು ಎಂದು ಡಿ.ಡಿ.ಕೊಸಾಂಬಿಯವರು ಅಭಿಪ್ರಾಯಪಡುತ್ತಾರೆ. ಈ ಗುಲಾಮರು

ಸಮಾಜದ ಮೇಲ್ಜಾತಿಗಳಿಂದ ತಿರಸ್ಕೃತರಾದವರು. ಆದರೂ ಚರಿತ್ರೆಯಲ್ಲಿ ಇವರನ್ನು ಏಕಮುಖದಿಂದ ನೋಡುವ ಅಗತ್ಯವಿಲ್ಲವೆನಿಸುತ್ತದೆ. ಏಕೆಂದರೆ ರಾಜ್ಯದ ಅಭಿವೃದ್ಧಿಯಲ್ಲಿ ಇವರ ಪಾತ್ರವು ಮುಖ್ಯವಾಗಿತ್ತು. ಉನ್ನತ ಸ್ಥಾನಮಾನಗಳನ್ನು ಕುರಿತು ಚರ್ಚಿಸುವಾಗ ಚಂಡಾಲ ಜಾತಿಗೆ ಸೇರಿದ ಮಂತ್ರಿ 'ಸೂಯ್ಯ' ಎಂಬುವವನು ಆವಂತಿವರ್ಮನ್ ಅಧೀನದಲ್ಲಿ ದಕ್ಷತೆಯಿಂದ ಕೆಲಸ ನಿರ್ವಹಿಸಿದ್ದನು ಹಾಗೆಯೇ ದೊಂಬರ ಜಾತಿಗೆ ಸೇರಿದ ಮಹಿಳೆಯರು ಅಗ್ರಹಾರಗಳಿಗೆ ಭೂದಾನ ಅಥವಾ ಉಂಬಳಿಗಳನ್ನು ನೀಡಿದ್ದಾರೆಂಬುದು ಸ್ಪಷ್ಟ.[೪೯] ಈ ರೀತಿಯ ವಿವರಣೆಗಳನ್ನು ಗಮನಿಸಿದಾಗ ಬಹುತೇಕ ಕೆಳಜಾತಿಗಳ ಜನತೆ ವಿವಿಧ ಚಳುವಳಿಗಳ ಪರಿಣಾಮ ಮತ್ತು ಸಾಮಾಜಿಕ ಮೇಲ್ಚಲನೆಯಿಂದ ಹೊಸ ಜಾತಿಗಳತ್ತ ಒಲವು ತೋರಿಸಿದರು.

ಮನುಷ್ಯರನ್ನು ಮಾರಾಟ ಮಾಡುವ ಪ್ರಕ್ರಿಯೆಯನ್ನು ಚರಿತ್ರೆಯಿಂದ ಮಾತ್ರ ಓದಬೇಕಾಗಿಲ್ಲ. ವರ್ತಮಾನದಲ್ಲಿ ಇದರ ದಂಧೆ ವಿಸ್ತರಿಸಿಕೊಳ್ಳುತ್ತಿದೆ. ಪ್ರಾಚೀನ ಸಮಾಜವು ಪೋಷಿಸಿಕೊಡು ಬಂದ ಅಮಾನವೀಯ ಪದ್ಧತಿಗಳಲ್ಲಿ ಸ್ತ್ರೀಯರ ಮಾರಾಟವು ನಿಕೃಷ್ಟವಾದುದು. ಈ ಕುರಿತಂತೆ ಇತ್ತೀಚೆಗೆ ನಡೆದ ಘಟನೆಯ ವಿವರ ಹೀಗಿದೆ. 'ಗುಜರಾತಿನ ಶ್ರೀಮಂತ ವ್ಯಕ್ತಿಗಳಿಗೆ ಯುವತಿಯರನ್ನು ಪೂರೈಸಿ ಹಣ ಗಳಿಸುತ್ತಿರುವ ಪ್ರಕ್ರಿಯೆಯು ಪತ್ತೆಯಾಗಿದೆ. ಇದರ ಜಾಲವು ಪಾಕಿಸ್ತಾನದ ಗಡಿಯವರೆಗೂ ಚಾಚಿಕೊಂಡಿರುವುದು ಬೆಳಕಿಗೆ ಬಂದಿದೆ. ಗುಜರಾತ್ ಪೂರ್ವಭಾಗ, ಪಾಕಿಸ್ತಾನ ಗಡಿ ಪ್ರದೇಶಕ್ಕೆ ಅಂಟಿಕೊಂಡಿರುವ ಕಛ್, ಸಿಂದ್ ಪ್ರಾಂತ್ಯ ಸೇರಿದಂತೆ ರಾಜಸ್ತಾನ ಮತ್ತು ಹರಿಯಾಣ ಗಡಿಯಲ್ಲಿ ''ಹೆಣ್ಣುಗಳ ಕೊರತೆ' ನೀಗಿಸಲು ಧಾರವಾಡ ಜಿಲ್ಲೆಯ ಕಲಘಟಗಿ, ಕುಂದಗೋಳ ಯುವತಿಯರನ್ನು ಅಪಾರ ಬೆಲೆಗೆ ಮಾರಾಟ ಮಾಡುತ್ತಿದ್ದ ಪ್ರಕ್ರಿಯೆಯು ಸಮಾಜವನ್ನು ದಿಗ್ಭ್ರಮೆಗೊಳಿಸಿದೆ. ಪ್ರಾಚೀನ ಕಾಲಕ್ಕೂ ಇಂದಿಗೂ ಯಾವ ವ್ಯತ್ಯಾಸವಿಲ್ಲವೇನೋ ಎಂಬ ಭಾವನೆ ಜನಸಾಮಾನ್ಯರಲ್ಲಿ ಮೂಡುತ್ತಿದೆ. ಹಸಿವು, ಬಡತನ, ದಾರಿದ್ರ್ಯ, ಅಜ್ಞಾನ, ಕೌಟುಂಬಿಕ ಕಲಹಗಳು ಮುಖ್ಯ ಕಾರಣಗಳಾಗಿ ಕಾಣಿಸಿಕೊಳ್ಳುತ್ತವೆ. ಮಾರಾಟವಾದ ಯುವತಿಯರಲ್ಲಿ ಲಂಬಾಣಿ, ಜೈನ್ ಸಮುದಾಯಗಳ ಸಂಪರ್ಕವಿರುವ ಬೇಡರು, ಭಜಂತ್ರಿ, ಹರಿಜನ, ಗೊಂಧಳಿ, ವಡ್ಡರು ಹಾಗೂ ಗೌಳಿ ಜನಾಂಗದ ಯುವತಿಯರೆ ಹೆಚ್ಚು[೫೦]. ಮತ್ತೊಂದು ಸ್ತ್ರೀಯರ ಮಾರಾಟ ಜಾಲವೊಂದು ಹುಬ್ಬಳ್ಳಿ ನಗರದಲ್ಲಿ ಹುಟ್ಟಿಕೊಂಡಿದ್ದದು, ಕೆಳಜಾತಿಗಳ ಅಮಾಯಕ ಹೆಣ್ಣು ಮಕ್ಕಳನ್ನು ಹೊರರಾಜ್ಯಕ್ಕೆ ಮಾರಾಟ ಮಾಡುವ ತಂಡ ಸಿಕ್ಕಿಬಿದ್ದಿದೆ. ನಗರದ 'ರೇಣುಕಾ' ಎಂಬಾಕೆಯನ್ನು ರಾಜಸ್ತಾನದ ಡೊಂಗರಪುರದ ವ್ಯಕ್ತಿಗೆ ಮದುವೆ ನೆಪದಲ್ಲಿ ಮೂವತ್ತು ಸಾವಿರ ರೂ.ಗಳಿಗೆ ಮಾರಾಟ ಮಾಡಿರುವುದು ಪತ್ರಿಕೆಗಳಲ್ಲಿ ವರದಿಯಾಗಿದೆ.[೫೧] ಈ ಪ್ರಕ್ರಿಯೆಯ ಹಿಂದೆ ಪ್ರತಿಷ್ಠಿತರೆಂದು ಹೇಳಿಕೊಳ್ಳುವ ಶ್ರೀಮಂತರು ಇದರಲ್ಲಿ ಪಾಲುದಾರರು ಎಂಬುದು ಗಮನಿಸಬೇಕಾದ ಅಂಶ. ೨೧ನೇ ಶತಮಾನದ ಈ ದಿನಗಳಲ್ಲಿ ಮನುಷ್ಯರು ಮನುಷ್ಯರನ್ನು ಮಾರಾಟ ಮಾಡುವ ಪ್ರಕ್ರಿಯೆ ಅವ್ಯಾಹತವಾಗಿ ಮುಂದುವರೆದಿದೆ.

## ೪.೨ ಜೀತಗಾರಿಕೆ

ಪ್ರಾಚೀನ ಸಮಾಜದಲ್ಲಿ ಅಸ್ತಿತ್ವದಲ್ಲಿದ್ದ ಗುಲಾಮಗಿರಿಯ ಮತ್ತೊಂದು ರೂಪವೇ ಜೀತಗಾರಿಕೆ. ಗುಲಾಮಗಿರಿಯಲ್ಲಿ ಸೇವಕ ಹಗಲು-ರಾತ್ರಿಯನ್ನದೆ ದುಡಿದರೂ ಸಂಬಂಧಗಳು ಸ್ವಲ್ಪಮಟ್ಟಿಗೆ ಸಡಿಲವಾಗಿರುವ

ಸಾಧ್ಯತೆಗಳುಂಟು. ಮಾಲೀಕನು ಈ ಪದ್ಧತಿಗೆ ಒಳಗಾದ ವ್ಯಕ್ತಿಯನ್ನು ಮನಬಂದಂತೆ ಉಪಯೋಗಿಸಿಕೊಳ್ಳಬಹುದು. ಆದರೆ ಗುಲಾಮಗಿರಿಗಿಂತ ಹೆಚ್ಚು ಅಪಾಯಕಾರಿ ಮತ್ತು ನಿಕೃಷ್ಟ ಪದ್ಧತಿಯೆಂದರೆ ಜೀತಗಾರಿಕೆ. ಈಗಲೂ ಈ ಪದ್ಧತಿ ಸಂಪೂರ್ಣ ಕಣ್ಮರೆಯಾಗಿದೆಯೆಂದು ಹೇಳುವಂತಿಲ್ಲ. ಕರ್ನಾಟಕದ ವಿವಿಧ ಪ್ರದೇಶಗಳಲ್ಲಿ ಮಾಲೀಕರ ಮನೆಯಲ್ಲಿ ಅನೇಕ ಜೀವಗಳು ಕಮರಿಹೋಗಿವೆ. ಇಡೀ ಜೀವಮಾನವನ್ನು ಇನ್ನೊಬ್ಬರ ಉದ್ಧಾರಕ್ಕೆ ಶ್ರಮಿಸಿದ್ದಾರೆ. ಇಂತಹ ಘಟನೆಗಳು ಪ್ರಸ್ತುತ ದಿನಮಾನಗಳಲ್ಲಿ ಪತ್ರಿಕೆಗಳಲ್ಲಿ ವರದಿಯಾಗುತ್ತಿರುವುದನ್ನು ಕಾಣುತ್ತೇವೆ. ಗುಲಾಮಗಿರಿ ಮತ್ತು ಜೀತಗಾರಿಕೆ ಮೇಲ್ನೋಟಕ್ಕೆ ಒಂದೇ ಎಂದು ಕಂಡರೂ ಆಂತರಿಕವಾಗಿ ಭಿನ್ನತೆ ಹೊಂದಿವೆ.

ಜೀತಗಾರಿಕೆ ರೂಪುಗೊಳ್ಳುವುದಕ್ಕೆ ಎರಡು ಬಗೆಯ ಶಕ್ತಿಗಳು ಕಾರಣ ಎಂದು ಶಾಸನಾಧಾರಗಳು ಸೂಚಿಸುತ್ತವೆ. ಮೊದಲನೆಯದಾಗಿ ಹಲವು ಬಗೆಯ ಭೂ ಒಡೆತನವಿದ್ದುದು, *ಉಂಬಳಿ, ಕೊಡಗಿ, ಮಾನ್ಯ, ಸರ್ವಮಾನ್ಯ, ಅಗ್ರಹಾರ, ಬ್ರಹ್ಮದಾಯ, ದೇವದಾಯ* ಮತ್ತು *ಮಾಥಾಪುರ* ಎಂಬುದಾಗಿ. ಅರಸರಿಗೂ ಸ್ಥಳದಲ್ಲಿರದ ಜಮೀನುದಾರರಿಗೂ ಭೂಮಿಯ ಒದಗಣೆಗಿಂತಲೂ ಕೂಲಿಯ ಒದಗಣೆಯನ್ನು ಕುರಿತು ಹೆಚ್ಚಿನ ಕಾತರತೆಯಿದ್ದದು ಎರಡನೆ ಕಾರಣವೆಂದು ಹೇಳಬಹುದು.[೯೨] ಭೂಮಿ, ದಾನ ಮತ್ತು ಮೇಲ್ವರ್ಗದೊಂದಿಗೆ ಏರ್ಪಡುವ ಸಂಬಂಧಗಳು ಈ ಪದ್ಧತಿಗೆ ಮುಖ್ಯ ಕಾರಣಗಳು. ಕೃಷಿ ಉತ್ಪಾದನೆಯಲ್ಲಿ ಭೂಮಾಲೀಕರು ಕೂಲಿಕೆಲಸಗಾರರನ್ನು, ಜೀತದಾಳುಗಳನ್ನು ನೇಮಿಸಿಕೊಳ್ಳುತ್ತಿದ್ದರು. ಕೂಲಿ ಕೆಲಸಗಾರರು ಸಾಮಾನ್ಯವಾಗಿ ಶೂದ್ರ ಜಾತಿಗಳಿಗೆ ಸೇರಿದವರಾಗಿರುತ್ತಿದ್ದರು. ಜೀತಗಾರಿಕೆ ಚಾಲ್ತಿಯಲ್ಲಿದ್ದ ವಿವಿಧ ಸ್ಥಳಗಳು ಈ ಕೆಳಗಿನಂತಿವೆ.

| ಸ್ಥಳ | ಜಿಲ್ಲೆ | |
|---|---|---|
| ಕುಂದಾಪುರ | ದಕ್ಷಿಣ ಕನ್ನಡ | ಕ್ರಿ.ಶ.೧೩೭೭ |
| ಮಳವಳ್ಳಿ | ಮಂಡ್ಯ | ಕ್ರಿ.ಶ.೧೩೮೮ |
| ಕೊಪ್ಪ | ಚಿಕ್ಕಮಗಳೂರು | ಕ್ರಿ.ಶ.೧೪೦೩ |
| ಶೃಂಗೇರಿ | ಚಿಕ್ಕಮಗಳೂರು | ಕ್ರಿ.ಶ.೧೪೦೮ |
| ಬಾಗೇಪಲ್ಲಿ | ಕೋಲಾರ | ಕ್ರಿ.ಶ.೧೪೩೦ |
| ಚಾಮರಾಜನಗರ | ಮೈಸೂರು | ಕ್ರಿ.ಶ.೧೫೪೯[೯೩] |

ಕೃಷಿ ಉತ್ಪಾದನೆಯಲ್ಲಿ ಭೂಮಾಲೀಕರು ಕೂಲಿಕೆಲಸಗಾರರನ್ನು, ಜೀತದಾಳುಗಳನ್ನು ನೇಮಿಸಿಕೊಳ್ಳುವ ಪದ್ಧತಿಯಿತ್ತು. ಜೀತದಾಳುಗಳನ್ನು ಶಾಸನಗಳಲ್ಲಿ 'ಹೊಲೆಯಲು' ಮತ್ತು 'ಮುಲದ್ನು' ಎಂದು ಕರೆಯಲಾಗುತ್ತಿತ್ತು. ಇವರು ಅಸ್ಪೃಶ್ಯ ಅಥವಾ ಅಂತ್ಯಜ ಜಾತಿಗಳಿಗೆ ಸೇರುತ್ತಿದ್ದರು.[೯೪] ವಿಜಯನಗರ ಕಾಲದಲ್ಲಿ ಈ ಪದ್ಧತಿ ಹೆಚ್ಚು ವ್ಯಾಪಿಸಿಕೊಂಡಿತ್ತು ಎನ್ನುವುದಕ್ಕೆ ಶಾಸನಗಳು ಪುಷ್ಟಿನೀಡುತ್ತವೆ. ಕ್ರಿ.ಶ.೧೩೭೭ರಿಂದ ೧೫೪೯ರವರೆಗೆ ಈ ಮೇಲೆ ತಿಳಿಸಿದ ಸ್ಥಳಗಳಲ್ಲಿ ಅಸ್ತಿತ್ವದಲ್ಲಿರುವುದರ ಜೊತೆಗೆ ಇತರೆ ಸ್ಥಳಗಳಲ್ಲಿ ವ್ಯಾಪಿಸಿಕೊಂಡಿತ್ತು. ಮುಖ್ಯವಾಗಿ ಮಲೆನಾಡು ಪ್ರದೇಶದಲ್ಲಿ ಹೆಚ್ಚು ಕಾಣಿಸಿಕೊಳ್ಳುತ್ತದೆ. ಕಾರಣ ಕೃಷಿಗೆ ಯೋಗ್ಯವಾದ ಭೂಮಿ, ಅಪರಿಮಿತ

ಭೂಮಿಯನ್ನು ಹೊಂದಿರುವ ಜಮೀನುದಾರರು. ಈ ಕಾರಣದಿಂದ ಕೃಷಿಯಲ್ಲಿ ತೊಡಗಿಸಿಕೊಳ್ಳಲು ಆಳುಗಳ ಸೇವೆ ಅವಶ್ಯಕವಾಗಿದ್ದಿತು. ಆ ಸಮಯದಲ್ಲಿ ರಾಜ್ಯವು ಭೂಮಿಯ ಮೇಲೆ ಅಪರಿಮಿತಿ ಅಧಿಕಾರ ಹೊಂದಿದ್ದಿತು. ಜೊತೆಗೆ ಮಾಲೀಕರ ಒಡೆತನ ಭೂಮಿಯ ಮೇಲೆ ಸಹ ಇತ್ತು.

ಇಂದಿಗೂ ಕೂಡ ಜೀತದಾಳುಗಳು ಪ್ಲಾಂಟರ್‌ಗಳ ಅಧೀನದಲ್ಲಿ ದುಡಿಯುತ್ತಿದ್ದಾರೆ. 'ಕೃಷಿ ಜೀತದಾಳು ಊಳಿಗಮಾನ್ಯ ವ್ಯವಸ್ಥೆಯ ಲಕ್ಷಣಗಳಲ್ಲೊಂದು. ಹೊಲೆಯಲಸ್ ಅಥವಾ ಹೊಲೆಯರು ಕರ್ನಾಟಕದಲ್ಲಿ ಕೃಷಿ ಜೀತದಾಳುಗಳು. ಮಧ್ಯಯೂರೋಪಿನ ವೆಲೆಯನ್ಸ್ ಮತ್ತು ಸೇವಕರಿಗೆ ಹೋಲಿಸಬಹುದು. ಭೂ ಒಡೆಯನು ತನ್ನ ಜಮೀನನ್ನು ಮಾರಾಟ ಮಾಡಿದ ಮೇಲೆ ಜೀತದಾಳುಗಳು ಸಹ ನೂತನ ಮಾಲೀಕನ ವಶವಾಗುತ್ತಿದ್ದರು. ದಕ್ಷಿಣ ಕನ್ನಡ ಜಿಲ್ಲೆಯ ಶಾಸನವೊಂದು ಮದ್ದೆದನ್ನಕ ಎಂಬುವವರು ಭೂಮಿಯನ್ನು ಖರೀದಿ ಮಾಡಿದಾಗ ಜೊತೆಗೆ ಹೊಲೆಯಲಸ್, ಹೆಣ್ಣಾಳು, ಗಂಡಾಳು ಸಹ ನೂತನ ಮಾಲೀಕನ ವಶವಾದರೆಂದು ಶಾಸನ ತಿಳಿಸುತ್ತದೆ. ಕೊಪ್ಪ ತಾಲೂಕಿನ ಶಾಸನವೊಂದು "ದಾನಮೂಲ ಎಂಬುವವರು ತನ್ನ ಭೂಮಿಯನ್ನು ೫೦೦ ವರಹಗಳಿಗೆ ವಿಟ್ಟಣ್ಣ ಒಡೆಯರ್‌ಗೆ ಮಾರಿದಾಗ ಅದರ ಜೊತೆಗೆ 'ಹೊಲೆಯಲು' ಸಹ ಸೇರ್ಪಡೆಯಾಗಿದ್ದರು."[೫೫] ಬ್ರಾಹ್ಮಣರಿಗೆ ಮತ್ತು ಇತರೆ ಬಲಿಷ್ಠ ಜಾತಿಗಳ ದೇವಾಲಯಗಳಿಗೆ ಸೇರಿದ ಭೂಮಿಯನ್ನು ಉತ್ತಿ ಬಿತ್ತಿ ಬೆಳೆದು ಒಪ್ಪಿಸುವ ಗುಲಾಮಗಿರಿ ಶೂದ್ರ ಮತ್ತು ದಲಿತರದಾಗಿದ್ದಿತು. ಆರ್ಥಿಕ ಪರಿಸ್ಥಿತಿಯಿಂದ ಚೇತರಿಸಿಕೊಳ್ಳಲಾರದ ಸ್ಥಿತಿಯಲ್ಲಿದ್ದ ಈ ಸಮುದಾಯಗಳು ಜೀವನ ನಿರ್ವಹಣೆಗಾಗಿ ಇತರೆ ಬಲಿಷ್ಠ ಸಮುದಾಯಗಳನ್ನು ಅವಲಂಬಿಸುತ್ತಿದ್ದುದು ಸರ್ವೆ ಸಾಮಾನ್ಯವಾಗಿತ್ತು. ಕ್ರಿ.ಶ.೧೩೪೦ ಬಾರಕೂರಿನ ಶಾಸನದಲ್ಲಿ ಹೊಲೆಯರ ಉಲ್ಲೇಖವಿದ್ದು ಅವರು ತೆಂಕು (ದಕ್ಷಿಣ) ದಿಕ್ಕಿನಲ್ಲಿದ್ದ ದೇವರಮನೆ(ದೇವಾಲಯ)ಯ ಕುರಿತು ಎಚ್ಚರದಲ್ಲಿರಬೇಕೆಂದು ಸೂಚನೆ ನೀಡಿದೆ. ಬಹುಶಃ ಈ ದೇವಾಲಯ ಒಳಗಡೆ ಪ್ರವೇಶ ನಿರ್ಬಂಧಿಸುವಂತೆ ಆಜ್ಞೆಯನ್ನು ನೀಡುತ್ತದೆ ಎಂದು ಸೂಚನೆಯಿದ್ದಂತೆ ಕಂಡುಬರುತ್ತದೆ. ಕ್ರಿ.ಶ.೧೪೩೪ರ ಬಾರಕೂರಿನ ದಾಖಲೆಯಲ್ಲಿ ದಾನವಾಗಿ ನೀಡಲಾದ ಭೂಮಿಯ ಗಡಿ ವಿವರಗಳನ್ನು ಕೊಡುವಾಗ 'ಹೊಲೆಯ ಮಕ್ಕಳ ಮನೆಯ ಗಡಿಯಿಂದ' ಎಂಬ ಉಲ್ಲೇಖ ಬಂದಿದೆ.[೫೬] ಇದು ಮುಂದೆ ೧೫೪೬ ವೇಳೆಗೆ ಬ್ರಾಹ್ಮಣರು ಮತ್ತು ಶೂದ್ರರು ಪರಸ್ಪರ ಕಡಿದಾಡಿ ಸಾಯುವಂಥಾ ಘಟನೆ ನಡೆಯಲು ಕಾರಣವಾಯಿತು.[೫೭] ಪ್ರಾಚೀನ ಕಾಲದಲ್ಲಿ ದಲಿತರಿಗೆ ದೇವಾಲಯಕ್ಕೆ ನೇರ ಪ್ರವೇಶ ಇದ್ದಿಲ್ಲ. ಹಾಗೆಯೇ ಸಮಾಜದ ಉನ್ನತ ಸ್ಥಾನದಲ್ಲಿದ್ದವರ ಹತ್ತಿರ ಸುಳಿಯಕೂಡದು ಎಂಬುದರ ವಿವರಗಳು ಮೇಲಿನ ಬರವಣಿಗೆಯಿಂದ ಸ್ಪಷ್ಟವಾಗುತ್ತದೆ.

ಈ ವಿಚಾರಕ್ಕೆ ಸಂಬಂಧಿಸಿದಂತೆ ಒಂದು ಶಾಸನವು ಬಾರಕೂರ ರಾಜ್ಯದ ಮಹಾಪ್ರಧಾನ ಮುದ್ದೆ-ದನ್ನಾಯಕ ಎಂಬುವವರು ತೋಟವನ್ನು ಕೊಂಡುಕೊಂಡು ದೇವರಿಗೆ ಅರ್ಪಿಸಿದಾಗ ತೋಟಗಳಲ್ಲಿ ಕೆಲಸಮಾಡುವವರು ಸಹ ಸೇರಿದ್ದರು.[೫೮] ಜೀತದಾಳು(Bond-servant) ಇವರನ್ನು (ಬೆಸಮಕ್ಕಳು) ಎಂದು ಕರೆಯಲಾಗಿದೆ. ಭೂಮಿಯೊಂದಿಗೆ ಇವರನ್ನು ಮಾರಾಟ ಮಾಡಲಾಗುತ್ತಿತ್ತು. ಇವರಿಗೆ ಯಾವುದೇ ರೀತಿಯ ಬದಲಾವಣೆಗೆ ಅವಕಾಶವಿರಲಿಲ್ಲ. ಅಕ್ಷರಜ್ಞಾನದ ಸೌಲಭ್ಯ ಅಂದು ಸಾಧ್ಯವಿಲ್ಲದ್ದರಿಂದ ಜಾಗೃತಿಗೆ ಅವಕಾಶವೇ ಇರಲಿಲ್ಲ. ಆರ್ಥಿಕವಾಗಿ

ದುರ್ಬಲರಾದಾಗ ಇನ್ನೊಬ್ಬರ ಅವಲಂಬನೆ ಹೆಚ್ಚಾಗುತ್ತದೆ. ವರ್ಷಕ್ಕೆ ಇಂತಿಷ್ಟು ಬಟ್ಟೆ ಮತ್ತು ಹಣವನ್ನು ಇವರಿಗೆ ಕೊಡಲಾಗುತ್ತಿತ್ತು ಎಂದು ವಿಲ್ಕ್ಸ್ ತಿಳಿಸುತ್ತಾನೆ.[೫೯] ಈ ಪದ್ಧತಿಯು ಬಹುಪಾಲು ಪಶ್ಚಿಮ ಕರಾವಳಿಯ ಮಲಬಾರ್, ಕೊಚ್ಚಿನ್, ತಿರುವಾಂಕೂರು ಮತ್ತು ದಕ್ಷಿಣ ಕನ್ನಡದಲ್ಲಿ ಹೆಚ್ಚು ಪ್ರಚಲಿತದಲ್ಲಿತ್ತು. ಕಾಲಕ್ರಮೇಣ ಮಲೆನಾಡು ಪ್ರದೇಶವು ಈ ಬಗೆಯ ಚಟುವಟಿಕೆಗಳಿಂದ ಮುಕ್ತವಾಗಿರಲಿಲ್ಲ. ಇಕ್ಕೇರಿ ಸಂಸ್ಥಾನವು ಮುಖ್ಯವಾಗಿ ಇಂದಿನ ಶಿವಮೊಗ್ಗ ಜಿಲ್ಲೆಯನ್ನು ಕೇಂದ್ರವಾಗಿರಿಸಿಕೊಂಡು ಆಡಳಿತ ನಡೆಸಿದ್ದರಿಂದ ಮೇಲೆ ತಿಳಿಸಿದ ಚಟುವಟಿಕೆಗಳಿಂದ ತಪ್ಪಿಸಿಕೊಳ್ಳಲು ಸಾಧ್ಯವಿರಲಿಲ್ಲ. ಗುಲಾಮರನ್ನು, ಜೀತದಾಳುಗಳನ್ನು ಸೆರೆಹಿಡಿದು ನಗರದ ಅರಮನೆ ಮೈದಾನಗಳಲ್ಲಿ ಕೆಲಸ ಮಾಡುವ ಆಳುಗಳನ್ನಾಗಿ ನೇಮಿಸಿಕೊಂಡಿದ್ದರು.[೬೦] ಮತ್ತೆ ಕೆಲವರನ್ನು ಲಕ್ಕವಳ್ಳಿ, ಕವಲೇದುರ್ಗ ಕೋಟೆ ರಿಪೇರಿ ಕೆಲಸಗಳಲ್ಲಿ ದುಡಿಯಲು ಹಿಡಿದಿಟ್ಟುಕೊಂಡಿದ್ದರು. ಕೆಲಸದ ಆಳುಗಳನ್ನು 'ಜೀತಗಾರ' ಅಥವಾ 'ಕೂಲಿಕಾರ' ಎಂದು ಕರೆಯುತ್ತಿದ್ದರು. ಇವರು ವರ್ಷಕ್ಕೆ ನಲವತ್ತು ಪನಾಮಗಳನ್ನು ಪಡೆಯುತ್ತಿದ್ದರು.[೬೧]

ಅಧ್ಯಯನದ ಅವಧಿಯ ಕಾಲಘಟ್ಟದಲ್ಲಿ ಭೂಮಿಯ ಮೇಲೆ ಅರಸರಿಗೆ ಅಪರಿಮಿತವಾದ ಅಧಿಕಾರವಿದ್ದಿತು. ಈ ಕುರಿತಂತೆ ಅನೇಕ ಚರಿತ್ರೆಕಾರರು ಅಧ್ಯಯನಗಳನ್ನು ನಡೆಸಿದ್ದಾರೆ. ಕೃಷಿಗೆ ಒಳಪಡದ ಬಂಜರು ಭೂಮಿ ಸಹ ರಾಜಪ್ರಭುತ್ವಕ್ಕೆ ಒಳಪಡುತ್ತಿತ್ತು. ಕೃಷಿಯೇತರ ವರ್ಗಗಳಾದ ಬ್ರಾಹ್ಮಣರು, ದೇವಸ್ಥಾನ ಮತ್ತು ಮಠಗಳ ಮೇಲೆ ಸಂಪೂರ್ಣ ಹಿಡಿತ ಸಾಧಿಸಿದ್ದರು. ಇವರು ಜಮೀನುಗಳನ್ನು ಒಪ್ಪಂದದ ಮೇರೆಗೆ (ಗುತ್ತಿಗೆ, ಗೇಣಿ, ಗಾದಿ, ವರ, ಸಿದ್ಧಾಯ) ರೈತರಿಗೆ ಕೃಷಿ ಮಾಡಲಿಕ್ಕೆ ಕೊಡುತ್ತಿದ್ದರು.[೬೨] ಈ ಭೂಮಿಯಲ್ಲಿ ಕೂಲಿಕಾರ್ಮಿಕರಾದ ಹೊಲೆಯರು, ಜೀತದಾಳುಗಳು, ಸಾಮಾನ್ಯ ಜನರು ದುಡಿಯುತ್ತಿದ್ದರು.

ಇದರ ಪರಿಣಾಮವಾಗಿ ಕೃಷಿಯೇತರ ವರ್ಗಗಳಾದ ಬಲಿಷ್ಠ ಜಾತಿಗಳು ಆರ್ಥಿಕವಾಗಿ ಸದೃಢವಾಗಲು ಕಾರಣವಾಯಿತು. ದಲಿತ ಸಮುದಾಯಗಳಿಂದ ಸಮಾಜ ಆರ್ಥಿಕವಾಗಿ ಭದ್ರತೆಯನ್ನು ಸಾಧಿಸಲು ಸಾಧ್ಯವಾಗುತ್ತದೆ. ಈ ಸಾಮಾನ್ಯ ಅರಿವು ಕೂಡ ಮೇಲ್ಜಾತಿಗಳಿಗೆ ಗೊತ್ತಿಲ್ಲವೆಂಬಂತೆ ವರ್ತಿಸುತ್ತಿವೆ. ಒಮ್ಮೆ ಮೈಸೂರು ರಾಜ್ಯದ ಹೈದರ್-ಟಿಪ್ಪು ಮತ್ತು ಕೊಡಗಿನ ಅರಸರ ನಡುವೆ ಧಾರ್ಮಿಕ ವಿಚಾರದಲ್ಲಿ ಅಡಚಣೆವುಂಟಾದಾಗ, ಕೊಡಗಿನಲ್ಲಿದ್ದ ಮುಸ್ಲಿಂ ಭೂಮಾಲೀಕರನ್ನು ಹೊಡೆದೋಡಿಸುವ ವಿಚಾರ ಟಿಪ್ಪುವಿನ ಗಮನಕ್ಕೆ ಬಂತು. ಕೊಡಗಿನ ವಿವಿಧ ಪ್ರದೇಶಗಳಲ್ಲಿ ಜೀತಗಾರರಾಗಿ, ಗುಲಾಮರಾಗಿ ದುಡಿಯುತ್ತಿದ್ದ ಹೊಲೆಯರನ್ನು ಹಿಡಿದು ತಂದು ತನ್ನ ಸೈನ್ಯದಲ್ಲಿ ಸೇರಿಸಿಕೊಂಡಿದ್ದಲ್ಲದೆ ತರುವಾಯ ಮತಾಂತರಕ್ಕೆ ಪ್ರಯತ್ನಿಸಿದನು[೬೩] ಎನ್ನುವ ಅಭಿಪ್ರಾಯಗಳು ಕೂಡ ಇವೆ. ಆ ಸಮಯದಲ್ಲಿ ಕೃಷಿಯಲ್ಲಿ ನಿರತವಾಗಿದ್ದ ಶೂದ್ರರು ಮತ್ತು ಅತಿಶೂದ್ರರಲ್ಲಿ ಸಹ ಜಾತಿ ಶ್ರೇಣೀಕರಣವಿತ್ತು. ಮಧ್ಯಕಾಲೀನ ಸಂದರ್ಭದಲ್ಲಿ ಬಹುತೇಕ ಜಾತಿಗಳು ಶೂದ್ರ ವರ್ಣದಲ್ಲಿ ಸೇರಿಕೊಳ್ಳುತ್ತವೆ. ಮತ್ತೆ ಮೇಲ್ಜಾತಿ ಸಂಪ್ರದಾಯಗಳ ರೂಢಿಸಿಕೊಳ್ಳುವಿಕೆ ಮತ್ತು ಅನುಸರಿಸುವಿಕೆ ಕೆಲವು ಸಮುದಾಯಗಳಲ್ಲಿ ಕಾಣಬರುತ್ತಿತ್ತು. ಈ ಕುರಿತಂತೆ 'ದಲಿತರು ಮತ್ತು ಸಮಾಜ' ಎಂಬ ಅಧ್ಯಾಯದಲ್ಲಿ ವಿವರವಾಗಿ ಚರ್ಚಿಸಲಾಗಿದೆ. ಹೊಲೆಯರಿಗೆ ಕೃಷಿಕಾರ್ಮಿಕರ ಸ್ಥಾನದಲ್ಲಿ ಪ್ರಥಮ. ಟಿಪ್ಪುವಿನ ಆಳ್ವಿಕೆಯ

ಸಂದರ್ಭದಲ್ಲಿ ಇವರನ್ನು ಆಡಳಿತದ ವಿವಿಧ ವಿಭಾಗಗಳಿಗೆ ಸೇರಿಸಿಕೊಂಡಿದ್ದು ಗಮನಾರ್ಹ. ವಿಜಯನಗರೋತ್ತರ ತರುವಾಯ ಕರ್ನಾಟಕದಲ್ಲಿ ಅನೇಕ ಪಾಳೆಯಪಟ್ಟುಗಳ ಸ್ಥಾಪಕರು ಕೃಷಿಕರೆಂಬುದು ಗಮನಿಸಬೇಕಾದ ಸಂಗತಿ. ಸಾಮಾನ್ಯವಾಗಿ ಕರಾವಳಿ ಕರ್ನಾಟಕದಲ್ಲಿ ಭೂಮಾಲೀಕರ ಮತ್ತು ದಲಿತರ ನಡುವಿನ ಕೃಷಿಗಳು ಮಧ್ಯಕಾಲೀನ ಅವಧಿಯಲ್ಲಿ ಸಂಘರ್ಷಾತ್ಮಕವಾಗಿದ್ದವು. ಈ ಬಗೆಯ ವೈರುಧ್ಯಗಳು ಹದಿನೆಂಟು ಮತ್ತು ಹತ್ತೊಂಬತ್ತನೆಯ ಶತಮಾನದವರೆಗೂ ಉಚ್ಛ್ರಾಯ ಸ್ಥಿತಿಯಲ್ಲಿತ್ತೆಂದು ಫ್ರಾನ್ಸಿಸ್ ಬುಕಾನನ್ ಅಭಿಪ್ರಾಯಪಡುತ್ತಾರೆ. ಹಾಗೆಂದ ಮಾತ್ರಕ್ಕೆ ಈಗ ಅಸ್ತಿತ್ವದಲ್ಲಿ ಇಲ್ಲವೆಂದು ಹೇಳುತ್ತಿಲ್ಲ. ಕರಾವಳಿ ಕರ್ನಾಟಕದಲ್ಲಿ ಜೀತದಾಳುಗಳನ್ನು 'ಮೂಲದ ಹೊಲೆಯರು' ಎಂದು ಕರೆಯಲಾಗುತ್ತಿತ್ತು.[೬೪] ಎಡ್ಗರ್ ಥರ್ಸ್ಟನ್ ತಿಳಿಸುವಂತೆ ಮಲೆನಾಡಿನ ಹಾಗೂ ಸಹ್ಯಾದ್ರಿ ಪರ್ವತ ಪ್ರದೇಶಗಳಲ್ಲಿ ಈ ಪದ್ಧತಿ ಹೆಚ್ಚು ಅಸ್ತಿತ್ವದಲ್ಲಿತ್ತು. ದಕ್ಷಿಣ ಕನ್ನಡದಲ್ಲಿ serf ಎನ್ನುವವರನ್ನು 'ಮೂಲದಾಳು' ಎಂದು ಕರೆಯುತ್ತಿದ್ದರು. ಇವರು ದಿನವೊಂದಕ್ಕೆ ೧ ೧/೨ ಹಾನೆ ಪಡೆಯುತ್ತಿದ್ದರು. ಸ್ತ್ರೀಯು ಸಹ ದಿನವೊಂದಕ್ಕೆ ಒಂದು ಹಾನೆ[೬೫] ಪಡೆಯುತ್ತಿದ್ದರು. ಈ ಕುರಿತು ಗಂಭೀರವಾಗಿ ಯೋಚಿಸಿದ ಕೇಂದ್ರ ಸರ್ಕಾರವು ೧೯೭೬-೭೭ರಲ್ಲಿ ಜೀತ ವಿಮುಕ್ತಿ ಕಾಯಿದೆಯನ್ನು ಜಾರಿಗೆ ತಂದಿತು. ಆದರೂ ಗ್ರಾಮೀಣ ಪರಿಸರದಲ್ಲಿ ಇಂದಿಗೂ ಕೂಡ ಸಂಪೂರ್ಣವಾಗಿ ಜೀತಗಾರಿಕೆ ನಾಶವಾಗಿಲ್ಲ ಎಂದರೆ ತಪ್ಪಾಗಲಾರದು.

## ೪.೩ ವೃತ್ತಿಗಳು

ಮಾನವನು ಮೂಲಭೂತ ಬೇಡಿಕೆಗಳನ್ನು ಈಡೇರಿಸಿಕೊಳ್ಳಲು ಯಾವುದಾದರೂ ಒಂದು ಕ್ಷೇತ್ರದಲ್ಲಿ ದುಡಿಯಬೇಕಾಗಿತ್ತು. ಅಕ್ಷರದ ಅರಿವಿರುವ ಸಮುದಾಯಗಳು ದೈಹಿಕ ದುಡಿಮೆಯನ್ನು ಇಷ್ಟಪಡದೆ ಬೌದ್ಧಿಕ ಚಟುವಟಿಕೆಗಳ ಪ್ರಭಾವವಿರುವ ಕ್ಷೇತ್ರದತ್ತ ಮುನ್ನಡೆದರು. ಕೆಳಜಾತಿಗಳು ಮತ್ತು ದಲಿತ ಸಮುದಾಯಗಳು ದೈಹಿಕ ದುಡಿಮೆಗೆ ಹೆಚ್ಚು ಅಂಟಿಕೊಂಡವು. ಇವರಿಗೆ ಆರಂಭದಿಂದಲೂ ರಾಜಪ್ರಭುತ್ವದ ಬೆಂಬಲವಾಗಲಿ, ಧಾರ್ಮಿಕ ಪ್ರಭುತ್ವದ ಬೆಂಬಲವಾಗಲಿ ಸಿಗಲಿಲ್ಲ. ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಶೋಚನೀಯ ಸ್ಥಿತಿಯಲ್ಲಿಯೇ ಮುಂದುವರಿಯುತ್ತಾ ಬಂದಿರುವುದು ಕಾಣುತ್ತೇವೆ. ಮಾನವೀಯತೆ ಮತ್ತು ಔದಾರ್ಯದಿಂದ ದಲಿತರನ್ನು ನೋಡಿರುವ ಸಂಗತಿಗಳು ಚರಿತ್ರೆಯಲ್ಲಿ ಸಿಗುವುದಿಲ್ಲ. ಇಂದಿಗೂ ಬಹುತೇಕವಾಗಿ ಇವರು ಗ್ರಾಮೀಣ ಪರಿಸರದಲ್ಲಿ ಅದೇ ಸಾಂಪ್ರದಾಯಿಕ ವೃತ್ತಿಗಳನ್ನು ಅನುಸರಿಸುತ್ತಿದ್ದಾರೆ. ಆಧುನಿಕತೆಯ ಪ್ರಭಾವದಿಂದ ಹಾಗೂ ಶಿಕ್ಷಣದ ಪರಿಣಾಮವಾಗಿ ಅಲ್ಪಮಟ್ಟಿನ ಬದಲಾವಣೆಗಳು ಕಂಡುಬಂದರೂ ಒಟ್ಟಾರೆಯಾಗಿ ಅಂದಿಗೂ ಇಂದಿಗೂ ಯಾವ ಬದಲಾವಣೆಗಳು ಆಗಿಲ್ಲವೇನೋ ಎಂಬ ಭಾವನೆ ದಲಿತರಲ್ಲಿ ಮೂಡುತ್ತಿದೆ.

ಪ್ರಾರಂಭದಲ್ಲಿ ವೃತ್ತಿಗಳಿಗೆ ಜಾತಿಗಳ ಸೋಂಕು ಇರಲಿಲ್ಲ. ಆದರೆ ವೃತ್ತಿಗಳೇ ಮುಂದೆ ಜಾತಿಗಳಾಗಿ ಬದಲಾವಣೆಯಾದವು. ಯಾವುದೇ ಜಾತಿಯವರು ಇಂತಹದೆ ವೃತ್ತಿ ನಿರ್ವಹಿಸಬೇಕು ಎಂಬ ನಿಯಮ ಇರಲಿಲ್ಲ. ಕೊಳಕು, ಕಲ್ಮಶದಿಂದ ದುರ್ವಾಸನೆಯಿಂದ ಕೂಡಿದ ಕೆಲಸಗಳನ್ನು ಮಾಡುವ ಜನತೆ ಇತರೆ ಜನಸಮುದಾಯಗಳಿಗಿಂತ ದೂರ ಸರಿಯುವಂತೆ ಮಾಡಿತು. ಆದರೆ ಸಮಾಜ, ಕಲ್ಮಶದಿಂದ ಕೂಡಿದ ಪರಿಸರವನ್ನು ಸ್ವಚ್ಛಗೊಳಿಸಲು

ಕಾರಣರಾದವರನ್ನು ಪ್ರಶಂಸಿಸದೆ ಇರುವುದು ದುರಂತ. ಕಾಲಕ್ರಮೇಣ ಈ ರೀತಿಯ ಪರಿಕಲ್ಪನೆಗಳಿಂದ ವಿವಿಧ ಜನಸಮುದಾಯಗಳನ್ನು ಕೆಲವು ವೃತ್ತಿಗಳಿಗೆ ತಳ್ಳಲಾಯಿತು. ಈ ಕುರಿತಂತೆ ಚರ್ಚೆಯನ್ನು ಮುಂದುವರಿಸುವಾಗ ದಲಿತರು ನಿರ್ವಹಿಸುತ್ತಿದ್ದ ವೃತ್ತಿಗಳ ಕುರಿತು ಪ್ರಾಚೀನ ಕನ್ನಡ ಪಠ್ಯಗಳು ಗಮನಾರ್ಹ ಮಾಹಿತಿ ನೀಡುತ್ತವೆ. ಊರ ಕಸವನ್ನು ಗುಡಿಸುವುದು ಇವರ ಕೆಲಸ. ಊರಲ್ಲಿ ಸತ್ತ ದನಗಳನ್ನು ಹೊತ್ತು ಸಾಗಿಸುವುದು, ಅದನ್ನು ಸುಲಿದು ಚರ್ಮ ಹದ ಮಾಡಿ ವಸ್ತುಗಳನ್ನು ತಯಾರಿಸುವ ಚರ್ಮದ ಕೆಲಸವನ್ನು 'ಸಮ್ಮಗಾರವೆಸೆ' ಎಂದಿವೆ. ವಾದ್ಯಗಳನ್ನು ನುಡಿಸುವುದು (ಪೊಲೆಯರರ ಬಡಿದ ಪರೆಯೋಜೆಗಾಡುವ ಪಗರಣೆಗರಂ), ಮದುವೆ, ಶವಸಂಸ್ಕಾರ, ಉತ್ಸವ ಮುಂತಾದ ಸಂದರ್ಭಗಳಲ್ಲಿ ಹೊಲೆಯರು ವಾದ್ಯಗಳನ್ನು ನುಡಿಸುತ್ತಿದ್ದರೆಂಬುದು[೬೬] ವೇದ್ಯವಾಗುತ್ತದೆ.

ಡೊಂಬರು ಅಸ್ಪೃಶ್ಯರ ಗುಂಪಿನಲ್ಲಿ ಬರುವ ಮತ್ತೊಂದು ಸಮುದಾಯ. ಉತ್ತರ ಭಾರತದ ಡೊಂಬರೆಂಬ ಅಸ್ಪೃಶ್ಯರು ಒಂದು ಜಾತಿಯಾಗಿ ಮೊಟ್ಟಮೊದಲಿಗೆ ರಚನೆಗೊಂಡಿದ್ದು ಗುಪ್ತರ ಕಾಲದಲ್ಲಿ. ಅವರು ನಿಕೃಷ್ಟರೆಂದು ಜೈನ ಮೂಲಗಳು ತಿಳಿಸುತ್ತವೆ. ಬುಡಕಟ್ಟು ಜನಾಂಗದವರಾಗಿದ್ದು, ಕಾಲಕ್ರಮೇಣ ಸಮಾಜದ ಕೆಳಜಾತಿಗೆ ತಳ್ಳಲ್ಪಟ್ಟಿರಬಹುದೆಂದು ಕಾಣುತ್ತದೆ. ಕಿರಾತ, ಶಬರ, ಪುಲಿಂದ, ಮ್ಲೇಚ್ಛ ಮುಂತಾದ ಜನಗಳನ್ನು ಕೆಳಜಾತಿಯವರೆಂದು ಅಮರಸಿಂಹನ 'ಅಮರಕೋಶ'[೬೭] ತಿಳಿಸುತ್ತದೆ. ಸುಮಾರು ಆನೇ ಶತಮಾನಕ್ಕೆ ಸೇರಿದ ಶಾಸನಗಳಲ್ಲಿ ದೊಂಬರ ಉಲ್ಲೇಖ ಕಂಡುಬರುತ್ತದೆ. 'ಪಂಪಭಾರತ'ದಲ್ಲಿ ಶಿಶುಪಾಲ ಕಷ್ಣನನ್ನು "ಮೀನಾವೆಪಂರದಿಯೆಂದೆನಿತಾನುಂತೆರನಾಗಿ ಡೊಂಬವಿದ್ಯೆಯ ನಾಡಲ್ ಅರೆವೆಯ್" ಎಂಬ ಡೊಂಬ ವಿದ್ಯೆಯ ಉಲ್ಲೇಖ ಬರುತ್ತದೆ. ಕೋಲು ಹಿಡಿದು ಕಸರತ್ತು ಮಾಡುತ್ತ, ಹಗ್ಗದ ಮೇಲೆ ನಡೆಯುತ್ತ, ವಿವಿಧ ಬಗೆಯ ಮನರಂಜನೆಯ ಆಟಗಳನ್ನು ಆಡಿ ಹೊಟ್ಟೆ ತುಂಬಿಸಿಕೊಳ್ಳುತ್ತಿದ್ದರು.[೬೮] ವಿಜಯನಗರ ಆಳ್ವಿಕೆಯ ಕಾಲದಲ್ಲಿ ರಂಜನೀಯ ಆಟವನ್ನು ಪ್ರದರ್ಶಿಸುತ್ತ ಗಮನ ಸೆಳೆಯುತ್ತಿದ್ದರು ಡೊಂಬರು. ನವರಾತ್ರಿ ಉತ್ಸವದ ಸಮಯದಲ್ಲಿ ಸಾಮಾನ್ಯ ಜನರಿಗೆ ಮತ್ತು ರಾಜವರ್ಗದವರಿಗೆ ಮನರಂಜನೆ ನೀಡುತ್ತಿದ್ದರು. ಸಣ್ಣ ಗುಡಿಸಲಿನಲ್ಲಿ ವಾಸಿಸುತ್ತಿದ್ದ ಇವರು ದೇವಾಲಯಕ್ಕೂ ಕೂಡ ದಾನ ನೀಡುತ್ತಿದ್ದರೆಂದು ಕ್ರಿ.ಶ.೧೪೫೧ ಶಾಸನವು[೬೯] ಉಲ್ಲೇಖಿಸುತ್ತದೆ.

ಬಡಗಿ, ಅಕ್ಕಸಾಲಿಗ, ಚಮ್ಮಾರ ಮೊದಲಾದವರು ನೇಗಿಲು ಕೆತ್ತಿ ಬಾವಿಗಳಿಂದ ನೀರೆತ್ತಲು ಚರ್ಮದ ಚೀಲ ಮೊದಲಾದ ವ್ಯವಸಾಯಕ್ಕೆ ಸಂಬಂಧಿಸಿದ ಉಪಕರಣಗಳನ್ನು ತಯಾರು ಮಾಡುತ್ತಿದ್ದರು. ಹಜಾಮರು ಅಸ್ಪೃಶ್ಯರನ್ನು ಬಿಟ್ಟು ಉಳಿದವರೆಲ್ಲರಿಗೂ ಕ್ಷೌರ ಮಾಡುತ್ತಿದ್ದರು. ಮಹರ್‌ಗಳು ಅಸ್ಪೃಶ್ಯರು. ಅವರು ಹಳ್ಳಿಯ ಹೊರ ಪ್ರದೇಶದಲ್ಲಿ ವಾಸಿಸುತ್ತಾರೆ. ಹಳ್ಳಿಯ ಕಾವಲುಗಾರರು, ಝಾಡಮಾಲಿಗಳು ಹಾಗೂ ವಾರ್ತಾವಾಹಕರು. ಇವರು ಊರಿನ ಮುಖ್ಯಸ್ಥರೊಂದಿಗೆ ಯಾವಾಗಲೂ ಇರಬೇಕು. ಹೊಲದ ಗಡಿ ವ್ಯಾಜ್ಯಗಳಲ್ಲಿ ಮುಖ್ಯ ಸಾಕ್ಷಿಗಳು.[೭೦] ಪ್ರಾಚೀನ ಕಾಲದಲ್ಲಿ ಹುಟ್ಟುಹಾಕಿದ ಬಹುತೇಕ ಸಂಪ್ರದಾಯಗಳು ಇಂದಿಗೂ ಕೂಡ ಸಮಾಜದಲ್ಲಿ ಮುಂದುವರಿಯುತ್ತಿವೆ ಎಂದರೆ ಭಾರತೀಯ ಸಮಾಜವು ಬದಲಾವಣೆಗೆ ಒಳಪಡುವುದಿಲ್ಲ ಎಂಬುದನ್ನು ಗ್ರಹಿಸಬಹುದಾಗಿದೆ. ಯಾವುದೇ ಜಾತಿಗಳು ತಮ್ಮ ವೃತ್ತಿ ಕೌಶಲ್ಯವನ್ನು ಬದಲಾಯಿಸುವ ಪ್ರವೃತ್ತಿಗೆ ವಿರುದ್ಧವಾಗಿ ನಡೆಯುತ್ತಿರಲಿಲ್ಲ. ಈ ಹಿನ್ನೆಲೆಯಲ್ಲಿ ದಲಿತ ಸಮುದಾಯಗಳು ಇಂದಿಗೂ ಕೂಡ ಸಾಂಪ್ರದಾಯಿಕ ವೃತ್ತಿಗಳಲ್ಲಿ ಮುಂದುವರಿಯುತ್ತಿವೆ.

## ೪.೪ ತೆರಿಗೆ

ರಾಜ್ಯವು ವಿವಿಧ ಮೂಲಗಳಿಂದ ತೆರಿಗೆಯನ್ನು ಸಂಗ್ರಹ ಮಾಡುತ್ತಿತ್ತು. ಆ ಮುಖಾಂತರ ಬೊಕ್ಕಸವು ಭರ್ತಿಯಾಗುವುದರ ಜೊತೆಗೆ ಖರ್ಚು ವೆಚ್ಚಗಳನ್ನು ಸರಿತೂಗಿಸುತ್ತಿತ್ತು. ಭೂಮಿ, ವೃತ್ತಿ, ಆದಾಯ, ವಸ್ತುಗಳು ಮತ್ತು ಜಾತಿಗಳ ಮೇಲೆ ತೆರಿಗೆ ಹೇರುತ್ತಿತ್ತು. ತೆರಿಗೆಯ ಪ್ರಮಾಣವು ಸಮುದಾಯದಿಂದ ಸಮುದಾಯಕ್ಕೆ ಅಂತರವಿರುತ್ತಿತ್ತು. ಸಮಾಜದ ಮೇಲ್‌ಸ್ತರದ ಕೆಲವು ಸಮುದಾಯಗಳ ಮೇಲೆ ಹೆಚ್ಚಿನ ಹೊರೆ ಬೀಳುತ್ತಿತ್ತು. ದಲಿತರು ಜಾತಿ, ಬಿಟ್ಟಿ ತೆರಿಗೆಯನ್ನು ಕೊಡಬೇಕಾಗಿತ್ತು. ಈ ಕುರಿತಂತೆ ಶಾಸನಗಳು ಮಾಹಿತಿ ನೀಡುತ್ತವೆ. ಈ ತೆರಿಗೆಗಳ ವಿರುದ್ಧ ರೈತರು, ಕೃಷಿಕಾರ್ಮಿಕರು, ಜನಸಾಮಾನ್ಯರು, ಕೆಳಜಾತಿಗಳು, ಬುಡಕಟ್ಟುಗಳು, ದಲಿತರು ಮುಂತಾದವರು ವಿರೋಧಿಸಿರುವ, ಪ್ರತಿಭಟಿಸಿರುವ ಪ್ರಸಂಗಗಳು ಇವೆ. ಎಷ್ಟೋ ದಲಿತ ಕುಟುಂಬಗಳು ಆರ್ಥಿಕ ಸಂಕಷ್ಟದಿಂದ ಜೀವನ ಸಾಗಿಸಲು ಸಾಧ್ಯವಾಗದೆ, ಮಾಲೀಕರ ಹೊಲದಲ್ಲಿ ಹೆಚ್ಚುವರಿ ಕೆಲಸ ಮಾಡಿ ಸಂಪಾದಿಯಾಗಿ ತೆರಿಗೆಯ ಹೊರೆಯನ್ನು ನೀಗಿಸಿಕೊಂಡಿವೆ.

ಮಧ್ಯಕಾಲೀನ ಕರ್ನಾಟಕದಲ್ಲಿ ವಿವಿಧ ರಾಜವಂಶಗಳು, ಸಾಮಂತ ಅರಸರು, ಪಾಳೆಯ ಪಟ್ಟುಗಳು ಆಳ್ವಿಕೆ ನಡೆಸಿರುವುದರಿಂದ ತೆರಿಗೆ ಹಾಕುತ್ತಿದ್ದ ಪ್ರಮಾಣವು ವ್ಯತ್ಯಾಸವಾಗುತ್ತಿತ್ತು. ತೆರಿಗೆ ನಿಗದಿಗೊಳಿಸುತ್ತಿದ್ದ ಅಧಿಕಾರಿಗಳನ್ನು ಯಾರು ನೇಮಿಸುತ್ತಿದ್ದರು? ಮಧ್ಯವರ್ತಿಗಳ ಕೈವಾಡದಿಂದ ತೆರಿಗೆಯ ಪ್ರಮಾಣವು ಏರುಪೇರಾಗುವ ಸಾಧ್ಯತೆಗಳೇನಾದರೂ ಇವೆಯೇ? ಮುಂತಾದ ಪ್ರಶ್ನೆಗಳು ಉದ್ಭವಿಸುತ್ತವೆ. ಕೆಲವು ಅಧಿಕಾರಿಗಳು ರಾಜ್ಯದ ಪರವಾಗಿ ಊರಿಗೆ ಬಂದಾಗ 'ಕಾಣಿಕೆ'ಯಂತಹ ಪದ್ಧತಿಯು ಕೊಳ್ಳೆಹೊಡೆಯುವ ಪ್ರವೃತ್ತಿಯನ್ನು ಪ್ರತಿನಿಧಿಸುತ್ತದೆ. ಏಕೆಂದರೆ ಎಷ್ಟೋ ಹಳ್ಳಿಗಳು ತಮ್ಮ ಹಳ್ಳಿಯನ್ನು ಬ್ರಾಹ್ಮಣರಿಗೆ ನೀಡುವುದನ್ನು ವಿರೋಧಿಸಿದ್ದರ ಉಲ್ಲೇಖವಿದೆ.[೭೦] ಮಾದಾರಿಕೆ,[೭೧] ಹೊಲೆದೆರೆ,[೭೨] ಬಿಟ್ಟಿಬೆಸವು ದಲಿತರ ಮೇಲೆ ಹಾಕುತ್ತಿದ್ದ ಪ್ರಮುಖ ತೆರಿಗೆಗಳು. ಇದರ 'ಜೊತೆಗೆ' 'ಸೂಳೆದೆರೆ', 'ತೊತ್ತುದೆರೆ'[೭೩] ತೆರಿಗೆಯನ್ನು ಸಂಗ್ರಹ ಮಾಡುತ್ತಿದ್ದರು. ಕತ್ತರಿವಾಣ, ಕನ್ನಡಿವಣ, ಕೊಡತಿವಾಣ, ತಳಾರಸುಂಕ,[೭೪] ಮುಂತಾದ ತೆರಿಗೆಗಳು ಕೆಳಜಾತಿ ಜನರ ವೃತ್ತಿಗಳ ಮೇಲೆ ಹಾಕುತ್ತಿದ್ದರು.

ಅಧ್ಯಯನದ ಅವಧಿಯಲ್ಲಿ ಪ್ರಸ್ತಾಪವಾಗುವ ತೆರಿಗೆಗಳಲ್ಲಿ 'ಹೊಲೆದೆರೆ' ಎಂಬುದು ಒಂದು. ಆದರೆ ನಿಜ ಸ್ವರೂಪ ಮಾತ್ರ ಹಾಗೆಯೇ ಉಳಿದಿದೆ. ಆದರೆ ಬಾದಾಮಿ ರಾಜಧಾನಿಯ ಬ್ರಾಹ್ಮಣರು ತಮ್ಮ ಊರಿನ ಸಮ್ಮಗಾರ(=ಚರ್ಮಕಾರ) 'ಕವಜ್ತಿ'ಯನ್ನು ತೆಗೆದು ಹಾಕಿಸಿದಂತೆ ಒಂದು ಶಾಸನ ಹೇಳುತ್ತದೆ. ಕವರ್ತೆ ಎಂದರೆ ಒಂದು ಬಗೆಯ ತೆರಿಗೆ. ಚರ್ಮಕಾರ ಆದಾಯದ ಮೇಲೆ ಹಾಕುತ್ತಿದ್ದ ತೆರಿಗೆ ಹಾಗೂ ಹೊಲೆದೆರೆಯೂ ಒಂದೇ ಇರಬಹುದೆಂದು ಚಿದಾನಂದಮೂರ್ತಿ ಅಭಿಪ್ರಾಯಪಡುತ್ತಾರೆ. ಬಾದಾಮಿಯಂತಹ ಪಟ್ಟಣಗಳಲ್ಲಿನ ಚರ್ಮಕಾರರು ಪಾದರಕ್ಷೆಗಳನ್ನು ಮಾಡುವುದರ ಮೂಲಕ ಮಾತ್ರವಲ್ಲದೆ, ರಾಜನ ಆನೆ ಕುದುರೆಗಳಿಗೆ ಯೋಧರಿಗೆ ಬೇಕಾದ ಚರ್ಮದ ಉಪಕರಣಗಳನ್ನು ಮಾಡಿ ತಕ್ಕಮಟ್ಟಿಗೆ ಆದಾಯವನ್ನು ಸಂಪಾದಿಸುತ್ತಿದ್ದಿರಬಹುದು.[೭೫]

ಹೊಲಗೇರಿಗೆ ಮುಖ್ಯಸ್ಥನಾದವನನ್ನು ಊರ ಗೌಡನೋ, ಆ ನಾಡಿನ ಪ್ರಭುವೋ(ನಾಳ್ಪಭು) ನೇಮಿಸಿ ಅವನ ಕೈಗೆ ಅವನ ಅಧಿಕಾರ ಸೂಚಕವಾದ ಕಟ್ಟಿಗೆಯನ್ನು ಕೊಡುತ್ತಿದ್ದಂತೆ ಒಂದು ಶಾಸನದಿಂದ ಊಹಿಸಬಹುದು.

‘ಗೌಡಿಕೆ’ ಇದ್ದಂತೆ, ‘ಮಾದಾರಿಕೆ’ ಎಂಬ ಹೆಸರಿನ ಆ ಜಾಗಕ್ಕೆ ನೇಮಕವಾದರೆ, ಆ ವ್ಯಕ್ತಿ ಮಾದಾರಿಕೆವಟ್ಟ(ಮಾದಾರಿಕೆ+ಪಟ್ಟ)ವನ್ನು[೫೭] ಪಡೆಯುತ್ತಿದ್ದ. ರಾಜ್ಯದ ಹೆಚ್ಚಿನ ಆದಾಯವೆಲ್ಲಾ ತೆರಿಗೆಗಳ ಮೂಲಕವೇ ಬರುತ್ತಿತ್ತು. ಭಾರತದ ಶಾಸನಗಳನ್ನು, ಅದರಲ್ಲಿಯೂ ದಕ್ಷಿಣ ಭಾರತದ ಶಾಸನಗಳನ್ನು ಅಧ್ಯಯನ ಮಾಡಿದಾಗ ಅಸಂಖ್ಯಾತ ತೆರಿಗೆಗಳನ್ನು ಹೇರಿರುವುದು ಕಂಡುಬರುತ್ತದೆ. ಬಹುತೇಕ ಕೆಳಜಾತಿಗಳು ಮತ್ತು ಮಹಿಳೆಯರು ತೆರಿಗೆಗಳನ್ನು ತಪ್ಪದೆ ಪಾವತಿ ಮಾಡಬೇಕಾಗಿತ್ತು. ವೇಶ್ಯೆಯರ ಮೇಲೆ ‘ಸೂಳೆದೆರೆ’[೫೮] ಎಂಬ ತೆರಿಗೆಯನ್ನು ವಿಧಿಸುತ್ತಿದ್ದರು. ಕವಣೆ ಇಟ್ಟುಕೊಂಡಿದ್ದಕ್ಕೆ ‘ಕವಣಾಯ’ ತೆರಿಗೆ, ಕಳ್ಳರಿಗೆ ಹಾಕುವ ದಂಡಕ್ಕೆ ‘ಕಳ್ಳವಳಿಗೆ’, ಹಿರಿಯ ಅಧಿಕಾರಿಗಳು ಊರಿಗೆ ಬಂದಾಗ ಕೊಡುವುದಕ್ಕೆ ‘ಕಾಣಿಕೆ’ ಕೊಡಬೇಕಾಗಿತ್ತು. ಎತ್ತುಗಳ ಮೇಲಿನ ತೆರಿಗೆ ‘ಬಾಲವಣ’[೫೯] ತೆರಿಗೆಯನ್ನು ವಿಧಿಸುತ್ತಿತ್ತು.

ತೆರಿಗೆಗಳನ್ನು ಸಂಗ್ರಹಿಸುವಾಗ ಅಧಿಕಾರಿಗಳು (ರಾಜ್ಯದಿಂದ ನೇಮಿಸಲ್ಪಟ್ಟವರು) ಅಕ್ರಮವಾಗಿ ತೆರಿಗೆಯನ್ನು ಸಂಗ್ರಹಿಸುತ್ತಿದ್ದರು ಎಂದು ಗುಂಡ್ಲುಪೇಟೆ ಶಾಸನ ತಿಳಿಸುತ್ತದೆ. ಈ ಕುರಿತಂತೆ ಜನಸಾಮಾನ್ಯರಿಂದ ಅಕ್ರಮವಾಗಿ ಸಂಗ್ರಹಿಸುತ್ತಿದ್ದ ಅಧಿಕಾರಿಗಳನ್ನು ಕುರಿತು ಹೇಳುವಾಗ ‘ವಿಜಯನಾರಾಯಣ ದೇವಾಲಯದ ಪಾರುಪತ್ಯಗಾರನು ಅಕ್ರಮವಾಗಿ ಸಂಗ್ರಹಿಸಿದ ವಿಷಯ ಗೊತ್ತಾಗಿ ರುಸ್ತುಂಖಾನ್ ವೊಡೆಯನು ಸರಿಪಡಿಸಿದನೆಂದು ತಿಳಿದುಬರುತ್ತದೆ.[೬೦] ಕೆಲವು ಸಂದರ್ಭಗಳಲ್ಲಿ ದಲಿತರಿಗೆ ತೆರಿಗೆ ವಿನಾಯಿತಿ ನೀಡಿದ್ದನ್ನು ಶಾಸನಗಳು ತಿಳಿಸುತ್ತವೆ. ಪಲ್ಲವ ವಂಶದ ಮಜ್ಞಾಪರಸನ ಕಾಲದ ಒಂದು ಶಾಸನವು ಬಳ್ಳಾರಿ-೩೦ರ ಪೊಲೆಯರಿಗೆ ತೆರಿಗೆ ಬಿಟ್ಟಿದ್ದನ್ನು ತಿಳಿಸುತ್ತದೆ.[೬೧] ವಿಜಯನಗರದ ದೊರೆ ಸದಾಶಿವರಾಯನ ಆಳ್ವಿಕೆಯಲ್ಲಿ ಅಳಿಯ ರಾಮರಾಯ ನಾಯಿಂದರ ಮೇಲೆ ಹಾಕುತ್ತಿದ್ದ ತೆರಿಗೆಯನ್ನು ತೆಗೆದುಹಾಕಿಸಿದರ ಬಗ್ಗೆ ತಿಳಿಯಪಡಿಸುತ್ತದೆ.[೬೨] ಈ ರೀತಿಯ ವಿವರಗಳಿರುವ ಕೆಲವು ಶಾಸನಗಳ ಅಧ್ಯಯನದಿಂದ ಜನಸಾಮಾನ್ಯರ ಮೇಲೆ ಹಾಕುತ್ತಿದ್ದ ತೆರಿಗೆಯು ಅಧಿಕವಾದಾಗ, ಭಾರವಾದಾಗ ಪ್ರತಿಭಟಿಸುವ ಅವಕಾಶಗಳಿದ್ದರೂ ಪ್ರಭುತ್ವದ ಹಿಡಿತದಿಂದ ತಪ್ಪಿಸಿಕೊಳ್ಳಲು ಸಾಧ್ಯವಿರಲಿಲ್ಲ ಎಂಬ ಅಂಶ ತಿಳಿಯುತ್ತದೆ. ಕೆಲವು ಸಂದರ್ಭಗಳಲ್ಲಿ ಕೀಳು ಜಾತಿಯವರೆಂದು ಕರೆಯಿಸಿಕೊಳ್ಳುತ್ತಿದ್ದ ಜನತೆ ಊರಿನ ಮದುವೆ ಇತರೆ ಕಾರ್ಯಕ್ರಮಗಳಲ್ಲಿ ಅಂಗಡಿ ಬೀದಿಯಲ್ಲಿ ಮದುವೆಯ ಬಂಡಿಯನ್ನೇರಿ ಹೋಗುವಂತಿರಲಿಲ್ಲ. ಅಕಸ್ಮಾತ್ ಬಂದರೆ ಹನ್ನೆರಡು ಗದ್ಯಾಣ ದಂಡವನ್ನು ವಿಧಿಸಲಾಗುತ್ತಿತ್ತು.[೬೩] ಕೆಲವು ಸಂದರ್ಭಗಳಲ್ಲಿ ತೆರಿಗೆಗಳನ್ನು ನೀಡದೆ ಊರಿಗೆ ಪ್ರವೇಶಿಸಿದರೆ ಅವರನ್ನು ನಾಯಿ, ಗಾರ್ದಭ, ಚಂಡಾಲ ಮುಂತಾದ ಹೆಸರುಗಳಿಂದ ನಿಂದಿಸಿರುವ ವಿಷಯ ೯ನೇ ಶತಮಾನಕ್ಕೆ ಸಂಬಂಧಿಸಿದ ಶಾಸನ ತಿಳಿಸುತ್ತದೆ. ಅಂದರೆ ಬಹುಶಃ ಜನಸಾಮಾನ್ಯರು ಊರಿಂದ ಊರಿಗೆ ಬರುವ ಸಂದರ್ಭದಲ್ಲಿ ಕೆಲವು ನಿರ್ದಿಷ್ಟ ತೆರಿಗೆಗಳನ್ನು ಕಟ್ಟಬೇಕಾಗಿತ್ತು ಎಂಬುದು ಸ್ಪಷ್ಟವಾಗುತ್ತದೆ.[೬೪] ತೆರಿಗೆ ವಿಧಿಸುವುದರ ಮೂಲಕ ಸಾಮಾಜಿಕ ಕಟ್ಟುಪಾಡುಗಳಿಗೆ ಪರೋಕ್ಷವಾದ ಬೆಂಬಲ ಸಿಗುತ್ತಿತ್ತು. ಶಾಸನ ಮತ್ತು ಸಾಹಿತ್ಯದ ಆಕರಗಳು ತಿಳಿಸುವಂತೆ ಜನಸಾಮಾನ್ಯರು ತೊಂದರೆಗೆ ಒಳಪಟ್ಟಿರುವುದು ಎರಡು ವಿಷಯಗಳಿಗೆ. ತೆರಿಗೆ ಮತ್ತು ಬಿಟ್ಟಿ ಕಾರ್ಯಗಳಿಗೆ ಕೆಲವು ಸಂದರ್ಭಗಳಲ್ಲಿ ದೇಶೀಯ ಚರಿತ್ರೆಕಾರರು ತೆರಿಗೆ ಬಗೆಗೆ ವಿವರಗಳನ್ನು ನೀಡುವಾಗ ತೆರಿಗೆಯನ್ನು ವಿರೋಧಿಸಿರುವ, ಪ್ರತಿಭಟಿಸಿರುವ ಮುಂತಾದ ಸಂಗತಿಗಳನ್ನು ಮರೆಮಾಚುತ್ತಾರೆ.

ಇದಕ್ಕೆ ಉತ್ತಮ ಉದಾಹರಣೆಯೆಂದರೆ ಮೈಸೂರು ಒಡೆಯರ ಆಳ್ವಿಕೆಯ ಸಂದರ್ಭದಲ್ಲಿ ತೆರಿಗೆಯನ್ನು ವಿರೋಧಿಸಿರುವ ಕುರಿತು ವಸಾಹತುಶಾಹಿ ಚರಿತ್ರೆಕಾರರ ಮತ್ತು ರಾಷ್ಟ್ರೀಯವಾದಿ ಚರಿತ್ರೆಕಾರರ ಬರವಣಿಗೆಗಳು ಹೇಗೆ ಭಿನ್ನ ಮತ್ತು ಚರಿತ್ರೆಯನ್ನು ಮರೆಮಾಚುತ್ತವೆ ಎಂಬುದಕ್ಕೆ ಎಸ್. ಚಂದ್ರಶೇಖರ್ ಅವರ 'ಸಾಹಿತ್ಯ ಮತ್ತು ಚರಿತ್ರೆ' ಕೃತಿಯು ಒಳನೋಟಗಳನ್ನು ಚೆಲ್ಲುತ್ತದೆ.

### ೪.೪.೧ ಬಿಟ್ಟಿ

ಪ್ರಾಚೀನ ಭಾರತದಲ್ಲಿ 'ಬಿಟ್ಟಿ' (ಸಂಸ್ಕೃತ ಪದ ವಿಷ್ಟಿ) ದುಡಿಮೆಯು ಜನಸಾಮಾನ್ಯರಿಗೆ ಕಡ್ಡಾಯವಾಗಿತ್ತು. ಮನು ಮತ್ತು ಸ್ಮೃತಿಕಾರರು ಹೇಳುವಂತೆ ಕುಶಲಕರ್ಮಿಗಳು ಮತ್ತು ಶೂದ್ರರು ರಾಜ್ಯಕ್ಕೆ ತಿಂಗಳಲ್ಲಿ ಎರಡು ದಿನ ಪುಗಸಟ್ಟೆ ದುಡಿಯಬೇಕಾಗಿತ್ತು. ಯಾವುದೇ ಪ್ರತಿಫಲವನ್ನು ಅಪೇಕ್ಷಿಸುವಂತಿರಲಿಲ್ಲ. ಕ್ರಿ.ಶ.೧೨೧೩ರ ಧಾರವಾಡದ ಶಾಸನವು ತಿಳಿಸುವಂತೆ ಕುಶಲಕರ್ಮಿಗಳು ಮತ್ತು ಶೂದ್ರರು 'ಬಿಟ್ಟಿ'ಯಾಗಿ ದುಡಿದದ್ದನ್ನು ತಿಳಿಸುತ್ತದೆ. ರಾಧಾಕಮಲ್ ಮುಖರ್ಜಿಯವರು 'ಬಿಟ್ಟಿ' ಕ್ರಮವು ನೀರಾವರಿ ಕಾರ್ಯಗಳನ್ನು ಕೈಗೊಳ್ಳುವಾಗ ಒತ್ತಾಯಪೂರ್ವಕವಾಗಿ ಮಾಡಬೇಕಾಗಿತ್ತು[೪೫] ಎಂದು ಅಭಿಪ್ರಾಯಪಡುತ್ತಾರೆ. ತಂಜಾವೂರಿನ ಬೃಹದೇಶ್ವರ ದೇವಾಲಯವು ನಿರ್ಮಾಣವಾಗುವ ಹಂತದಲ್ಲಿ ಹೆಚ್ಚಿನದಾಗಿ ಒತ್ತಾಯಪೂರ್ವಕ ದುಡಿಮೆಗಳಿಂದ ನಿರ್ಮಾಣವಾಗಿರುವುದು ಎಂದು ಅಭಿಪ್ರಾಯಪಡಲಾಗಿದೆ. ಕರ್ನಾಟಕವು ಈ ವಿಚಾರದಲ್ಲಿ 'ಬಹುತೇಕ ನೀರಾವರಿ ಕೆರೆಗಳು ಮತ್ತು ದೇವಾಲಯಗಳ ನಿರ್ಮಾಣ ಕಾರ್ಯವು 'ಬಿಟ್ಟಿ' ಕ್ರಮಗಳಿಂದ[೪೬] ನಿರ್ಮಾಣಗೊಂಡಿದೆ ಎಂದರೆ ಆಶ್ಚರ್ಯಪಡಬೇಕಾಗಿಲ್ಲ.

ಜನಸಾಮಾನ್ಯರು ರಾಜ್ಯಕ್ಕೆ ಸಲ್ಲಿಸಬೇಕಾದ ತೆರಿಗೆಗಳಲ್ಲಿ 'ಬಿಟ್ಟಿ'ಯು ಒಂದು. ರಾಜನು ತನಗೆ ಇಷ್ಟಬಂದಾಗ ತನ್ನ ಅಧೀನದಲ್ಲಿರುವ ಯಾರನ್ನೇ ಆಗಲಿ ಪ್ರತಿಫಲವಿಲ್ಲದೇ ಕೆಲಸಮಾಡುವಂತೆ ಆಜ್ಞೆ ಮಾಡಬಹುದಾಗಿತ್ತು. ರಾಜನು ದೇಶದಲ್ಲಿ ಸಂಚರಿಸುತ್ತಿರುವಾಗ ಅವನ ಆನೆಕುದುರೆಗಳಿಗೆ ಹುಲ್ಲನ್ನು ಕೊಯ್ದುಹಾಕುವುದು, ಆಯುಧಾದಿಗಳನ್ನು ಹೊರುವುದು, ಗಾಯಗೊಂಡವರನ್ನು ಹೊತ್ತು ತರುವುದು- ಬಿಟ್ಟಿ ಕೆಲಸಗಳೇ. ಇವೆಲ್ಲವು ಪ್ರಾಚೀನ ಕಾಲದಲ್ಲಿ ನಡೆಯುತ್ತಿದ್ದ ಬಿಟ್ಟಿ ಕಾರ್ಯಗಳು.[೪೭] ಕೆಲವೊಮ್ಮೆ ಬಿಟ್ಟಿಯು 'ದಾಸ್ಯ'ಕ್ಕೆ(Slavery) ಇರುವ ಇನ್ನೊಂದು ಹೆಸರು. ಯುದ್ಧದಲ್ಲಿ ಸೋತವರನ್ನು ಆಳುಗಳಾಗಿ ನೇಮಿಸಿಕೊಳ್ಳುತ್ತಿದ್ದರು. ಸಂತೆಯಲ್ಲಿ ಎತ್ತು ಕುದುರೆಗಳ ಮಾರಾಟದ ಜೊತೆಗೆ 'ತೊತ್ತು'ಗಳ ಮಾರಾಟವೂ ನಡೆಯುತ್ತಿದ್ದಿತೆಂದು ಬಹು ಈಚಿನ ದಾಖಲೆಯೊಂದರಲ್ಲಿ ಹೇಳಿದೆ. ಅರ್ಥಶಾಸ್ತ್ರವು ವ್ಯವಸಾಯವನ್ನು ದಂಡ, ವಿಷ್ಟಿ, ತೆರಿಗೆಗಳಿಂದ ರಕ್ಷಿಸಬೇಕೆಂದು ಹೇಳಿದ್ದಿತು. ಪ್ರಾಚೀನ ಕರ್ನಾಟಕದಲ್ಲಿ 'ವಿಷ್ಟಿ' ಬಡಜನರಿಗೆ ಬಹು ಭಯಂಕರವಾಗಿ ಕಾಣುತ್ತಿದ್ದಿರಬೇಕು.[೪೮] ಕರಕುಶಲಕರ್ಮಿಗಳು ಒಂದು ದಿನ ರಾಜನಿಗಾಗಿ ಪುಗಸಟ್ಟೆ ದುಡಿಯಬೇಕು ಎಂಬ ಕಟ್ಟಳೆ ಮುಂದುವರಿಯಿತು. ವಿಷ್ಟಿ ಅಥವಾ ಬಲಾತ್ಕಾರದ ಶ್ರಮವನ್ನು ಕಮ್ಮಾರ, ರಥಕಾರ, ಕ್ಷೌರಿಕ, ಕುಂಬಾರ ಇವರ ಮೇಲೆ ಹೇರಬೇಕೆಂದು ಕ್ರಿ.ಶ.೬ನೇ ಶತಮಾನದ ಶಾಸನ ತಿಳಿಸುತ್ತದೆ. ಕ್ರಿ.ಶ.೪೪೬ರ ಒಂದು ಶಾಸನವು ದಕ್ಷಿಣ ಭಾರತದಲ್ಲಿ ದಲಿತರು ರಾಜನಿಗೆ ತೆರಿಗೆ ಮತ್ತು 'ಬಿಟ್ಟಿ'ಯಾಗಿ ದುಡಿಯುವ ಪದ್ಧತಿ[೪೯]

ಆರಂಭವಾಯಿತೆಂದು ತಿಳಿಸುತ್ತದೆ. ಶಾಸನಗಳಲ್ಲಿ ಉಕ್ತವಾಗಿರುವ 'ಕಮ್ಮಾರವಿಟ್ಟಿ' ಎಂಬ ಉಕ್ತಿಯು ಕಮ್ಮಾರರು ಸಹ 'ಬಿಟ್ಟಿ' ಕೆಲಸವನ್ನು ಮಾಡಬೇಕಾಗಿತ್ತು ಎಂದು ತಿಳಿದುಬರುತ್ತದೆ. ಈಗಾಗಲೇ ನಾವು ಹಿಂದೆ ಗಮನಿಸಿದಂತೆ ಕ್ರಿ.ಶ.೧೨೧೩ನೇ ಶಾಸನವು "ಶೂದ್ರರುಂ(ಕಾ) ರುಕರುಂ ಬಿಟ್ಟಿಬೆಸನಂ ಮಾಡುವುದು" ಎಂಬುದಾಗಿ ಶೂದ್ರರನ್ನು, ಪಂಚವೃತ್ತಿಕಾರರನ್ನು ಬಿಟ್ಟಿ ಕೆಲಸ ಮಾಡಬೇಕೆಂದು ಒತ್ತಾಯಿಸುತ್ತದೆ. ಸಾಮಾನ್ಯ ಜನರು ಎರಡು ವಿಚಾರಗಳಿಗೆ ಹೆದರುತ್ತಿದ್ದರು. ಒಂದು; ಸೈನಿಕರು ಹಾಗೂ ಬಿಟ್ಟಿ ಕೆಲಸಗಳಿಗೆ, ಎರಡನೆಯದಾಗಿ ತೆರಿಗೆಗಳಿಗೆ. ತೆರಿಗೆಯನ್ನು ಕಟ್ಟುವ ಬದಲು ಈ ರೀತಿ ಶೂದ್ರರು ಮತ್ತು ಕುಶಲಕರ್ಮಿಗಳು ಬಿಟ್ಟಿ ಶ್ರಮವನ್ನು ಮಾಡಬೇಕಾಗಿದ್ದಿತು ಎಂದು ಗುರುರಾಜಚಾರ್ಯರವರು[೯೦] ಅಭಿಪ್ರಾಯಪಡುತ್ತಾರೆ. ಬಿಟ್ಟಿಯು ತೆರಿಗೆಯ ಒಂದು ಭಾಗವಾಗಿದ್ದು, ಉಚಿತ ಸೇವೆಯನ್ನು ಪ್ರತಿನಿಧಿಸುತ್ತದೆ. ಪ್ರಭುತ್ವ ಮತ್ತು ಬಲಾಢ್ಯ ಸಮುದಾಯಗಳು ಸಂದರ್ಭಾನುಸಾರವಾಗಿ ಸಾಮಾನ್ಯ ಜನರಿಂದ ತುರ್ತು ಸಂದರ್ಭಗಳಲ್ಲಿ ಉಚಿತವಾಗಿ ಮತ್ತು ಬಲವಂತವಾಗಿ ಸೇವೆಯನ್ನು ಪಡೆಯುತ್ತಿತ್ತು. ಕರಕುಶಲಕರ್ಮಿಗಳು, ಕೃಷಿಯಲ್ಲಿನ ಜಾತಿಗಳು, ದಲಿತರು ಈ ಬಗೆಯ ಪ್ರಕ್ರಿಯೆಗೆ ಹೆಚ್ಚಿನದಾಗಿ ಒಳಪಡುತ್ತಿದ್ದರು ಎಂಬುದನ್ನು ಶಾಸನಗಳು ದಾಖಲಿಸಿವೆ.

### ೪.೪.೨ ತೆರಿಗೆ ನಿರಾಕರಣ ಸಂದರ್ಭಗಳು

ಪಂಚಾಳರ ವೃತ್ತಿಯ ಮೇಲೆ, ಅವರು ಉಪಯೋಗಿಸುತ್ತಿದ್ದ ಮೂಲವಸ್ತುವಿನ (ಕಚ್ಚಾವಸ್ತು) ಮೇಲೆ, ಅವರ ಉಪಕರಣಗಳ ಮೇಲೆ, ಉತ್ಪಾದಿತ ವಸ್ತುವಿನ ಮೇಲೆ, ಅವರು ಮಾಡುತ್ತಿದ್ದ ವ್ಯಾಪಾರ ಮೇಲೆ ಹಾಕುತ್ತಿದ್ದ ವಿವಿಧ ಸುಂಕಗಳ ಬಗ್ಗೆ ಅನೇಕ ಸಂದರ್ಭಗಳಲ್ಲಿ ಪ್ರತಿಭಟಿಸಿದ ವಿವರಗಳು ಕಂಡುಬರುತ್ತವೆ. ಈ ಬಗ್ಗೆ ೧೭ನೇ ಶತಮಾನದ 'ಕಂಚಿಪುರಾಣ' ಸಾಹಿತ್ಯ ಕೃತಿಯು ಗಮನ ಸೆಳೆಯುತ್ತದೆ. ತೆರಿಗೆಯನ್ನು ಕೊಡಲು ನಿರಾಕರಿಸಿದ ಪಂಚಾಳದ ಕಂಚುಗಾರರು ಅರಸನ ಕೋಪಕ್ಕೆ ತುತ್ತಾಗಿ ಮರಣದಂಡನೆಗೆ ಒಳಗಾಗುತ್ತಾರೆ. ಅದೇ ರೀತಿಯಾಗಿ 'ಧರ್ಮಪಾಲವಿಜಯ' ಎಂಬ ತೆಲುಗು ಕೃತಿಯಲ್ಲಿ ಸಹ ತೆರಿಗೆ ಕೊಡಲು ನಿರಾಕರಿಸದ ಪಾಂಚಾಳರನ್ನು ನೆಲದಲ್ಲಿ ಹೂಳಿ ತಲೆಗಳನ್ನು ಕತ್ತರಿಸುತ್ತಾನೆ[೯೧] ಎಂಬ ವಿವರಗಳು ಆ ಕಾಲದ ಸಮಾಜವು 'ಬಿಟ್ಟಿ'ಯಿಂದ ತಪ್ಪಿಸಿಕೊಳ್ಳಲು ಸಾಧ್ಯವಿರಲಿಲ್ಲ ಎಂಬುದನ್ನು ತಿಳಿಸುತ್ತದೆ. ಸಮಾಜದ ಎಲ್ಲಾ ವರ್ಗದವರು ನಿಗದಿಗೊಳಿಸಿದ ತೆರಿಗೆಗಳನ್ನು ಕೊಡಬೇಕಾಗಿತ್ತು. ಊಳಿಗದವರು ಈ ತೆರಿಗೆಯನ್ನು ಕಟ್ಟಲೇಬೇಕಾಗಿತ್ತು. ಅಥವಾ ದುಡಿಯಬೇಕಾಗಿತ್ತು. ಚಾಲುಕ್ಯ ಅರಸ ಆಹಮಲ್ಲದೇವನ ಕಾಲದ ಒಂದು ಶಾಸನವು ಮಹಾರಾಜರು ಗಾವುಂಡರು, ಪಂಚಮಠಗಳಿಗೆ 'ಬಿಟ್ಟಿ'ಯಿಂದ ವಿನಾಯಿತಿ ನೀಡಿದ ಮಾಹಿತಿ ನೀಡುತ್ತದೆ.[೯೨] ಅಂದರೆ ಮಠಮಾನ್ಯಗಳು ಕೂಡ ಈ ವ್ಯವಸ್ಥೆಯಿಂದ ಮುಕ್ತವಾಗಿರಲಿಲ್ಲ. ಅದೇ ರೀತಿಯಾಗಿ ಮತ್ತೊಂದು ಶಾಸನವು ನಾಯಿಂದರ ಮೇಲೆ ಹಾಕುತ್ತಿದ್ದ ತೆರೆ, ಕಾಣಿಕೆ, ಬಿಟ್ಟಿ ತೆರಿಗೆಗಳಿಂದ ವಿನಾಯಿತಿ ನೀಡಿದ ಬಗೆಗೆ ಮಾಹಿತಿ[೯೩] ನೀಡುತ್ತದೆ. ಕ್ರಿ.ಶ.೧೫೫೦ ಶಾಸನವು ದೇವಾಲಯ ಪರಿಚಾರಕ ವರ್ಗದವರಾದ ಡೊಂಬರು, ಇತರೆ ಕೆಳಜಾತಿಗಳ ಮೇಲೆ ಹಾಕುತ್ತಿದ್ದ ಬಿಟ್ಟಿ, ಬಿರಾಡ, ತೆರಿಗೆಯಿಂದ ಮುಕ್ತಗೊಳಿಸಿರುವುದನ್ನು[೯೪] ವ್ಯಕ್ತಪಡಿಸುತ್ತದೆ. ಈ ಮೇಲಿನ ಅಂಶಗಳನ್ನು ಗಮನಿಸಿದಾಗ ರಾಜ್ಯವು ನಿಗದಿಪಡಿಸಿದ, ಅವಶ್ಯಕತೆ ಇರುವಾಗ 'ಬಿಟ್ಟಿ' ಕೆಲಸಗಳನ್ನು ಮಾಡಿಸಿಕೊಳ್ಳುತ್ತಿತ್ತು. ಇದರಿಂದ

ಬಹುತೇಕ ಜನಸಮುದಾಯಗಳು ಕೆಲವು ಸಂದರ್ಭಗಳಲ್ಲಿ ಅನಿವಾರ್ಯವಾಗಿ ಪ್ರತಿಭಟಿಸಿ, ಮತ್ತೆ ರಾಜ್ಯದೊಂದಿಗೆ ಹೊಂದಾಣಿಕೆ ಮಾಡಿಕೊಳ್ಳುತ್ತಿದ್ದವು. ರಾಜ್ಯವು ಅಧಿಕ ತೆರಿಗೆಗಳಿಂದ ನಲುಗುತ್ತಿದ್ದ ಸಮುದಾಯಗಳಿಗೆ ವಿನಾಯಿತಿ ನೀಡಿದ್ದನ್ನು ಶಾಸನ ಆಧಾರಸಮೇತ ಗಮನಿಸಬಹುದಾಗಿದೆ. ಬಿಟ್ಟಿ ವಿನಾಯಿತಿಯು ಮಠಮಾನ್ಯಗಳಿಗೂ ಕೂಡ ಲಭ್ಯವಾಗುತ್ತಿತ್ತು. ಮಧ್ಯಕಾಲೀನ ಸಮಾಜದಲ್ಲಿ ಈ ರೀತಿಯ ತೆರಿಗೆಗಳು ಅಧಿಕವಾದಾಗ ಜನಸಾಮಾನ್ಯರು ನಲುಗಿದ ವಿವರಗಳು ಸಿಗುತ್ತವೆ. ಮಾಲೀಕರ ಹೊಲಗಳಲ್ಲಿ ಕೆಲಸ ಮಾಡುತ್ತ ಅದಕ್ಕೆ ಸಂವಾದಿಯಾಗಿ ತೆರಿಗೆಯನ್ನು ಪಾವತಿಸಿರುವ ಘಟನೆಗಳು ಚರಿತ್ರೆಯಲ್ಲಿ ಕಡಿಮೆಯಿಲ್ಲ. ಆದುದರಿಂದ ವೃತ್ತಿ ತೆರಿಗೆ, ಜಾತಿಗಳ ಮೇಲೆ ಹಾಕುತ್ತಿದ್ದ ತೆರಿಗೆ, ಕೃಷಿ ಮತ್ತು ಕೃಷಿಯೇತರರ ತೆರಿಗೆಗಳು ಜನಸಾಮಾನ್ಯರಿಗೆ ಭಾರವಾಗಿದ್ದವು ಎಂಬ ತೀರ್ಮಾನಕ್ಕೆ ಬರಬಹುದಾಗಿದೆ. ಅವರಿಂದ ಪ್ರತಿಭಟನೆಗಳು ವ್ಯಕ್ತವಾದಾಗ ರಾಜ್ಯವೇ ಮುಂದಾಗಿ ಜನಸಮುದಾಯಗಳಿಗೆ ತೆರಿಗೆಯಿಂದ ವಿನಾಯಿತಿ ನೀಡಿದ ವಿವರಗಳು ಸಹ ಸಿಗುತ್ತವೆ.

ಹೊಲೆಯರ ಮೇಲೆ ಹಾಕುತ್ತಿದ್ದ ತೆರಿಗೆ 'ಹೊಲೆದೆರೆ'ಯಾಗಿತ್ತು ಎಂದು ತಿಳಿದುಬರುತ್ತದೆ.[೯೫] ಹೊಲೆದೆರೆಯನ್ನು 'ಪೊಲೆದೆರೆ' ಎಂದು ಸಹ ಕರೆಯಲಾಗುತ್ತಿತ್ತು. ಅದನ್ನು ಚರ್ಮಕಾರರ ಮೇಲೆ ಹಾಕುತ್ತಿದ್ದಂತೆ ಕಾಣುತ್ತದೆ. ಈ ರೀತಿಯ ತೆರಿಗೆಗಳಿಂದ ಸಾಮಾನ್ಯ ಜನತೆ ಅಲ್ಲಲ್ಲಿ ಪ್ರತಿಭಟಿಸಿರುವ ವಿವರಗಳು ಸಿಗುತ್ತವೆ. ಶಾಸನಗಳಲ್ಲಿ "ಈ ಹೊಲದ ತೆರಿಗೆಗಳನ್ನು ತೆಗೆದು ಹಾಕಬೇಕು. ಇಂತಿಂತಹ ತೆರಿಗೆಗಳನ್ನು ಕೇಳಿದವರು ಚಂಡಾಲರು"[೯೬] ಎಂದು ಉಲ್ಲೇಖಿಸಲಾಗಿದೆ. ಅಂದರೆ ರೈತರು ಅಧಿಕ ತೆರಿಗೆಗಳಿಂದ ರೋಸಿಹೋಗಿದ್ದರು, ಅನಿವಾರ್ಯವಾಗಿ ಪ್ರತಿಭಟಿಸಬೇಕಾದ ಸನ್ನಿವೇಶಗಳನ್ನು ಶಾಸನಗಳಲ್ಲಿ ಕಾಣಬಹುದು. ಮಹಾಮಂಡಳಿಕ ಭೂತಾರ್ಯನೆಂಬ ಅಧಿಕಾರಿಯು ಧಾರವಾಡ ಜಿಲ್ಲೆಯ ರೋಣಕ್ಕೆ ಬಂದು 'ಭತಾಯ' (ಭತ್ತದ ತೆರಿಗೆ) ಕೊಡಬೇಕೆಂದು ಜನತೆಯನ್ನು ಹಿಂಸಿಸಿದಾಗ ರೋಣದ ಪಂಪಯ್ಯನೆಂಬುವನು ಅಂದಿನ ಮಹಾರಾಜರ ಅಪ್ಪಣೆಯನ್ನು ಪಡೆದು ಅಧಿಕಾರಿಯ ವಿರುದ್ಧ ಹೋರಾಡಿ ಮಡಿದ ಸಂಗತಿ[೯೭] ತಿಳಿದುಬರುತ್ತದೆ.

ವಿಜಯನಗರ ಸಾಮ್ರಾಜ್ಯವು ಮೂರು ರೀತಿಯಲ್ಲಿ ಭೂಕಂದಾಯವನ್ನು ಸಂಗ್ರಹಿಸುತ್ತಿತ್ತು. ಮೊದಲನೆಯದಾಗಿ; ನೇರವಾಗಿ ರೈತರಿಂದ ಸಂಗ್ರಹ, ಎರಡನೆಯದಾಗಿ ಮಧ್ಯವರ್ತಿಗಳಿಂದ ಮತ್ತು ಒಟ್ಟಾರೆ ಹಳ್ಳಿಯಿಂದ. ಈ ಅರಸರು ಭೂಕಂದಾಯ ಕುರಿತಂತೆ ಹಿಂದಿನವರ ನಿಯಮಗಳನ್ನೆ ಪಾಲಿಸಿದರು ಎಂದು ತಿಳಿದುಬರುತ್ತದೆ.[೯೮] ಕೆಲವೊಂದು ಸಂದರ್ಭದಲ್ಲಿ ತೆರಿಗೆಯ ವಿರುದ್ಧ ಪ್ರತಿಭಟಿಸಿದ, ಬೇಸತ್ತವರ ವಿವರಗಳು ಲಭ್ಯವಾಗಿವೆ. "ಬಳ್ಳಾರಿ ಜಿಲ್ಲೆಯ ಕೌತಾಳು ಎಂಬ ಹಳ್ಳಿಯ ಹನುಮಾನ್ ದೇವಾಲಯದಲ್ಲಿ ಕಂಡುಬಂದ ವಿಜಯನಗರ ಕಾಲದ ಶಾಸನವೊಂದರ ವಿಷಯವು ಸ್ವಾರಸ್ಯಕರವಾಗಿದೆ. ರಾಜನು ಅವರಿಂದ ವಿಪರೀತ ತೆರಿಗೆ ವಸೂಲಿ ಮಾಡಿದುದರಿಂದ ಅನೇಕ ರೈತರು ಒಟ್ಟಾಗಿ ತುಂಗಭದ್ರೆಯನ್ನು ದಾಟಿ ವಲಸೆ ಹೋದರು. ಆಗ ರಾಜನು ಅವರು ಹಿಂತಿರುಗಿ ಬಂದು ಮತ್ತು ತಮ್ಮ ಜಮೀನುಗಳನ್ನು ಸಾಗುವಳಿ ಮಾಡಿದ್ದು ಆದರೆ ಅವರನ್ನು ಶೋಷಕ ಕ್ರಮಗಳಿಂದ ರಕ್ಷಿಸುವುದಾಗಿ ಭರವಸೆ ಕೊಟ್ಟನು."[೯೯] ಈಗಾಗಲೇ ಗಮನಿಸಿದಂತೆ ನಗರ, ಗ್ರಾಮೀಣ ಪರಿಸರದ ಮೇಲೆ

ಹಲವಾರು ತೆರಿಗೆಗಳು ಅನ್ವಯವಾಗುತ್ತಿದ್ದವು ಎನ್ನುವುದನ್ನು ನೋಡಬಹುದು. ಕುಂಬಾರರು, ಬಡಗಿಗಳು ಅಗಸರು, ನೇಕಾರರು, ಅಕ್ಕಸಾಲಿಗರು, ಕಮ್ಮಾರರು, ನಾಯಿಂದರು ತೆರಿಗೆಗಳನ್ನು ಕೊಟ್ಟು, ಭೂಮಿಯನ್ನು ಹೊಂದಿರುತ್ತಿದ್ದರೆಂದು[೧೦೦] ತಿಳಿದುಬರುತ್ತದೆ. ಗ್ರಾಮದ ಹಂತದಲ್ಲಿ ಇಡೀ ಸಮಾಜದ ಉಳುವಿಗೆ ಆಧಾರವಾದ ಕೃಷಿ ಉತ್ಪಾದನೆಯನ್ನು ಭೂಮಿಕಾರ, ಒಕ್ಕಲು, ಬೆಸೆವೊಕ್ಕಲು, ಹೊಲೆಯ ಮತ್ತು ತೊಟ್ಟು(ಕೃಷಿ ಜೀತದಾಳು) ಇವರು ನಿರ್ವಹಿಸುತ್ತಿದ್ದರು. ಹಳ್ಳಿಯಲ್ಲಿದ್ದ ಈ ಸಂಬಂಧವಾದ ಇಬ್ಬರು ಅಧಿಕಾರಿಗಳೆಂದರೆ ಗೌಡ ಅಥವಾ ಹೆಗ್ಗಡೆ ಮತ್ತು ಸೇನಬೋವ ಅಥವಾ ಲೆಕ್ಕಿಗ. ಇವರು ಕೃಷಿಕ ವರ್ಗದ ವಕ್ತಾರರು. ಬಹುಶಃ ಆ ಪ್ರದೇಶದ ಮುಖ್ಯ ಭೂಮಾಲೀಕರು ಕೂಡಾ ಹೌದು. ರಾಜವಂಶವಾಗಲಿ ಅಥವಾ ಆಳುವ ಚಕ್ರವರ್ತಿಯಾಗಲಿ ಬದಲಾದರೂ ಗ್ರಾಮ ಜೀವನದ ಈ ಒಂದು ಲಯಬದ್ಧತೆ ಕದಡುತ್ತಿರಲಿಲ್ಲ. ಆ ಸಂದರ್ಭದಲ್ಲಿ ಕೆರೆಕೂಡಿಗೆ, ಉಂಬಳಿ, ಕಟ್ಟು ಕೂಡಿಗೆ ಮತ್ತು ಬಿಟ್ಟವಟ್ಟ[೧೦೧] ಎಂಬುವವು ಭೂದಾನಗಳಾಗಿದ್ದವು.

ವಿಜಯನಗರದ ತರುವಾಯ ಇಕ್ಕೇರಿ ಆಡಳಿತಾವಧಿಯ ವಿಷಯಕ್ಕೆ ಬಂದಾಗ ಬೇಸಾಯದ ಬದಲಾಗಿ ವೈಯಕ್ತಿಕ ಬೇಸಾಯ, ಗೇಣಿ, ಭೂ ಒಡೆತನ, ಕ್ರಯದಾನ, ಬಿಟ್ಟಿ, ಬೇಗಾರ ವಿಸ್ತರಿಸಿಕೊಂಡವು. ಆದರೆ ಪ್ರವಾಸಿಗರಾದ ಡೆಲ್ಲಾವೆಲ್ಲ ಮತ್ತು ಪೀಟರ್‌ಮಂಡಿಯವರ ಪ್ರಕಾರ ಕೃಷಿಕಾರ ಮತ್ತು ಜನಸಾಮಾನ್ಯರ ಬದುಕು ಅತ್ಯಂತ ನಿಕೃಷ್ಟವಾಗಿತ್ತು ಎಂದು ಅಭಿಪ್ರಾಯಪಡುತ್ತಾರೆ. ಈ ಅವಧಿಯಲ್ಲಿ ಮಾಪಿಳ್ಳೆ, ಬ್ಯಾರಿ, ನವಾಯತ್(ಮುಸ್ಲಿಂರು) ಮತ್ತು ಜೈನ ಸೆಟ್ಟಿಗಳು ವ್ಯಾಪಾರ ನಡೆಸುತ್ತಿದ್ದುದಲ್ಲದೆ ಪೋರ್ಚುಗೀಸರಿಂದ ಪೈಪೋಟಿ ಉಂಟಾಯಿತು. ಈ ಅವಧಿಯಲ್ಲಿ ಜೀತ ಪದ್ಧತಿಗಳು, ಬಿಟ್ಟಿ, ಬೇಗಾರ ಕ್ರಮಗಳು, ಬಾಲ್ಯವಿವಾಹ, ಸ್ತ್ರೀಯರ ವ್ಯಾಪಾರ, ವಿಧವೆಯರ ದುಃಸ್ಥಿತಿಗಳು ಹಾಗೆಯೇ ಮುಂದುವರಿದವು.[೧೦೨] ಅದೇ ರೀತಿಯಾಗಿ ಬಿಟ್ಟಿ ಚಾಕ್ರಿ ಕುರಿತು ಕೊಡಗಿನ ವಿಚಾರಕ್ಕೆ ಬಂದಾಗ ಕೋಟೆಗಳಲ್ಲಿ, ಅರಮನೆಗಳಲ್ಲಿ ಪಣ್ಯ ಅಂದರೆ ರಾಜರಿಗೆ ಸೇರಿದ ಭೂಮಿ ಮತ್ತು ತೋಟಗಳಲ್ಲಿ 'ಬಿಟ್ಟಿ' ಎಂದರೆ ಕೂಲಿಯಿಲ್ಲದೆ ಕೆಲಸವನ್ನು ಮಾಡಬೇಕಾಗಿತ್ತು. ಈ ಬಿಟ್ಟಿ ಕೆಲಸವು ಬಹಳ ಕಠಿಣವಾಗಿದ್ದು ಜನತೆ ಇದರಿಂದ ರಾಜನಲ್ಲಿ ಅತೃಪ್ತಿವುಳ್ಳವರಾಗಿದ್ದರು. ಈ ಪ್ರದೇಶದಲ್ಲಿ ಜಮ್ಮ ರೈತರು ಅತ್ಯಂತ ಕಡಿಮೆ ಕಂದಾಯಕ್ಕಾಗಿ ಕಠಿಣವಾದ ದೈಹಿಕ ಶ್ರಮದ ಕೆಲಸಗಳನ್ನು ನಿರ್ವಹಿಸಬೇಕಾಗಿತ್ತು. ಆದರೆ ಬ್ರಿಟಿಷರ ಕಾಲದಲ್ಲಿ ರೈತರನ್ನು ಗೌರವಪೂರ್ವಕವಾಗಿ ಸಮಾನತೆಯಿಂದ ನಡೆಸಿಕೊಳ್ಳಲಾಗುತ್ತಿತ್ತೆಂದು ಮೊಗ್ಲಿಂಗ್[೧೦೩] ತಿಳಿಸುತ್ತಾನೆ. ತೆರಿಗೆ ನಿರಾಕರಣೆ ಸಂದರ್ಭಗಳನ್ನು ಕುರಿತು ಚರ್ಚಿಸುವಾಗ ಎರಡು ರೀತಿಯ ಆಯಾಮಗಳನ್ನು ಅರ್ಥೈಸಿಕೊಳ್ಳಬಹುದಾಗಿದೆ. ಪ್ರಭುತ್ವ ಅಥವಾ ಸರ್ಕಾರದ ವಿರುದ್ಧ ಜನಸಾಮಾನ್ಯರು ಅಧಿಕ ತೆರಿಗೆಯನ್ನು ಪಾವತಿಸದೆ ವಿರೋಧಿಸಿದ ಸಂಗತಿಗಳು ಇವೆ. ಈ ಬಗೆಯ ವಿರೋಧಿಸಿದ ಅಥವಾ ಪ್ರತಿಭಟಿಸಿದ ರೈತರನ್ನು ಪ್ರಭುತ್ವವು ಗಮನಿಸಿ ಅವರನ್ನು ತೆರಿಗೆಯಿಂದ ವಿಮುಕ್ತಿಗೊಳಿಸಿರುವ ವಿವರಗಳು ಸಿಗುತ್ತವೆ. ವಿಜಯನಗರ ಕಾಲದಲ್ಲಿ ತೆರಿಗೆಯಿಂದ ಮುಕ್ತಿಗೊಳಿಸಿದ ಉದಾಹರಣೆಗಳು ಹೆಚ್ಚಿನದಾಗಿ ಗೋಚರಿಸುತ್ತವೆ. ಇದರಿಂದ ಅಂದು ಜನಸಾಮಾನ್ಯರ ಮೇಲೆ ತೆರಿಗೆಯ ಹೊರೆ ಅಧಿಕವಾಗಿತ್ತು ಎಂಬುದು ಸ್ಪಷ್ಟ.

## ೪.೫ ಭೂಮಾಲೀಕರು ಮತ್ತು ಕೃಷಿಕಾರ್ಮಿಕರು

ಇವರಿಬ್ಬರ ನಡುವಿನ ಸಂಬಂಧಗಳನ್ನು ಅರ್ಥಮಾಡಿಕೊಳ್ಳಲು ಚರಿತ್ರೆಯಲ್ಲಿ ಆಧಾರಗಳು ಲಭ್ಯವಿವೆ. ಹಿಡುವಳಿದಾರರು ಮಾಲೀಕರ ಹತ್ತಿರ ಕೆಲಸ ನಿರ್ವಹಿಸುವಾಗ ಇವರನ್ನು ಎರಡು ಆಯಾಮಗಳಲ್ಲಿ ಗುರುತಿಸಬಹುದು. ಒಂದು; ಕೂಲಿ ಕಾರ್ಮಿಕರು, ಎರಡನೆಯದಾಗಿ ಜೀತದ ಆಳು ಅಥವಾ ಗುಲಾಮ. ಎರಡನೆಯ ಆಯಾಮದಲ್ಲಿ ಮತ್ತೆ ಸೂಕ್ಷ್ಮ ಭೇದಗಳಿವೆ. ಕೃಷಿ ವ್ಯವಸ್ಥೆಯಲ್ಲಿ ಕೂಲಿಕಾರ್ಮಿಕರು ದುಡಿಯುವುದು ಇಂದಿನ ಪದ್ಧತಿಯೇನಲ್ಲ. ಇದು ಪ್ರಾಚೀನ ಕಾಲದಿಂದಲೂ ನಡೆದುಕೊಂಡು ಬಂದಿರುವ ಪದ್ಧತಿ. ರೈತರು, ಕೂಲಿಕಾರ್ಮಿಕರು, ಕೆಳಸಮುದಾಯಗಳು ಜೀವನ ನಿರ್ವಹಣೆಗಾಗಿ ಮಾಲೀಕರನ್ನು ಅವಲಂಬಿಸಿರುವಂತಹ ಪದ್ಧತಿ ಹಿಂದೆ ಇತ್ತು. ಇಂದಿಗೂ ಬದಲಾವಣೆಯೇನು ಕಂಡುಬರುವುದಿಲ್ಲ. ಇವರಲ್ಲಿ ಒಂದು ದುಡಿಯುವ ವರ್ಗವಾದರೆ, ಇನ್ನೊಂದು ದುಡಿಸುವ ವರ್ಗ ಹಾಗೂ ಲಾಭವನ್ನು ಗಳಿಸುವ ವರ್ಗವಾಗಿತ್ತು. ಇವೆರಡು ಪರಸ್ಪರ ಸಂಬಂಧ ಹೊಂದಿದ್ದರೂ ವಿರುದ್ಧ ಪ್ರಕ್ರಿಯೆಗಳು. ಈ ಕುರಿತು ಅಖಿಲ ಭಾರತ ಮಟ್ಟದಲ್ಲಿ ಡಿ.ಡಿ.ಕೊಸಾಂಬಿ, ಆರ್.ಎಸ್.ಶರ್ಮ, ರೊಮಿಲಾ ಥಾಪರ್ ಮುಂತಾದ ಚರಿತ್ರೆಕಾರರು ಅಧ್ಯಯನ ಮಾಡಿದ್ದಾರೆ. ಈ ಕುರಿತಂತೆ ಕರ್ನಾಟಕವು ಮೇಲಿನ ವಿಚಾರಗಳಿಗೆ ವ್ಯತಿರಿಕ್ತವಾಗಿರಲಿಲ್ಲ. ಹಲವಾರು ಸಮಸ್ಯೆಗಳ, ತಿಕ್ಕಾಟಗಳ, ಜಾತಿ ಸಂಘರ್ಷಗಳ ಮಧ್ಯೆ ಹಲವು ಸಮುದಾಯಗಳು ಜೀವನ ನಡೆಸಬೇಕಾಗಿದ್ದಿತು. ಸಮಾಜದ ಅತ್ಯಂತ ಕೆಳಗಿನ ಸ್ತರದಲ್ಲಿರುವವರು ಅವಮಾನ, ಅನ್ಯಾಯ, ಶೋಷಣೆಗಳ ವಿರುದ್ಧ ಹೋರಾಡಬೇಕಿತ್ತು. ಊಳಿಗಮಾನ್ಯ ಪದ್ಧತಿ, ಜೀತ ಪದ್ಧತಿ, ಗುಲಾಮ ಪದ್ಧತಿ, ದೈಹಿಕ ದುಡಿಮೆ, ಬಹಿಷ್ಕಾರ ಮುಂತಾದ ಪದ್ಧತಿಗಳು ಕೆಳಜಾತಿಗಳಿಗೆ, ರೈತರಿಗೆ, ಕೂಲಿಕಾರರಿಗೆ, ಬುಡಕಟ್ಟುಗಳಿಗೆ ಮತ್ತು ದಲಿತರಿಗೆ ಕಂಟಕಪ್ರಾಯವಾಗಿದ್ದವು.

ಬಲಾಢ್ಯ ಜಾತಿಗಳು ಕೆಳಸಮುದಾಯಗಳನ್ನು ಬಲವಂತ ದುಡಿಮೆ ಮುಖಾಂತರ ದುಡಿಸಿಕೊಳ್ಳುತ್ತಾ ಆರ್ಥಿಕವಾಗಿ ಸದೃಢವಾಗುತ್ತಿರುವ ಪ್ರಕ್ರಿಯೆಗಳು ಅಂದು ಇಂದಿಗೂ ಯಾವ ವ್ಯತ್ಯಾಸವಿಲ್ಲದಂತೆ ಮುಂದುವರೆಯುತ್ತಿವೆ. ಚರಿತ್ರೆಯಲ್ಲಿ ಪ್ರಧಾನ ರಾಜವಂಶಗಳು, ಬಲಾಢ್ಯ ಸಮುದಾಯಗಳು, ಸಾಮಂತ ಅರಸರು ಪಾಳೆಯಗಾರರು ಹೀಗೆ ಸಮಾಜದ ಮುಖ್ಯ ನೆಲೆಯಲ್ಲಿ ಆಳ್ವಿಕೆ ನಡೆಸಿದ್ದಾರೆ. ಆರ್ಥಿಕ ಪರಿಸ್ಥಿತಿಯಿಂದ ಚೇತರಿಸಿಕೊಳ್ಳಲಾಗದ, ನಾಗರಿಕ ಪ್ರಪಂಚದಿಂದ ಬಹುದೂರವಿರುವ ಬುಡಕಟ್ಟು ಮತ್ತು ದಲಿತ ಸಮುದಾಯಗಳು ಇನ್ನೊಬ್ಬರನ್ನು ಅವಲಂಬಿಸಿಯೇ ಜೀವನ ನಡೆಸುವಂತ ಪರಿಸ್ಥಿತಿಯನ್ನು ಕಾಣುತ್ತೇವೆ. ಪ್ರಾಚೀನ ಕರ್ನಾಟಕದ ಕಾಲಘಟ್ಟದಿಂದ ಆರಂಭಿಕ ಮಧ್ಯಕಾಲೀನ ಕಾಲಘಟ್ಟಕ್ಕೆ ಬಂದಾಗ ಭೂಮಾಲೀಕರು ಪ್ರವರ್ಧಮಾನಕ್ಕೆ ಬಂದ ಕಾಲವದು. ಭೂಮಿ ರಾಜ್ಯದ ಸಂಪತ್ತು. ಇದು ರಾಜರ, ಸಾಮಂತರ, ಭೂಮಾಲೀಕರ ಹಿಡಿತದಲ್ಲಿದ್ದಿತು ಎಂದು ತಿಳಿಯಬಹುದು. ಚರಿತ್ರೆಕಾರರು ಈ ಕುರಿತಂತೆ ಸಾಕಷ್ಟು ಅಧ್ಯಯನಗಳನ್ನು ನಡೆಸಿದ್ದಾರೆ. ಭೂಮಾಲೀಕರು ಭೂ ಒಡೆಯರಾಗಿದ್ದರು. ಭೂಮಿಯನ್ನು ಕೃಷಿ ಮಾಡುವುದಕ್ಕೆ ಕೃಷಿಕಾರ್ಮಿಕರ ಅಗತ್ಯತೆ ಕೂಡ ಹೆಚ್ಚಾಗತೊಡಗಿತು. ಈ ಕಾರಣದಿಂದ ರಾಜ್ಯದ ಉತ್ಪಾದನೆ ಒಂದು ಕಡೆ ಹೆಚ್ಚಾದರೆ, ಮತ್ತೊಂದು ಆಯಾಮದಲ್ಲಿ ಜೀತ ಪದ್ಧತಿ, ಗುಲಾಮ ಪದ್ಧತಿ, ಬಲವಂತ ದುಡಿಮೆ ಪ್ರಬಲವಾಗತೊಡಗಿದವು. ಪರೋಕ್ಷವಾಗಿ ಸಮಾಜದ ಅನಿಷ್ಟ

ಪದ್ಧತಿಗಳು ಬೆಳೆಯಲು ಸಹಕಾರಿಯಾದವು. ಉತ್ಪಾದನಾ ಅಂಗಗಳಲ್ಲಿ ಆದಂತಹ ಈ ರೀತಿಯ ಬದಲಾವಣೆ ಇತರೆ ಸಮುದಾಯಗಳಿಗೆ ಪೂರಕವಾಗತೊಡಗಿದವು.

### ೪.೫.೧ ಭೂಮಾಲೀಕರು ಮತ್ತು ದಲಿತರು

ಶ್ರೀಮಂತವರ್ಗ, ಮಧ್ಯಮವರ್ಗ, ಕೆಳವರ್ಗ ಮತ್ತು ಅತಿ ಕೆಳವರ್ಗದ ಸಮುದಾಯಗಳು ಸಮಾಜದಲ್ಲಿ ಅಸ್ತಿತ್ವದಲ್ಲಿದ್ದವು ಎನ್ನುವುದು ಸತ್ಯ. ಬಲಿಷ್ಠ ಶಕ್ತಿಗಳು ದಲಿತ ಸಮುದಾಯಗಳನ್ನು ಬಳಸಿಕೊಂಡು ಹಿಂಡಿ ಹಿಪ್ಪೆ ಮಾಡಿದವು ಎಂದರೆ ತಪ್ಪಾಗಲಾರದು. ಅದರಿಂದ ನಿರೀಕ್ಷಿಸಿದಕ್ಕಿಂತ ಹೆಚ್ಚಿನ ಪಾಲು ಲಾಭ ಪಡೆದುಕೊಂಡರೂ ಒಳಿತಿಗಾಗಿ, ದೈನಂದಿನ ನಿರ್ವಹಣೆಗಾಗಿ ಯಾವ ಅನುಕೂಲವನ್ನು ಕಲ್ಪಿಸಲಿಲ್ಲ. ರಾಜ್ಯದ ಆಡಳಿತವು ಈ ವಿಚಾರದಲ್ಲಿ ಗಮನಾರ್ಹ ಬದಲಾವಣೆಗಳನ್ನು ತರಲಿಲ್ಲ. ರಾಜ್ಯಕ್ಕೆ ಅಪೂರ್ವವಾದ ಕೊಡುಗೆ ಸಲ್ಲಿಸಿದರೂ ಈ ಸಮುದಾಯಗಳು ರಾಜ್ಯದಿಂದ ಏನೂ ನಿರೀಕ್ಷಿಸುವಂತಿರಲಿಲ್ಲ. ಕೃಷಿ ಕೂಲಿಕಾರರಾಗಿ ಬಡತನದ ಬೇಗೆಯನ್ನು ಅನುಭವಿಸುತ್ತ ಕುಟುಂಬದ ನಿರ್ವಹಣೆಗೆ ದುಡಿಮೆ ಅನಿವಾರ್ಯ ಮತ್ತು ಅವಶ್ಯಕ ಕೂಡಾ ಹೌದು. ಭೂಮಾಲೀಕರು ದುಡಿಸುವ ವರ್ಗವಾದರೆ, ಕೃಷಿಕಾರ್ಮಿಕರು ದುಡಿಯುವ ವರ್ಗವಾಗಿತ್ತು. ಇವರಿಬ್ಬರ ಮಧ್ಯೆ ಸಂಬಂಧಗಳು ಸೌಹಾರ್ದಯುತವಾಗಿರಲಿಲ್ಲ. ಭೂಮಿಯ ವಿಚಾರವಾಗಿ ಬಹುತೇಕ ಚರಿತ್ರೆಕಾರರು ಅಧ್ಯಯನ ನಡೆಸಿದ್ದಾರೆ. ರಾಜನಿಗೆ ಸೇರಿದ ಭೂಮಿ, ಖಾಸಗಿ ಒಡೆತನ, ಸಾಮುದಾಯಿಕ ಭೂಮಿ ಹಾಗೂ ದಾನದ ರೂಪದಲ್ಲಿ ಪಡೆದ ಭೂಮಿ ಇತ್ಯಾದಿ ಮಾದರಿಗಳಲ್ಲಿ ಹಂಚಿಹೋಗಿತ್ತು. ಹೆಚ್ಚು ಭೂಮಿಯನ್ನು ಹೊಂದುವುದೇ ಒಂದು ಪ್ರತಿಷ್ಠೆಯ ಪ್ರಶ್ನೆಯಾಗಿತ್ತು. ಪ್ರಾರಂಭಿಕ ಮಧ್ಯಕಾಲದಿಂದ ವಿಜಯನಗರದವರೆಗಿನ ಹಂತವು ಕರ್ನಾಟಕ ಚರಿತ್ರೆಯಲ್ಲಿ ಮಹತ್ವಪೂರ್ಣ ಘಟ್ಟ. ಈ ಅವಧಿಯಲ್ಲಿ ಬಹುತೇಕ ಬುಡಕಟ್ಟು ಸಮುದಾಯಗಳು ಕೃಷಿ ವ್ಯವಸ್ಥೆಗೆ ಬದಲಾವಣೆಗೊಂಡಿದ್ದ ಕಾಲವದು. ಭೂಮಿಯನ್ನು ಕೃಷಿ ಮಾಡಲು ಕಾರ್ಮಿಕರ ಅಗತ್ಯವು ಹೆಚ್ಚಾಗತೊಡಗಿತು. ಪರಿಣಾಮವಾಗಿ *ಗುಲಾಮ ಪದ್ಧತಿ, ಜೀತ ಪದ್ಧತಿ, ಬಲವಂತ ದುಡಿಮೆ* ಮುಂತಾದ ಕ್ರೂರ ಪದ್ಧತಿಗಳು ಮತ್ತಷ್ಟು ಗಟ್ಟಿಗೊಳ್ಳಲು ಕಾರಣವಾಯಿತು.

ಇರ್ಫಾನ್ ಹಬೀಬ್ ಪ್ರಕಾರ ಮಾರ್ಕ್ಸ್‌ವಾದಿಗಳು ಕೃಷಿಕಾರ್ಮಿಕರನ್ನು ಮೂರು ವಿಭಾಗಗಳಲ್ಲಿ ಗುರುತಿಸುತ್ತಾರೆ. ಸಂಬಳಕ್ಕೆ, ಬಲಾತ್ಕಾರದ ದುಡಿಮೆಗೆ ಉಪಯೋಗಿಸುತ್ತಿದ್ದ ಶ್ರೀಮಂತ ರೈತರು, ಕುಟುಂಬದ ಸದಸ್ಯರನ್ನೇ ಕೃಷಿಯಲ್ಲಿ ತೊಡಗಿಸುತ್ತಿದ್ದ ಮಧ್ಯಮ ರೈತರು, ಭೂಮಿಯನ್ನು ಹೊಂದಿರದ ಮತ್ತು ತಾವೇ ದುಡಿಯುತ್ತಿದ್ದ ಬಡ ರೈತರು. ಇದರೊಂದಿಗೆ ಭೂರಹಿತ ಕೃಷಿಕಾರ್ಮಿಕರು ಇರುತ್ತಿದ್ದರು.[೧೦೪] ಕೃಷಿ ಉತ್ಪಾದನೆಯಲ್ಲಿ ತೊಡಗುತ್ತಿದ್ದ ಕೃಷಿಕರನ್ನು *ಭೂಮಿಕಾರ, ಒಕ್ಕಲು, ಬೆಸವೊಕ್ಕಲು*[೧೦೫] ಮುಂತಾದ ಹೆಸರುಗಳಿಂದ ಕರೆಯಲಾಗುತ್ತಿತ್ತು. ಹೊಲೆಯ ಮತ್ತು ತೊತ್ತು ಎನ್ನುವ ಕೃಷಿ ಜೀತದಾಳುಗಳು ಇದ್ದರು. ದುಡಿಯುವ ವರ್ಗದಲ್ಲಿ ಬಹುತೇಕರು ದಲಿತ ವರ್ಗದಿಂದ ಬಂದವರು. ಭೂಮಾಲೀಕರು ಇವರನ್ನು ಪ್ರಾಣಿಗಳಂತೆ ನೋಡಿಕೊಳ್ಳುತ್ತಿದ್ದರು. ಸಂತೆಗಳಲ್ಲಿ ಮನಬಂದಂತೆ ಮಾರಾಟ ಮಾಡಲಾಗುತ್ತಿತ್ತು ಎನ್ನುವುದಕ್ಕೆ ಶಾಸನಾಧಾರಗಳಿವೆ. ಸಾಮಾಜಿಕ ಅಸಮಾನತೆ ಮತ್ತು ಸಂಪತ್ತಿನ ಹಂಚಿಕೆಯಲ್ಲಾಗುತ್ತಿದ್ದ ಏರುಪೇರುಗಳಿಂದ ಇವರಿಬ್ಬರ ಮಧ್ಯೆ ಮನಸ್ತಾಪಗಳಿಗೆ ಕಾರಣವಾಗುತ್ತಿತ್ತು.

ಭೂಮಾಲೀಕ ಮತ್ತು ಕೃಷಿಕರ ನಡುವಿನ ಸಂಬಂಧವನ್ನು ಅರ್ಥೈಸಿಕೊಳ್ಳುವುದು ಒಂದು ಸಂಕೀರ್ಣ ವಿಷಯ. ಹಿಡುವಳಿದಾರರು ಒಡೆಯರ ಹತ್ತಿರ ದೈಹಿಕ ದುಡಿಮೆಯಲ್ಲಿ ತೊಡಗಿರುವುದಾಗ ಎರಡು ಗುಂಪುಗಳಾಗಿ ವಿಂಗಡಿಸಬಹುದು. ೧. ಕೂಲಿ ಕಾರ್ಮಿಕರು, ೨. ಜೀತದ ಆಳು. ಕೃಷಿಯಲ್ಲಿ ಕೂಲಿಕಾರ್ಮಿಕರು ತೊಡಗಿಕೊಂಡಿರುವುದು ಹಾಗೂ ದುಡಿಯುತ್ತಿರುವುದು ಹೊಸ ವಿಷಯವೇನಲ್ಲ.[೧೦೬] ಇದು ಪ್ರಾಚೀನ ಕಾಲದಿಂದಲೂ ನಡೆದುಕೊಂಡ ಪದ್ಧತಿ. ಇವರೇ ಮುಂದೆ ರೈತರಾಗಿ ಜೀವನ ಸಾಗಿಸುವಂತವರಾದರು. ಶ್ರಮಕ್ಕೆ ಪ್ರತಿಫಲವಾಗಿ ಆಹಾರ ದಾನ್ಯಗಳನ್ನು ಸ್ವೀಕರಿಸುತ್ತಿದ್ದರು. ಕೃಷಿಯಲ್ಲಿ ತೊಡಗಿರುವ ಬಹುತೇಕ ಸಮುದಾಯಗಳು ದಲಿತ ಜಾತಿಗಳಿಂದ ಬಂದವರು.

ಕೃಷಿಯಲ್ಲಿ ನಿರತರಾಗಿದ್ದ ಮುಖ್ಯ ಜಾತಿಗಳೆಂದರೆ ಶಾಸನಾಧಾರಗಳಿಂದ ಕಂಡುಬರುವಂತೆ ಶೂದ್ರರು, ಗೌಡರು ಅಥವಾ ಒಕ್ಕಲಿಗರು ಮತ್ತು ಹೊಲೆಯರು. ಶೂದ್ರ ಎಂಬ ವರ್ಗದಲ್ಲಿ ಮೇಲು ಮತ್ತು ಕೆಳ ಉಪಜಾತಿಗಳು ಹಲವು. ಕೃಷಿ ಅವರ ಪ್ರಧಾನ ವೃತ್ತಿ. ಒಕ್ಕಲಿಗರು ಅಥವಾ ಗೌಡರು ಸಾಮಾನ್ಯವಾಗಿ ನೆಲವನ್ನು ಉಳುತ್ತಿದ್ದರು. ಕೃಷಿ ಅರ್ಥವ್ಯವಸ್ಥೆಗೆ ಅವರು ಬೆನ್ನೆಲುಬು. ದೇಶದ ಏಳಿಗೆಯು ಬಹುಮಟ್ಟಿಗೆ ಅವರನ್ನು ಅವಲಂಬಿಸಿತ್ತು.[೧೦೭] ಕರ್ನಾಟಕದ ಅನೇಕ ಪಾಳೆಯಪಟ್ಟು ಸ್ಥಾಪಕರು ಕೃಷಿಕರಾಗಿದ್ದರು ಎನ್ನುವುದು ಸ್ವಾರಸ್ಯಕರ ಸಂಗತಿಯಾಗಿದೆ. ಹೊಲೆಯ ಅಥವಾ ಪರಿಯರು ಕರ್ನಾಟಕದಲ್ಲಿ ಕರ್ನಾಟಕದ ಕೃಷಿ ಕಾರ್ಮಿಕರಲ್ಲಿ ಹೆಚ್ಚಿನವರಾದ್ದರು. ಅವರು ಸಾಮಾನ್ಯ ಮಣ್ಣಿನೊಂದಿಗೆ ನಿಕಟ ಸಂಪರ್ಕ ಹೊಂದಿದ್ದರು. ಇಷ್ಟರ ಜೊತೆಗೆ ಕೂಲಿ ಕೊಟ್ಟು ನೇಮಿಸಿಕೊಳ್ಳುತ್ತಿದ್ದ ಕಾರ್ಮಿಕರನ್ನು ಶಾಸನಗಳು[೧೦೮] ಉಲ್ಲೇಖಿಸುತ್ತವೆ.

ಕೃಷಿಕಾರ್ಮಿಕರು ಯಾವ ಮಟ್ಟದಲ್ಲಿ ಕೆಲಸ ಮಾಡಬೇಕಾಗಿತ್ತು ಎಂದರೆ ಎಂತಹ ಸಂದಿಗ್ಧ ಪರಿಸ್ಥಿತಿಯಲ್ಲಿಯೂ ಮಾಲೀಕರ ಒಪ್ಪಿಗೆಯಿಲ್ಲದೆ ಇನ್ನೊಂದು ಪ್ರದೇಶಕ್ಕೆ ಹೋಗುವಂತಿರಲಿಲ್ಲ. ಅಗ್ರಹಾರಗಳನ್ನು ನಿರ್ಮಿಸುವ ಸಂದರ್ಭದಲ್ಲಿ ಒಕ್ಕಲುಗಳನ್ನು ಸ್ಥಳಾಂತರಿಸಲಾಗುತ್ತಿತ್ತು. ಇದರಿಂದ ಕೃಷಿಕಾರ್ಮಿಕರು ಮತ್ತು ಭೂಮಾಲೀಕರ ಮಧ್ಯೆ ಮತ್ತಷ್ಟು ಮನಸ್ತಾಪಗಳು ಉಂಟಾಗತೊಡಗಿದವು. ಹಾಗೆಯೇ ಕೃಷಿಕರ ಮತ್ತು ಬ್ರಾಹ್ಮಣರ ನಡುವಿನ ಕಲಹಗಳು ನಡೆಯುತ್ತಿದ್ದವು ಎನ್ನುವುದಕ್ಕೆ ಶಾಸನಾಧಾರಗಳಿವೆ. ಕ್ರಿ.ಶ.೧೨೫೧ರ ಶಾಸನದಲ್ಲಿ ಹಳ್ಳಿಯೊಂದರ ಕೃಷಿಕರು ತಮ್ಮ ಹಳ್ಳಿಯನ್ನು ಬ್ರಾಹ್ಮಣರಿಗೆ ನೀಡುವುದನ್ನು ವಿರೋಧಿಸಿದ್ದರ ಉಲ್ಲೇಖವಿದೆ. ಬ್ರಾಹ್ಮಣರು ಮತ್ತು ಬ್ರಾಹ್ಮಣೇತರ ಕೃಷಿಕ ಕುಟುಂಬದ ಮಧ್ಯೆ ಕೆರೆಯಿಂದ ಕೃಷಿಗಾಗಿ ನೀರನ್ನು ಬಳಸುವ ಸಂಬಂಧವಾಗಿ ಉಂಟಾದ ಕಲಹವನ್ನು ಹಾಸನದ ಕ್ರಿ.ಶ.೧೦೮೦ ಶಾಸನವು ಹೇಳುತ್ತದೆ.[೧೦೯] ಅದೇ ರೀತಿ ಕ್ರಿ.ಶ.೧೨೧೨ರ ಶಾಸನದಲ್ಲಿ ಕೃಷಿಕರು ಮತ್ತು ಬ್ರಾಹ್ಮಣ ಭೂಮಾಲೀಕರ ಮಧ್ಯೆ ಕೆರೆಯಿಂದ ಕೃಷಿಗಾಗಿ ನೀರನ್ನು ಬಳಸುವ ಸಂಬಂಧವಾಗಿ ಉಂಟಾದ ವಿವಾದವನ್ನು ಹೇಳಲಾಗಿದೆ. ಹೊಯ್ಸಳ ಅರಸರು ಭೂಮಾಲೀಕರಿಗೆ ಒಂದು ಕೆರೆಯನ್ನು ನಿರ್ಮಿಸಿಕೊಟ್ಟು ಭೂಮಾಲೀಕರ ಮತ್ತು ಕೃಷಿಕರ ನಡುವೆ ಇದ್ದ ಸಮಸ್ಯೆಯನ್ನು ಬಗೆಹರಿಸಿದರು.[೧೧೦] ರಾಜಪ್ರಭುತ್ವವು ಬಹುಪಾಲು ಉಳ್ಳವರ ಪರವಾಗಿಯೇ ಕೆಲವು ತೀರ್ಮಾನಗಳನ್ನು ತೆಗೆದುಕೊಳ್ಳುತ್ತಿತ್ತು ಎನ್ನುವುದಕ್ಕೆ ಈ ಮೇಲಿನ ಉದಾಹರಣೆ ಮುಖ್ಯ ಸಾಕ್ಷಿ.

ಪ್ರಾಚೀನ ವರ್ಣವ್ಯವಸ್ಥೆಯಲ್ಲಿ ಕೃಷಿಕರೆಂದರೆ 'ವೈಶ್ಯ'ರೆಂದು ತಿಳಿಸುತ್ತಾರೆ ಕೊಸಾಂಬಿಯವರು. ಶೂದ್ರರು ಕೂಲಿ ಮಾಡುತ್ತಿದ್ದರಷ್ಟೆ. ಕೃಷಿ ಸಮಾಜವು ವಿಸ್ತರಿಸಿದಂತೆ ಅರಣ್ಯವಾಸಿ ಸಮುದಾಯಗಳು ಕೃಷಿಕರಾಗಿ ಶೂದ್ರರೆನಿಸಿ ಒಂದು ಹಿಂದು ಸಮಾಜದಲ್ಲಿ ಸೇರಿದರು. ಈ ಕಾಲಘಟ್ಟದಲ್ಲಿ ಬಹುಮುಖಿ ಶೂದ್ರರು ವ್ಯವಸಾಯಗಾರರೆನಿಸಿದರು. ಅಮರಕೋಶದಲ್ಲಿ ಶೂದ್ರರ ನಂತರ 'ಶ್ರಮಿಕ' ವರ್ಗವನ್ನು ಹೆಸರಿಸಲಾಗಿದೆ. ಇವರನ್ನು ಭೃತರು, ಕರ್ಮಕಾರರು, ಪಾಮರರು, ನೀಚರು, ಜಾಲಿಮರು ಎಂಬ ಅನೇಕ ಹೆಸರುಗಳಿಂದ ಕರೆಯಲಾಗಿದೆ. ನಾಟಿ ಸಮಯದಲ್ಲಿ, ಕುಯ್ಲಿನ ವೇಳೆಯಲ್ಲಿ ಇವರು ಕೂಲಿಯಾಳುಗಳಾಗಿ ಕೆಲಸ ಮಾಡುತ್ತಿದ್ದರೆಂದು ಕೊಸಾಂಬಿ ಹೇಳುತ್ತಾರೆ. ಇವರು ಅಸ್ಪೃಶ್ಯರು ಅಥವಾ ಪಂಚಮರು. ಈ ದಿನದ 'ಹರಿಜನರ' ಪೂರ್ವಿಕರು. ಈ ನಂತರದಲ್ಲಿ ಕೃಷಿ ಸಮಾಜಕ್ಕೆ ಅಧೀನರಾದ ಅರಣ್ಯವಾಸಿಗಳು ಮತ್ತಷ್ಟು ಬಲಹೀನರೆನಿಸಿ ಪಂಚಮರೆಂದು ಕರೆಸಿಕೊಂಡು ಇಲ್ಲಿ ಸೇರಬೇಕಾಯಿತೇ ಹೊರತು ಈ ಮುಂಚಿನಂತೆ ಶೂದ್ರರೆನಿಸಿ ಅಲ್ಲ. ಇವರಿಗಿಂತಲೂ ಹೀನಾಯ ಸ್ಥಿತಿಯಲ್ಲಿದ್ದವರು ಚಂಡಾಲರು, ನಿಷಾದರು ಮೊದಲಾದವರು. ಅಮರಸಿಂಹನ ಪಟ್ಟಿಯಲ್ಲಿ ಇವರದು ಕಟ್ಟಕಡೆಯ ಹೆಸರುಗಳು.[೧೧] ಗುಪ್ತರಾಜರ ಪತನದ ನಂತರ ನಮ್ಮ ದೇಶದಲ್ಲಿ ಭೂಮಾಲೀಕ ಯುಗ ಆರಂಭವಾಯಿತು ಎನ್ನುತ್ತಾರೆ ಕೊಸಾಂಬಿ. ಭೂಮಾಲೀಕ ಯುಗವನ್ನು ಕೊಸಾಂಬಿಯವರು ಎರಡು ಹಂತಗಳಲ್ಲಿ ಗುರುತಿಸುತ್ತಾರೆ. ಮೊದಲ ಹಂತವನ್ನು ಮೇಲಿನಿಂದ ಭೂಮಾಲೀಕತ್ವ (Feudalism from above) ಎಂದೂ, ಎರಡನೆಯದನ್ನು ಕೆಳಗಿನಿಂದ ಭೂಮಾಲೀಕತ್ವ (Feudalism from below) ಎಂದು ಕರೆಯುತ್ತಾರೆ. ಮೊದಲನೆಯ ಹಂತದಲ್ಲಿ ಸ್ವಯಂ ಪೋಷಕ ಗ್ರಾಮವು ತನ್ನ ಸ್ವಂತ ಪ್ರಾತಿನಿಧ್ಯವನ್ನು ಸಭೆ ಪಡೆಯುತ್ತಿತ್ತು. ಸುಂಕ ಮಾತ್ರ ರಾಜನಿಗೆ ಸಂದಾಯವಾಗುತ್ತಿತ್ತು. ಕೆಳಗಿನವರು ಮೇಲಿನವರಿಗೆ ಏಣಿಯಂತೆ ಇರುವರು. ಕೆಳಗಿನವನು ಮೇಲಿನವನಿಗೆ ಸಾಮಂತ ಎನಿಸುತ್ತಾನೆ. ಮೇಲಿನವನಿಗೆ ಕಪ್ಪ ಸಲ್ಲಿಸಿ ಒಂದು ಒಪ್ಪಂದಕ್ಕೆ ಬದ್ದನಾಗಿರುತ್ತಾನೆ. ತನ್ನ ಪರಿಪಾಲನಾ ಕ್ಷೇತ್ರದಲ್ಲಿ ಅವರು ಪರಿಪೂರ್ಣ ಸ್ವಾತಂತ್ರ್ಯ. ಎರಡನೆಯ ಹಂತದಲ್ಲಿ ಗ್ರಾಮಗಳ ಪರಿಪಾಲನೆ ಸ್ವಾಯತ್ತತೆ ಕಳೆದುಕೊಂಡು ಗ್ರಾಮಗಳಿಂದ ಸುಂಕವನ್ನು ವಸೂಲಿಮಾಡಲು, ಅದರಲ್ಲಿ ಸ್ವಲ್ಪ ಭಾಗ ಇಟ್ಟುಕೊಳ್ಳುವ ಭೂಮಾಲೀಕ ವರ್ಗವೊಂದು ಹುಟ್ಟಿಕೊಂಡಿತು. ಇವರಿಗೆ ಸ್ವತಂತ್ರ ಭೂಮಿಗಳಿದ್ದವು. ಇದು ೯ನೇ ಶತಮಾನದಿಂದ ಪ್ರಾರಂಭವಾಯಿತೆಂದು ಕೊಸಾಂಬಿ[೧೨] ಹೇಳುತ್ತಾರೆ. .

ಮಧ್ಯಕಾಲೀನೋತ್ತರ ಅವಧಿಯಲ್ಲಿ ಒಡೆಯ ಮತ್ತು ಗೇಣಿದಾರ ಎಂಬ ಎರಡು ವರ್ಗಗಳು ಹಾಗೆಯೇ ಮುಂದುವರಿದವು. ಇದರ ಜೊತೆಗೆ ಜೀತದಾಳುಗಳು ಇದರಾಚೆ ಇರುತ್ತಿದ್ದರು. ವಿಜಯನಗರದ ಪತನದ ತರುವಾಯ ಕರ್ನಾಟಕದುದ್ದಕ್ಕೂ ಪಾಳೆಯ ಪಟ್ಟುಗಳು ಸ್ವತಂತ್ರವಾಗಲು ಯತ್ನಿಸಿ ಯಶಸ್ವಿಯಾದವು. ಈ ಅವಧಿಯಲ್ಲಿ ಯಥಾಸ್ಥಿತಿಯೇ ಮುಂದುವರಿಯಿತು. ಚಿತ್ರದುರ್ಗ, ತರೀಕೆರೆ, ಹರಪನಹಳ್ಳಿ, ಸುರಪುರ ಮುಂತಾದ ಪಾಳೆಯಪಟ್ಟುಗಳು ಮುಖ್ಯ ವಾಹಿನಿಯಲ್ಲಿದ್ದವು. ತುಮಕೂರು ಪ್ರದೇಶದಲ್ಲಿ ಹಾಗಲವಾಡಿ ನಾಯಕರು ಆಳ್ವಿಕೆ ನಡೆಸುತ್ತಿದ್ದರು. ಮಧ್ಯಕರ್ನಾಟಕದ ಪ್ರದೇಶಗಳ ವ್ಯಾಪ್ತಿಯಿಂದ ನೋಡಿದಾಗ ಭೂಮಾಲೀಕರ ಮತ್ತು ಕೃಷಿಕಾರ್ಮಿಕರ ಸಂಬಂಧಗಳು ಹೆಚ್ಚು ಕಡಿಮೆ ಒಂದೇ ರೀತಿಯಾಗಿ ಕಂಡುಬರುತ್ತವೆ. ಹಾಗಲವಾಡಿ, ಶೆಟ್ಟಿಕೆರೆ,

ಕಂದಿಕೆರೆ, ತುರುವೆಕೆರೆ ಮುಂತಾದ ಪ್ರದೇಶಗಳಲ್ಲಿ ಬ್ರಾಹ್ಮಣವರ್ಗ, ವ್ಯಾಪಾರಿವರ್ಗ, ಪ್ರಧಾನವಾಗಿ ಭೂ ಒಡೆಯರಿದ್ದರು. ಗೇಣಿದಾರರ ವರ್ಗವೊಂದು ಈ ಪ್ರದೇಶದಲ್ಲಿ ಪ್ರಬಲವಾಗಿತ್ತು. ವೀರಶೈವರು ಹೆಚ್ಚಿನ ಸಂಖ್ಯೆಯಲ್ಲಿ ಜಮೀನಿನ ಒಡೆಯರಾಗಿದ್ದರು. ಗೇಣಿಗಾಗಿ ಅಥವಾ ಕೂಲಿಗಾಗಿ ದುಡಿಯುತ್ತಿದ್ದ ಕುರುಬರು, ಒಕ್ಕಲಿಗರು, ಕೆಳವರ್ಗದ ಜಾತಿಗಳಾಗಿದ್ದರು. ಗೇಣಿದಾರರ ವರ್ಗವಲ್ಲದೆ ಅಸ್ಪೃಶ್ಯ ಜಾತಿಯ ಜೀತದಾಳುಗಳು ಇದ್ದರು.[೧೧೩] ಎಲ್ಲರಿಗಿಂತ ಇದರ ಸ್ಥಿತಿ ತುಂಬಾ ಶೋಚನೀಯವಾಗತ್ತು. ಈ ರೀತಿಯ ವರ್ಗಭೇದಗಳು ಪ್ರಾಚೀನ ಸಮಾಜದಿಂದ ಹುಟ್ಟಿ ಇಂದಿಗೂ ಮುಂದುವರಿಯುತ್ತಿವೆ. ರೈತರು, ಕೃಷಿಕಾರ್ಮಿಕರು ಮುಂತಾದವರು ದಿನದಿಂದ ದಿನಕ್ಕೆ ದೈಹಿಕ ಶ್ರಮದಲ್ಲಿ ತೊಡಗಿ ಭೂಮಾಲೀಕರ ಆರ್ಥಿಕ ಸದೃಢತೆಗೆ ಕಾರಣವಾಗುತ್ತಾರೆಯೇ ವಿನಃ ಸ್ವತಃ ಆರ್ಥಿಕ ಸದೃಢತೆಗೆ ಯಾವ ಅವಕಾಶವೂ ಸಿಗಲಾರದು. ಇಂತಹ ಸಂದಿಗ್ಧ ಸಂದರ್ಭದಲ್ಲಿ ಆಧುನಿಕ ಸಮಾಜದಲ್ಲಿ ಬಂಡವಾಳಶಾಹಿಗಳಾಗಿ ಪರಿವರ್ತನೆ ಹೊಂದಿದ್ದಾರೆ ಎಂದರೆ ತಪ್ಪಾಗಲಾರದು. ಹೆಚ್ಚಿನ ದುಡಿಮೆಯಿಂದ ಭೂಮಾಲೀಕರು ದಿನದಿಂದ ದಿನಕ್ಕೆ ಬೇರೆ ಬೇರೆ ಆಯಾಮಗಳಲ್ಲಿ ಬಂಡವಾಳವನ್ನು ತೊಡಗಿಸುತ್ತಾರೆ. ಆದರೆ ಕೂಲಿ ಕಾರ್ಮಿಕರಿಗೆ ಇದರ ಯಾವುದೇ ರೀತಿಯ ಅರಿವು ಗೊತ್ತಾಗದೆ ಆ ದಿನಮಾನಕ್ಕೆ ಮಾತ್ರ ಯೋಚಿಸುತ್ತಾರೆ. ಆದುದರಿಂದ ಎಲ್ಲಿ ಬಂಡವಾಳದ ಶೇಖರಣೆಯಾಗಿರುತ್ತದೆಯೇ ಅಲ್ಲಿ ಶೋಷಣೆಯು ವಿವಿಧ ರೂಪಗಳಲ್ಲಿ ತಾಂಡವಾಡುತ್ತದೆ.

### ೪.೫.೨ ಕೂಲಿ ಪದ್ಧತಿ

ಪ್ರಾಚೀನ ಕಾಲದಲ್ಲಿ ಶ್ರಮಿಕರಿಗೆ ವೇತನ ಯಾವ ರೂಪದಲ್ಲಿ ಕೊಡುತ್ತಿದ್ದರೆನ್ನುವುದು ಸ್ವಾರಸ್ಯಕರ ಸಂಗತಿ. ಮೌರ್ಯರ ಪತನದ ತರುವಾಯ ಭಾರತದೆಲ್ಲೆಡೆ ಕೃಷಿಗೆ ಪ್ರಾಶಸ್ತ್ಯ ಸಿಗಲಾರಂಭಿಸಿತು. ಕೃಷಿಯ ಉಪಕರಣಗಳ ಬಳಕೆ ವಿಸ್ತೃತವಾಗಲಾರಂಭಿಸಿತು. ಇದರ ಹಿನ್ನೆಲೆಯಲ್ಲಿ ಕೃಷಿಗೆ ಉತ್ಪಾದನಾ ಅಂಗಗಳು ಅತ್ಯವಶ್ಯಕವಾಯಿತು. ಈ ಕುರಿತಂತೆ ನಮಗೆ ದೊರಕುವ ಆಧಾರಗಳು ಕಡಿಮೆ ಎಂದು ಹೇಳಬಹುದು. ಉದಾಹರಣೆಗೆ ಪ್ರಾಚೀನ ಕಾಲದಲ್ಲಿ ಎಷ್ಟು ಕೂಲಿ ಸಿಗುತ್ತಿತ್ತು ಎನ್ನುವುದನ್ನು ಕೌಟಿಲ್ಯನು ಹಸುಗಳ ಹಾಲಿನ ರೂಪದಲ್ಲಿ ಸಿಗುತ್ತಿತ್ತು ಎನ್ನುತ್ತಾನೆ. ಕಾಲಕ್ರಮೇಣ ದಕ್ಷಿಣ ಭಾರತವು ಈ ಬಗೆಯ ಕೃಷಿ ಪ್ರಕ್ರಿಯೆಗೆ ಹೆಚ್ಚಿನದಾಗಿ ಒಳಪಟ್ಟಾಗ ಇಲ್ಲಿಯೂ ಸಹ ಗಮನಾರ್ಹ ಬದಲಾವಣೆಗಳಿಗೆ ಒಳಗಾಯಿತು. ಕೂಲಿಯನ್ನು ಮೊದಲೇ ನಿರ್ಧರಿಸದೆ ಕೆಲಸ ಮಾಡಿಕೊಂಡಿದ್ದರೆ ಕೆಲಸಗಾರನಿಗೆ ಆ ಕೆಲಸದ ಲಾಭದಲ್ಲಿ ಹತ್ತರಲ್ಲೊಂದು ಭಾಗವು ಸಲ್ಲಬೇಕೆಂದು ಮಿತಾಕ್ಷರವು[೧೧೪] ಹೇಳುತ್ತದೆ.

ಭೂಮಾಲೀಕರು ಕೂಲಿಕಾರರನ್ನು ನೇಮಿಸಿಕೊಂಡು ಅವರಿಗೆ ನಗದಾಗಿಯೇ ವಸ್ತುರೂಪದಲ್ಲೇ ಕೂಲಿಯನ್ನು ಕೊಡುತ್ತಿದ್ದರು. ನೆಲದೊಡೆಯರು ಬಾಡಿಗೆಗೆ ಕೂಲಿಗಳನ್ನು ಗೊತ್ತುಮಾಡಿಕೊಳ್ಳುತ್ತಿದ್ದರು. ಅವರಿಗೆ ನಗದಾಗಿಯೇ ಪಾವತಿ ಮಾಡಲಾಗುತ್ತಿತ್ತು. ಸರಕಾರಿ ಜಮೀನುಗಳನ್ನು ಜೀತದಾಳುಗಳಿಂದ ಬೇಸಾಯ ಮಾಡಿಸದೆ ಗೇಣಿಗಾರರಿಗೆ ವಹಿಸಿ ಕೊಡಲಾಗುತ್ತಿತ್ತು. ದತ್ತಿ ಜಮೀನುಗಳನ್ನು ಕೂಲಿಕೊಟ್ಟು ಬೇಸಾಯ ಮಾಡಿಸಲಾಗುತ್ತಿತ್ತು. ಅವರು ಸಮಾಜದ ಕೆಳಗಿನ ಸ್ತರಕ್ಕೆ ಸೇರಿದವರಾಗಿರುತ್ತಿದ್ದರು.[೧೧೫] ಮುಸ್ಲಿಮರಲ್ಲಿ ಮತ್ತು ಭಾರತೀಯರಲ್ಲಿ ರೂಢಿಯಾಗಿದ್ದ

ಈ ಪದ್ಧತಿಯು ಹಾಗೆಯೇ ಮುಂದುವರಿಯಿತು. ಕೆಲಸಗಾರರು ಬೆಳಿಗ್ಗೆ ಬಂದಾಗ ಮೊದಲು ಅವರಿಗೆ ತಿನ್ನಲು ಒಂದು ನಿರ್ದಿಷ್ಟ ಪ್ರಮಾಣದ ಅನ್ನವನ್ನು ಕೊಡಲಾಗುತ್ತಿತ್ತು. ನಿಗದಿಪಡಿಸದ ಕೆಲಸ ಮುಗಿಸಿ ರಾತ್ರಿ ಅವರು ಹಿಂದಿರುಗುವಾಗ ತಲಾ ಒಂದು ಫನಾಂ ಕೊಡಲಾಗುತ್ತಿತ್ತು ಎಂದು ಬಾರ್ಬೋಸ್[೧೧೬] ಹೇಳುತ್ತಾನೆ. ಹಾಗೆಯೇ ಪ್ರತಿದಿನವೂ ಕೂಲಿಯನ್ನು ಪಾವತಿ ಮಾಡಲಾಗುತ್ತಿತ್ತು. ಸುಲ್ತಾನರ ಆಳ್ವಿಕೆಯ ಸಂದರ್ಭದಲ್ಲಿ ಪರಿಚಾರಿಕ ಕೆಲಸಗಳಿಗೆ ವಿವಿಧ ವೃತ್ತಿಕಾರರು ನೆರವಾಗುತ್ತಿದ್ದರು. ಅವನ ಬಳಿ ಕುದುರೆಗಳಿಗೆ ಮಾಲೀಸು ಮಾಡಲು ೧೬೦೦ ಜನರಿದ್ದರು, ೨೦೦೦ ಕುಶಲಕರ್ಮಿಗಳಿದ್ದರು. ಕಮ್ಮಾರರು, ಗಾರೆಯವರು, ಬಡಗಿಗಳು, ರಾಜನ ಬಟ್ಟೆಗಳನ್ನು ಶುಚಿ ಮಾಡುವವರು ಇದ್ದರೆಂದು[೧೧೭] ತಿಳಿಸುತ್ತಾನೆ.

ಈ ಮೇಲಿನ ಅಂಶಗಳು ಮಧ್ಯಕಾಲೀನ ಕರ್ನಾಟಕದ ದಲಿತರ ಆರ್ಥಿಕ ಪರಿಸ್ಥಿತಿಯನ್ನು ಚರ್ಚಿಸಲು ಯತ್ನಿಸಿದೆ. ಬಹುತೇಕ ಅಧ್ಯಯನ ಕ್ರಮಗಳು ಸಮಾಜದ ಸ್ಥಿರೀಕರಿಸಲ್ಪಟ್ಟ ವಿವರಣೆ ಮತ್ತು ವಿಶ್ಲೇಷಣೆಗಳ ಮಾದರಿಯನ್ನು ಕಾಣಬಹುದು. ಆದರೆ ಅವು ಕೊಡುವ ಚಾರಿತ್ರಿಕ ಅಂಶಗಳು ಸಮಗ್ರ ದೃಷ್ಟಿಕೋನಕ್ಕೆ ಸಹಕಾರಿಯಾಗಲಾರವು. ರಾಜ್ಯದ ಸರ್ವತೋಮುಖ ಬೆಳವಣಿಗೆಯಲ್ಲಿ ಎಲ್ಲಾ ಸಮುದಾಯಗಳ ಪಾತ್ರ ಪ್ರಮುಖವಾಗಿರುತ್ತದೆ. ಇದಕ್ಕೆ ದಲಿತ ಸಮುದಾಯಗಳು ಮತ್ತು ಬುಡಕಟ್ಟುಗಳು ಹೊರತಾಗಿಲ್ಲ. ಆದರೆ ಸಮಾಜವು ಈ ಸಮುದಾಯಗಳಿಂದ ನಿರೀಕ್ಷಿಸಿದ ಪ್ರಮಾಣದಲ್ಲಿ ಉತ್ಪಾದನಾ ಪ್ರಕ್ರಿಯೆಯಲ್ಲಿ ತೊಡಗಿಸಿಕೊಂಡಿದೆ. ಆ ಅವಧಿಯಲ್ಲಿ ಸಮುದಾಯಗಳು ಸಮಾಜದೊಂದಿಗೆ ಮುಖಾಮುಖಿಯಾಗಿರುವ ಹಲವು ಸಂಗತಿಗಳನ್ನು ಇಲ್ಲಿ ಚರ್ಚಿಸಲು ಯತ್ನಿಸಲಾಗಿದೆ. ಸಮಾಜದಲ್ಲಿ ಇಂದಿಗೂ ಮುಂದುವರಿಯುತ್ತಿರುವ ಅನೇಕ ಪದ್ಧತಿಗಳು ರೂಪಾಂತರಗೊಂಡಿವೆಯೇ ವಿನಃ ಆಶಯಗಳು ಹಾಗೆಯೇ ಮುಂದುವರಿಯುತ್ತಿವೆ. ಕೃಷಿಕಾರ್ಮಿಕರಾಗಿ, ಕೂಲಿಕಾರರಾಗಿ, ಆರ್ಥಿಕ ಹೀನಸ್ಥಿತಿಯಿಂದ ಜೀವನವನ್ನೇ ನಡೆಸಲಾಗದ ಪರಿಸ್ಥಿತಿಯಲ್ಲಿ ಸಮಾಜವು ಯಾವುದೇ ಯೋಜನೆಗಳನ್ನು ಕೈಗೊಂಡರೂ ಸಂಬಂಧಿಸಿದವರಿಗೆ ತಲುಪದೇ ಮಧ್ಯವರ್ತಿಗಳ ಕೈಸೇರುವುದು ಇಂದಿನ ಪರಿಸ್ಥಿತಿಯಾಗಿದೆ. ಅಧ್ಯಯನದ ಕಾಲಘಟ್ಟದಲ್ಲಿ ಈ ಪ್ರಕ್ರಿಯೆಯು ಭೂಮಾಲೀಕರ ವಿರುದ್ಧ ನಡೆದಿರುವ ಸಂಗತಿಗಳನ್ನು ಪ್ರಸ್ತುತಪಡಿಸಬಹುದು. ಗುಲಾಮರಾಗಿ, ಜೀತಗಾರರಾಗಿ ಮತ್ತು ಕೂಲಿಕಾರರಾಗಿ ಮುಂದುವರಿಯುತ್ತಿರುವ ಸಮುದಾಯಗಳಲ್ಲಿ ಅಂದಿಗೂ ಇಂದಿಗೂ ಯಾವ ಬದಲಾವಣೆ ಆಗಿಲ್ಲವೇನೋ ಎಂಬ ಭಾವನೆ ಜಾಗೃತ ದಲಿತರಲ್ಲಿ ಉಂಟಾಗಿದೆ. ಕಾಲ ಮತ್ತು ಪರಿಸ್ಥಿತಿಗಳು ಮಾತ್ರ ಬದಲಾವಣೆಗೊಂಡು ಜನಸಾಮಾನ್ಯ ದಲಿತರಲ್ಲಿ ಯಾವುದೇ ಮೂಲಭೂತ ವ್ಯತ್ಯಾಸಗಳನ್ನು ಕಾಣಲಾಗುವುದಿಲ್ಲ.

ಭೂಮಾಲೀಕರು ಪ್ರವರ್ಧಮಾನಕ್ಕೆ ಬಂದು ದಿನನಿತ್ಯದ ಬದುಕಿನ ವಿಚಾರಗಳಲ್ಲಿ ಇವರಿಬ್ಬರ ಮಧ್ಯೆ ತಿಕ್ಕಾಟಗಳು, ಘರ್ಷಣೆಗಳು ನಡೆದಿರುವುದು ಚಾರಿತ್ರಿಕ ಪುರಾವೆಗಳಿಂದ ಸ್ಪಷ್ಟ. ಕೃಷಿಯೇ ರಾಜ್ಯದ ಮುಖ್ಯ ಆದಾಯ. ಬಹುಪಾಲು ಜನತೆ ಕೃಷಿಯನ್ನೇ ಅವಲಂಬಿಸಿದ್ದರು. ಈ ಕ್ಷೇತ್ರದಲ್ಲಿ ಭೂಮಾಲೀಕರು ಮತ್ತು ಶ್ರಮಿಕರು ಮುಖ್ಯವಾಗಿ ಕಾಣಿಸಿಕೊಂಡ ವರ್ಗಗಳು. ಕೂಲಿಕಾರ್ಮಿಕರು ಹಣದ ಮತ್ತು ಧಾನ್ಯದ ರೂಪದಲ್ಲಿ ಕೂಲಿಯನ್ನು ಪಡೆಯುತ್ತಿದ್ದರು. ಕೆಲವು ಶಾಸನಗಳು ಇದನ್ನು ಕೈವಿಸೈಕುಡಿ ಎಂದು ತಿಳಿಸುತ್ತವೆ. ಕೂಲಿಕಾರ್ಮಿಕರು

ಉತ್ಪಾದಿಸಿದ ವಸ್ತುಗಳಿಂದ ಭೂಮಾಲೀಕರಿಗೆ ಮತ್ತು ಗೇಣಿಗಾರರಿಗೆ ಹೆಚ್ಚಿನ ಆದಾಯ ಬರುತ್ತಿತ್ತು.[೧೧೮] ಕಾರ್ಮಿಕರು ಬೇರೆಯವರ ಅಧೀನದಲ್ಲಿ ದೈಹಿಕ ದುಡಿಮೆ ಮಾಡಿ, ದಿನದ ಅಂತ್ಯಕ್ಕೆ ಕೂಲಿಯನ್ನು ಅಥವಾ ದಿನಸಂಬಳವನ್ನು ಪಡೆಯಬೇಕಾಗಿತ್ತು. ಕೂಲಿಯನ್ನು ಇಷ್ಟೆ ಪ್ರಮಾಣದಲ್ಲಿ ನೀಡುತ್ತಿದ್ದರು ಎಂಬುದರ ಬಗೆಗೆ ಶಾಸನಗಳು ಮೌನ ವಹಿಸುತ್ತವೆ.[೧೧೯]

ಸಮಾಜಕ್ಕೆ ತೀರ ಅಗತ್ಯವಾದ ಕೆರೆ, ಬಾವಿ ಮೊದಲಾದವುಗಳ ನಿರ್ಮಾಣ ಕಾರ್ಯದಲ್ಲಿ ಪ್ರಭುತ್ವವು ಕೂಲಿ ಆಳುಗಳನ್ನು ನೇಮಿಸಿಕೊಳ್ಳುತ್ತಿತ್ತು. ಬಹುಶಃ ಇವರು ಕೆಳಜಾತಿಗಳಿಂದಲೇ ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸುತ್ತಿದ್ದರು. ಇವರಿಗೆ ಕೂಲಿಯನ್ನು ನಗದು ಅಥವಾ ಹಣದ ರೂಪದಲ್ಲಿ ಕೊಡಲಾಗುತ್ತಿತ್ತೇ ಎಂಬುದಕ್ಕೆ ಸಾಕಷ್ಟು ಪುರಾವೆಗಳು ಕಂಡುಬರುವುದಿಲ್ಲ. "ಪ್ರಿಯಾತ್ರೋದೆಲ್ಲಾವಲ್ಲ ತನ್ನ ಪ್ರವಾಸದ ಸಂದರ್ಭದಲ್ಲಿ ಕೂಲಿಯವರನ್ನು ಕುರಿತು ಬರೆಯುತ್ತಾನೆ.[೧೨೦] ದಾಸ್ಯ ಪದ್ಧತಿಯು ಆ ಕಾಲದಲ್ಲಿ ಪ್ರಚಲಿತವಿತ್ತು. ಹೆಣ್ಣನ್ನು ಮಾರಾಟ ಮಾಡುವ, ಕೊಂಡುಕೊಳ್ಳುವ ವ್ಯಾಪಾರ ನಡೆಯುತ್ತಿತ್ತು. ಇಕ್ಕೇರಿಯಲ್ಲಿ ಈ ರೀತಿ ಮಧ್ಯಕಾಲೀನ ರಾಜ್ಯಗಳು ಬಹುಪಾಲು ಕೃಷಿಯನ್ನೇ ಪ್ರಧಾನವಾಗಿ ಅವಲಂಬಿಸಿದ್ದವು. ಕೃಷಿಯ ವಿಸ್ತರಣೆ ಆದಂತೆ ಸಮಾಜದ ಆರ್ಥಿಕ ಕ್ಷೇತ್ರವು ಬದಲಾಗುವುದರ ಜೊತೆಗೆ ಅನೇಕ ಸಮುದಾಯಗಳು ಕೃಷಿಯಲ್ಲಿ ತೊಡಗಿಸಿಕೊಂಡವು. ರಾಜ್ಯಕ್ಕೆ ಹೆಚ್ಚಿನ ಆದಾಯ ತೆರಿಗೆಗಳಿಂದ ಬರುತ್ತಿದ್ದ ಕಾರಣ ಅದರ ಉತ್ಪಾದನಾ ಪ್ರಮಾಣವನ್ನು ಹೆಚ್ಚಿಸುವುದು ರಾಜ್ಯದ ಕರ್ತವ್ಯವಾಗಿತ್ತು. ಆ ಮುಖಾಂತರ ಜನಸಾಮಾನ್ಯರು ಕೆರೆಕಟ್ಟೆಗಳ ನಿರ್ಮಾಣ ಮತ್ತು ದುರಸ್ತಿಗಾಗಿ ದುಡಿದದ್ದು ಈಗ ಇತಿಹಾಸ. ಅಂದು ನಿರ್ಮಾಣವಾದಂತಹ ಅನೇಕ ಕೆರೆ-ಕಟ್ಟೆಗಳು, ದೇವಾಲಯಗಳು, ಸ್ಮಾರಕಗಳ ಶ್ರಮದಲ್ಲಿ ಜನಸಾಮಾನ್ಯರ, ದಲಿತರ ಪಾಲು ಗಮನಾರ್ಹವಾಗಿದೆ.[೧೨೧]

ಕೆರೆ, ರಸ್ತೆ ಮೊದಲಾದವುಗಳ ದುರಸ್ತಿಗಾಗಿ ಮಧ್ಯಯುಗದಲ್ಲಿ ಪ್ರಜೆಗಳಿಂದ ಬಿಟ್ಟಿ, ಊರು ಬಿಟ್ಟಿ ಎಂಬ ಕಡ್ಡಾಯ ಸೇವೆಯನ್ನು ಪಡೆಯುತ್ತಿತ್ತು. ಕೆರೆಗಳ ಮೇಲ್ವಿಚಾರಣೆಗಾಗಿ ಇತರೆ ಅಧಿಕಾರಿಗಳನ್ನು ನೇಮಿಸಲಾಗುತ್ತಿತ್ತು. ಈ ಅವಧಿಯಲ್ಲಿ ಬೇರೆ ಬೇರೆ ಪ್ರದೇಶಗಳಿಂದ ಉದ್ಯೋಗಕ್ಕಾಗಿ ಅರಸಿಬಂದ ಕೆಲವು ಸಮುದಾಯಗಳನ್ನು ಗುರುತಿಸಬಹುದಾಗಿದೆ. ಸೌರಾಷ್ಟ್ರದಿಂದ ವಿಜಯನಗರ ಮತ್ತು ಮದುರೈಗೆ ವಲಸಿಗರು ಬಂದಿರುವುದು ವೇದ್ಯವಾಗುತ್ತದೆ. ಬಹುಪಾಲು ಶ್ರಮಿಕರು ದಿನದ ಭತ್ಯೆಯನ್ನು ಪಡೆಯುತ್ತಿದ್ದನ್ನು ಕಾಣಬಹುದಿತ್ತು. ಬಾರ್ಬೋಸ ಹೇಳುವಂತೆ ಶ್ರಮಿಕನು ಕೆಲಸ ಪ್ರಾರಂಭಿಸಿ ಸಂಜೆಯ ತನಕ ಕೆಲಸ ಮಾಡಿ ದಿನಗೂಲಿಯಾದ ಅಕ್ಕಿ ಮತ್ತು ಪನಾಮ್ ಪಡೆಯುತ್ತಿದ್ದನು.[೧೨೨] ಈ ರೀತಿಯ ಪದ್ಧತಿಗಳು ವಿಜಯನಗರ ಕಾಲದಲ್ಲಿ ಸರ್ವೇಸಾಮಾನ್ಯವಾಗಿದ್ದವು.

## ೪.೬ ಬಾರಾಬಲೂತಿ ಪದ್ಧತಿ

ಪ್ರಾಚೀನ ಕಾಲದಿಂದಲೂ ನಡೆದುಕೊಂಡು ಬಂದಿರುವ ಪದ್ಧತಿ ಆಯಗಾರಿಕೆ. ಗ್ರಾಮೀಣ ಪ್ರದೇಶದಲ್ಲಿ ಇಂದಿಗೂ ಕೆಲವು ಕಡೆ ಜೀವಂತವಾಗಿರುವುದನ್ನು ಕಾಣಬಹುದು. ಈ ಪದ್ಧತಿಗೆ 'ಬಾರಾಬಲೂತಿ' ಪದ್ಧತಿ ಎಂತಲೂ ಕರೆಯುತ್ತಾರೆ. ಭಾರತದ ಇತರೆ ಪ್ರದೇಶಗಳಲ್ಲಿ ಜಜ್ಮಾನಿ ಎಂದು ಕರೆಯಲ್ಪಡುತ್ತಿದೆ.[೧೨೩]

ಕರ್ನಾಟಕದಲ್ಲಿ ವಿವಿಧ ಹೆಸರುಗಳಿಂದ ಕರೆಯಲ್ಪಡುತ್ತಿದೆ. ಉತ್ತರ ಕರ್ನಾಟಕದ ಕೆಲವು ಕಡೆ 'ಬಾರಾಬಲೂತಿ' ಎಂದು ಕರೆಯುತ್ತಾರೆ. ಮಂಡ್ಯ, ಮೈಸೂರು ಕಡೆ ಅದಕ್ಕೆ 'ಅಡದೆ' ಎಂದು ಹೆಸರಿದೆ. ಆಯಗಾರರನ್ನು ಅಲ್ಲಿ 'ಅಡದೆಯರು' ಎಂದು ಕರೆಯುತ್ತಾರೆ. ಉತ್ತರ ಕನ್ನಡ ಜಿಲ್ಲೆಯ ಅಂಕೋಲ ಕಡೆ ಆಯದ ಪ್ರತಿರೂಪಕ್ಕೆ 'ಎಚ್ಚ' ಎನ್ನುತ್ತಾರೆ. ಸಾಂಪ್ರದಾಯಿಕವಾಗಿ ಸರಕು ಸೇವೆ ಸಲ್ಲಿಸುವವರಿಗೆ 'ಎಚ್ಚಗಾರ'ರೆಂದು ಕರೆಯುವರು. ಹಕ್‌ದಾರರು, ಬಾಬುದಾರರು, ಗುತ್ತಿನವರು, ಬಾಬಿನವರು, ಮೈಲಿಗೆಯವರು ಎಂಬಿತ್ಯಾದಿ ಹೆಸರಿನಿಂದಲೂ ಆಯವನ್ನು ಪಡೆಯುವವರಿದ್ದಾರೆ.[೧೨೪] *ಬಲೂತಾ* ಎಂದರೆ ಗ್ರಾಮೀಣ ಕೈಕಸುಬಿನವರಿಗೆ ಹಾಗೂ ಗ್ರಾಮದ ಊಳಿಗದವರಿಗೆ ಕೊಡುವ ಧಾನ್ಯರೂಪದ ಸಂಭಾವನೆ ಅಥವಾ ಪಾಲು. ಇಂಥ ಸಂಭಾವನೆ ಪಡೆಯುವವರಲ್ಲಿ ಕೆಲವರಿಗೆ 'ಅಲೂತೆದಾರ' ಎನ್ನುತ್ತಾರೆ. 'ಬಾರಾಬಲೂತೆ'ದಾರರು ಅಂದರೆ ಹನ್ನೆರಡು ಆಯಗಾರರು. "ಕೃಷಿಕಾರ್ಯಗಳಿಗೆ ಬೇಕಾದ ಸೇವೆಗಳನ್ನು ಸಲಕರಣೆಗಳನ್ನು ಒದಗಿಸುವ ಜನರಿಗೆ ಧಾನ್ಯರೂಪದಲ್ಲಿ ಸಲ್ಲಿಸುವ ಸಂಭಾವನೆಗೆ ಆಯ ಎನ್ನುತ್ತಾರೆ. 'ಆಯ' ತೆಗೆದುಕೊಳ್ಳುವ ಊಳಿಗದವರನ್ನು ಮತ್ತು ಕೈಕಸುಬಿನವರನ್ನು 'ಆಯಗಾರರು' ಎಂದು ಕರೆಯುತ್ತಾರೆ. ಇವರನ್ನು *ಜಜಮಾನ್, ಕಾಮೀನ್, ಪರ್ಜನ್, ಕಾಮವಾಲೇ, ಕಾಮಕರನೇವಾಲೇ* ಎಂದು ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಾರೆ.[೧೨೫] ಪಶ್ಚಿಮ ಭಾರತದ ಗ್ರಾಮ ಸಮುದಾಯಗಳ ಚರಿತ್ರೆಯನ್ನು ಸಮೀಕ್ಷಿಸಿದ ಎ.ಎಸ್.ಅಲ್ತೇಕರ್ ಅವರು ಬಲೂತಾ ಪದ್ಧತಿಯು ಆರ್ಯರ ಕಾಲಕ್ಕೆ ಹುಟ್ಟಿರಬೇಕೆಂದು ಅಭಿಪ್ರಾಯಪಡುತ್ತಾರೆ. ಕರ್ನಾಟಕದ ಮಟ್ಟಿಗೆ ಹೇಳುವುದಾದರೆ ೧೧ನೇ ಶತಮಾನದಿಂದ ಈಚೆಗೆ ಆಯ ಮತ್ತು ಆಯಗಾರರ ಪ್ರಸ್ತಾಪಗಳು ಚರಿತ್ರೆಯಲ್ಲಿ ದೊರಕುತ್ತವೆ. ಪಶ್ಚಿಮ ಚಾಲುಕ್ಯ, ಹೊಯ್ಸಳ, ಯಾದವ ಕಾಲದ ಶಾಸನಗಳಲ್ಲಿ ಗಾವುಂಡ, ಶಾನುಭೋಗ, ತಳಾರಿ, ಅಂಬಿಗ, ಬಾರಿಕಾರ, ತೋಟಿಗ, ಕಲ್ಲುಕುಟಿಗ, ಕಮ್ಮಾರ, ಅಕ್ಕಸಾಲಿಗ, ಬಡಗಿ, ಕ್ಷೌರಿಕ ಮತ್ತು ಜ್ಯೋತಿಷಿಗಳ ಹೆಸರಿವೆ ಎಂಬುದನ್ನು ದೀಕ್ಷಿತ್[೧೨೬] ತಿಳಿಸುತ್ತಾರೆ. ಕ್ರಿ.ಶ.೧೦೩೫ರ ಶಾಸನವೊಂದರಲ್ಲಿ 'ಅಕ್ಕಸಾಲಿಯ ಉಪ್ಪೊಳಗಾಗಿ ಧಾನ್ಯಂಗಳೊಳೆಲ್ಲಂ' ಎಂದು ಹೇಳಿದೆ. ಕ್ರಿ.ಶ.೧೦೭೭ರ ವೀರಗಲ್ಲೊಂದರಲ್ಲಿ ಆಳ ಎಂಬ ಅಕ್ಕಸಾಲೆ ಮತ್ತು ರಾಯ ಎಂಬ ಅಗಸ ಇಬ್ಬರೂ ಊರಿನವರಿಂದ ಆಯ ಪಡೆದುಕೊಂಡದ್ದನ್ನು ಹೇಳಿದೆ. ೧೦೯೮-೯೯ರ ಶಾಸನದಲ್ಲಿ ಅಕ್ಕಸಾಲೆ, ಕಮ್ಮಾರನ ಆಯವನ್ನು ಪ್ರಸ್ತಾಪಮಾಡಲಾಗಿದೆ.[೧೨೭] ಚಮ್ಮಾರನು, ಕೊರವನೂ, ಚಲುವಾದಿಯೂ, ಮಾದಿಗನು ಊರಿನ ಆಯಗಾರರಾಗಿ ಮಾಡಬಹುದಾದ ಕೆಲಸಗಳಿವೆ. ಜಾತಿಯ ವ್ಯವಸ್ಥೆಯಲ್ಲಿ ಬೆರತುಕೊಳ್ಳಲಾರದ ಮುಸಲ್ಮಾನನೂ ಹಳ್ಳಿಯ ಆಯಗಾರನಾಗಬಹುದು. ಉದಾಹರಣೆಗೆ ಧಾರವಾಡದ ಶಿವಪುರದಲ್ಲಿ ಆಯಗಾರನು ಅಗಸನು ಮುಸಲ್ಮಾನ ಜಾತಿಗೆ (ಅಲ್ಲಿನ ಲೆಕ್ಕದಂತೆ ಮುಸಲ್ಮಾನನು ಒಂದು ಜಾತಿ) ಸೇರಿದವನು. ವಿಲಿಯಂ ವೈಸರ್ ಅಧ್ಯಯನ ಮಾಡಿದ ಗ್ರಾಮವಾದ ಕರೀಂಪುರದ ಪಕೀರರು, *ಮನಿಯಾರ* (ಬಳೆಗಾರ), *ಧೂನಾ* (ಪಿಂಜಾರ) ಇವರೆಲ್ಲ ಮುಸಲ್ಮಾನ ಆಯಗಾರರು.[೧೨೮] ಮಧ್ಯಕಾಲೀನ ಸಂದರ್ಭದಲ್ಲಿ ಆಯಗಾರರ ಸಂಖ್ಯೆ ಕುರಿತು ವ್ಯತ್ಯಾಸಗಳಿವೆ. ಇದಕ್ಕೆ ಕಾಲಘಟ್ಟದಿಂದ ಕಾಲಘಟ್ಟಕ್ಕೆ ಆಗುತ್ತಿದ್ದ ಸಾಮಾಜಿಕ ಮತ್ತು ಆರ್ಥಿಕ ಬದಲಾವಣೆಯು ಮುಖ್ಯ ಕಾರಣ.

### ೪.೬.೧ ವರ್ಗಗಳು

ಕರ್ನಾಟಕದ ಮಟ್ಟಿಗೆ ಹೇಳುವುದಾದರೆ ಇಂತಿಷ್ಟೆ ವರ್ಗಗಳು ಇದರ ವ್ಯಾಪ್ತಿಯಲ್ಲಿ ಸೇರಿಕೊಳ್ಳುತ್ತವೆ ಎಂದು ಹೇಳುವುದು ಕಷ್ಟ. ಆದರೂ ಸಾರ್ವತ್ರಿಕ ಮನ್ನಣೆ ಮತ್ತು ಗುರುತಿಸಿರುವ ಕೆಲವು ಆಯಗಾರರೆಂದರೆ ಬಡಗಿ, ಕಮ್ಮಾರ, ಅಗಸ, ಕ್ಷೌರಿಕ, ಚಮ್ಮಾರ, ತಳವಾರ, ಹೊಲೆಯರು ಮುಂತಾದವರು ಬರುತ್ತಾರೆ. ಎರಡು ಅಥವಾ ಮೂರು ಹಳ್ಳಿಗಳಿಗೆ ಒಬ್ಬನೇ ಆಯಗಾರನಾಗಬಹುದು. ಈಶ್ವರನ್ ಅಧ್ಯಯನ ಮಾಡಿರುವ ಪ್ರಕಾರ ಶಿವಪುರ ಗ್ರಾಮದಲ್ಲಿ ಹಡಪದ, ಬಡಗಿ, ಕಮ್ಮಾರ, ಅಗಸ, ಬಾರಿಕಾರ, ತಳವಾರ, ಕೊರವ, ಚಲವಾದಿ ಮತ್ತು ಮಾದಿಗ ಒಂಬತ್ತು ಆಯಗಾರರಿದ್ದರು. ಉತ್ತರ ಕನ್ನಡ ಜಿಲ್ಲೆಯ ಅಂಕೋಲ ಕಡೆ ರೈತ ಕುಟುಂಬಗಳಿಗೆ ವಾಡಿಕೆಯಂತೆ ಮೀನುಗಳನ್ನು ತಂದುಕೊಡಲು ಹೆಣ್ಣುಮಗಳು 'ಎಚ್ಚಗಾರ್ತಿ'ಯೆಂದು ಧಾನ್ಯರೂಪದ ಸಂಭಾವನೆ ಪಡೆಯುತ್ತಾಳೆ ಎಂದು ತಿಳಿದುಬರುತ್ತದೆ. ಇತ್ತೀಚೆಗೆ ಆಧುನಿಕತೆಯ ಪರಿಣಾಮವಾಗಿ ಗ್ರಾಮೀಣ ಜನತೆ ನಗರ ಪರಿಸರದ ಸಂಪರ್ಕದಿಂದ ಈ ಪದ್ಧತಿ ನಿಧಾನವಾಗಿ ಕಣ್ಮರೆಯಾಗುತ್ತಿದೆ. ಆದರೂ ಬಹುತೇಕ ಹಳ್ಳಿಗಳಲ್ಲಿ ಇಂದಿಗೂ ಜೀವಂತವಾಗಿರುವುದನ್ನು ಕಾಣಬಹುದಾಗಿದೆ.[೧೨೯]

ಗಾಣಿಗರು ಅಥವಾ ತೆಲ್ಲಿಗರು ಗಾಣದ ಸುಂಕವನ್ನು ಕೊಡುತ್ತಿದ್ದರು. ಕುಂಬಾರರು, ಬಡಗಿಗಳು, ಅಗಸರು, ನೇಕಾರರು, ಅಕ್ಕಸಾಲಿಗರು, ಕಮ್ಮಾರರು, ನಾಯಿಂದರು ತೆರಿಗೆಗಳನ್ನು ಕೊಟ್ಟು ಭೂಮಿಯನ್ನು ಹೊಂದಿರುತ್ತಿದ್ದರು. ನರ್ತಕಿಯರು, ಮೃದಂಗದವರು, ಗೊಲ್ಲರು, ನಟರು ಮತ್ತು ದೇವಾಲಯಗಳಲ್ಲಿನ ನೌಕರರು ಕೂಡ ಭೂಮಿಯನ್ನು ಹೊಂದಿದ್ದು ಒಂದಲ್ಲ ಒಂದು ರೀತಿಯಲ್ಲಿ ಸರ್ಕಾರಕ್ಕೆ ತೆರಿಗೆಯನ್ನು ಕೊಡುತ್ತಿದ್ದರು. ಗರಾಮದ ಹಂತದಲ್ಲಿ, ಇಡೀ ಸಮಾಜದ ಉಳವಿಗೆ ಆಧಾರವಾದ ಕೃಷಿ ಉತ್ಪಾದನೆಯನ್ನು *ಭೂಮಿಕಾರ, ಒಕ್ಕಲು* ಅಥವಾ *ಬೆಸವೊಕ್ಕಲು, ಹೊಲೆಯ* ಮತ್ತು *ತೊತ್ತು*(ಕೃಷಿಜೀತದಾಳು) ಇವರು ನಿರ್ವಹಿಸುತ್ತಿದ್ದರು. ಹಳ್ಳಿಯಲ್ಲಿದ್ದ ಈ ಸಂಬಂಧವಾದ ಇಬ್ಬರು ಅಧಿಕಾರಿಗಳೆಂದರೆ ಗೌಡ ಅಥವಾ ಹೆಗ್ಗಡೆ ಮತ್ತು ಸೇನಬೋವ ಅಥವಾ ಲೆಕ್ಕಿಗ. ಇವರು ಕೃಷಿಕ ವರ್ಗದ ವಕ್ತಾರರು, ಬಹುಶಃ ಆ ಪ್ರದೇಶದ ಮುಖ್ಯ ಭೂಮಾಲೀಕರು. ರಾಜವಂಶವಾಗಲಿ ಅಥವಾ ಆಳುವ ಚಕ್ರವರ್ತಿಯಾಗಲಿ ಬದಲಾದರೂ ಗ್ರಾಮ ಜೀವನದ ಈ ಒಂದು ಕ್ರಮಬದ್ಧತೆ ಬದಲಾವಣೆಯಾಗುತ್ತಿರಲಿಲ್ಲ.[೧೩೦] ಮೈಸೂರು ಸಂಸ್ಥಾನದಲ್ಲಿ ಗಿರಿಜನ, ಹೊಲೆಯ, ಮಾದಿಗರು ತಳವಾರರಾಗಿದ್ದರೆ, ಹೈದರಾಬಾದ್-ಕರ್ನಾಟಕದಲ್ಲಿ ಗಂಗಾಮತಸ್ಥರು, ಬಾರೀಕೇರ, ಬೆಸ್ತರು ತಳವಾರರಾಗಿರುವುದು ಕಂಡುಬರುತ್ತದೆ. ತಳವಾರಿಕೆಯ ಜೊತೆಗೆ ಆಯಗಾರಿಕೆ ವ್ಯವಸೆಗೆ ಹೊಂದಿಕೊಂಡಿರುವುದು ಮೈಸೂರು ಭಾಗದಲ್ಲಿ ಕಂಡುಬರುತ್ತದೆ. ಕೊಳ್ಳೇಗಾಲ ಪ್ರದೇಶದಲ್ಲಿ ಪರಿಶಿಷ್ಟ ಜಾತಿಗೆ ಸೇರಿದ ಹೊಲೆಯ ಮಾದಿಗರಲ್ಲಿ ತೋಟಿ ನಿರ್ವಹಣೆ ಇದೆ. ತೋಟಿಗಳು ಗ್ರಾಮಲೆಕ್ಕಿಗ, ಪಟೇಲ ಹೇಳಿದ ಕೆಲಸ, ಸುದ್ದಿಸಾರುವ ಕೆಲಸ ಮಾಡಬೇಕಾಗಿತ್ತು. ಗ್ರಾಮಸ್ಥರು ಆಯವಾಗಿ ಬೆಳೆದ ಎಲ್ಲಾ ಬೆಳೆಗಳ ದವಸ-ಧಾನ್ಯ ಕೊಡುತ್ತಿದ್ದರು. ಭತ್ತವಾದರೆ ಒಂದು ಹೊರೆ ಅಥವಾ ಎರಡು ಹೊರೆ, ಜೋಳ-ರಾಗಿ ತೆನೆಯಾದರೆ ಒಂದು ಬುಟ್ಟಿ ಹೀಗೆ ರೈತರು ಬೆಳೆದಂತಹ ಆಹಾರ ಪದಾರ್ಥಗಳನ್ನು ಕೊಡುತ್ತಿದ್ದರು. ಹಬ್ಬ ಹರಿದಿನಗಳಲ್ಲಿ ಹರಿಜನರಾದ ತೋಟಿ ಜನಿವಾರ ಧರಿಸಿ ಲಿಂಗಾಯತರಂತೆ ವರ್ತಿಸುತ್ತಾರೆಂದು[೧೩೧] ತಿಳಿದು ಬರುತ್ತದೆ.

ಕರ್ನಾಟಕದ ಚರಿತ್ರೆಯಲ್ಲಿ ಪಾಳೆಯಗಾರರ ಆಳ್ವಿಕೆಯು ಅಧ್ಯಯನದ ದೃಷ್ಟಿಯಿಂದ ಮಹತ್ತರವಾದ ಕಾಲಘಟ್ಟ. ಈ ಅವಧಿಯಲ್ಲಿ ಚಿತ್ರದುರ್ಗ, ತರೀಕೆರೆ, ಬಳ್ಳಾರಿ, ಹರಪನಹಳ್ಳಿ, ಸುರಪುರ ಹೀಗೆ ಒಟ್ಟು ಎಪ್ಪತ್ತೇಳು ಪಾಳೆಯ ಪಟ್ಟುಗಳು ಆಳ್ವಿಕೆ ನಡೆಸಿದವು ಎಂಬುದನ್ನು ಮನಗಾಣಬಹುದು. ಚಿತ್ರದುರ್ಗದ ಮೊದಲ ಅರಸ ಮತ್ತಿತಿಮ್ಮಣ್ಣ ನಾಯಕ ಆಯಾ ಗ್ರಾಮಗಳಿಗೆ ಗೌಡ, ತಳವಾರ, ಬೇಗಾರ ಮೊದಲಾದ ಆಯಗಾರರನ್ನು ನೇಮಿಸಿದನು. ಭರಮಪ್ಪನಾಯಕನು ದಿವಸದಲ್ಲಿ ಆಯಗಾರರು ಅರಮನೆಗೆ ಬಿಟ್ಟಿ ಚಾಕರಿಯನ್ನು ಮಾಡಬೇಕೆಂದು ನಿರ್ಣಯ ಮಾಡಿದನು.[೧೬೨] ಈ ಅವಧಿಯಲ್ಲಿ ಆಯಗಾರರನ್ನು ಎರಡು ಗುಂಪುಗಳಾಗಿ ವಿಂಗಡಿಸುತ್ತಾರೆ. ಒಂದು; ನಿಜ ಆಯಗಾರರು, ಎರಡನೆಯದಾಗಿ ಅರೆಆಯಗಾರರು, ಗೌಡ, ಶಾನುಭೋಗ, ಬಡಗಿ, ಕಮ್ಮಾರ, ತಳವಾರ, ಬೇಗಾರ ಇವರು ನಿಜ ಆಯಗಾರರ ಪಟ್ಟಿಯಲ್ಲಿ ಸೇರಿದರೆ, ಜೋಯಿಸ, ಕುಲಾಲ (ಕುಂಬಾರ), ನಾಡಿತ (ಕ್ಷೌರದವರು), ರಜಕ (ಅಗಸ), ಬಾರಿಕ (ನೀರಗಂಟಿ), ಅಕ್ಕಸಾಲಿಗ ಇವರನ್ನು ಅರೆಆಯಗಾರರ ಪಟ್ಟಿಯಲ್ಲಿ ಸೇರಿಸುತ್ತಾರೆ. ತರೀಕೆರೆ ಪಾಳೆಯಗಾರ ಸರ್ಜಪ್ಪನಾಯಕನ ಕಥನಕಾವ್ಯದಲ್ಲಿ ಆಯಗಾರರ ಪ್ರಸಂಗವಿದೆ. ಸೂಳೆನಿಂಗಮ್ಮ ಮತ್ತು ಇವಳ ಸಹೋದರರಾದ ವೆಂಕಟರಾಯ, ಗೋವಿಂದರಾಯ ಸೇರಿ ಸರ್ಜನನ್ನು ಮೋಸದಿಂದ ಕೊಲ್ಲಿಸಲು ಪ್ರಯತ್ನಿಸುತ್ತಾರೆ. ಬಡಿಗೇರ, ಕಮ್ಮಾರ, ನೆವ್ವರ, ಮಾದಿಗರ, ಬಡ್ಡಿರನ್ನು ಕರೆಸಿ ವಿವಿಧ ಕೆಲಸ ಮಾಡಿಸುತ್ತಾರೆ. ಕಂದಕ ತೆಗೆಸುವುದು, ಸೂಲಗಳನ್ನು ಇಡುವುದು, ಬೇಲಿ ಕಡಿಸುವ ಕೆಲಸ ಮಾಡಿಸುತ್ತಾರೆ.[೧೬೩] ಈ ಪದ್ಧತಿಯು ರಾಜವಂಶಗಳ ಆಳ್ವಿಕೆಯಲ್ಲಿ ಮತ್ತು ಪಾಳೆಯಗಾರರ ಆಳ್ವಿಕೆಯಲ್ಲಿ ಭಿನ್ನತೆ ಕಾಣಬಹುದಾಗಿತ್ತು.

### ೪.೬.೨. ವರ್ತಕ ಶ್ರೇಣಿಗಳು

ವರ್ತಕ ಸಂಘಗಳನ್ನೇ ಪಾರಿಭಾಷಿಕವಾಗಿ 'ಶ್ರೇಣಿ'ಗಳೆಂದು ಕರೆಯುತ್ತಾರೆ. ಯಾವುದಾದರೂ ಕ್ರಮವನ್ನು ಕೈಗೊಳ್ಳಬೇಕಾದರೆ ಒಂದು ಜಾತಿಯವರು ಸೇರಿ ಒಂದು ನಿರ್ಧಾರಕ್ಕೆ ಬರುತ್ತಿದ್ದರು. ತಂಬುಲಿಗರ, ತೆಲ್ಲಿಗಾರ, ಅಕ್ಕಸಾಲಿಗರ ಮುಂತಾದವರ ಸಂಘಗಳು ಬಹುಮಟ್ಟಿಗೆ ಜಾತಿ ಆಧಾರದ ಮೇಲೆ ನಿರ್ಮಾಣವಾದವು. ಈ ಸಂಘಗಳ ಮೇಲೆ ರಾಜನಿಗೆ ಸ್ವಲ್ಪ ಅಧಿಕಾರವಿದ್ದಂತೆ ಊಹಿಸಬಹುದು. ವಿವಿಧ ಜಾತಿ ಸಮುದಾಯಕ್ಕೆ ಸೇರಿದ ಶ್ರೇಣಿಗಳು ಕೆಲಸ ಮಾಡುತ್ತಿದ್ದವು.[೧೬೪] ಮಣ್ಣಿನ ಮಡಿಕೆಗಳನ್ನು ಮಾಡುವವರು ಕುಂಬಾರರು. ಇವರಿಗೆ ಕೂಡ ಪ್ರತ್ಯೇಕ ಸಂಘಗಳಿದ್ದವು. ಕ್ರಿ.ಶ.೧೧೨೩-೨೪ರಲ್ಲಿ ಜಿನಾಲಯಕ್ಕೆ ದಾನಶಾಲೆಯೊಂದನ್ನು ಕುಂಬಾರರು ಅವುಗಳನ್ನು ಬಿಟ್ಟುಕೊಟ್ಟಂತೆ ಒಂದು ಶಾಸನದಲ್ಲಿದೆ. ಇದೇ ಜಾತಿಯ ಬಮ್ಮಣ ಎನ್ನುವವನು ವೀರವ್ರತವನ್ನು ಕೈಗೊಂಡು ಕುಂಬೇಶ್ವರ ದೇವಸ್ಥಾನವನ್ನು ಕಟ್ಟಿಸಿದಂತೆ ಕಂಡುಬರುತ್ತದೆ. ಬುಟ್ಟಿಗಳನ್ನು ಹೆಣೆಯುತ್ತಿದ್ದವರು ಮೇದರು, ವೀಳೆಯದೆಲೆಗಳನ್ನು ಮಾರಾಟ ಮಾಡುತ್ತಿದ್ದವರು ತಂಬುಲಿಗರು.[೧೬೫] ಈ ಸಂಘಗಳಿಗೆ ನ್ಯಾಯಾಧಿಕರಣವು ಇದ್ದಿತು. ಮೊಕದ್ದಮೆಗಳನ್ನು ವಿಚಾರಣೆ ಮಾಡಿ ವ್ಯಾಜ್ಯ ಪರಿಹಾರ ಮಾಡುತ್ತಿದ್ದರು. ಅಪರಾಧಿಗೆ ಶಿಕ್ಷೆಯನ್ನು ವಿಧಿಸುತ್ತಿದ್ದರು. ಅನಂತಪುರ ಜಿಲ್ಲೆಗೆ ಸಂಬಂಧಿಸಿದಂತೆ ನರಸಿಂಹದೇವರ ದೇವಸ್ಥಾನದಲ್ಲಿ ಸಭೆ ಸೇರಿದ ಒಂದು ವರ್ತಕ ಸಂಘವು ಅಸ್ಪೃಶ್ಯರಾದ ಮಾಲರು ಮತ್ತು ಮಾದಿಗರಿಗೂ ಸ್ಥಳೀಯ ರೈತರಿಗೂ ಉಂಟಾಗಿದ್ದ

ವ್ಯಾಜ್ಯವನ್ನು ಪರಿಹರಿಸಿತು ಎಂದು ತಿಳಿದುಬರುತ್ತದೆ. ಮಾಲರಿಗೆ ತೆರಿಗೆ ಪಾವತಿಯಿಂದ ವಿನಾಯಿತಿ ದೊರಕಿತು. ವಿವಾಹ ಸಂದರ್ಭಗಳಲ್ಲಿ ಚಪ್ಪರ ಹಾಕುವ ಕೆಲಸಕ್ಕೆ ಮಾದಿಗರಿಗೆ ಅನುಮತಿ ನೀಡಲಾಯಿತು. ನ್ಯಾಯದ ಪರಿಣತಿ ಜ್ಞಾನದ ಅವಶ್ಯಕತೆ ಉಂಟಾದಾಗ ಸ್ಥಳೀಯ ನಾಯಕನು ನ್ಯಾಯಪೀಠವನ್ನು ನೇಮಿಸುತ್ತಿದ್ದನು. ಅದರಲ್ಲಿ ಅಗ್ರಹಾರದವರು, ಹಳ್ಳಿಯ ಅಧಿಕಾರಿಗಳು ಮತ್ತು ವರ್ತಕ ಸಂಘದ ಮುಖ್ಯಸ್ಥರು ಇರುತ್ತಿದ್ದರು.[೧೩೬] ಮುಖ್ಯವಾಗಿ ಎರಡು ಉಪ ಪಂಗಡಗಳಿದ್ದವು. ಮಾಲರು ಮತ್ತು ಮಾದಿಗರು. ಇವೆರಡರ ನಡುವೆ ವಿವಾಹ ಸಂಬಂಧವಿರಲಿಲ್ಲ. ಮಾದಿಗರು ಮುಖ್ಯವಾಗಿ ಕುಶಲಕರ್ಮಿಗಳು. ಪಾದರಕ್ಷೆಗಳನ್ನು ತಯಾರಿಸುವವರು. ಬಾವಿಯಿಂದ ನೀರೆತ್ತಲು ತೊಗಲಿನ ಹಗ್ಗವನ್ನು, ಬಕೆಟ್‌ಗಳನ್ನು ತಯಾರಿಸುತ್ತಿದ್ದರು.[೧೩೭] ಇಂದಿಗೂ ಕೂಡ ಇವೆರಡು ಪಂಗಡಗಳ ನಡುವೆ ವೈವಾಹಿಕ ಸಂಬಂಧಗಳು ತುಂಬಾ ಸಂಕೀರ್ಣ ಸ್ಥಿತಿಯಲ್ಲಿಯೇ ಮುಂದುವರಿಯುತ್ತಿವೆ. ಯಾವುದೇ ರೀತಿಯ ಸಡಿಲತೆಗಳು ನಿರೀಕ್ಷಿಸಿದ ಪ್ರಮಾಣದಲ್ಲಿ ಕಂಡುಬರುತ್ತಿಲ್ಲ.

ಆ ಅವಧಿಯ ಸಂದರ್ಭದಲ್ಲಿ ಭಾರತದಾದ್ಯಂತ ವಣಿಕ ಸಂಘಗಳು ಅಸ್ತಿತ್ವದಲ್ಲಿದ್ದವು. ಕರಕುಶಲ ಕಸಬುದಾರರ ಹಿತರಕ್ಷಣೆ ಮಾಡುತ್ತಿದ್ದವು. ಕುಶಲಕರ್ಮಿಗಳು ತಮ್ಮ ಮನೆಗಳಲ್ಲಿ ವಸ್ತುಗಳನ್ನು ತಯಾರಿಸಿ ಮಾರಾಟಕ್ಕಾಗಿ ಮಾರುಕಟ್ಟೆಗೆ ತರುತ್ತಿದ್ದರು. ದಳ್ಳಾಳಿಗಳ ಮತ್ತು ಮಧ್ಯವರ್ತಿಗಳಿಂದ ಶೋಷಣೆಯಾಗದ ರೀತಿಯಲ್ಲಿ ಸಂಘವನ್ನು ರಚಿಸಿಕೊಂಡಿದ್ದರು. ಅದೇ ಗಿಲ್ಡ್ ಪದ್ಧತಿ. ಅಕ್ಕಸಾಲಿಗರು, ಕಮ್ಮಾರರು, ಬಡಗಿಗಳು, ಗಾರೆ ಕೆಲಸದವರು, ಕುಂಬಾರರು, ಜವಾಹಿರಿ ವರ್ತಕರು, ಶಿಲ್ಪಿಗಳು, ಚಮ್ಮಾರರು ಮೊದಲಾದ ಎಲ್ಲರೂ ಅವರವರ ಗಿಲ್ಡ್‌ಗಳನ್ನು ರಚಿಸಿಕೊಂಡಿದ್ದರು (ಹೊಯ್ಸಳರ ಕಾಲದ ಒಂದು ಶಾಸನವು ಅಯ್ಯಾವಳೆಯ ವನೂರ್ವರು ಎಂಬ *ಗಿಲ್ಡ್* ಕೆಲಸ ಮಾಡುತ್ತಿದ್ದ ರೀತಿಯನ್ನು ವರ್ಣಿಸುತ್ತದೆ). ಕೈಗಾರಿಕೋತ್ಪನ್ನ ವಸ್ತುಗಳೆಂದರೆ ಹತ್ತಿಬಟ್ಟೆ, ರೇಷ್ಮೆ, ಚರ್ಮದ ವಸ್ತುಗಳು, ಕೆತ್ತನೆ ವಸ್ತುಗಳು ಮುಂತಾದವುಗಳನ್ನು ರಫ್ತು ಮಾಡಲಾಗುತ್ತಿತ್ತು. ಕುದುರೆ ಮತ್ತು ಕಚ್ಚಾ ರೇಷ್ಮೆಯನ್ನು ಆಮದು ಮಾಡಿಕೊಳ್ಳಲಾಗುತ್ತಿತ್ತು. ಕುಂಬಾರರು ಮಡಿಕೆಗಳನ್ನು, ಮೋಚಿ ಅಥವಾ ಚಮ್ಮಾರರು ಪಾದರಕ್ಷೆಗಳನ್ನು ಪ್ರದೇಶದ ಎಲ್ಲಾ ಭಾಗದಲ್ಲಿ ತಯಾರಿಸುತ್ತಿದ್ದರು.[೧೩೮] ಬಹುಶಃ ಅಂದಿನ ದಿನಗಳಲ್ಲಿ ವೃತ್ತಿಕಾರರು ತಾವು ತಯಾರಿಸಿದ ವಸ್ತುಗಳಿಗೆ ಮಾರುಕಟ್ಟೆಯಲ್ಲಿ ನಿರೀಕ್ಷಿಸಿದ ಪ್ರಮಾಣದಲ್ಲಿ ಬೇಡಿಕೆ ಸಿಗದಿರುವಾಗ ಮತ್ತು ಮಧ್ಯವರ್ತಿಗಳು ಕಸುಬುದಾರರ ವಸ್ತುಗಳನ್ನು ಶೋಷಿಸುವ ಸಂದರ್ಭಗಳು ಹೆಚ್ಚಾಗಿರಬಹುದು. ಬಹುತೇಕ ಆಯಗಾರರು ತಮ್ಮದೇ ಆದ ಪ್ರತ್ಯೇಕ ಸಂಘಗಳನ್ನು ಮಾಡಿಕೊಂಡಿದ್ದರು ಎನ್ನುವುದು ಗಮನಾರ್ಹ. ಅಧ್ಯಯನದ ಅವಧಿಯ ಸಂದರ್ಭದಲ್ಲಿ ಭೂಮಾಲೀಕರು ಒಳಗೊಂಡಂತೆ ಮಧ್ಯವರ್ತಿಗಳೆಂಬ ಒಂದು ಗುಂಪು ತುಂಬಾ ಪ್ರಬಲವಾದ ಹಿಡಿತವನ್ನು ಸಮಾಜದಲ್ಲಿ ಸ್ಥಾಪಿಸಿಕೊಂಡಿತ್ತು. ರೈತರು ಮತ್ತು ಸಾಮಾನ್ಯ ಜನತೆ ಎಲ್ಲಾ ರೀತಿಯಿಂದಲೂ ಇವರ ಹಿಡಿತದಿಂದ ತಪ್ಪಿಸಿಕೊಳ್ಳಲು ಸಾಧ್ಯವೇ ಇರಲಿಲ್ಲ ಎನ್ನುವ ಸ್ಥಿತಿ ನಿರ್ಮಾಣವಾಗತೊಡಗಿತು. ವಿವಿಧ ವೃತ್ತಿ ಸಮುದಾಯಗಳು ಶ್ರೇಣಿಗಳನ್ನು ಸ್ಥಾಪಿಸಿಕೊಂಡು ಆ ಮುಖಾಂತರ ತಮ್ಮ ರಕ್ಷಣೆ ಮಾಡಿಕೊಳ್ಳುತ್ತಿದ್ದರು. ಈ ರೀತಿಯ ಲಕ್ಷಣಗಳುಳ್ಳ ವಣಿಕ ಸಂಘಗಳು ಮಧ್ಯಕಾಲೀನ ಕರ್ನಾಟಕದುದ್ದಕ್ಕೂ ಪ್ರಭಾವಶಾಲಿಯಾಗಿದ್ದವು. ಕೆಳಜಾತಿಗಳು ಮತ್ತು ದಲಿತರು ಇಂತಹ ಸಂಘಗಳಿಂದ ರಕ್ಷಿಸಿಕೊಳ್ಳುವ ಅಗತ್ಯವೂ ಇತ್ತು ಎನ್ನುವುದು ಗಮನಿಸಬೇಕಾದ ವಿಷಯ.

ಕರ್ನಾಟಕದ ಚರಿತ್ರೆಯಲ್ಲಿ ಹೆಚ್ಚು ಬದಲಾವಣೆ ಪ್ರಕ್ರಿಯೆಗೆ ಒಳಪಟ್ಟಿರುವ ವಿಚಾರಗಳೆಂದರೆ ಆರ್ಥಿಕ ಸಂಗತಿಗಳು. ಇದು ರಾಜ್ಯದ ಅಥವಾ ಸಮಾಜದ ಸ್ಥಾನಮಾನಗಳನ್ನು ನಿರ್ಧರಿಸುತ್ತದೆ. ಪ್ರಾಚೀನ ಕಾಲದಲ್ಲಿ ಕೆಳಜಾತಿ ಜನಾಂಗಗಳನ್ನು ಕುರಿತು ಶಾಸನ, ಸಾಹಿತ್ಯಾಧಾರಗಳು ಮಾಹಿತಿಯನ್ನು ದಾಖಲಿಸಿವೆ. ಅವುಗಳಲ್ಲಿ ಗುಲಾಮ ಪದ್ಧತಿ, ತೊತ್ತು ಪದ್ಧತಿ, ದಲಿತರ ಮಾರಾಟ, ಮಲೆನಾಡು ಪ್ರದೇಶ ಮತ್ತು ದಲಿತ ಮಹಿಳೆಯರು, ಕೆನರಾ ಕರಾವಳಿಯಲ್ಲಿ ಪೋರ್ಚುಗೀಸರು, ಕೊಡಗು ಪ್ರದೇಶ, ಜೀತಗಾರಿಕೆ, ವೃತ್ತಿಗಳು, ತೆರಿಗೆ, ಬಿಟ್ಟಿ, ತೆರಿಗೆ ನಿರಾಕರಣ ಸಂದರ್ಭಗಳು, ಭೂಮಾಲೀಕರು ಮತ್ತು ಕೃಷಿ ಕಾರ್ಮಿಕರು, ಭೂ ಮಾಲೀಕರು ಮತ್ತು ದಲಿತರು, ಕೂಲಿ ವ್ಯವಸ್ಥೆ, ಆಯಾಗಾರ ಪದ್ಧತಿ, ವರ್ಗಗಳು, ವರ್ತಕ ಶ್ರೇಣಿಗಳು ಮುಂತಾದ ವಿಚಾರಗಳನ್ನು ಕುರಿತು ಚರ್ಚಿಸಿ ಸಾಧ್ಯವಾದ ಮಟ್ಟಿಗೆ ವಿಶ್ಲೇಷಿಸಲು ಯತ್ನಿಸಿದೆ. ಹೆಚ್ಚಿನ ವಿಚಾರಗಳು ದಲಿತರ ಆರ್ಥಿಕ ವ್ಯವಸ್ಥೆಯತ್ತ ಕೇಂದ್ರೀಕೃತವಾಗಿವೆ. ಆ ಮುಖಾಂತರ ದಲಿತರ ಚರಿತ್ರೆಯೊಂದು ಹೊಸ ಬಗೆಯ ವಿಚಾರಗಳಿಗೆ ಮತ್ತು ಸಂಶೋಧನೆಗೆ ಒಳಪಡಲು ಅನುವಾಗುವತ್ತ ಸಹಾಯಕವಾದಂತಿದೆ. ಈ ವಿಚಾರಗಳಲ್ಲಿ ಹೆಚ್ಚು ಚರ್ಚೆಗೆ ಒಳಪಟ್ಟಿರುವ ಮತ್ತು ಇಂದಿಗೂ ಜೀವಂತವಾಗಿ ಮುಂದುವರಿಯುತ್ತಿರುವ ಸಮಾಜ ಘಾತಕ ಪದ್ಧತಿಗಳಲ್ಲಿ ದಲಿತರ ಮಾರಾಟ ವ್ಯವಸ್ಥೆ ಕೂಡ ಒಂದು. ಇದನ್ನು ನಾವು ಚರಿತ್ರೆಯಲ್ಲಿಯೇ ಓದಬೇಕಾಗಿಲ್ಲ. ಪ್ರಸ್ತುತ ದಿನಮಾನಗಳಲ್ಲಿ ನೋಡಬಹುದು. ಎಂದರೆ ಪ್ರಾಚೀನ ಕಾಲಕ್ಕೂ ಮತ್ತು ಇಂದಿಗೂ ಯಾವುದೇ ಬಗೆಯ ಬದಲಾವಣೆಗಳು ಆಗಿಲ್ಲವೆಂಬುದನ್ನು ಪ್ರತಿನಿಧಿಸುತ್ತವೆ. ಈ ಹಿನ್ನೆಲೆಯಲ್ಲಿ ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕದಲ್ಲಿ ಹುಟ್ಟಿದ ಬಹುತೇಕ ಸಂಪ್ರದಾಯಗಳು ಇಂದಿಗೂ ಮುಂದುವರೆಯುತ್ತಿವೆ ಎಂದರೆ ತಪ್ಪಾಗಲಾರದು. ಗುಲಾಮ ಪದ್ಧತಿ ಪ್ರಾಚೀನ ಕಾಲದಲ್ಲಿ ತಾಂಡವಾಡುತ್ತಿದ್ದಾಗ ಮಧ್ಯಕಾಲೀನ ಮತ್ತು ಮಧ್ಯಕಾಲೀನೋತ್ತರ ದಿನಮಾನಗಳಲ್ಲಿ ಜೀತ ಪದ್ಧತಿ ನಿಧಾನವಾಗಿ ಬದಲಾಗತೊಡಗಿತು. ಇಂದು ಕೂಲಿಕಾರ್ಮಿಕರು ಪಡೆಯುತ್ತಿರುವ ಕೂಲಿಯ ರೂಪದಲ್ಲಿ ಮುಂದುವರೆಯುತ್ತಿದೆ ಎಂಬುದನ್ನು ಗಮನಿಸಬಹುದು.

# ಟಿಪ್ಪಣಿಗಳು

೧. ಭಟ್ಟಾಚಾರ್ಯ ಎನ್., *ಎನ್ಷಿಯಂಟ್ ಇಂಡಿಯನ್ ಹಿಸ್ಟರ್ ಆಂಡ್ ಸಿವಿಲೈಸೇಷನ್*, ಮನೋಹರ್, ನ್ಯೂ ಡೆಲ್ಲಿ, ೧೯೯೮, ಪು.೧೭೧

೨. ಶರ್ಮ ಆರ್.ಎಸ್., (ಅನು: ವಿವಿಧ ಲೇಖಕರು), *ಪ್ರಾಚೀನ ಭಾರತದಲ್ಲಿ ಶೂದ್ರರು*, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೦೪, ಪು.೧೩೮-೧೩೯

೩. ಶರ್ಮ ಆರ್.ಎಸ್., (ಅನು: ಶಂಕರನಾರಾಯಣ ರಾವ್ ಎನ್.ಪಿ.), *ಪ್ರಾಚೀನ ಭಾರತ*, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೦೨, ಪು.೧೪೨

೪. ಚಿದಾನಂದಮೂರ್ತಿ ಎಂ., *ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ*, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೫, ಪು.೫೬

೫. ಚಿದಾನಂದಮೂರ್ತಿ ಎಂ., *ಜನ-ಜನಪದ-ಜಾನಪದ*, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೦೨, ಪು.೨೩೯-೪೦

೬. ಚನ್ನಕ್ಕ ಎಲಿಗಾರ, ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ಪು.೭೪-೭೫

೭. ಚಿದಾನಂದಮೂರ್ತಿ ಎಂ., ಪೂರ್ವೋಕ್ತ, ಪು.೫೬

೮. ಚನ್ನಕ್ಕ ಎಲಿಗಾರ, ಪೂರ್ವೋಕ್ತ, ಪು.೭೪; ಕುಂದೂರಿನಲ್ಲಿ ಹೆಣ್ಣಿಗೆ ಸಲ್ಲುದ ಸ್ವಾಸ್ತೆ ಮಾರಿಯಾದೆಯನ್ನು ದೃಢಪಡಿಸುತ್ತದಲ್ಲದೆ "ಹೆಣ್ಣಿಂಗೆ ಹೆಣ್ಣುಮಕ್ಕಳಿಂಗೆ ಸಹ ಆಸ್ತಿಯಲ್ಲಿ ಪಾಲು ಸಲ್ಲುವುದು" ಎಂದು ಶಾಸನ ತಿಳಿಸುತ್ತದೆ. (ಎ.ಕ., ಸಂ.೧, ಸೋಮವಾರ ಪೇಟೆ, ಪು. ೮೭-೮೮)

೯. ಅದೇ, ಪು.೭೫

೧೦. ಬಸವಣ್ಣನ ವಚನಗಳಲ್ಲಿ ಕೂಡ ತೊತ್ತುಗಳ ವಿಚಾರ ಉಲ್ಲೇಖವಾಗಿದೆ; ರಾಘವಾಂಕನ ಹರಿಶ್ಚಂದ್ರಕಾವ್ಯ ಹೇಗೆ ಮಾರಾಟ ಮಾಡುತ್ತಿದ್ದರು ಎನ್ನುವುದನ್ನು ತಿಳಿಸುತ್ತದೆ. ಆದರೆ ಚರಿತ್ರೆ ಈ ವಿಷಯ ಕುರಿತಂತೆ ಮೌನ ವಹಿಸಿದರೆ ಕಾವ್ಯಗಳು ಚರಿತ್ರೆಯನ್ನು ಕಟ್ಟಿಕೊಡುತ್ತವೆ. ತೊತ್ತುಗಳನ್ನು ಮಾರಾಟಕ್ಕೆ ಇಟ್ಟಾಗ ಅವರ ತಲೆಯ ಮೇಲೆ ಹುಲ್ಲು ಕಟ್ಟುತ್ತಿದ್ದರಂತೆ. ಹರಿಹರನ ರಗಳೆಗಳಲ್ಲಿ ಕೂಡ ಈ ಕುರಿತು ವಿವರಗಳು ಸಿಗುತ್ತವೆ.

೧೧. *ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೨*, ಕೊಪ್ಪಳ ಜಿಲ್ಲೆ, ಪು.೨೯೨

೧೨. ಎ.ಕ., ಸಂ.V, ಪು.XIIX, ಕ್ರಿ.ಶ.೮೬೫; ಈ ಶಾಸನದಲ್ಲಿ ಬರುವ ಮನೆಮಗತ್ತಿನ್ ಎಂಬುವುದನ್ನು ಮನೆಯ ಸೇವಕ ಎಂದು ಅರ್ಥೈಸಲಾಗಿದೆ. ಇದು ಬಾಣನು 'ಹರ್ಷಚರಿತ'ದಲ್ಲಿ ಬಳಸಿದ 'ಕುಲಪುತ್ರ' ಎಂಬ ಪದಕ್ಕೆ ಸಮಾನವಾದ ಕನ್ನಡ ಪದವೆಂದು ಚಿದಾನಂದಮೂರ್ತಿಯವರು ಅಭಿಪ್ರಾಯಪಡುತ್ತಾರೆ. ಮನೆಯ ಸೇವಕರೆಲ್ಲರೂ ದಲಿತರೆಂದು ಹೇಳುವುದು ಕಷ್ಟಸಾಧ್ಯ. ಅಂದು ಬಹುತೇಕ ಕೆಳಜಾತಿಗಳ ಮತ್ತು ಶೂದ್ರ ವರ್ಗಗಳಿಗೆ ಸೇರಿದ ಜನರು ಮಾಲೀಕರ ಹತ್ತಿರ ಸೇವೆ ಸಲ್ಲಿಸುತ್ತಿದ್ದರು.

೧೩. ಪುರುಷೋತ್ತಮ ಬಿಳಿಮಲೆ, *ದಲಿತ ಜಗತ್ತು*, ಹೊಸದಿಕ್ಕು ಪ್ರಕಾಶನ, ಬೆಂಗಳೂರು, ೧೯೮೯

೧೪. ಚಿದಾನಂದಮೂರ್ತಿ ಎಂ., ಪೂರ್ವೋಕ್ತ, ಪು.೨೪೨

೧೫. ಅದೇ, ಪು.೨೪೩

೧೬. ನರಸಿಂಹಮೂರ್ತಿ, *ಕರ್ನಾಟಕದ ಸೇವುಣರ ಇತಿಹಾಸ*, ಪು.೯೫

೧೭. ಚಿದಾನಂದಮೂರ್ತಿ ಎಂ., ಪೂರ್ವೋಕ್ತ, ಪು.೬೧

೧೮. ಮಹಾಲಿಂಗಂ ಟಿ.ವಿ., *ಅಡ್ಮಿನಿಸ್ಟ್ರೇಷನ್ ಆಂಡ್ ಸೋಷಿಯಲ್ ಲೈಫ್ ಅಂಡರ್ ವಿಜಯನಗರ*, ಯೂನಿವರ್ಸಿಟಿ ಆಫ್ ಮದ್ರಾಸ್, ೧೯೭೫, ಪು.೧೦

೧೯. ಅದೇ, ಪು.೧೧

೨೦. ಶ್ರೀನಿವಾಸಮೂರ್ತಿ ಹೆಚ್.ವಿ. ಮತ್ತು ರಾಮಕೃಷ್ಣನ್ ಆರ್., *ಸಮಗ್ರ ಕರ್ನಾಟಕ ಚರಿತ್ರೆ*, ಓರಿಯಂಟ್ ಲಾಂಗಮನ್, ಬೆಂಗಳೂರು, ೧೯೯೫, ಪು.೨೧೭; ಆ ಕಾಲಾವಧಿಯಲ್ಲಿ ಕರ್ನಾಟಕದಲ್ಲಿ ಮಾತ್ರವಲ್ಲದೇ ಇಡೀ ದಕ್ಷಿಣ ಭಾರತವು ಇಂತಹ ಅಮಾನವೀಯ ಪದ್ಧತಿಗಳಿಂದ ಮುಕ್ತವಾಗಿರಲಿಲ್ಲ. ವಿಜಯನಗರ ಆಳ್ವಿಕೆಯ ಸಂದರ್ಭದಲ್ಲಿ ತಮಿಳುನಾಡಿನ ಬಹುತೇಕ ಪ್ರದೇಶಗಳಲ್ಲಿ ಗುಲಾಮರ ಮಾರಾಟ ನಡೆಯುತ್ತಿತ್ತು. ಸಮಾಜದ ಕೆಳಜಾತಿಗಳಿಗೆ ಸೇರಿದ ಮುಖ್ಯವಾಗಿ ಪರಯ ಜಾತಿಗೆ ಸೇರಿದ ಗುಲಾಮರನ್ನು (ವೆಲ್ಲಾಳರು) ಮೂರು ಜನರನ್ನು ಮಾರಾಟ ಮಾಡುತ್ತಿದ್ದರೆಂದು ತಿಳಿದುಬರುತ್ತದೆ. ಕನ್ನಡ ಮಾತನಾಡುತ್ತಿದ್ದ ಭಾಷಿಕ ಸಮುದಾಯಗಳು ಮಾತ್ರವಲ್ಲದೆ ಇತರೆ ಭಾಷಿಕ ಸಮುದಾಯಗಳಲ್ಲಿ ಈ ರೀತಿಯ ಕ್ರೂರ ಪದ್ಧತಿಗಳು ಸಮಾಜದಲ್ಲಿ ಸದಾ ನಡೆಯುತ್ತಲೇ ಇದ್ದವು ಎನ್ನುವುದನ್ನು ಕರಾಶಿಮಾ ತಿಳಿಸುತ್ತಾರೆ. ತಿರುಚಿರಪಳ್ಳಿ, ಚಂಗಲ್‌ಪೇಟೆ ಪ್ರದೇಶಗಳಲ್ಲಿ ವೆಲ್ಲಾಳಗಳನ್ನು ಮಾರಾಟ ಮಾಡುತ್ತಿದ್ದರೆಂದು ಶಾಸನಾಧಾರಗಳು ಸಹ ಇವೆ(ನೊಬೇರೂ ಕರಾಶಿಮಾ, *ಸೌತ್ ಇಂಡಿಯನ್ ಸೊಸೈಟಿ ಅಂಡರ್ ವಿಜಯನಗರ*, ಪು.೧೨೩-೨೪).

೨೧. ಶ್ರೀಕಂಠಯ್ಯ, *ವಿಜಯನಗರ ಕಾಲದ ಕನ್ನಡ ಸಾಹಿತ್ಯದಲ್ಲಿ ಜನಜೀವನ ಚಿತ್ರ*, ಪು.೨೫೭

೨೨. ಷೇಕ್ ಅಲಿ (ಸಂ.), *ಕರ್ನಾಟಕ ಚರಿತ್ರೆ, ಸಂಪುಟ-೪*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭, ಪು.೨೧೫-೧೬

೨೩. *ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ*, ಕೊಪ್ಪಳ ಜಿಲ್ಲೆ, ಕ್ರಿ.ಶ.೧೬೭೯, ಪು.೧೨೮

೨೪. *ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ*, ರಾಯಚೂರು ಜಿಲ್ಲೆ, ಕ್ರಿ.ಶ.೧೬೪೦, ಪು.೨೧೭; ಈ ರೀತಿಯ ವಿವರಗಳು ಬಹಮನಿ ಸುಲ್ತಾನರ ಆಳ್ವಿಕೆಯ ಕಾಲದಲ್ಲಿ ದಾಖಲಾಗಿವೆ. ಇದೇ ಶಾಸನ ಸಂಪುಟದಲ್ಲಿ ಉಲ್ಲೇಖವಾಗಿರುವಂತೆ ಸುಲ್ತಾನರ ಸೇವಕರು ವಿವಿಧ ಕೋಟೆಗಳ ಬುರುಜುಗಳನ್ನು ಕಟ್ಟಿಸಿದ ವಿವರಗಳು ಕಂಡುಬರುತ್ತವೆ. ಇಬ್ರಾಹಿಂ ಆದಿಲ್‌ಷಾನ ಸೇವಕ ಅಬ್ದುಲ್ ಮಹಮದ್ ಕ್ರಿ.ಶ.೧೬೨೨ರಲ್ಲಿ ದೊಡ್ಡ ಕಟ್ಟಡ ನಿರ್ಮಿಸಿದನೆಂದು ತಿಳಿದು ಬರುತ್ತದೆ.

೨೫. ಕೆಳದಿ ವೆಂಕಟೇಶ ಜೋಯಿಸ್, *ಕೆಳದಿ ಶಾಸನಗಳ ಸಾಂಸ್ಕೃತಿಕ ಅಧ್ಯಯನ*, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೬, ಪು.೧೮೨

೨೬. ಕಲಬುರ್ಗಿ ಎಂ.ಎಂ. ಮತ್ತು ರಾಮಭಟ್ಟ ಬಿ.ಎಸ್., (ಸಂ.) *ಕೆಳದಿ ಸಂಸ್ಥಾನದ ಸಾಂಸ್ಕೃತಿಕ ಅಧ್ಯಯನ*, ಮಲೆನಾಡು ವೀರಶೈವ ಅಧ್ಯಯನ ಸಂಸ್ಥೆ, ಆನಂದಪುರ, ೧೯೯೪, ಪು.೨೪೭

೨೭. ಚಿದಾನಂದಮೂರ್ತಿ ಎಂ., ಪೂರ್ವೋಕ್ತ, ಪು.೨೪೩

೨೮. ಅದೇ, ಪು.೨೪೮

೨೯. ಅದೇ, ಪು.೨೫೦

೩೦. ಎ.ಕ., ಸಂ.೨, ಕ್ರಿ.ಶ.೧೫೪೦, ಪು.೧೪೨; ಮಧ್ಯಕಾಲೀನ ಕರ್ನಾಟಕದಲ್ಲಿ ಜನರನ್ನು ಎರಡು ಕಾರಣಗಳಿಗಾಗಿ ಮಾರಾಟ ಮಾಡುತ್ತಿದ್ದರು ಎಂಬ ನಿರ್ಧಾರಕ್ಕೆ ಬರಬಹುದು. ಒಂದು; ಬುಡಕಟ್ಟುಗಳು, ಕೃಷಿ ಕಾರ್ಮಿಕರು, ಗುಲಾಮರು, ಜೀತದಾಳು, ದಲಿತರು ಆರ್ಥಿಕವಾಗಿ ಇನ್ನೊಬ್ಬರ ಮೇಲೆ ಅವಲಂಬನೆ ಇದ್ದುದರಿಂದ ಸಹಜವಾಗಿ ಮಾಲೀಕರ ಇಚ್ಛೆಯಂತೆ ನಡೆದುಕೊಳ್ಳಬೇಕಾಗಿತ್ತು. ಇದಕ್ಕೆ ಅಪವಾದವೆಂಬಂತೆ ಅತ್ಯಲ್ಪ ಮಾಹಿತಿಗಳು ಮಾತ್ರ ಮೇಲ್ಜಾತಿ ಜನರ ಮಾರಾಟ ಕುರಿತು ವಿವರಗಳು ಸಿಗುತ್ತವೆ. ಎರಡು; ಕೇವಲ ಈ ಮೇಲೆ ತಿಳಿಸಿದ ಸಂದರ್ಭಗಳು ಮಾತ್ರವಲ್ಲದೆ ಕ್ಷಾಮ, ಬರಗಾಲ ಮತ್ತು ಆರ್ಥಿಕ ಸಂಕಷ್ಟವನ್ನು ಎದುರಿಸಲಾರದೆ ತಮ್ಮ ಮಕ್ಕಳನ್ನು ತಾವೇ (ಪೋಷಕರು) ಮಾರಾಟ ಮಾಡಿರುವ ಬಗ್ಗೆ ವಿವರಗಳು ಸಿಗುತ್ತವೆ. ಈ ಕುರಿತಂತೆ ಹೆಚ್ಚಿನ ಅಧ್ಯಯನಕ್ಕೆ ನೋಡಿ; ಚಿದಾನಂದಮೂರ್ತಿ ಎಂ., *ಮಧ್ಯಕಾಲೀನ ಕನ್ನಡ ಸಾಹಿತ್ಯದಲ್ಲಿ ಅಸ್ಪೃಶ್ಯತೆಯ ಪರಿಕಲ್ಪನೆ,* ಪು.೧೭೯-೧೮೨; ಪುರುಷೋತ್ತಮ ಬಿಳಿಮಲೆ, ದಲಿತ ಜಗತ್ತು, ಪು.೮-೯

೩೧. ಚಿದಾನಂದಮೂರ್ತಿ ಎಂ., ಪೂರ್ವೋಕ್ತ, ಪು.೨೪೬

೩೨. ಅದೇ, ಪು.೨೪೯-೨೫೨

೩೩. ಪುರುಷೋತ್ತಮ ಬಿಳಿಮಲೆ, *ದಲಿತ ಜಗತ್ತು,* ಪು.೮-೯

೩೪. ಚಿದಾನಂದಮೂರ್ತಿ ಎಂ., ಪೂರ್ವೋಕ್ತ, ಪು.೨೫೩

೩೫. ಪುರುಷೋತ್ತಮ ಬಿಳಿಮಲೆ, ಪೂರ್ವೋಕ್ತ, ಪು.೯; ಕ್ರಿ.ಶ. ೧೩೮೨ರ ಸುಮಾರಿಗೆ ಸ್ತ್ರೀ ಗುಲಾಮರನ್ನು ಸಾರ್ವಜನಿಕ ಪ್ರದೇಶಗಳಲ್ಲಿ ಮಾರಾಟ ಮಾಡಿದ ಬಗೆಗೆ ವಿವರಗಳು ದೊರೆಯುತ್ತವೆ. ಬಹುಶಃ ಮಠ ಮಾನ್ಯಗಳ ಮುಖ್ಯಸ್ಥರು ಇರುಳು ತಪ್ಪಿದ ಸ್ತ್ರೀಯರನ್ನು ಮಾರಾಟ ಮಾಡುತ್ತಿದ್ದರು. ಅದೇ ರೀತಿಯಾಗಿ ಈ ಮೇಲಿನ ಹೇಳಿಕೆಯನ್ನು ವಿಲ್ಕ್ಸ್ ಕೂಡ ಖಚಿತಪಡಿಸುತ್ತಾನೆ. ಅಂದು ಕೆಳಜಾತಿಗಳ ಸ್ತ್ರೀಯರಿಗೆ ಯಾವುದೇ ರೀತಿಯೂ ಸ್ವಾತಂತ್ರ್ಯವಿರಲಿಲ್ಲ ಎಂಬುದನ್ನು ಮನಗಾಣವುದರ ಜೊತೆಗೆ ದೈಹಿಕವಾಗಿ ಮತ್ತು ಮಾನಸಿಕವಾಗಿ ಶೋಷಣೆಗೆ ಒಳಗಾಗುತ್ತಿದ್ದಳು (ಗುರುರಾಜಾಚಾರ್ಯ ಎಸ್., *ಸಮ್ ಆಸ್ಪೆಕ್ಟ್ಸ್ ಆಫ್ ಎಕನಾಮಿಕ್ ಆಂಡ್ ಸೋಷಿಯಲ್ ಲೈಫ್ ಇನ್ ಕರ್ನಾಟಕ,* ಪು.೫೦)

೩೬. ಕೊಸಾಂಬಿ ಡಿ.ಡಿ., *ಆನ್ ಇಂಟ್ರೊಡಕ್ಷನ್ ಟು ಸ್ಟಡಿ ಆಫ್ ಇಂಡಿಯನ್ ಹಿಸ್ಟರಿ,* ಸಂಗಂ ಬುಕ್ಸ್, ೧೯೭೫, ಪು.೩೮೩

೩೭. ಮ್ಯಾಥ್ಯು ಕೆ.ಎಸ್., *ಪೋರ್ಚುಗೀಸ್ ಟ್ರೇಡ್ ವಿಥ್ ಇಂಡಿಯಾ ಇನ್ ದಿ ಸಿಕ್ಸ್‌ಟೀನ್ ಸೆಂಚುರಿ,* ಮನೋಹರ್, ನ್ಯೂ ಡೆಲ್ಲಿ, ೧೯೮೩, ಪು.೧೩೭-೩೮

೩೮. ಮ್ಯಾಥ್ಯು ಕೆ.ಎಸ್., ಮಾರಿನರ್ಸ್, *ಮರ್ಚಂಟ್ಸ್ ಆಂಡ್ ಓಸಿಯನ್ಸ್,* ಮನೋಹರ್ ನ್ಯೂ ಡೆಲ್ಲಿ, ೧೯೭೫, ಪು.೨೦೫

೩೯. ಸುರೇಂದ್ರರಾವ್ ಬಿ. ಮತ್ತು ಚಿನ್ನಪ್ಪ ಗೌಡ ಕೆ. (ಸಂ), *ದಿ ರಿಟ್ರೀವ್ಡ್ ಆಕ್ರೆ,* ಪ್ರಸಾರಾಂಗ, ಮಂಗಳೂರ್ ಯೂನಿವರ್ಸಿಟಿ, ಮಂಗಳೂರು, ೨೦೦೩, ಪು.೧೩೫-೩೬

೪೦. ಅದೇ, ಪು.೧೩೬

೪೧. ವಿಜಯ್ ಪೂಣಚ್ಚ ತಂಬಂಡ, *ಆಧುನಿಕ ಕೊಡಗು,* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦, ಪು.೪೨

೪೨. ಅದೇ, ಪು.೪೪
೪೩. ಹಿರೇಮಠ ಎಸ್.ಎಸ್., *ದಲಿತ ಸಂಸ್ಕೃತಿ,* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧, ಪು.೧೦೪
೪೪. *ಆಧುನಿಕ ಕೊಡಗು,* ಪು.೪೫
೪೫. ಅದೇ, ಪು.೪೬-೪೭
೪೬. ಅದೇ, ಪು.೧೩೭-೩೯
೪೭. ಕೊಸಾಂಬಿ ಡಿ.ಡಿ., ಪೂರ್ವೋಕ್ತ, ಪು.೩೮೦-೮೪
೪೮. ಅಮೃತಡಾಂಗೆ, (ಅನು: ಅನಂತಕೃಷ್ಣ ಹೆಬ್ಬಾರ್ ಮತ್ತು ರಾಮಚಂದ್ರ ಉಡುಪ), ಭಾರತ ಸಂಘಜೀವನದಿಂದ ಗುಲಾಮಗಿರಿಗೆ, ಅಭಿವ್ಯಕ್ತಿ ಪ್ರಕಾಶನ, ಮಂಗಳೂರು, ೧೯೮೩, ಪು.
೪೯. ಕೊಸಾಂಬಿ ಡಿ.ಡಿ., ಪೂರ್ವೋಕ್ತ, ಪು.೧೫೨
೫೦. ಕನ್ನಡಪ್ರಭ ದಿನಪತ್ರಿಕೆ, ೧೧.೦೮.೨೦೦೬
೫೧. ಸಂಯುಕ್ತ ಕರ್ನಾಟಕ, ೧೬.೦೮.೨೦೦೬
೫೨. ಶಿವಣ್ಣ ಕೆ.ಎಸ್.(ಸಂ.), *ಕರ್ನಾಟಕ ಚರಿತ್ರೆ, ಸಂ.೩,* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೧೯೯೭, ಪು.೧೬೫
೫೩. ಅದೇ, ಪು.೧೬೪
೫೪. ಅದೇ, ಪು.೧೬೪
೫೫. ಶಿವಣ್ಣ ಕೆ.ಎಸ್., *ದಿ ಅಗ್ರೇರಿಯನ್ ಸಿಸ್ಟಮ್ ಆಫ್ ಕರ್ನಾಟಕ,* ಪ್ರಸಾರಾಂಗ, ಮಾನಸ ಗಂಗೋತ್ರಿ, ಮೈಸೂರು, ೧೯೯೩, ಪು.೫೩
೫೬. ಶೈಲಾ ಟಿ. ವರ್ಮಾ, *ತುಳುನಾಡಿನ ಶಾಸನಗಳ ಸಾಂಸ್ಕೃತಿಕ ಅಧ್ಯಯನ,* ಜ್ಞಾನೋದಯ ಪ್ರಕಾಶನ, ೨೦೦೨, ಬೆಂಗಳೂರು, ಪು.೧೯೩-೯೪
೫೭. ಅದೇ, ಪು.೧೯೪
೫೮. ಸೌ.ಇ.ಇ., ಭಾಗ-೨, ಸಂ-IX, ಕ್ರಿ.ಶ.೧೩೭೭, ಪು.೪೨೨; ಮನೆ ಬಾವಿ ಕೆರೆ ಕಣ ಮಕ್ಕೆ ಮರ ನೆಕ್ಕೆ ಸಿಡಿಲು ಆ ಬಾಳಿಂಗೆ ಉಳ್ಳ ಹೊಳೆಯಾ(ಳು) ಹೆಂಣಾಳು ಗಂಡಾಳು ಕುರುಟಗಳು ಸಹ ಜನ.
೫೯. ಗುರುರಾಜಾಚಾರ್ಯ ಎಸ್., *ಸಮ್ ಆಸ್ಪೆಕ್ಟ್ಸ್ ಆಫ್ ಎಕನಾಮಿಕ್ ಆಂಡ್ ಸೋಷಿಯಲ್ ಲೈಫ್ ಇನ್ ಕರ್ನಾಟಕ,* ಪು.೭೫
೬೦. ಐಯರ್ ಎಲ್.ಕೆ.ಎ., *ಟ್ರೈಬ್ಸ್ ಆಂಡ್ ಕ್ಯಾಸ್ಟ್ಸ್, ವಾಲ್ಯೂಮ್ ೪,* ಮಿಥಲ್ ಪಬ್ಲಿಕೇಷನ್, ಪು.೩೨೫-೨೬
೬೧. ಫ್ರಾನ್ಸಿಸ್ ಬುಕಾನನ್, *ಎ ಜರ್ನಿ ಫ್ರಂ ಮದ್ರಾಸ್, ಥ್ರೋ ದಿ ಕಂಟ್ರೀಸ್ ಆಫ್ ಮೈಸೂರ್, ಮಲಬಾರ್ ಆಂಡ್ ಕೆನರಾ, ವಾಲ್ಯೂಮ್ ೨,* ಏಸಿಯನ್ ಎಜುಕೇಷನ್ ಸರ್ವೀಸ್, ಲಂಡನ್, ಪು.೧೦೮
೬೨. ಶಿವಣ್ಣ ಕೆ.ಎಸ್., ಪೂರ್ವೋಕ್ತ, ಪು.೬೨
೬೩. ಕೃಷ್ಣಯ್ಯ, *ಕೊಡಗಿನ ಇತಿಹಾಸ,* ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೯೫, ಪು.೧೮೫
೬೪. ಸಾಕಿ, *ಮೇಕಿಂಗ್ ಹಿಸ್ಟರಿ, ವಾಲ್ಯೂಮ್ ೧,* ವಿಮುಕ್ತಿ ಪ್ರಕಾಶನ, ಬೆಂಗಳೂರು, ೧೯೯೮, ಪು.೧೭೪
೬೫. ಶಿವಣ್ಣ ಕೆ.ಎಸ್., ಪೂರ್ವೋಕ್ತ, ಪು.೨೪೦; ಹಾನೆ-ಪಾನೆ ಎಂದರ್ಥ. ಒಂದು ಅಳತೆ ಪ್ರಮಾಣ.

೬೬. ಚಿದಾನಂದಮೂರ್ತಿ ಎಂ., ಪೂರ್ವೋಕ್ತ, ಪು.೩೨೫

೬೭. *ಪ್ರಾಚೀನ ಭಾರತದಲ್ಲಿ ಶೂದ್ರರು*, ಪು.೧೫೭; ಮಿಶ್ರ ಅಥವಾ ಸಂಕರ ಜಾತಿಗಳ ಅನುಕ್ರಮದಲ್ಲಿ ತೀರ ಕೆಳಸ್ತರದಲ್ಲಿದ್ದಂತಹ ಚಂಡಾಲ ಮತ್ತು ಇತರ ಜಾತಿಗಳ ಸ್ಥಿತಿಗತಿಗಳ ಬಗ್ಗೆ ನಮಗೆ ಕೆಲವು ವಿಚಾರಗಳು ತಿಳಿಯುತ್ತವೆ. ಸ್ಮೃತಿಯ ಶಾಸನಗಳ ಪ್ರಕಾರ ಅನಾಥ ಶವಗಳನ್ನು ಕೊಂಡೊಯ್ಯುವಂಥ ಹಾಗೂ ಅಪರಾಧಿಗಳಿಗೆ ವಿಧಿಸಲಾದ ಮರಣದಂಡನೆಯ ಶಿಕ್ಷೆಯನ್ನು ಜಾರಿಗೆ ಕೊಡುವಂಥ ಕೆಲಸಗಳನ್ನು ಚಂಡಾಲರು ನಿರ್ವಹಿಸಬೇಕಾಗಿತ್ತು. ಫಾಹಿಯಾನನು ಹೇಳುವಂತೆ ಬೇಟೆಗಾರರ ಮತ್ತು ಮೀನು ಮಾರಾಟಗಾರರ ವೃತ್ತಿಗಳನ್ನು ಅವರಿಗೆ ಮೀಸಲಾಗಿ ಇಡಲಾಗಿತ್ತು. ಕಟುಕರು, ಮರಣದಂಡನೆಯ ಶಿಕ್ಷೆಯನ್ನು ಜಾರಿ ಮಾಡುವವರು. ರೂಢಮಾಲಿಗಳು ಮತ್ತಿತರರು ಊರಹೊರಗೆ ವಾಸ. (ವಿವಿಧ ಲೇಖಕರು, ಅಭಿಜಾತ ಯುಗ, ಭಾರತೀಯ ವಿದ್ಯಾಭವನ, ಬೆಂಗಳೂರು, ಪು.೪೯೧)

೬೮. ಮಲ್ಲಾಪುರ ಬಿ.ವಿ.(ಸಂ.), *ನಯಸೇನ ಮತ್ತು ಅವನ ಕೃತಿಗಳು*, ಕನ್ನಡ ಅಧ್ಯಯನದ ಪೀಠ, ಪಠ್ಯ ಪುಸ್ತಕ ನಿರ್ದೇಶನಾಲಯ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೮, ಪು.೨೯೨; ಕೊಲೆಯಾದವರನ್ನು ಎಳೆದು ಹಾಕುವ ಕೆಲಸವು, ಪಗರಣಗಳಲ್ಲಿ ಅವರು ಪರೆಗಳನ್ನು ಬಾರಿಸುತ್ತಿದ್ದರು. ಹೊಲೆಯರಿಗೆ ತಮ್ಮ ಅಡುಗೆಗಳಿಗೆ 'ಮಾಣಿಕದೇವಿ' ಹೆಸರಿಡುತ್ತಿದ್ದರು. ಹೊಲೆಯರು ದುಷ್ಕುಲಜರಾದರೂ ಶುದ್ಧ ಚಾರಿತ್ರ್ಯದವರು ಎಂದು ನಯಸೇನ ತಿಳಿಸುತ್ತಾನೆ.

೬೯. ಮಹಾಲಿಂಗಂ ಟಿ.ವಿ., ಪೂರ್ವೋಕ್ತ, ಪು.೨೫; ದೊಂಬರು ಕೆಲವು ಅದ್ಭುತವಾದ ಚತುರತೆಯ ಆಟಗಳನ್ನು ಆಡುತ್ತಿದ್ದರು. ಭಾರಿ ಆನೆಯೊಂದು ಮರದ ತುಂಡಿನ ಮೇಲೆ ನಾಲ್ಕು ಕಾಲುಗಳನ್ನು ಒಂದೇ ಕಡೆ ಹಾಕಿ ನಿಂತುಕೊಂಡು ವಾದ್ಯಕ್ಕೆ ತಕ್ಕಂತೆ ತನ್ನ ಸೊಂಡಿಲನ್ನು ಮೈಯನ್ನು ಕುಣಿಸಿತು. ರಾಜಧಾನಿಗೆ ಆನೆಗಳು ಬರುವಾಗ ಆನೆಗಳಿಗೆ ಸೊಗಸಾದ ಹೊದಿಕೆಗಳನ್ನು ಹೊಂದಿಸಿ ಬೆನ್ನಿಗೆ ಅಂಬಾರಿಗಳನ್ನು ಬಿಗಿದಿರುತ್ತಾರೆ. ಈ ಅಂಬಾರಿಗಳಲ್ಲಿ ದೊಂಬರೂ, ನಾನಾ ಆಟ ಚತುರರೂ ಕುಳಿತುಕೊಳ್ಳುತ್ತಾರೆ. ಕಾರ್ಯಕ್ರಮದ ಕೊನೆಯಲ್ಲಿ ಗಾಯಕರಿಗೆ, ಪ್ರವಚನಕಾರರಿಗೆ, ದೊಂಬರಿಗೂ ರಾಜನಿಂದ ಸೊಗಸಾದ ಚಿನ್ನದ ಉಡುಪುಗಳ ಬಹುಮಾನ ದೊರೆಯುತ್ತಿದ್ದರು. (ವಿವೇಕ ರೈ ಬಿ.ಎ., (ಸಂ.), ಪ್ರವಾಸಿ ಕಂಡ ವಿಜಯನಗರ, ಪು.೨೧, ೨೨)

೭೦. ಗ್ರಾಮೀಣ ಪ್ರದೇಶದಲ್ಲಿ ದಲಿತರು ಎಲ್ಲಾ ರೀತಿಯ ಆಗುಹೋಗುಗಳಿಗೆ ಒಳಪಡುತ್ತಾರೆ. ಚಿತ್ರದುರ್ಗ ಜಿಲ್ಲೆಯ ಸುತ್ತಮುತ್ತಲಿನ ಪ್ರದೇಶದಲ್ಲಿ ಹಳ್ಳಿಯಲ್ಲಿ ಯಾರಾದರೂ ಮರಣ ಹೊಂದಿದರೆ ಸುದ್ದಿಯನ್ನು ಸಂಬಂಧಿಕರಿಗೆ ಮುಟ್ಟಿಸಲು ಮಾದಿಗರನ್ನು ಕಳಿಸುತ್ತಾರೆ. ಯಾವುದೇ ರೀತಿಯಲ್ಲಿ ತಿರಸ್ಕರಿಸುವಂತಿರಲಿಲ್ಲ. ತನ್ನೆಲ್ಲಾ ಕೆಲಸಗಳನ್ನು ಬದಿಗೊತ್ತಿ ಮಧ್ಯರಾತ್ರಿಯಲ್ಲಿಯೇ ದೂರದ ಊರುಗಳಿಗೆ ಹೋಗಿ ಮರಣದ ಸುದ್ದಿಯನ್ನು ಮುಟ್ಟಿಸಬೇಕಾಗುತ್ತದೆ. ಕೆಲವೊಂದು ಸಂದರ್ಭದಲ್ಲಿ ಯಾವುದೇ ಮೂಲಭೂತ ಸೌಲಭ್ಯವಿಲ್ಲದ ಊರುಗಳಿಗೆ ನಡೆದುಕೊಂಡು (ಅನಿವಾರ್ಯ) ಹೋಗಲೇಬೇಕಾಗುತ್ತದೆ. ಇಂದಿಗೂ ಕೂಡ ಕೆಲವು ಹಳ್ಳಿಗಳಲ್ಲಿ ಈ ವ್ಯವಸ್ಥೆ ಇನ್ನೂ ಜೀವಂತವಾಗಿದೆ. ವಾರ್ತಾವಾಹಕರಾಗಿ, ಸಂದೇಶಕರಾಗಿ ಕಾರ್ಯ ನಿರ್ವಹಿಸುತ್ತಿದ್ದರು.

೭೧. ಮೋಹನ್‌ಕೃಷ್ಣ ರೈ, *ಪ್ರಭುತ್ವ ಮತ್ತು ಜನತೆ*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫, ಪು.೩೨

೭೨. ಎ.ಕ., ಸಂ.೧೧, ಕ್ರಿ.ಶ.೧೫೦೬, ಪು.೨೫

೭೩. ಕೃಷ್ಣದೇವರಾಯನ ಕಾಲಕ್ಕೆ ಸಂಬಂಧಿಸಿದ ಒಂದು ಶಾಸನವು (ಕ್ರಿ.ಶ.೧೫೨೧) ಹಲವು ಬಗೆಯ ವೃತ್ತಿ ತೆರಿಗೆಗಳನ್ನು ಕುರಿತು ಉಲ್ಲೇಖಿಸುತ್ತದೆ. "ಗಾರಿದೆರೆ ಗಣಾಕಾರತೆರೆಗೆ ವೋಜುಗಳ ತೆರಿಗೆ ದಾಸುಗಳ ತೆರಿಗೆ ಆ ಹಳ ದೆರೆಗೆ

ಆ ಸಗರ ತೆರಿಗೆ ನಾಯಿಂದರ ತೆರಿಗೆ ಕುಂಬಾರ ತೆರಿಗೆ ಗಾಣದ ಸುಂಕ ಕುಂಬನಕಾವಲಿ ಸುಂಕ ಮಗ್ಗಾ ಸುಂಕ ಮಾದಾರಿಕೆ ಸಲಿಯಾ" ಎಂದು ತಿಳಿದುಬರುತ್ತದೆ.

೭೪. ಎ.ಕ., IV, ಕ್ರಿ.ಶ.೧೧೬೨, ಪು.೪೯೯; ಹೊಯ್ಸಳರ ನರಸಿಂಹನ ಕಾಲದ ಒಂದು ಶಾಸನವು ತೊತ್ತುಗಳ ಮೂಲದ ತೆರಿಗೆಯನ್ನು ಪ್ರಸ್ತಾಪಿಸುತ್ತದೆ.

೭೫. ಚಿದಾನಂದಮೂರ್ತಿ ಎಂ., *ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ*, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೦೨, ಪು.೪೪೩-೪೮

೭೬. ಚಿದಾನಂದಮೂರ್ತಿ ಎಂ., *ಮಧ್ಯಕಾಲೀನ ಕನ್ನಡ ಸಾಹಿತ್ಯದಲ್ಲಿ ಅಸ್ಪೃಶ್ಯತೆಯ ಪರಿಕಲ್ಪನೆ*, ಪು.

೭೭. ಅದೇ, ಪು.೩೭

೭೮. ಎ.ಕ., ಸಂಪುಟ-೨, ಪು.೭೦

೭೯. ಮಹದೇವ ಸಿ., *ಕರ್ನಾಟಕ ಪುರಾತತ್ವ ಶೋಧ*, ಲಕ್ಷ್ಮಿ ಪ್ರಕಾಶನ, ಶ್ರೀರಂಗಪಟ್ಟಣ, ೨೦೦೧, ಪು.೫-೭; ಶಾಸನಗಳಲ್ಲಿ ಉಲ್ಲೇಖವಾಗಿರುವ ತೆರಿಗೆಗಳಲ್ಲಿ 'ಬಾಲವಣ' ಸಹ ಒಂದು. ಬಾಲವಣ, ಬಾಲಪಣ, ಬಾಲದೆರಿಗೆ, ಬಾಲವಣದೆರೆ ಎಂದು ಪ್ರಸ್ತಾಪಿಸಿವೆ. ರೈಸ್‌ರವರು ಇದನ್ನು ಮಕ್ಕಳ ಮೇಲೆ ಹಾಕುತ್ತಿದ್ದ ತೆರಿಗೆಯೆಂದು ಹೇಳುತ್ತಾರೆ. ಚಿದಾನಂದಮೂರ್ತಿಯವರು ಇದನ್ನು ಬಹುಶಃ ಎತ್ತುಗಳ ಮೇಲೆ ವಿಧಿಸುತ್ತಿದ್ದ ತೆರಿಗೆಯೆಂದು ಅಭಿಪ್ರಾಯಪಡುತ್ತಾರೆ. ಪ್ರಾಚೀನ ಕರ್ನಾಟಕದಲ್ಲಿ ಇದರ ಉಲ್ಲೇಖ ಹೀಗಿದೆ: "ಮಹಾಪಸಾಯಿತ ಹೆರ್ಗುಣ ...ಚಯನು ಹೊಲೆಯರ ಬಾಲಪಣವನ್ನು ಎತ್ತುವಲ್ಲಿ, ಸಾಗತವಳ್ಳಿಯ ಹೊಲೆಯರ ಬಾಲವಣವನ್ನು ಲಕ್ಷ್ಮೀನಾರಾಯಣ ದೇವರ ನಂದಾದೀವಿಗೆಗೆ ನೀಡಿದ್ದಾನೆ" ಎಂದು ತಿಳಿಸುತ್ತದೆ. ಪ್ರಶ್ನೆ ಉದ್ಭವಿಸುವುದು 'ಹೊಲೆಯರ ಬಾಲವಣ' ಎಂದಿರುವುದು. ಹೊಲೆಯರು ಪ್ರಾಚೀನ ಕರ್ನಾಟಕದಲ್ಲಿ ಪಶುಪಾಲನೆ ಜೊತೆಗೆ ಕೃಷಿಯಲ್ಲಿ ತೊಡಗಿದ್ದರೆಂದು ಹೇಳಬಹುದು. ಭೂ ಒಡೆತನ ಕುರಿತಂತೆ ಅಪರೂಪದ ದಾಖಲೆಗಳು ಮಾತ್ರ ಇವೆ. ಪಾಂಡವಪುರ ತಾಲೂಕಿನ ಚೆನಕುರಳಿ ಗ್ರಾಮದಲ್ಲಿ 'ಬಾಲದ್ಪಣ'ವನ್ನು ವಸೂಲಿ ಮಾಡುವ ಪದ್ಧತಿ ಇಂದಿಗೂ ಇದೆ. ಈ ಪದ್ಧತಿಯು ಕ್ರಿ.ಶ.೮ನೇ ಶತಮಾನದಿಂದ ಇತ್ತೀಚಿನವರೆಗೂ ಕೆಲವು ಹಳ್ಳಿಗಳಲ್ಲಿ ನಿರಂತರವಾಗಿ ಮುಂದುವರಿಯುತ್ತಿರುವುದು ಕಾಣಬಹುದು. (ಅದೇ, ಪು.೫-೭)

೮೦. ಎ.ಕ., ಸಂ.೧೧, ಗುಂಡ್ಲುಪೇಟೆ, ನಂ.೬

೮೧. *ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ*, ಬಳ್ಳಾರಿ ಜಿಲ್ಲೆ, ಪು.೭;
'ಬಳ್ಳಾರಿ ಮುವತ್ತಱ ಪೊಲೆಯರ್ಗ್ಗೆ
ನಿಱಿಸಿದ ಸತ್ತಿ ಪೊಲೆರ್ಗ್ಗೆ ಇಲ್ಲ' ಎಂದು ತಿಳಿಸುತ್ತದೆ.

೮೨. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ, ಬಾಗಲಕೋಟೆ ಜಿಲ್ಲೆ, ಕ್ರಿ.ಶ.೧೫೫೨, ಪು.೪೩೫; ದೊಂಬರ ಕುರಿತು ಈ ಶಾಸನದಲ್ಲಿ ಮಾಹಿತಿಯಿದೆ.

೮೩. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ, ರಾಯಚೂರು ಜಿಲ್ಲೆ, ಕ್ರಿ.ಶ.೧೦೭೯, ಪು.೧೩೬;
ಪಂದಿ ಸತ್ತುದು ನಾಯಿಸತ್ತುದಂತ್ಯಜಾತಿ ಯಾರಾದೊ
ಡವಂಗಡಿ ಬೀದಿಯೊಳಗೆ ಮದುವೆಯಲು ಬಂಣ್ಣಿಯನೇ
ರೆ ಬರಸಲ್ಲದು ಬಂದನಪುಡೆ ಡಂಣ್ನೆರಡು ಗದ್ಯಾಣ
ಪೊನ್ನಂ ದಣ್ಣಮಂ ತಿರುವರಂಸ್ವಾಪುದಕೆ ಶ್ರೀ ಬಲ್ಲ ಎಂದು ತಿಳಿಸುತ್ತದೆ.

೮೪. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ, ರಾಯಚೂರು ಜಿಲ್ಲೆ, ಪು.೨೯೬

೮೫. ಗುರುರಾಜಾಚಾರ್ ಎಸ್., ಪೂರ್ವೋಕ್ತ, ಪು.೭೪ ; ಪ್ರಾಚೀನಕಾಲದ ಸಾಹಿತ್ಯ ಮತ್ತು ಶಾಸನಗಳಲ್ಲಿ ಇದನ್ನು ವಿಷ್ಟಿ ಎಂದು ಕರೆಯಲಾಗಿದೆ. ಅರ್ಥಶಾಸ್ತ್ರದಲ್ಲಿ ಕೌಟಿಲ್ಯನು ಸಮೂಹರ್ತ ಎಂಬ ಅಧಿಕಾರಿಯನ್ನು ಹೆಸರಿಸಿ ಈತನು ತನ್ನ ಅಧೀನಕ್ಕೆ ಒಳಪಟ್ಟ ಪ್ರದೇಶದ ವಿವಿಧ ಗ್ರಾಮಗಳ ಪಟ್ಟಿ, ಈ ಪ್ರದೇಶದಲ್ಲಿಯ ಬೆಳೆ, ಜಾನುವಾರು, ಅರಣ್ಯ ಉತ್ಪನ್ನ ಮುಂತಾದವುಗಳ ವಿವರ ಹೊಂದುವುದರ ಜೊತೆಗೆ ವಿಷ್ಟಿಯ ಬಗ್ಗೆ ಮಾಹಿತಿಯನ್ನು ಹೊಂದಿರಬೇಕೆಂದು ಸೂಚಿಸುತ್ತಾನೆ. ಆದರೆ 'ವಿಷ್ಟಿ' ಅಥವಾ 'ಬಿಟ್ಟಿ'ಯ ಸ್ವರೂಪವೇನು ಎಂಬುದು ಸ್ಪಷ್ಟವಾಗುವುದಿಲ್ಲ. ಸರ್ಕಾರದ ಅಧಿಕಾರಿಗಳು ತೆರಿಗೆ ನೀಡಲು ವಿಫಲರಾದ ವ್ಯಕ್ತಿಗಳನ್ನು ಕರೆಸಿ ತಮಗೆ ಸರಿಯೆನಿಸಿದ ಕೆಲಸಗಳನ್ನು ಮಾಡಲು ಆಜ್ಞಾಪಿಸುತ್ತಿರಬಹುದು. ಅಧಿಕಾರಿಗಳ ಸೇವೆ, ರಸ್ತೆ ಮತ್ತು ಕಟ್ಟಡ ಜೊತೆಗೆ ಶ್ರಮದಾಯಕವಾದ ಕೆರೆಗಳ ನಿರ್ಮಾಣ ಮಾಡುವುದು ಇತ್ಯಾದಿ ಇದರ ವ್ಯಾಪ್ತಿಗೆ ಸೇರುತ್ತಿದ್ದಿರಬಹುದು. ಹೊಯ್ಸಳರಿಗೂ ಮಾಂಡಲಿಕರಾಗಿದ್ದ ಕೊಂಗಾಳ್ವರ ಕೊಡಗಿನ ಕ್ರಿ.ಶ. ೧೧೭೫ರ ನಂದಿಗುಂದ ಶಾಸನದಲ್ಲಿ 'ಬಿಟ್ಟಿಬೇಸ'ವನ್ನು ಕೇರಿಯೊಂದರ ಜನಕ್ಕೆ ಪರಿಹಾರವಾಗಿ ಬಿಟ್ಟ ಸಂದರ್ಭವು 'ಬಲವಂತ ದುಡಿಮೆ'ಯನ್ನು ಸೂಚಿಸುತ್ತಿರಬಹುದು ಎಂದು ರೈಸ್ ಅವರು ಅಭಿಪ್ರಾಯಪಡುತ್ತಾರೆ. ಚಂಗಾಳ್ವರ ೧೩ನೇ ಶತಮಾನದ ಗೋಣಿಮರೂರು ಶಾಸನದ ಬಿಟ್ಟಿಯನ್ನು ಹಾಗೆಯೇ ಅವರು ಅರ್ಥೈಸಿದ್ದಾರೆ. ಆದರೆ ಕೊಡಗಿನ ಪರಂಪರೆಯಲ್ಲಿ ಪಡೆದ (ಜಮ್ಮು) ಭಟ್ಟಿ ಜಮೀನಿಗೆ ಸರ್ಕಾರಕ್ಕೆ ಸಲ್ಲಿಸಬೇಕಿದ್ದ ಒಂದು ಬಗ್ಗೆ ಮುಯ್ಯಾಳು ಸೇವೆ ಪಡೆದ ಫಲಕ್ಕೆ ಪ್ರತಿಫಲ ಸೇವೆ ಎಂಬರ್ಥವಿದೆ. (ಕರ್ನಾಟಕ ದರ್ಶನ, ಸಂ.೧೪, ೧೯೯೯, ಪು.೨೩೪-೩೫); 'ಬಿಟ್ಟಿ' ಎನ್ನುವುದು ಒತ್ತಾಯಪೂರ್ವಕ ದುಡಿಮೆ, ಸೇವೆ, ಅಗತ್ಯ ಸೇವೆ ಎಂದು ಮಾನಿಯರ್ ವಿಲಿಯಮ್ಸ್ ಅಭಿಪ್ರಾಯಪಡುತ್ತಾರೆ. ಧರ್ಮಶಾಸ್ತ್ರಕಾರರ ಪ್ರಕಾರ ವಿಷ್ಟಿ ಅಥವಾ ಬಿಟ್ಟಿಯು ಕುಶಲಕರ್ಮಿಗಳಿಗೆ ಸಂಬಂಧಿಸಿದೆ. ಮನು ಪ್ರಕಾರ ತಿಂಗಳಲ್ಲಿ ಒಂದು ದಿನ ಕುಶಲಕರ್ಮಿಗಳು ಮತ್ತು ಶೂದ್ರರು ರಾಜನಿಗೆ ಪುಗಸಟ್ಟೆ ಸೇವೆ ಸಲ್ಲಿಸಬೇಕಾಗಿತ್ತು (ಕುನ್ವರ್ ಮತ್ತು ಡಿಯೋ ಪ್ರಸಾದ್, ಟ್ಯಾಕ್ಸೇಷನ್ ಇನ್ ಏನ್ಶಿಯಂಟ್ ಇಂಡಿಯಾ, ೧೯೮೭, ಪು.೧೧೯-೨೦).

೮೬. ಅದೇ, ಪು.೭೫

೮೭. ಚಿದಾನಂದಮೂರ್ತಿ ಎಂ., *ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ,* ಪು.೪೨೦

೮೮. ಅದೇ, ಪು.೪೨೦

೮೯. ಗುರುರಾಜಾಚಾರ್ಯ, ಪೂರ್ವೋಕ್ತ, ಪು.೭೪

೯೦. ಕುಮಾರಸ್ವಾಮಿ ಕೆ.ಎಸ್., *ಪ್ರಾಚೀನ ಕರ್ನಾಟಕದಲ್ಲಿ ಶಿಲ್ಪಚಾರ್ಯರು,* ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು, ೧೯೯೬, ಪು.

೯೧. ಅದೇ, ಪು.೧೧೪

೯೨. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೧, ಬಳ್ಳಾರಿ ಜಿಲ್ಲೆ, ಕ್ರಿ.ಶ.೧೯೯೨, ಪು.೨೭೧

೯೩. ಸೌ.ಇ.ಇ., ಭಾಗ-೨, ಸಂ-IX, ಕ್ರಿ.ಶ.೧೫೪೪, ಪು.೬೧೯; ಈ ಕುರಿತಂತೆ ಮತ್ತೆರಡು ಶಾಸನಗಳು ಇದೇ ವಿಷಯವನ್ನು ಉಲ್ಲೇಖಿಸುತ್ತವೆ. ಸೌ.ಇ.ಇ., ಭಾಗ-೨, ಸಂ-IX, ೧೫೪೫, ಕ್ರಿ.ಶ.೧೫೪೮, ಪು.೬೨೦

೯೪. ಸೌ.ಇ.ಇ., ಭಾಗ-೨, ಸಂ.IX, ಕ್ರಿ.ಶ.೧೫೫೦, ಪು.೬೩೭

೯೫. *ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ,* ಪು.೩೭

೯೭. *ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ*, ರಾಯಚೂರು ಜಿಲ್ಲೆ, ಪು.೨೯೬

೯೮. ಮೋಹನ್ ಕೃಷ್ಣ ರೈ, ಪೂರ್ವೋಕ್ತ, ಪು.೨೯; ಬಹುತೇಕವಾಗಿ ಎಲ್ಲ ಭಾರತೀಯ ಚರಿತ್ರೆಕಾರರು, ವಿಶೇಷವಾಗಿ ರಾವ್‌ದ್ವಯರು ಮತ್ತು ಅನಂತರದ ಕರ್ನಾಟಕದ ಚರಿತ್ರೆಕಾರರು ಒಡೆಯರ ಅರಮನೆಯಲ್ಲಿ ನಡೆದ ಎನ್ನಲಾದ ಈ ಷಡ್ಯಂತ್ರ ರಕ್ತಪಾತಗಳ ಬಗ್ಗೆ ಚಕಾರವೆತ್ತುವುದಿಲ್ಲ. ಹಾಗೆಯೇ ಒಡೆಯರ ಕಾಲದ ವಿಶೇಷವಾಗಿ ಚಿಕ್ಕ ದೇವರಾಜರ ಕಾಲದ ಅಮಾನವೀಯ ತೆರಿಗೆಗಳು, ಶಿಕ್ಷೆಗಳ ಬಗ್ಗೆ ಇಂಗ್ಲಿಷ್ ಚರಿತ್ರೆಕಾರರು ಹೇರಳವಾಗಿ ವಿವರಿಸಿದರೆ, ರಾವ್‌ದ್ವಯರು ಮತ್ತಿತರರು ಆ ಪ್ರಸ್ತಾಪವನ್ನು ಮಾಡುವುದಿಲ್ಲ. ಇಲ್ಲಿ ಕರ್ನಾಟಕದ ಇತಿಹಾಸಕಾರರು ಮುಚ್ಚಿಟ್ಟಿರುವ ಮತ್ತು ಇಂಗ್ಲಿಷ್ ಬರಹಗಾರರು ಬಯಲಿಗೆಳೆದಿರುವ ಚಿಕ್ಕದೇವರಾಜರ ಒಂದು ಬರ್ಬರ ಕೃತ್ಯದ ಬಗೆಗೆ ಗಮನಹರಿಸಬೇಕಾಗಿದೆ. ಕ್ರೂರ ತೆರಿಗೆಗಳನ್ನು ವಿರೋಧಿಸಿ, ರಾಜನ ವಿರುದ್ಧ ಪ್ರತಿಭಟಿಸಲು ರೈತರನ್ನು ಸಂಘಟಿಸುತ್ತಿದ್ದ ನೂರಾರು ಜಂಗಮರನ್ನು ಕುತಂತ್ರದಿಂದ ಕೊಲ್ಲಿಸಿದ ಕ್ರೌರ್ಯ. ತೆರಿಗೆಗಳನ್ನು ಕಡಿಮೆ ಮಾಡುವವರೆಗೆ ಭೂಮಿಯನ್ನು ಉಳುವುದೇ ಬೇಡವೆಂದು ರೈತರನ್ನು ಸಂಘಟಿಸುತ್ತಿದ್ದರು. ಒಂದು ರೀತಿಯಲ್ಲಿ ಆ ಕಾಲಕ್ಕೆ ಇದು ಅದ್ಭುತವಾದ ಸಂಘಟನೆ, ಪ್ರತಿಭಟನೆ. ಆದರೆ ರಾಜನಿಗೆ ಈ ಕ್ರಮ 'ರಾಜದ್ರೋಹ' ಆದ್ದರಿಂದ ಅವರಿಗೆ ಮರಣದಂಡನೆ. ಆದರೆ ಈ ಬಗ್ಗೆ ನಮ್ಮ ದೇಶಿ ಚರಿತ್ರೆಕಾರರು ಸೊಲ್ಲೆತ್ತುವುದಿಲ್ಲ. ಅವರ ಪ್ರಕಾರ ಇದೇ ರಾಷ್ಟ್ರೀಯ ಧೋರಣೆಯ ಚರಿತ್ರೆಯಿರಬೇಕು (ಎಸ್. ಚಂದ್ರಶೇಖರ್, ಸಾಹಿತ್ಯ ಮತ್ತು ಚರಿತ್ರೆ, ೧೯೯೯, ಪು.೧೦೦).

೯೮. ಶಿವಣ್ಣ ಕೆ.ಎಸ್. ಪೂರ್ವೋಕ್ತ, ಪು.

೯೯. ಅದೇ, ಪು.೧೭೧

೧೦೦. ಅದೇ, ಪು.೧೫೨

೧೦೧. ಅದೇ, ಪು.೧೫೩

೧೦೨. ಮಾಲತಿ ಕೆ. ಮೂರ್ತಿ ಮತ್ತು ಹೆಚ್.ವಿ. ನರಸಿಂಹಮೂರ್ತಿ, *ಕುಂದಾಪುರ ತಾಲೂಕು: ಒಂದು ಅಧ್ಯಯನ*, ಭಂಡಾರ್‌ಕಾರ್ಸ್ ಆರ್ಟ್ಸ್ ಮತ್ತು ಸೈನ್ಸ್ ಕಾಲೇಜ್, ಕುಂದಾಪುರ, ೧೯೯೪, ಪು.೧೭-೧೮; ಪಶ್ಚಿಮ ಕರಾವಳಿಯಲ್ಲಿ ಕೃಷಿಯಾಧಾರಿತದಲ್ಲಿ ಸರ್ಫ್‌ಗಳನ್ನು *ಆಲೂಸ್* ಎಂದು ಕರೆಯುತ್ತಿದ್ದರು. ಸಾಮಾನ್ಯವಾಗಿ ಇವರು ತೀರ ಕೆಳಜಾತಿಗಳಾದ *ಹೊಲೆಯ, ಬಾಕುಡ ಮತ್ತು ಕೊರಗ* ಸಮುದಾಯಗಳಿಗೆ ಸೇರಿದವರಾಗಿದ್ದರು. ಸರ್ಫ್‌ಗಳನ್ನು ಎರಡು ಭಾಗಗಳಾಗಿ ವಿಂಗಡಿಸಲಾಗಿತ್ತು, ಅವು *ಹುಟ್ಟಾಳು* ಮತ್ತು *ಮಣ್ಣಾಳು*. ಹುಟ್ಟಾಳು ಅಂದರೆ ವಂಶಪಾರಂಪರ್ಯವಾಗಿ ಸೇವೆ ಸಲ್ಲಿಸಿಕೊಂಡು ಬಂದವರು. ಮಣ್ಣಾಳು ಅಂದರೆ ಭೂಮಿಯೊಂದಿಗೆ ಸಂಬಂಧವುಳ್ಳವರು ಮತ್ತು ಅವರನ್ನು ಬದಲಾಯಿಸಬಹುದಿತ್ತು. ಶಾಸನಗಳು ಮತ್ತು ಕಡತಗಳು ಇವರನ್ನು ವರ್ಗಾವಣೆ ಮಾಡಬಹುದಿತ್ತು ಎಂದು ತಿಳಿಸುತ್ತವೆ. ಈ ಕುರಿತು ಫ್ರಾನ್ಸಿಸ್ ಬುಕಾನನ್ ತನ್ನ ವರದಿಯಲ್ಲಿ ಬರೆದಿದ್ದಾನೆ. ರಾಜ್ಯದ ವಿರುದ್ಧ ಹಿಡುವಳಿದಾರರು, ರೈತರು ತಮ್ಮ ವಿರೋಧ ವ್ಯಕ್ತಪಡಿಸಿರುವುದನ್ನು ಗಮನಿಸಬಹುದು. ರಾಜ್ಯವು ಅಗತ್ಯಕ್ಕಿಂತ ಹೆಚ್ಚಿನ ತೆರಿಗೆಯನ್ನು ವಿಧಿಸಿದಾಗ ಭೂಮಾಲೀಕರು ಪ್ರತಿಭಟಿಸಿದ್ದಾರೆ. ಕ್ರಿ.ಶ.೧೪೬೫ರ ಶಾಸನವು ನಿಲಾವರ ಹಳ್ಳಿಯ ಜಮೀನ್ದಾರರು ಬಾರಕೂರು ರಾಜ್ಯದ ಗೌರ್ನರ್ ಪಂಡರಿದೇವನ ವಿರುದ್ಧ ಪ್ರತಿಭಟಿಸಿದ್ದನ್ನು ತಿಳಿಸುತ್ತದೆ. ಇದಕ್ಕೆ ವ್ಯತಿರಿಕ್ತವಾಗಿ ಕ್ರಿ.ಶ.೧೬೦೬ರ ಶಾಸನವು ಹಳೇಪೈಕ ಜಾತಿಗೆ ಸೇರಿದ ಜನತೆ ಗೇರುಸೊಪ್ಪ ಮತ್ತು ಸಂಗೀತಪುರ ರಾಣಿಯ ವಿರುದ್ಧ ಪ್ರತಿಭಟಿಸಿದ್ದನ್ನು ತಿಳಿಸುತ್ತದೆ. ಇದಕ್ಕೆ ಕಾರಣ ಜನತೆಯ ಮೇಲೆ ಹೆಚ್ಚಿನ ತೆರಿಗೆ ವಿಧಿಸಿದ್ದರಿಂದ. (ವಸಂತಮಾಧವ ಕೆ.ಜಿ., *ವೆಸ್ಟರ್ನ್ ಕರ್ನಾಟಕ*, ಪು.೧೦೯-೧೧೨).

೧೦೩. ವಿಜಯ್ ಪೂಣಚ್ಚ ತಂಬಂಡ, *ಆಧುನಿಕ ಕೊಡಗು*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦, ಪು.೪೫

೧೦೪. ಮೋಹನ್‌ಕೃಷ್ಣರೈ, ಪೂರ್ವೋಕ್ತ, ಪು.೩೦

೧೦೫. ಅದೇ, ಪು.೩೧; ಶ್ರಮಿಕವರ್ಗದಲ್ಲಿ ಪ್ರಮುಖರಾದರು ಕರಕುಶಲಕರ್ಮಿ ವರ್ಗ. ಶಾಸನಗಳು ಇವರಿಗೆ ಹಿಟ್ಟು, ಪಂಚಾಳ, ಕಾರುಕ, ೫ ವರ್ಗ, ಆಯಗಾರ ಮುಂತಾದ ಪಾರಿಭಾಷಿಕ ಶಬ್ದಗಳಿಂದ ಕರೆದಿವೆ. ಭೂರಹಿತ ಕೃಷಿಕೂಲಿಕಾರರನ್ನು ಮತ್ತು ಇತರ ಬಡವರನ್ನು ಬೆಸವೊಕ್ಕಳು(ಕೆಲಸಕ್ಕಿದ್ದ ಸೇವಕರು) ಬಿನುಗು, ಚಿಲುವಾನ, ವೋದಕ್ಕಳು ಎಂದು ಹೆಸರಿದೆ. ತೋಟ, ಹೊಲಗಳನ್ನು ಮಾಡುತ್ತಿದ್ದ ರೈತರಿಗೆ (೬೦ ಒಕ್ಕಲು, ೧೦೦ ಒಕ್ಕಲು, ೫೦ ಒಕ್ಕಲು, ೧೦೦೦ ಒಕ್ಕಲು ಇತ್ಯಾದಿ), ಕೀಳು ಒಕ್ಕಲು, ೪ ಎಳಮೆ, ತೋಟಿಗರು, ಯಾಶಿಗಾರ, ಕೇಶಿಕಾರ, ಗೇಣಿಕಾರ, ತಂಬುಲಿಗ (ಸಾಸಿರ್ವರು, ವನೂರ್‍ವರು ಇತ್ಯಾದಿ) ಹೇಳಲಾಗುತ್ತಿತು. ಎಕ್ಕಟಿಗರು, ಲೆಂಕರು, ೧೦೦೦ ಪರಿಗ್ರಹ, ಬಂದ ೧೦೦೦, ಬಿಲ್ಲ ೩೦೦, ಹುಲಿಯ(ಹೊಲೆಯ), ಜಂಗುಳಿ, ಅಂಕಕಾರ, ವೇಳೆವಾಳಿ, ಗರುಡ, ಬಾಣದ ಮುಂತಾದ ಸೈನಿಕರು ಅಥವಾ ಸೈನಿಕ ಸಂಘಗಳು ಆ ಕಾಲದಲ್ಲಿ ಅಸ್ತಿತ್ವದಲ್ಲಿದ್ದವು. ಹೊಲೆಯ, ಮಾದಿಗ, ತಳವಾರ, ಬೇಡ, ಮೇದ, ಗೊಲ್ಲ, ಗಾಣಿಗ, ಉಪ್ಪಾರ, ಅಗಸ, ನಾಯಿಂದ, ಕಂಚುಗಾರ, ಕಲುಕುಟಿಗ, ಒಡ್ಡರು, ಕುಂಬಾರ, ಅಕ್ಕಸಾಲಿ, ಜೇಡ, ಬಡಿಗ, ಕಮ್ಮಾರ, ಕುರುಬ, ಸಮಗಾರ, ಕೋಲುಗಾರ, ಡೊಂಬ, ಅಂಬಿಗ, ಬೋವ, ಶೂದ್ರ ಮುಂತಾದ ಜಾತಿವಾಚಕ ಪರಿಭಾಷೆಯೂ ಸಾಕಷ್ಟು ಬಳಕೆಯಾಗಿದೆ. ತೊತ್ತು, ಸೂಳೆ, ಊಳಿಗ, ಜೀತ, ಬಿಟ್ಟಿ, ವಿರಾಡ, ಕೂಲಿ, ಹಳ್ಳಿಕಾರ ಮುಂತಾದ ಪದಗಳು ಆ ಕಾಲದ ಇತರ ಶೋಷಿತ ವರ್ಗವನ್ನು ಮತ್ತು ಸ್ಥಿತಿಗತಿಯನ್ನು ಸೂಚಿಸುತ್ತದೆ. ಊಳಿಗಮಾನ್ಯ ಕಾಲದಲ್ಲಿ (ಪ್ರಾರಂಭ ಹಂತದಲ್ಲಿ) ಸಾಮಾನ್ಯ ಜನರಾಗಿದ್ದರು, ಕಾಲಕ್ರಮೇಣ ಆರ್ಥಿಕತೆ ವೃದ್ಧಿಸಿದಂತೆ ಮೇಲ್ಪೇದೆಗೆ ಇಂಬು ನೀಡಿತು. (ಹೊಸತು, ೨೦೦೬ ಡಿಸೆಂಬರ್, ಪು.೪೩)

೧೦೬. ಶಿವಣ್ಣ ಕೆ.ಎಸ್., ಪೂರ್ವೋಕ್ತ, ಪು.೧೬೫

೧೦೭. ಅದೇ, ಪು.೧೬೫

೧೦೮. ಅದೇ, ಪು.೧೬೩

೧೦೯. ಮೋಹನ್‌ಕೃಷ್ಣ ರೈ, ಪೂರ್ವೋಕ್ತ, ಪು.೩೨

೧೧೦. ಅದೇ, ಪು.೩೨

೧೧೧. ಬಾಲ ಗೋಪಾಲನ್, (ಅನು: ಎಚ್.ಎಸ್.ಶ್ರೀಮತಿ), *ಪ್ರಾಚೀನ ಭಾರತ ಚರಿತ್ರೆ; ಡಿ.ಡಿ.ಕೊಸಾಂಬಿಯವರ ಚಿಂತನೆಗಳು*, ಬೆಳ್ಳಿಚುಕ್ಕಿ ಪ್ರಕಾಶನ, ಬೆಂಗಳೂರು, ೧೯೯೮, ಪು.೨೨೫

೧೧೨. ಅದೇ, ಪು.೨೧೭-೧೮

೧೧೩. ಯೋಗೀಶ್ವರಪ್ಪ ಡಿ.ಎನ್., *ಹಾಗಲವಾಡಿ ನಾಯಕರು*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೧೪. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.೪೯

೧೧೫. ರಾಜಾರಾಮ ಹೆಗಡೆ, ಅಶೋಕ ಶೆಟ್ಟರ್ (ಸಂ.), *ಮಲೆಕರ್ನಾಟಕದ ಅರಸು ಮನೆತನಗಳು*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧, ಪು.೨೫

೧೧೬. ಕರ್ನಾಟಕ ಚರಿತ್ರೆ, ಸಂ.೩, ಪು.೨೪೫

೧೧೭. ಅದೇ, ಪು.೨೪೬

೧೧೮. ಮಹಾಲಿಂಗಂ ಟಿ.ವಿ., ಪೂರ್ವೋಕ್ತ, ಪು.೧೨೫

೧೧೯. ಅದೇ, ಪು.೧೨೬; ಆಳುಗಳನ್ನು ದಿನಗೂಲಿಯ ಮೇಲೆ ಹದಿನೈದು ದಿನಗಳು, ಮೂರು ತಿಂಗಳು, ಆರು ತಿಂಗಳು, ಒಂದು ವರ್ಷ ಈ ರೀತಿಯ ಲೆಕ್ಕದ ಮೇಲೆ ನೇಮಕ ಮಾಡಿಕೊಳ್ಳುತ್ತಿದ್ದರು. ಕೆಲಸಗಾರರು ಕೆಲಸದಲ್ಲಿ ಲೋಪ ಮಾಡಿದರೆ ಕೆಲಸ ಕಳೆದುಕೊಳ್ಳುವುದಲ್ಲದೆ, ನ್ಯಾಯಾಲಯದಲ್ಲಿ ವಿಚಾರಣೆಗೊಳಪಡಿಸಬೇಕಾಗಿತ್ತು. ಜೊತೆಗೆ ದಂಡ ಕಟ್ಟಬೇಕಾಗಿತ್ತು. ಮಾಲೀಕನು ತನ್ನ ಆಳುಗಳಿಗೆ ಕೂಲಿ ನೀಡದ ಸಂದರ್ಭಗಳಲ್ಲಿ ಅರಸನು ಮಧ್ಯೆ ಪ್ರವೇಶಿಸಿ ಕೂಲಿಯು ಲಭಿಸುವಂತೆ ಕ್ರಮ ತೆಗೆದುಕೊಳ್ಳುತ್ತಿದ್ದನು.

೧೨೦. ಕರ್ನಾಟಕ ಚರಿತ್ರೆ, ಸಂ.೩, ಪು.

೧೨೧. ಅದೇ, ಪು.೨೪೮

೧೨೨. ಅದೇ, ಪು.೨೫೪

೧೨೩. ಸಾಕಿ, ಪೂರ್ವೋಕ್ತ, ಪು.೧೭೭; ಹೆಚ್ಚಿನ ವಿವರಗಳಿಗೆ ನೋಡಿ: ಬರ್ಟನ್ ಸ್ಟೀನ್, ಪೆಸೆಂಟ್ ಸ್ಟೇಟ್ ಆಂಡ್ ಸೊಸೈಟಿ ಇನ್ ಮಿಡಿವಲ್ ಸೌತ್ ಇಂಡಿಯಾ, ಪು.೧೭೭-೭೮.

೧೨೪. ನಾಗೇಶ್ ಹೆಚ್.ವಿ., *ಗ್ರಾಮ ವ್ಯಾಸಂಗ,* ಚಂದ್ರನಾಥ ಪ್ರಕಾಶನ, ಧಾರವಾಡ, ೧೯೮೧, ಪು.೨೫

೧೨೫. ಅದೇ, ಪು.೨೭

೧೨೬. ಅದೇ, ಪು.೨೮

೧೨೭. ಅದೇ, ಪು.೨೯

೧೨೮. ಅದೇ, ಪು.೨೯

೧೨೯. ಅದೇ, ಪು.೩೮

೧೩೦. ಅದೇ, ಪು.೪೦

೧೩೧. ವಿರೂಪಾಕ್ಷಿ ಪೂಜಾರಹಳ್ಳಿ, *ಕರ್ನಾಟಕದಲ್ಲಿ ತಳವಾರಿಕೆ,* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೬, ಪು.೩೮

೧೩೨. ಅದೇ, ಪು.೪೬-೪೭

೧೩೩. ಅದೇ, ಪು.೫೧

೧೩೪. *ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ,* ಪು.೪೨೧

೧೩೫. ಅದೇ, ಪು.೪೯೦

೧೩೬. ಶಿವಣ್ಣ ಕೆ.ಎಸ್.(ಸಂ.), ಕರ್ನಾಟಕ ಚರಿತ್ರೆ, ಪು.೨೨೨

೧೩೭. ಅದೇ, ಪು.೨೪೮

೧೩೮. ಅದೇ, ಪು.೨೪೯

# ದಲಿತರು ಮತ್ತು ರಾಜ್ಯವ್ಯವಸ್ಥೆ

ರಾಜ್ಯ ಎನ್ನುವುದನ್ನು ಕೇವಲ ಆಡಳಿತಾತ್ಮಕ ಪರಿಭಾಷೆಯಲ್ಲಿ ಗಮನಿಸದೆ ಅದನ್ನು ಸಾಮಾಜಿಕ ಮತ್ತು ಆರ್ಥಿಕ ಹಿನ್ನೆಲೆಯಿಂದ ಗಮನಿಸುವುದು ಸೂಕ್ತವೆನಿಸುತ್ತದೆ. ಪ್ರಾರಂಭದ ಹಂತದಲ್ಲಿ ರಕ್ಷಣೆಗೆ ಒತ್ತು ಕೊಟ್ಟಿದ್ದ ರಾಜ್ಯವು ಕಾಲಕ್ರಮೇಣ ಎಲ್ಲಾ ಕ್ಷೇತ್ರಗಳಿಗೆ ಅದರ ವ್ಯಾಪ್ತಿ ಚಾಚಿಕೊಂಡಿತು. ಆ ಮುಖಾಂತರ ಆಡಳಿತದಿಂದ ರೂಪಾಂತರವಾಗತೊಡಗಿತು. ಈ ಹಿನ್ನೆಲೆಯಲ್ಲಿ ಸಮಾಜದ ಒಟ್ಟು ಚಿತ್ರಣವನ್ನು ಗಮನಿಸಿ ಗ್ರಹಿಸುವುದಾದರೆ ರಾಜ್ಯ ವ್ಯವಸ್ಥೆಯನ್ನು ಅಧ್ಯಯನ ಮಾಡುವುದು ಅತ್ಯಾವಶ್ಯಕ. ಜನತೆಯ ಹಿತರಕ್ಷಣೆಯ ಜೊತೆಗೆ ಸಮಾಜದ ರೂಪುರೇಷೆಗಳನ್ನು ನಿರ್ಮಾಣ ಮಾಡಬಲ್ಲದು. ಈಗಾಗಲೇ ಹಿಂದೆ ಚರ್ಚೆ ಮಾಡಿರುವ ಸಾಮಾಜಿಕ ಮತ್ತು ಆರ್ಥಿಕ ಅಧ್ಯಯನಗಳಿಗೂ ಹಾಗೂ ರಾಜಕೀಯ ವ್ಯವಸ್ಥೆಯನ್ನು ಕುರಿತು ಚರ್ಚಿಸುವುದಕ್ಕೂ ಭಿನ್ನತೆಯಿದೆ. ಅದು ವಿವಿಧ ಸಮುದಾಯಗಳು ಪಾಲ್ಗೊಳ್ಳಲು ಮತ್ತು ರಾಜ್ಯದ ಜೊತೆ ಇರುವ ಸಂಬಂಧದಲ್ಲಿ ಗುರುತಿಸಬಹುದು. ಅದರ ಮೂಲಕ ರಾಜ್ಯವು ನಿಗದಿತ ಸೇವೆಯ ಜೊತೆಗೆ ವೀರತ್ವದ ಸಿದ್ಧಾಂತಗಳಿಗೆ ಪ್ರಚೋದನೆ ನೀಡಿತು. ರಕ್ಷಣೆಯ ಜೊತೆಗೆ ಬಹುತೇಕ ಶೂದ್ರ ಜಾತಿಗಳನ್ನು ಬಳಸಿಕೊಂಡಿತು. ಆದುದರಿಂದ ವ್ಯವಸ್ಥೆಯ ಭಾಗವಾಗಿ ಕೆಳಸಮುದಾಯಗಳು ಅಧಿಕೃತ ಸೇವೆ ಸಲ್ಲಿಸಿವೆ. ಈ ಕುರಿತು ಚರ್ಚೆಯನ್ನು ಮುಂದುವರಿಸಿದರೆ ಚರಿತ್ರೆಯಲ್ಲಿ ಬಹಳಷ್ಟು ವಿವರಗಳು ದೊರೆಯುತ್ತವೆ. ಈ ಬಗೆಯ ಅಧ್ಯಯನ ಕುರಿತು ಚರ್ಚಿಸುವಾಗ ರಾಜ್ಯವು ರಾಜಕೀಯ ಆಯಾಮವೆಂದು ಗುರುತಿಸಿದರೂ ಅದರ ಹಿಂದೆ ಬಲವಾದ ಸಮಾಜೋ-ಆರ್ಥಿಕ ಸಂಬಂಧವಿರುವುದನ್ನು ನಾವು ಗಮನಿಸಬಹುದು. ಪ್ರಸ್ತುತ ಅಧ್ಯಾಯದಲ್ಲಿ 'ರಾಜ್ಯವ್ಯವಸ್ಥೆ ಮತ್ತು ದಲಿತರು' ಎನ್ನುವ ವಿಷಯವನ್ನು ಕುರಿತು ಚರ್ಚಿಸಲು ಯತ್ನಿಸಲಾಗಿದೆ. ಚರಿತ್ರೆ, ಶಾಸನ, ವೀರ ಸಾಹಿತ್ಯ ಮುಂತಾದ ಆಕರ ಸಾಮಗ್ರಿಗಳು ಈ ಕುರಿತು ಪ್ರಾಚೀನ ಕಾಲದಿಂದಲೂ ರಾಜ್ಯವು 'ಪ್ರಜೆಗಳ ಹಿತರಕ್ಷಣೆ' ಎಂಬ ಮಾನದಂಡವನ್ನು ಆಧರಿಸಿ ಆಳ್ವಿಕೆ ನಡೆಸಿದೆ. 'ರಾಜ್ಯ' ಎಂಬ ಪದವನ್ನು ಅರ್ಥೈಸುವುದು ಕಷ್ಟಸಾಧ್ಯ. ವಿವಿಧ ಪ್ರಾಂತ್ಯಗಳ ನಡುವಿನ ಘರ್ಷಣೆಗಳು, ತಿಕ್ಕಾಟಗಳು, ಕಲಹಗಳು ಆಗಿಂದಾಗ್ಗೆ ನಡೆಯುತ್ತಲೇ ಇರುತ್ತಿದ್ದವು. ಈ ಕುರಿತಂತೆ ಚರಿತ್ರೆಕಾರರು ಸಾಕಷ್ಟು ಅಧ್ಯಯನಗಳನ್ನು ನಡೆಸಿದ್ದಾರೆ. ಪ್ರಾಚೀನ ಹಾಗೂ ಮಧ್ಯಕಾಲೀನ ಕರ್ನಾಟಕದಲ್ಲಿ ದಲಿತರು ಆಡಳಿತ ವ್ಯವಸ್ಥೆಯ ಭಾಗವಾಗಿದ್ದನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಆಡಳಿತಾತ್ಮಕ ಸಂಬಂಧಗಳು, ವೀರಗಲ್ಲುಗಳು, ಮಾಸ್ತಿಕಲ್ಲುಗಳು, ಸೈನ್ಯದ ಸೇವೆ, ತಳವಾರಿಕೆ ಮತ್ತು ಪಾಳೆಯಗಾರರು ಹಾಗೂ ದಲಿತ ವಿಚಾರಗಳ ಕುರಿತು ಪ್ರಸ್ತುತ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಈ ಕ್ಷೇತ್ರಗಳಲ್ಲಿ ಶೂದ್ರ ಮತ್ತು ದಲಿತ ಸಮುದಾಯಗಳು ಗಮನಾರ್ಹ ಸಾಧನೆಗೈದಿವೆ. ಇವೆಲ್ಲಾ ಆಯಾಮಗಳನ್ನು ಅರ್ಥೈಸಿ ವಿಶ್ಲೇಷಿಸುವುದರ ಮೂಲಕ ದಲಿತರ ಸಾಂಸ್ಕೃತಿಕ ಚರಿತ್ರೆಯನ್ನು ರಚಿಸಲು ಸಾಧ್ಯವಾಗುತ್ತದೆ. ಈ ಕುರಿತು ಅಖಿಲ

ಭಾರತ ಮಟ್ಟದಲ್ಲಿ ಕೆಲವು ಅಧ್ಯಯನಗಳು ನಡೆದಿರುವುದು ಇಲ್ಲಿ ಮುಖ್ಯವೆನಿಸುತ್ತವೆ. ನಾಡಿನ ಚರಿತ್ರಕಾರರ ಅಧ್ಯಯನಗಳು ಈ ನಿಟ್ಟಿನಲ್ಲಿ ಮಹತ್ವ ಪಾತ್ರವನ್ನು ವಹಿಸಿವೆ. ಆದರೆ ಅವು ದಲಿತ ಕೇಂದ್ರಿತ ದೃಷ್ಟಿಕೋನದಿಂದ ನಡೆದಿಲ್ಲ ಎನ್ನುವುದನ್ನು ಗಮನಿಸಬಹುದು. ಆದುದರಿಂದ ವೀರಗಲ್ಲಿನ ಮೇಲೆ ಕಂಡುಬರುವ ಶಿಲ್ಪಗಳು ಇಲ್ಲಿ ಮುಖ್ಯವೆನಿಸುತ್ತವೆ. ಈಗಾಗಲೇ ಹೇಳಿದಂತೆ ಅವರ ಬರವಣಿಗೆಗಳನ್ನು ಈ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

ಎಸ್. ಶೆಟ್ಟರ್ ಅವರ *ಸಾವಿಗೆ ಆಹ್ವಾನ* (೨೦೦೪), ಚಿದಾನಂದಮೂರ್ತಿ ಅವರ *ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ* (೨೦೦೨), ಎಂ.ಎಂ.ಕಲಬುರ್ಗಿ ಅವರ *ಮಾರ್ಗ ಸಂಪುಟ-೧* (೧೯೯೭), ಆರ್.ಶೇಷಶಾಸ್ತ್ರಿ ಅವರ *ಕರ್ನಾಟಕದ ವೀರಗಲ್ಲುಗಳು* (೧೯೮೨), ಚೆನ್ನಕ್ಕ ಎಲಿಗಾರ ಅವರ *ಶಾಸನಗಳಲ್ಲಿ ಸ್ತ್ರೀ ಸಮಾಜ* (೧೯೯೦), ಬಿ.ಎಸ್.ಶೇಠ್ ಅವರ *ಕರ್ನಾಟಕದಲ್ಲಿ ಸತಿ ಪದ್ಧತಿ* (೧೯೮೦), ಬಸವರಾಜ ಕಲ್ಗುಡಿ ಅವರ *ಮಹಾಸತಿ ಆಚರಣೆ* (೧೯೮೪), ಎಸ್.ಎಸ್. ಹಿರೇಮಠ್ ಅವರ *ದಲಿತ ಸಂಸ್ಕೃತಿ* (೧೯೯೭), ಬಿ.ಎ. ವಿವೇಕ ರೈ ಅವರ *ತುಳು ಜಾನಪದ ಸಾಹಿತ್ಯ* (೧೯೮೪), ಡಿ. ಕೃಷ್ಣಯ್ಯ ಅವರ *ಕೊಡಗಿನ ಇತಿಹಾಸ* (೧೯೯೫), ವಿಜಯ್ ಪೂಣಚ್ಚ ತಂಬಂಡ ಅವರ *ಆಧುನಿಕ ಕೊಡಗು* (೨೦೦೦), ಕಪಟರಾಳ ಕೃಷ್ಣರಾಯ ಅವರ *ಸುರಪುರದ ಸಂಸ್ಥಾನದ ಇತಿಹಾಸ* (೨೦೦೧) ಮುಂತಾದವರ ಅಧ್ಯಯನಗಳು ಪ್ರಸ್ತುತ ವಿಷಯದ ಮೇಲೆ ಗಮನ ಸೆಳೆಯುತ್ತವೆ. ಈ ಅಧ್ಯಯನಗಳು ಚಾರಿತ್ರಿಕ ದೃಷ್ಟಿಯಿಂದ ಮುಖ್ಯವೆನಿಸುತ್ತವೆ. ಈ ಮೇಲಿನ ವಿದ್ವಾಂಸರ ಬರವಣಿಗೆಗಳನ್ನು ಪ್ರಸ್ತುತ ಅಧ್ಯಾಯದ ರೂಪರೇಷೆಯನ್ನು ಸಿದ್ಧಪಡಿಸಲು ಬಳಸಿಕೊಳ್ಳಲಾಗಿದೆ. ಇದರ ಜೊತೆಗೆ ಮೌಖಿಕ ಸಾಹಿತ್ಯವು ಕೂಡ ಇಲ್ಲಿ ಮುಖ್ಯವಾಗುವುದರ ಜೊತೆಗೆ ಲಿಖಿತ ದಾಖಲೆಗಳು ಕೂಡುವ ವಿವರಣೆ ಎಷ್ಟರ ಮಟ್ಟಿಗೆ ಪೂರಕವಾಗಲಿದೆ ಎಂಬುದನ್ನು ಅರ್ಥೈಸಲು ಸಾಧ್ಯವಿದೆ. ಕೆಲವು ಪ್ರಾಚೀನ ಕನ್ನಡ ಪಠ್ಯಗಳು ಪೂರಕ ಮಾಹಿತಿಯನ್ನು ಒದಗಿಸುತ್ತವೆ. ಅವುಗಳನ್ನು ಈ ಅಧ್ಯಾಯದಲ್ಲಿ ಬಳಸಿಕೊಳ್ಳಲಾಗಿದೆ.

## ೫.೧ ಆಡಳಿತಾತ್ಮಕ ಸಂಬಂಧಗಳು

ರಾಜ್ಯದ ಆಡಳಿತಾತ್ಮಕ ಸಂಬಂಧ ಪ್ರಕ್ರಿಯೆಯಲ್ಲಿ ವಿವಿಧ ಸಮುದಾಯಗಳ ಪಾಲ್ಗೊಳ್ಳುವಿಕೆ ಇತ್ತೀಚಿನ ಜಾಯಮಾನವಲ್ಲ. ಅದು ಪ್ರಾಚೀನ ಕಾಲದಿಂದಲೂ ರಾಜ್ಯದೊಂದಿಗೆ ಅವಿನಾಭಾವ ಸಂಬಂಧವನ್ನು ಇಟ್ಟುಕೊಳ್ಳುತ್ತಾ ಬಂದಿದೆ. ರಾಜ್ಯದ ರಕ್ಷಣೆ ಮತ್ತು ಅಭಿವೃದ್ಧಿಯ ದೃಷ್ಟಿಯಿಂದ ಸಾಮಾನ್ಯ ಜನರ ಸೇವೆ ಪ್ರಭುತ್ವಕ್ಕೆ ಅಗತ್ಯವಾಗಿತ್ತು. ಈ ಕುರಿತಂತೆ ಸಮಾಜದ ತಳಸಮುದಾಯಗಳ ಜನತೆ ಹಾಗೂ ಬುಡಕಟ್ಟು ಸರ್ವತೋಮುಖ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರ ವಹಿಸಿವೆ. ಆಡಳಿತಾತ್ಮಕ ಸಂಬಂಧ ಪ್ರಕ್ರಿಯೆಯಲ್ಲಿ ದಲಿತರಿಗೆ ಮತ್ತು ವೀರಮರಣಕ್ಕೆ ಅವಿನಾಭಾವ ಸಂಬಂಧವಿರುವುದನ್ನು ಅಧ್ಯಯನಗಳಿಂದ ಗುರುತಿಸಬಹುದು. ವೀರಗಲ್ಲುಗಳು ಮತ್ತು ಮಾಸ್ತಿಕಲ್ಲುಗಳಲ್ಲಿ ದಲಿತರ ಚರಿತ್ರೆ ಅಡಗಿದೆ. ಈ ಹಿನ್ನೆಲೆಯಲ್ಲಿ ಅವುಗಳನ್ನು ಪ್ರಸ್ತುತ ಅಧ್ಯಯನದಲ್ಲಿ ಚರ್ಚೆಗೆ ಒಳಪಡಿಸಲಾಗಿದೆ. ಪ್ರಾಚೀನ ಕಾಲದಿಂದಲೂ ದಲಿತರಿಗೆ ಮತ್ತು ರಾಜ್ಯಕ್ಕೆ ಆಡಳಿತಾತ್ಮಕ ಸಂಬಂಧಗಳಿವೆ. ಅಖಿಲ ಭಾರತ ಮಟ್ಟದಲ್ಲಿ ಗುರುತಿಸುವುದಾದರೆ ಗುಪ್ತರ ಕಾಲದಲ್ಲಿ ಸೌರಾಷ್ಟ್ರ, ಆವಂತಿ, ಅಬೂದ ಹಾಗೂ

ಮಾಳ್ವಗಳಲ್ಲಿ ಶೂದ್ರ ದೊರೆಗಳಿದ್ದರೆಂಬುದನ್ನು ಚರಿತ್ರೆ ತಿಳಿಯ ಪಡಿಸುತ್ತದೆ. ವಿದೇಶಿ ಬುಡಕಟ್ಟು ಜನಾಂಗಕ್ಕೆ ಸೇರಿದ ಇವರು ಬ್ರಾಹ್ಮಣತ್ವವನ್ನು ಘೋಷಿಸದಿದ್ದಕ್ಕೆ ಶೂದ್ರ ವರ್ಗಕ್ಕೆ ಸೇರಿದ್ದರು. ಹಾಗೆಯೇ ಕುಲಕ ಧೃತಿಮಿತ್ರ ಎಂಬ ಶೂದ್ರನು ಉತ್ತರ ಬಂಗಾಳ ಜಿಲ್ಲಾ ಪರಿಷತ್‌ನಲ್ಲಿ ಪ್ರತಿನಿಧಿಯಾಗಿದ್ದನೆಂದು ತಿಳಿಸುತ್ತದೆ. ಆಡಳಿತ ವ್ಯವಸ್ಥೆಯಲ್ಲಿ ಶೂದ್ರರೆ ಮುಖ್ಯ ಕೆಲಸಗಳನ್ನು ಮಾಡುತ್ತಿದ್ದರು. ಉನ್ನತ ರಾಜ್ಯಾಧಿಕಾರಿಗಳ ಚಟುವಟಿಕೆಗಳ ಬಗ್ಗೆ ಗುಪ್ತವಾಗಿ ವರದಿ ಮಾಡಲು ಮನೆಗೆಲಸದವರನ್ನು ನೇಮಿಸಿಕೊಳ್ಳಬೇಕೆಂದು ಹೇಳಲಾಗಿದೆ. ಹಳ್ಳಿಯ ಒಳಗೆ ಮತ್ತು ಹೊರಗೆ ಕಳ್ಳರ ಜಾಡನ್ನು ಪತ್ತೆ ಮಾಡಲು ಕೆಲಸವನ್ನು ಚಾಂಡಾಲರಿಗೆ ಹಾಗೂ ವಾಧಕರಿಗೆ (ಮರಣದಂಡನೆ ಆಜ್ಞೆಯನ್ನು ಕಾರ್ಯಗತಗೊಳಿಸುವವರು) ವಹಿಸಬೇಕೆಂಬ ಕಟ್ಟಳೆಯೂ ಇದೆ.[೧] ಭಾರತದ ಕೆಲವು ರಾಜವಂಶಗಳ ಆಳ್ವಿಕೆಯ ಸಂದರ್ಭದಲ್ಲಿ ಕೆಲವು ಮಂತ್ರಿಗಳಾಗಿ ದಲಿತರು ದುಡಿದ ವಿವರಗಳು ದೊರೆಯುತ್ತವೆ. ಆವಂತಿವರ್ಮನ ಕೆಳಗೆ ಕಾರ್ಯ ನಿರ್ವಹಿಸುತ್ತಿದ್ದ ಚಾಂಡಾಲ ಮಂತ್ರಿ ಸುಯ್ಯಾ ಎಂಬುವವನು ರಾಜ್ಯದ ಸರ್ವತೋಮುಖ ಬೆಳವಣಿಗೆಗೆ ಶ್ರಮಿಸಿದವನು. ಈ ರೀತಿಯ ವಿವರಗಳನ್ನು ಭಾರತದುದ್ದಕ್ಕೂ ಕಾಣಬಹುದು.[೨] ಬ್ರಾಹ್ಮಣೀಯ ಐತಿಹ್ಯಗಳ ಪ್ರಕಾರ ಮೌರ್ಯ ವಂಶದ ಸ್ಥಾಪಕ ಚಂದ್ರಗುಪ್ತ ಮೌರ್ಯನು ಅಂತಃಪುರದಲ್ಲಿದ್ದ ಮುರಾ ಎಂಬ ಶೂದ್ರ ಹೆಂಗಸಿನ ಮಗ.[೩] ಈ ಹಿನ್ನೆಲೆಯಲ್ಲಿ ನಾಡಿನಾದ್ಯಂತ ದಲಿತರ ಆಡಳಿತ ವ್ಯಾಪ್ತಿ ವಿಸ್ತಾರವಾಗಿದೆ.

ಕರ್ನಾಟಕದ ಸಂದರ್ಭವು ಬಹುತೇಕ ಇದೇ ಜಾಡಿನಲ್ಲಿ ಸಾಗುತ್ತದೆ. ದಕ್ಷಿಣ ಭಾರತದ ಅದರಲ್ಲೂ ಕರ್ನಾಟಕದ ಅತ್ಯಂತ ಪ್ರಾಚೀನ ಬುಡಕಟ್ಟುಗಳಲ್ಲಿ ಹೊಲೆಯ ಜಾತಿಯ ಬುಡಕಟ್ಟು ಒಂದೆಂದು ಫ್ರಾನ್ಸಿಸ್ ಬುಕಾನನ್ ಅಭಿಪ್ರಾಯ ಪಡುತ್ತಾರೆ. ದಕ್ಷಿಣ ಕನ್ನಡ ಪ್ರದೇಶದ ಆದಿಕರ್ನಾಟಕ ಜನವರ್ಗ ಹಿಂದೆಂದೋ ಯೋಧಕುಲವಾಗಿತ್ತೆಂಬ ಮಾತನ್ನು ಹೇಳಿ 'ರಾಣರ್' ಎಂಬ ಹೆಸರಿನ ದೊರೆಗಳಿದ್ದರೆಂಬ ಸೂಚನೆಯನ್ನು ನೀಡಿದ್ದಾರೆ.[೪] ಕರ್ನಾಟಕದ ಚರಿತ್ರೆಯಲ್ಲಿ ಸ್ಥಾನಿಕ ಅರಸರ ಮತ್ತು ಪಾಳೆಯಗಾರರ ಆಳ್ವಿಕೆಯ ಸಂದರ್ಭದಲ್ಲಿ ದಲಿತರ ಪಾತ್ರದ ಬಗ್ಗೆ ವಿವರಗಳು ದೊರಕುತ್ತವೆ. ಚಿತ್ರದುರ್ಗದ ಅರಸರ ಆಳ್ವಿಕೆಯಲ್ಲಿ ಮದ್ದ ಹನುಮನ ಹೆಂಡತಿಯಾದ ಒನಕೆ ಓಬವ್ವ ನಿಷ್ಠಾವಂತ ಮತ್ತು ಧೈರ್ಯಶಾಲಿ ಮಹಿಳೆಯಾಗಿದ್ದಳು ಎನ್ನುವ ಪ್ರತೀತಿಗಳಿವೆ. ಸಂದಿಗ್ಧ ಪರಿಸ್ಥಿತಿಯಲ್ಲಿ ಕೂಡ ಸೈನಿಕರ ಹಾಗೆಯೇ ಹೋರಾಡಿದವಳು. ದಲಿತ ಸಮುದಾಯಗಳಲ್ಲಿ ಈ ಬಗೆಯ ದಾಖಲೆಗಳು ಸಿಗುವುದು ಅಪರೂಪವೆಂದೇ ಹೇಳಬಹುದು. ಕೊಡಗಿನ ಅರಸರ ಸಂದರ್ಭದಲ್ಲಿ ದಲಿತರ ಆಡಳಿತಾತ್ಮಕ ಸಂಬಂಧಗಳ ಕುರಿತು ವಿವರಣೆಗಳು ಸಿಗುತ್ತವೆ. ತದನಂತರ ತಳವಾರರಾಗಿ ಕಾರ್ಯ ನಿರ್ವಹಿಸಿರುವ ಅನೇಕ ಪುರಾವೆಗಳಿವೆ. ಮೈಸೂರು ಸಂಸ್ಥಾನ, ಮದ್ರಾಸ್ ಕರ್ನಾಟಕ, ಬಾಂಬೆ ಕರ್ನಾಟಕ, ಹೈದರಾಬಾದ್ ಕರ್ನಾಟಕ ಪ್ರದೇಶಗಳಲ್ಲಿ ತಳವಾರ ವೃತ್ತಿಯನ್ನು ನಿರ್ವಹಿಸಿರುವ ವಿವರಗಳಿವೆ.[೫] ಆದಿಮ ಕಾಲದಿಂದಲೂ ಬುಡಕಟ್ಟು ಸಮುದಾಯಗಳು ನಾಗರಿಕ ಪ್ರಪಂಚದಿಂದ ದೂರ ಇದ್ದವು. ಪ್ರಭುತ್ವ ಅವರನ್ನು ಕ್ರೂರವಾಗಿ ನಡೆಸಿಕೊಂಡಿದೆ ಎನ್ನುವುದಕ್ಕೆ ಈ ಸಮುದಾಯಗಳು ಅಧಿಕಾರಶಾಹಿ ವಿರುದ್ಧ ದಂಗೆಯೆದ್ದ ಬಗೆಗೆ ವಿವರಣೆಗಳಿವೆ. ಈ ಬುಡಕಟ್ಟು ಸಮುದಾಯಗಳಲ್ಲಿ ನ್ಯಾಯಿಕ ಪದ್ಧತಿ, ಆಡಳಿತದೊಂದಿಗೆ ಹೊಂದಾಣಿಕೆ ಮುಂತಾದ ವಿಚಾರಗಳು

ಗಮನ ಸೆಳೆಯುತ್ತವೆ. ಕರಾವಳಿ ಕರ್ನಾಟಕ, ಕೊಡಗು, ದಕ್ಷಿಣ ಕರ್ನಾಟಕ, ಉತ್ತರ ಕರ್ನಾಟಕದುದ್ದಕ್ಕೂ ಬುಡಕಟ್ಟು ಸಮುದಾಯಗಳನ್ನು ಚರಿತ್ರೆಯ ಭಾಗವಾಗಿ ನೋಡಬೇಕಾಗಿದೆ.

### ೫.೧.೧ ವೀರಗಲ್ಲುಗಳು

ಕರ್ನಾಟಕದಾದ್ಯಂತ ಕಂಡುಬರುವ ಬಹುತೇಕ ಶಾಸನಗಳು ಆಳರಸರ ವಿವರಗಳನ್ನು ದಾಖಲಿಸಿವೆ. ಆದರೆ ವೀರಗಲ್ಲುಗಳು ನಾಡಿನ ಜನಸಾಮಾನ್ಯರ ಚರಿತ್ರೆಯನ್ನು ಹೇಳುತ್ತವೆ. ಸಾಮಾಜಿಕ ಸಂಘರ್ಷ, ಘರ್ಷಣೆ, ರಕ್ಷಣೆ ಮುಂತಾದ ಆಯಾಮಗಳಲ್ಲಿ ಪ್ರಾಣತ್ಯಾಗ ಮಾಡಿದ ವಿವರಗಳು ವೀರಗಲ್ಲುಗಳ ಶಾಸನ ಮತ್ತು ಶಿಲ್ಪದಲ್ಲಿ ಗಮನಿಸಬಹುದು. ಪ್ರಾಚೀನ ಕರ್ನಾಟಕದಲ್ಲಿ ಜನಸಾಮಾನ್ಯರು ಜೀವದ ಹಂಗುತೊರೆದು ಹೋರಾಡಿ ಸಮಾಜದ ರಕ್ಷಣೆಯಲ್ಲಿ ಪ್ರಮುಖ ಪಾತ್ರ ವಹಿಸಿದವರಲ್ಲಿ ದಲಿತರು ಹೆಚ್ಚಿನದಾಗಿ ಕಾಣಿಸಿಕೊಳ್ಳುತ್ತಾರೆ. ಇದಕ್ಕೆ ವೀರಗಲ್ಲುಗಳೇ ಸಾಕ್ಷಿ. ಇಂದಿಗೂ ಕೂಡ ಗ್ರಾಮೀಣ ಪರಿಸರದಲ್ಲಿ ಲಭ್ಯವಿರುವ ಜಾನಪದ ಗೀತೆಗಳು, ಐತಿಹ್ಯಗಳು, ಗಾದೆ ಮುಂತಾದ ಆಕರಗಳ ಮುಖ್ಯ ಕೇಂದ್ರ ಬಿಂದು ದಲಿತ ಸಮುದಾಯಗಳೆಂದರೆ ತಪ್ಪಾಗಲಾರದು. ಈ ಹಿನ್ನೆಲೆಯಲ್ಲಿ ವೀರಗಲ್ಲುಗಳು ಮತ್ತು ಮಾಸ್ತಿಕಲ್ಲುಗಳನ್ನು ಚರ್ಚೆಗೆ ಒಳಪಡಿಸಲಾಗಿದೆ.

ಹಸುಗಳನ್ನು ಪ್ರಾಚೀನ ಕಾಲದಲ್ಲಿ ಸಂಪತ್ತೆಂದು ಪರಿಗಣಿಸಿದ್ದರಿಂದ ಅವುಗಳನ್ನು ಅಪಹರಿಸುವುದು ಸರ್ವೆಸಾಮಾನ್ಯವಾಗಿತ್ತು. "ಕಳ್ಳರು ಬಂದು ಊರಿನ ದನಗಳನ್ನು ಅಪಹರಿಸುತ್ತಿದ್ದರು. ಇದನ್ನು 'ತುರುಗೋಳ್' ಎನ್ನುತ್ತಿದ್ದರು. ಇದನ್ನೇ ಸಂಸ್ಕೃತದಲ್ಲಿ 'ಗೋಗ್ರಹಣ' ಎನ್ನುತ್ತಾರೆ.[೬] ಕಳ್ಳಕಾಕರು ಬಂದು ಊರಿನ ಗೋವುಗಳನ್ನು ಅಪಹರಿಸುತ್ತಿದ್ದಾಗ ತುರುಗೋಳ್‌ನಲ್ಲಿ ಹೋರಾಡಿ ಸಾವನ್ನಪ್ಪಿದ ಕೆಳಸಮುದಾಯಗಳ ಬಹುತೇಕ ಹೆಸರು ವೀರಗಲ್ಲಿನಲ್ಲಿ ಕಂಡುಬರುತ್ತದೆ. ದಲಿತರ ವಿಚಾರಗಳು ಕೂಡ ಇಲ್ಲಿ ಮುಖ್ಯವೆನಿಸುತ್ತವೆ. ದೊಂಬರ ಜಾತಿಯ ಕಾಡವ ಎಂಬಾತನು ತುರುಗೋಳ್‌ನಲ್ಲಿ ಸತ್ತ ವಿಷಯವನ್ನು ತಿಳಿಸುತ್ತದೆ. ರಾಷ್ಟ್ರಕೂಟರ ಅರಸ ಧ್ರುವನ ಆಳ್ವಿಕೆಯ ಸಂದರ್ಭದಲ್ಲಿ (ಕ್ರಿ.ಶ.೭೮೬) ದೊಂಬರ (ದೊಮ್ಮರ) ಕಾಡವ ಎಂಬುವವನು ಗೋಗ್ರಹಣದಲ್ಲಿ ಸತ್ತ ಎಂದು ತಿಳಿಸುತ್ತದೆ. ವಿಷಯದ ಪಾಠವು ಹೀಗಿದೆ. "ದೊಮ್ಮರ ಕಾಡವ ಸತ್ತು ಸ್ವರ್ಗಲಾಯಕ್ ಏರಿದನ್".[೭]

ದೊಂಬರು ದಕ್ಷಿಣ ಭಾರತದಲ್ಲಿ ಅಸ್ಪೃಶ್ಯರೆ. ಊರಿಂದ ಹೊರಗಣ ದೊಂಬ ಎಂಬ ಮಾತನ್ನು ನೋಡಿದರೆ ಪ್ರಾಚೀನ ಕರ್ನಾಟಕದಲ್ಲಿ ಅವರು ಅಸ್ಪೃಶ್ಯ ವರ್ಗಕ್ಕೆ ಸೇರಿದ್ದರು ಎಂಬುದರಲ್ಲಿ ಯಾವ ಅನುಮಾನವು ಇಲ್ಲ.[೮] ಮಧ್ಯಕಾಲೀನ ಕರ್ನಾಟಕದಲ್ಲಿ ಮನರಂಜನೆಯ ಆಟಗಳನ್ನು ಪ್ರದರ್ಶಿಸುತ್ತ ಜೀವನ ಸಾಗಿಸುತ್ತಿದ್ದರು ಎಂದು ಚರಿತ್ರೆಕಾರರು ಅಭಿಪ್ರಾಯಪಡುತ್ತಾರೆ. ಇವರನ್ನು ಜಾತಿಕಾರರೆಂದು, ವೇಷಕಟ್ಟುವವರೆಂದು ಹೇಳಲಾಗಿದೆ. ಬಹುತೇಕ ವೀರಗಲ್ಲುಗಳಲ್ಲಿ ಜಾತಿಯ ಹೆಸರನ್ನು ಹೇಳಿರುವುದಿಲ್ಲ. ಅಂತಹ ಪ್ರಸಂಗದಲ್ಲಿ ಶಿಲ್ಪವು ನಮ್ಮ ಸಹಾಯಕ್ಕೆ ಬರುತ್ತದೆ. ಉಡುಗೆ ತೊಡುಗೆ, ಸನ್ನಿವೇಶಗಳು, ವೀರಗಲ್ಲಿನ ಸಾರಾಂಶವನ್ನು ಹೇಳುವಲ್ಲಿ ಸಹಾಯಕವಾಗುತ್ತವೆ. ಕ್ರಿ.ಶ.೮೯೭ರ ವೀರಗಲ್ಲು ಯಲಬುರ್ಗಾ ತಾಲೂಕಿನ ಮುಧೋಳದ ಶಾಸನದಲ್ಲಿ 'ಮುದುವೊಳಲನ್ನು ಸನ್ತಯನೆಂಬುವವನು ಮುತ್ತಿದಾಗ ಊರನ್ನು ಸಮ್ಮಗಾರರ ಚಂದನೆಂಬುವನು ರಕ್ಷಿಸಲು

ಪ್ರಯತ್ನಿಸಿ ಸತ್ತನೆಂದು ತಿಳಿಯಪಡಿಸುತ್ತದೆ. ಅದರ ಪಠ್ಯ ಹೀಗಿದೆ. "ಕಸೆಯ ಊರಲಿಯ ಬಲೆನೆಸ್ನು ಸಮ್ಮಗಾರರ ಚೆನ್ನ ಸತ್ತೋ(ನ್)" ಎಂದು ತಿಳಿಯಪಡಿಸುತ್ತದೆ. ಈ ರೀತಿಯ ವಿವರಗಳನ್ನು ಮಧ್ಯಕಾಲೀನದುದ್ದಕ್ಕೂ ಕಾಣಬಹುದು. ಪ್ರಾಚೀನ ಕರ್ನಾಟಕದ ಶ್ರೇಣೀಕೃತ ಸಮಾಜವು ಪ್ರಭುತ್ವದ ಹಿಡಿತದಲ್ಲಿತ್ತು. ಸಮಾಜದ ಪ್ರತಿಯೊಂದು ಅಂಗಗಳು ಇದರಡಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದವು. ಅವುಗಳಲ್ಲಿ 'ಧರ್ಮ' ಮುಖ್ಯವಾದದು. ಧಾರ್ಮಿಕ ನೆಲೆಗಟ್ಟಿನಲ್ಲಿ 'ವೀರತ್ವ'ವನ್ನು ಪ್ರತಿಪಾದಿಸಿದ ಪ್ರಭುತ್ವವು ಜನಸಾಮಾನ್ಯರು ಸ್ವಇಚ್ಛೆಯಿಂದ ಬಲಿಯಾಗುವಂತೆ ಪ್ರೇರೇಪಿಸಿತು. ಯಾವುದೇ ಸಮಾಜದಲ್ಲಿ 'ಧರ್ಮ' ಎನ್ನುವುದು ಸಮಾಜವನ್ನು ನಿರ್ಮಾಣ ಮಾಡಬಲ್ಲದು, ಪೋಷಿಸಬಲ್ಲದು, ನಿಯಂತ್ರಿಸಬಲ್ಲದು ಮತ್ತು ನಿರ್ನಾಮ ಮಾಡಬಲ್ಲದು. ಆದುದರಿಂದ ಕರ್ನಾಟಕವು ಸೇರಿದಂತೆ ಭಾರತದಾದ್ಯಂತ ಅನೇಕ ರಾಜವಂಶಗಳು ಇದರ ಆರ್ಭಟಕ್ಕೆ ಸಿಕ್ಕು ನುಚ್ಚು ನೂರಾಗಿವೆ. ಧಾರ್ಮಿಕ ಪ್ರಚೋದನೆಯಿಂದ ಪ್ರಾಚೀನ ಸಮಾಜ ಹಲವು ಯುದ್ಧಗಳನ್ನೇ ಕಂಡಿದೆ. ಈ ಕದನಗಳಲ್ಲಿ ಮಡಿದವರು ಜನಸಾಮಾನ್ಯರೇ ಹೊರತು ಸಮಾಜದ ಅಗ್ರ ಪಂಕ್ತಿಯಲ್ಲಿದ್ದವರಲ್ಲ. ಕರ್ನಾಟಕದ ಗ್ರಾಮೀಣ ಪರಿಸರದಲ್ಲಿ ಇಂದು ಅನಾಥವಾಗಿ ಬಿದ್ದಿರುವ ಅನೇಕ ವೀರಗಲ್ಲು ಮತ್ತು ಮಾಸ್ತಿಕಲ್ಲುಗಳು ಅಂದಿನ ಜನಸಾಮಾನ್ಯರ ಚರಿತ್ರೆಯನ್ನು ಕಟ್ಟಿಕೊಡುತ್ತವೆ.

ಮನೆಮಗತಿನ್: ಪ್ರಾಚೀನ ಕರ್ನಾಟಕದಲ್ಲಿ ಒಡೆಯ ಮತ್ತು ಸೇವಕನಿಗೆ ಸಂಬಂಧಿಸಿದ ಹಲವು ಪದಗಳು ವಿಶಿಷ್ಟವಾಗಿ ಕಾಣಿಸಿಕೊಳ್ಳುತ್ತವೆ. ಅವು ಮೇಲ್ನೋಟಕ್ಕೆ ಸಾಮಾನ್ಯವಾಗಿ ಕಂಡರೂ ಆಂತರಿಕವಾಗಿ ವಿಶಿಷ್ಟ ಸ್ವರೂಪವನ್ನು ಪಡೆದುಕೊಂಡಿವೆ. ಆ ಮುಖಾಂತರ ಕೆಲವು ರಹಸ್ಯಗಳನ್ನು ಅರಿಯಲು ಸಹಾಯಕವಾಗುತ್ತದೆ. ಮನೆಮಗ, ಮನೆಮಗತಿನ್, ಹೊಲೆಮಗ, ಸಿಸುಮಗ ಮುಂತಾದವುಗಳು. ಇಂತಹವು ಅವುಗಳಲ್ಲಿ ಚರಿತ್ರೆಯಲ್ಲಿ ಹೆಚ್ಚಾಗಿ ಕಾಣಿಸಿಕೊಳ್ಳುವುದು 'ಮನೆಮಗ' ಎಂಬ ಶಬ್ದ. ಬಹುತೇಕ ಶಾಸನಗಳಲ್ಲಿ ಈ ಶಬ್ದ ಹೆಚ್ಚಾಗಿ ೧೧ನೇ ಶತಮಾನದಲ್ಲಿ ಕಾಣಿಸಿಕೊಳ್ಳುವುದು ವಿಶೇಷ. ೧೧ನೇ (ಕ್ರಿ.ಶ. ೯೭೦-೭೧) ಶತಮಾನಕ್ಕೆ ಸೇರಿದ ಒಂದು ಶಾಸನವು ಈ ರೀತಿಯಾಗಿ ಪ್ರತಿಕ್ರಿಯಿಸಿದೆ.

> ಸ್ವಸ್ತಿಶ್ರೀ ಪೆರ್ಮ್ಮಾಡಿಯ ಮನೆವಗತಿ
> ನೀಲಬ್ಬೆಯ ಮಗಲ ರಾಚ
> ಮ್ಮನ ಧರ್ಮ್ಮಂ ಕಂಬದ ಪೆಸರಯ್ಯ[೧೦]

ಇಲ್ಲಿ ಮನೆವಗತಿ ಎಂಬುದು ಸ್ತ್ರೀರೂಪ. ಮನೆಮಗತಿನ್ ಎಂಬುದು ಪುರುಷರೂಪ. ಮನೆಯ ಆಳು, ಸೇವಕ, ಬಂಟ ಮುಂತಾದ ರೂಪಗಳಲ್ಲಿ ಅರ್ಥೈಸಬಹುದಾಗಿದೆ. ಆದರೆ ಆಧುನಿಕ ರೂಪವಾಗಿ 'ಬಾಡಿಗಾರ್ಡ್' ಎಂಬ ಶಬ್ದ ಅಂದು ಯಾವ ಸಂದರ್ಭಗಳಲ್ಲಿ ಬಳಸಿರಬಹುದು. ಎಷ್ಟೊ ಸಂದರ್ಭಗಳಲ್ಲಿ ಘರ್ಷಣೆಗಳಲ್ಲಿ, ಯುದ್ಧದ ಸಂದರ್ಭದಲ್ಲಿ ಒಡೆಯರ ಪರವಾಗಿ ಮನೆಯ ಸೇವಕರು, ಆಳುಗಳು ಸಾವನ್ನಪ್ಪಿರುವುದನ್ನು ಗಮನಿಸಬಹುದು. ಅಂದರೆ ಅಂದು ಈ ಒಡೆಯರು ಶೂದ್ರ ಮತ್ತು ಅತಿಶೂದ್ರ ಸಮುದಾಯಗಳಿಗೆ ಸೇರಿದ

ಜನತೆಯನ್ನು ನೇಮಿಸಿಕೊಳ್ಳುತ್ತಿದ್ದರು ಎಂಬುದನ್ನು ಹೇಳಬಹುದು. ಇದೇ ಶತಮಾನಕ್ಕೆ ಸೇರಿದ ಮತ್ತೊಂದು ಶಾಸನವು ಯುದ್ಧದಲ್ಲಿ ಮಡಿದ ವ್ಯಕ್ತಿಗಳನ್ನು ಕುರಿತು ಹೇಳುವಾಗ

ತ್ರಿಪುವನಧವಳು ಶ್ರೀಮತ್ ಮಾದಿವರ್ಮ್ಮ
ಒಡಸತ್ತ ಭಟರ್ಕ್ಕಳು ಮಣಲೆಯೂರ
ನೀಸನ್ನನು ನಿರ್ಗುನ್ನ ಮಾರೆಮ್ಮನು ಮನೆಮಗತಿನೆರಗ
ನುಂ ತೊಣ್ಣೆಯರ ಪೊ ಲೆಗನೊರೆಣ್ಣಾವ್[೧೧]

೧೧ನೇ ಶತಮಾನದ ಮತ್ತೊಂದು ವೀರಗಲ್ಲಿನಲ್ಲಿ 'ಮನೆವಗತಿ' ವಿಷಯ ಅಡಕವಾಗಿದೆ.

ಸ್ವಸ್ತಿಶ್ರೀ ಗೊಗ್ಗಿಯ ಮನೆವಗತಿ ಎರೆಬೀರಯ್ಯ ಎತ್ತವಗ
ಳ್ಳಗುಂ ಎದವರಿಯಂ ದಾಯಗ ಸಮ್ಮನ್ನದಿನೆಡವರಿ ಊರ್[೨]

ಗೊಗ್ಗಿಯ ಮನೆವಗತಿ ಎಂದು ಹೇಳಿದೆ. ಗೊಗ್ಗಿಯ ಮನೆವಗತಿ(ಹೌಸ್ ಸರ್ವೆಂಟ್) ಎರೆಬೀರಯ್ಯ ಎದವರಿಯ ವಿರುದ್ಧ ಹೋರಾಡಿ ಮರಣ ಹೊಂದಿದಾಗ ಎರಡು ಖಂಡುಗಾಸ್ ಭೂಮಿ ಕೊಡಲಾಯಿತು. ಇದೇ ಶಾಸನದಲ್ಲಿ ಕಾಣಿಸಿಕೊಳ್ಳುವ ಚಾಲುಕ್ಯ ಸಾಮಂತ ಅರಸನೆಂದರೆ ಗೊಗ್ಗಿ. ಎತ್ತವಗಳ್ಳ ಮತ್ತು ಎಡವರಿಯರ ನಡುವೆ ನಡೆದ ದಾಯಿಗ ಸಂಬಂಧ ಯುದ್ಧದಲ್ಲಿ ಎತ್ತವಗಳ್ಳವ ಪರವಾಗಿ ಹೋರಾಡಿ ಹಲವು ವೀರರು ಸತ್ತದ್ದನ್ನು ತಿಳಿಸುತ್ತದೆ. ಈ ವೀರರನ್ನು ಗೊಗ್ಗಿಯ ಮನೆವಗತಿ ಅಥವಾ ಮನೆಮಗತಿ (ಮನೆಯ ಸೇವಕ) ಎಂದು ಕರೆದಿದೆ. ಇದೇ ಶತಮಾನಕ್ಕೆ ಸೇರಿದ ಮತ್ತೊಂದು ಶಾಸನದಲ್ಲಿ ಬಳ್ಳುವಯ್ಯ (ಹೌಸ್ ಸರ್ವೆಂಟ್ ಆಫ್ ಸಮ್ ಚೀಫ್) ಮರಣ ಹೊಂದಿದ ವಿಷಯವಿದೆ. ಶಾಸನದಲ್ಲಿ ಮನೆಮಗ ಎಂದೆ ಹೆಸರಿಸಿದೆ. ಶಾಸನದ ಪಠ್ಯದ ಪ್ರಕಾರ: ಗಿಮಾ.ರ ಮನೆ ಮಗ ಬಳ್ಳುವಯ್ಯಾ ದೊ.ರು.(ಳ್ಳಾರಿ) ಬೀರ ಎಂದಿದೆ.[೧೩]

ಈ ಮೇಲೆ ಗುರುತಿಸಿದ ಬಹುತೇಕ ಶಾಸನಗಳು ೧೧ನೇ ಶತಮಾನಕ್ಕೆ ಸೇರಿರುವುದು ವಿಶೇಷ. ಇಲ್ಲಿ *ಮನೆಮಗ, ಮನೆವಗತಿ, ಮನೆಮಗತಿನ್* ಎಂಬ ಶಬ್ದಗಳು ಒಡೆಯರ ಸೇವಕರಾಗಿ ಸಂದರ್ಭ ಬಂದಾಗ ಹೋರಾಡಿ ಒಡೆಯನಿಗೋಸ್ಕರ ಪ್ರಾಣವನ್ನು ಕೂಡ ಅರ್ಪಿಸಬೇಕಾಗಿತ್ತು. ಸಾಮಾನ್ಯವಾಗಿ ಸಮಾಜದ ಕೆಳಜಾತಿಗಳಿಗೆ ಸೇರಿದ ಈ ಸೇವಕರು ಉಲ್ಲೇಖವಾಗದ ಎಷ್ಟೊ ಸಂದರ್ಭಗಳಲ್ಲಿ ಪ್ರಾಣಾರ್ಪಣೆ ಮಾಡಿದ ವಿವರಗಳು ಸಿಗಬಹುದು.

ಈ ಮೊದಲು ತಿಳಿಸಿದಂತೆ ಶಾಸನಗಳು ಪ್ರಾಚೀನ ಕರ್ನಾಟಕದ ಸಂಗತಿಗಳನ್ನು ತಿಳಿಯಲು ಪ್ರಮುಖ ಆಕರಗಳಾಗಿರುವುದು ನಿಜ. ಆದರೆ, ದಲಿತರ ಬದುಕನ್ನು ಅರಿಯಲು ಅವು ಸುತಾರಾಂ ನೆರವಾಗಿಲ್ಲ. ದಲಿತರು ದಾನ ಕೊಡುವಷ್ಟು ಶ್ರೀಮಂತರಲ್ಲ. ದಾನ ತೆಗೆದುಕೊಳ್ಳಲು ಮೊದಲೆ ಅರ್ಹತೆಯಿಲ್ಲ. ಪ್ರಾಚೀನ ಕಾಲದಲ್ಲಿ ಬರೆಯಲ್ಪಟ್ಟ ಬಹುತೇಕ ಶಾಸನಗಳು ದಾನ ಶಾಸನಗಳಾಗಿರುವುದು ವಿಶೇಷ. ಅಷ್ಟು ಶ್ರೀಮಂತರಲ್ಲದ ಜೇಡ, ಮೇದ, ಗಾಣಿಗ, ಕಲ್ಕುಟಿಗ, ತಂಬುಲಿಗರಂಥ ಶೂದ್ರರು ದೇವಾಲಯಕ್ಕೆ ತಮ್ಮ ಜಾತಿಯ ಕಾಣಿಕೆಯನ್ನು ವರ್ಷದ

ನಿಬಂಧನೆಯನ್ನು ಕೊಡಲು ಮಾತು ಕೊಡುತ್ತಿದ್ದರು. ಆದರೆ ಇವರಿಗಿಂತ ಭಿನ್ನರಾದ ದಲಿತರು ಏನು ಕೊಡಬಹುದು? ಆದರೆ ಕೆಲವು ಶಾಸನಗಳಲ್ಲಿ ಮಾದಿಗ ಜಾತಿಯ ವ್ಯಕ್ತಿ ಗೋವುಗಳನ್ನು ಕೊಟ್ಟಾಗ ಅದನ್ನು ತೆಗೆದುಕೊಂಡ ತಾಳಗುಂದದ ಬ್ರಾಹ್ಮಣರು ಅವನನ್ನು ಹರಸಿದ ಸಂಗತಿ ಬಂದಿದೆ. ಇದು ಸೊರಬ ತಾಲೂಕಿನ 'ಹುನವಳ್ಳಿ' ಗ್ರಾಮದ ಕಲ್ಲೇಶ್ವರದ ದೇವಾಲಯದ ಮುಂದಿರುವ ಕಲ್ಲು. ಇದು, ಕ್ರಿ.ಶ.೯೬೪ರ ಶಾಸನ, ಶಾಸನ ಪಾಠ ಹೀಗಿದೆ :

ಸ್ವಸ್ತಿ ಸಕವರ್ಷಂ ಮೆಣ್ನುನೊ ಱಡೆತ್ತಾಱನೆಯ
ರಕ್ತಾಕ್ಷಿ ಎಂಬ ಸಮ್ವಂಚ್ಚರಂ ಪ್ರವರ್ತಿಸುತ್ತಿರೆ
ಬಿಟ್ಟಿಗನಾಮ್ಗಿೀವುಣ್ಣಗೆಯ್ಯುತ್ತಿರೆ ಹುನವ
ಳ್ಳಿಯ ಮಾದಗರ ಕಮ್ಮಯ್ಯನ ಮಗಂ ನವನ್ಮ
ಗಾವುಣ್ಣಗೆಯ್ಯೆ ಆತನ ತಮ್ಮಲ ನಾಣ್ನೆಯಂ ಗೋಸಾಸವಿವಿ
ತಾಣಗುನ್ದೂರ ಮಹಾಜನಂ ಪರಸಿದರ್
ಅರಿವತ್ತು ಕಟ್ಟಿದ ಕೆಱೆ ಮಂಗಳಂ[೧೪]

ಅರಿವರ್ಮನ ತಮ್ಮ ನಾಣೆಯ ಎಂಬುವವನು 'ಮಹಾಜನಂ'ಗಳಿಗೆ ಕೊಟ್ಟ. ಅವನು ಕೊಟ್ಟಿದ್ದು 'ಗೋಸಾಸವೀನ್ನಿ' ಗೋವುಗಳನ್ನು. ಮಾದಿಗ ಕರ್ಮಯ್ಯನ ಮಗನ ತಮ್ಮ ನಾಣಿ ಎಂಬುವನು. ಮೇಲೆ ಹೇಳಿದ್ದು 'ದಾನಶಾಸನ'ವಾದರೆ ರಾಮಂಡೆ ಅಂಗ ಎಂಬ ಹೆಸರಿನ ಹೊಲೆಯ ತನ್ನ ಯಜಮಾನ ಜುದ್ದಮಲ್ಲನ ಪರವಾಗಿ ಹೋರಾಡಿ ಸತ್ತ ವಿಷಯ ಶಾಸನ ಹೀಗಿದೆ :

ಸ್ವಸ್ತಿಶ್ರೀ ಧರೆಗೀಸನಾ ಕಾಳೆಗದುಳ್
ಜುದ್ದಮಲ್ಲನಾ ಆಳು ರಣಮಂಡೆ ಅಂಗು
ಪೆಸಾರೆ ಪೊಲೆಗನ್ ಸ್ವಸ್ತಿಶ್ರೀ ರಣಕೇಸರ
ಉದಯ ಪುರಮಾನ್ ಪೊಗುತಿಪುಲ್ಲಿ ಎಚೆದು
ಸ್ವರ್ಗಾಲಯಕ್ಕೇರಿದೂನ್[೧೫]

ರಣಮಂಡೆ ಅಂಗು ಒಬ್ಬ ಹೊಲೆಯ (ಪೊಲೆಯನ್) ಅವನ ಯಜಮಾಜುದ್ದಮಲ್ಲ. ದಾನಶಾಸನ ಬಂದಿದ್ದರೆ ತನ್ನ ಒಡೆಯನ ಜತೆ ಯುದ್ಧಕ್ಕೆ ಹೋಗಿ ಮಡಿದ ವಿಷಯ ಒಂದು ಕಡೆ ಮಾತ್ರ ಬಂದಿದೆ. ಈಗ ಪ್ರಸ್ತಾಪವಾಗಿರುವ ಶಾಸನ 'ತುರಗೊಳ್'ಗೆ ಸಂಬಂಧಿಸಿದ್ದು, ದಲಿತರ ಉಲ್ಲೇಖಗಳು ಕೊನೆ ಪಕ್ಷ ವೀರಗಲ್ಲುಗಳಲ್ಲಿ ಹೆಚ್ಚಾಗಿ ಬರಬಹುದಾಗಿತ್ತು. ಆದರೆ ಬಂದಿಲ್ಲ. ಕಾರಣ ಅಂದಿನ ದಿನಮಾನಗಳಲ್ಲಿ ಅವರು ಕಂಡರೆ ಮೈಲಿಗೆಯಾಗುವಂತ ಪರಿಸ್ಥಿತಿಯಿರುವಾಗ ಇನ್ನು ಶಾಸನ, ವೀರಗಲ್ಲುಗಳಲ್ಲಿ ಇವರ ಹಾಜರಿಯನ್ನು ನಿರೀಕ್ಷಿಸುವಂತಿಲ್ಲ ಎಂದು ಚಿದಾನಂದಮೂರ್ತಿಯವರು ಅಭಿಪ್ರಾಯಪಡುತ್ತಾರೆ. ಆದರೆ ವೀರಗಲ್ಲುಗಳ ಶಿಲ್ಪ ಮತ್ತು ಒಳಪಡದೆ ಇರುವ ವೀರಗಲ್ಲುಗಳನ್ನು ಅಧ್ಯಯನಕ್ಕೆ ಒಳಪಡಿಸಿದರೆ ಮತ್ತಷ್ಟು ಹೊಳಹುಗಳು ಕಾಣಸಿಗುವ ಸಂದರ್ಭವಿದೆ. ಆದರೂ ವೀರಗಲ್ಲುಗಳಲ್ಲಿ ದಲಿತರ ಉಲ್ಲೇಖಗಳನ್ನು ಅಪೇಕ್ಷಿಸಬಹುದಾಗಿದೆ.

ಪುಲವಳ್ಳಿಯ ಗಾಯಿಗನಾದ ಮಾದಗರ ಅರಿವರ್ಮ ಎಂಬಾತ ಕಳ್ಳರು ತನ್ನ ಊರಿನ ದನಗಳನ್ನು ಅಪಹರಿಸಿದಾಗ ಹೋರಾಡಿ ಸಾಯುತ್ತಾನೆ. ಶಾಸನದ ಪಾಠ ಹೀಗಿದೆ :

ರಿಷಮೆಂಟನೂಱತೊಂಭತ್ತನೆಯ ಪ್ರಭವ ಸಂವತ್ಸರದ
ಚೈತ್ರ ಶುದ್ಧ ಪುಣ್ಣಮೆ ಮಾದಿತ್ಯವಾರವು ಸಂಕ್ರಾಂತ್ರಿಯಂದು ಪುನುವಾ
ಲವಳ್ಳಿಯ ಗಾಯಿಗಂ ಮಾದಗರರಿರ್ಮ್ಮ ತುರುಗೊಳೊ
ವ್ವಿತ್ಸಂ ಬಟ್ಟಿಗನನೆರ್ಗಡೆ ದಾಸೆಯ್ಯನ ದುಗಂ ಗಂಭೀಮಯ್ಯಂ
ಬರೆದ ಕನ್ನಯ್ಯಂ ಕಲ್ಲಱಿಸಿದ[೬೬]

ಇದೇ ಊರಿನ ಕ್ರಿ.ಶ.೯೯೭ನೆಯ ಶಾಸನ ಅರಿವರ್ಮ ಗೋಗ್ರಹಣದಲ್ಲಿ ಸತ್ತಾಗ ಅವನಿಗಾಗಿ ಕನ್ನಯ್ಯ ವೀರಗಲ್ಲನ್ನು ನಿಲ್ಲಿಸುತ್ತಾನೆ. ಪೆರ್ಗಡೆಯಂತಹ ಅಧಿಕಾರಿಯ ಮಗ ಈ ವೀರಗಲ್ಲಿನ ಪಾಠವನ್ನು ಬರೆದಿರಬೇಕಾದರೆ ಮಾದಿಗರ ಜಾತಿಯವನಾದರೂ ಒಬ್ಬ ಪ್ರಭಾವಶಾಲಿ ವ್ಯಕ್ತಿಯಾಗಿರಬೇಕು. ಚಿದಾನಂದಮೂರ್ತಿಯವರು ಈ ಕುರಿತು ಹೇಳುವಂತೆ "ಬದುಕಿನಲ್ಲಿ ಎಂತೋ ಸಾವಿನಲ್ಲಿ ಅವರ ಉಲ್ಲೇಖಗಳ ಅಭಾವವೇ ಅವರ ಸಾಮಾಜಿಕ ಸ್ಥಾನಮಾನದ ಬಗ್ಗೆ ಬಹಳವನ್ನು ತಿಳಿಸುತ್ತದೆ".

ದಲಿತರ ಬದುಕು ಈ ಶತಮಾನದ ಮೊದಲ ದಶಕದವರೆಗೂ ಒಂದೇ ರೀತಿಯಲ್ಲಿತ್ತು. ಅವರು ಸಾಮಾಜಿಕವಾಗಿ, ಆರ್ಥಿಕವಾಗಿ ಮತ್ತು ಧಾರ್ಮಿಕವಾಗಿ ಹಿಂದುಳಿದಿದ್ದರು. ಅವರು 'ಮನುಷ್ಯ'ರೆಂಬ ಕಲ್ಪನೆಯೇ ಚರಿತ್ರೆಯಲ್ಲಿ ಬಂದಿರಲಿಲ್ಲ. ಸಾಹಿತ್ಯದಲ್ಲಿ ದೊರಕುವ ಚಿತ್ರಗಳೂ ಕೂಡ ಸ್ವಲ್ಪ ಸ್ಥೂಲವೇ. ಚರಿತ್ರೆಯಲ್ಲಿ ಇನ್ನೂ ಹೆಚ್ಚಿನ ವಿವರಗಳನ್ನು ಅಪೇಕ್ಷಿಸುವುದು ಕಷ್ಟ ಸಾಧ್ಯ. ಅಲ್ಲಿನ ವಿವರಗಳು ಹೆಚ್ಚು ಶೂದ್ರ ಸಂಸ್ಕೃತಿಗೆ ಸೇರಿದವೇ ಹೊರತು; ಚಂಡಾಲ, ಪಂಚರು, ಹೊಲೆಯ, ಮಾದಿಗ, ಕೊರಮ, ಬೇಡ, ಬೆಸ್ತ ಹೀಗೆ ಹಲವು ಮತ್ತೊಂದು ಬಗೆಯ ಅಸ್ಪೃಶ್ಯ ಸಂತತಿಯವರು ಚರಿತ್ರೆಗೆ ಹೊರತಾರದವರು. 'ಅಸ್ಪೃಶ್ಯರ ಪರಿಕಲ್ಪನೆ'ಯನ್ನು ಶಾಸನದ ಮಟ್ಟಿಗೆ ಗುರುತಿಸಿಕೊಳ್ಳುವುದು ತುಸು ಕಷ್ಟವೇ ಆದರೂ ದೊರಕುವ ಸ್ವಲ್ಪ ಸಾಮಗ್ರಿಯನ್ನೂ ವಿವರವಾಗಿ ನೋಡಿದರೆ ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕದಲ್ಲಿ ಒಂದೆ ಬಗೆಯಲ್ಲಿದ್ದಾರೆ. ಈ ಸಂಗತಿ ಕರ್ನಾಟಕಕ್ಕೆ ಅನ್ವಯವಾಗುವಂತೆ ಭಾರತಕ್ಕೂ ಕೂಡ ಅನ್ವಯಿಸುತ್ತದೆ. ೨೧ನೇ ಶತಮಾನದ ಈ ದಿನಗಳಲ್ಲಿ ಕೂಡ ಗ್ರಾಮ, ಕುಗ್ರಾಮ, ತಾಂಡಗಳಲ್ಲಿ ಅಸ್ಪೃಶ್ಯರ ಬದುಕು ಪ್ರಾಚೀನ ಕರ್ನಾಟಕದ ಅಸ್ಪೃಶ್ಯರ ಬದುಕಿನ ಮೂಲ ಮಾದರಿಯನ್ನು ಪ್ರತಿನಿಧಿಸುವಂತೆಯೇ ಇದೆ. ರಾಜರ, ಬ್ರಾಹ್ಮಣರ ಕ್ಷತ್ರಿಯರ ಹಾಗೂ ವೈಶ್ಯರ ಬದುಕನ್ನು ಸೂಚಿಸುವ ಶಾಸನಗಳು ಈಗಲೂ ಅಸ್ಪೃಶ್ಯರ ಬದುಕನ್ನು ಪರ್ಯಾಯವಾಗಿ ಸೂಚಿಸುತ್ತದೆಂದು ಹೇಳಿದರೆ ಸ್ವಲ್ಪವೂ ಉತ್ಪ್ರೇಕ್ಷ ಮಾಡಿ ಹೇಳಿದಂತೆ ಆಗುವುದಿಲ್ಲ.[೬೭] ಮಲ್ಲೇಪುರಂ ಜಿ.ವೆಂಕಟೇಶ ಹೇಳುವಂತೆ ಹೆಚ್ಚಿನ ಅಧ್ಯಯನಗಳು ಶೂದ್ರತ್ವದ ಕಡೆಗೆ ಗಮನ ಸೆಳೆಯುತ್ತವೆಯೇ ವಿನಃ ಅಸ್ಪೃಶ್ಯರ ಕಡೆಗೆ ಕೇಂದ್ರೀಕೃತವಾದಂತೆ ಕಂಡುಬರುವುದಿಲ್ಲ. ಕಾರಣ ಶೂದ್ರ ಸಮುದಾಯಗಳು ಉಳಿದೆಲ್ಲಾ ಸಮುದಾಯಗಳೊಂದಿಗೆ ಐಕ್ಯತೆಯನ್ನು

ಸಾಧಿಸಿರುವುದು ಮೇಲ್ನೋಟಕ್ಕೆ ಕಂಡುಬರುತ್ತದೆ. ಬಹುತೇಕ ಶಾಸನ, ವೀರಗಲ್ಲುಗಳಲ್ಲಿ ಶೂದ್ರ ಮತ್ತು ಅತಿಶೂದ್ರ ಉಲ್ಲೆಖಗಳು ಕಂಡುಬಂದರೂ ಅವುಗಳು ಶೂದ್ರ ಸಮುದಾಯಗಳ ಸಂಗತಿಯನ್ನು ಎತ್ತಿಹಿಡಿಯುತ್ತವೆ.

ವೀರನೊಬ್ಬನ ಸ್ಮಾರಕವಾಗಿ ನಿಲ್ಲಿಸಿದ ಶಿಲೆಯೇ ವೀರಶಾಸನ ಅಥವಾ ವೀರಗಲ್ಲು. ಸತ್ತವೀರನ ಹೆಸರು ಶಾಶ್ವತವಾಗಿರಲೆಂದು, ರಾಜನ ಪರವಾಗಿ ಹೋರಾಡಿ ತನ್ನ ಪ್ರಾಣ ಕಳೆದುಕೊಂಡಿರಬಹುದು. ಅವರ ನೆನಪಿಗಾಗಿ ನಿಲ್ಲಿಸಿದ ಕಲ್ಲುಗಳೇ ವೀರಗಲ್ಲುಗಳು. ಇವು ನಮ್ಮ ಸಂಸ್ಕೃತಿಯ ಪ್ರತೀಕ. ತ್ಯಾಗ, ಸ್ವಾಭಿಮಾನ, ವೀರತನ, ಶೌರ್ಯ ಪರಾಕ್ರಮ ಹೆಸರಿನಲ್ಲಿ ಜನತೆ ತಮ್ಮಿಷ್ಟಕ್ಕೆ ತಾವೇ ಬಲಿಯಾಗುವ ಕ್ರೂರ ಪದ್ಧತಿಗೆ ಪ್ರಭುತ್ವ ಪ್ರಚೋದನೆ ನೀಡಿತು.[೧೮] ಅದರ ಪರಿಣಾಮವಾಗಿ ನಮಗೆ ಇಂದು ಲಭ್ಯವಿರುವ ವೀರಗಲ್ಲುಗಳು ಸಾಕ್ಷಿ. ಸಮಾಜದ ಎಲ್ಲಾ ವರ್ಗದವರು ಇದರಲ್ಲಿ ಪಾಲ್ಗೊಳ್ಳುವಿಕೆ ಇತ್ತು. ವಿಶೇಷವಾಗಿ ನಾಡಿನ ಕೆಳಜಾತಿಗಳ ವಿವರಣೆಗಳೇ ಹೆಚ್ಚು. ವೀರಗಲ್ಲುಗಳಲ್ಲಿ ಹಲವು ಪ್ರಕಾರಗಳಿವೆ. ಭಟಕಳ ಪೇಲೆಯ ಕೈ ಕೆಟ್ಟರೆ (೧೫೯೮ ಕ್ರಿ.ಶ.) ವೀರಗಲ್ಲಿನಲ್ಲಿ 'ಹೊಲೆಯ ಬಳಿ'ಯ ವ್ಯಕ್ತಿಯನ್ನು ಹೇಳಿದೆ. ಹಾಡುವಳ್ಳಿಯ (೧೪೨೩ ಕ್ರಿ.ಶ.) ವೀರಗಲ್ಲಿನಲ್ಲಿ 'ಹೊಲೆಯ ಬಳಿಯ ಮಾಳವ' ಹೆಸರಿದೆ ಈತನನ್ನು 'ಸಿಂಗರಾಜ ಒಡೆಯರ ಬಂಟ ರಾಯರಾಜಗುರು ಪಿತಾಮಹ'[೧೯] ಎಂದು ಕರೆಯಲಾಗಿದೆ.

ಇದೇ ಶಾಸನದಲ್ಲಿ ಎರಿಡು ಕೋಲು ಬಳಿ, ಅಡಿಯರ ಬಳಿ, ಹೆಗಡಿ ಬಳಿ, ಅಳಿಯ ಸಿಂಗಿರಾಯ ಎಂಬ ಉಲ್ಲೇಖಗಳು ಗಮನಿಸುವಂತಿದೆ. ಕಾಯ್ಕಿಣಿಯ ವೀರಗಲ್ಲಿನಲ್ಲಿ ಸಹ 'ಹೊಲೆಯ ಬಳಿ' ಪ್ರಸ್ತಾಪಗಳು ಕಂಡುಬರುತ್ತವೆ. ಕ್ರಿ.ಶ.೧೫೯೪ರ ವೀರಗಲ್ಲಿನಲ್ಲಿ 'ಹೊಲೆಯ ಬಳಿಯ ಚೌಟನಾಯಕನ ಮಗ ಬಯಿರಣ ನಾಯಕನು' ಎಂಬ ಉಲ್ಲೇಖವಿದ್ದ ಇಲ್ಲೆ ತೊಳರ ಬಳಿಯ ಹೆಸರಿದೆ. ಇದೇ ಶಾಸನದಲ್ಲಿ 'ಹೊಲೆಯ ಬಳಿಯ ತಮ್ಮಿನಾಯಕನ ಮಕ್ಕಳು ವೀರನಾಯಕ ದೇವರಸ ನಾಯಕರು'ಗಳ ಹೆಸರುಗಳಿರುವುದು ಕಂಡುಬರುತ್ತದೆ.[೨೦] ಇದೇ ಊರಿನ ೧೫೨೨ ಕ್ರಿ.ಶ. ವೀರಗಲ್ಲಿನಲ್ಲಿ "ನಗಿರ ಚವಡಿಗೆ ಮುಖ್ಯವಾದ ಯೇಳು ಚೇತದಲ್ಲಿ ಹುಟ್ಟಿಕೊಂಡ ಹೊಲೆಯ ಬಳಿ ಭಳಿಗೆ, ಸಮಾತಕರ್ಲ ಹೊಲೆಯ ಬಳಿಯ ಬಿರುದಿನ ಅಂಗಯಿರು ನಾಯಕ್ಕ" ಹೊಲೆಯ ಬಳಿಯ ಯಿಸರಕ ನಾಯಿಕರಿ ಯೋಲು ಎಂಬ ವಾಕ್ಯಗಳಿವೆ. ಇಲ್ಲಿ ೭ ಜನ ಜೀತದಲ್ಲಿ ಹುಟ್ಟಿಕೊಂಡ ಹೊಲೆಯರ ಹೆಸರನ್ನು ತಿಳಿಸಿದೆ. ಹೀಗೆ ಹಲವು ವೀರಗಲ್ಲುಗಳು ದಲಿತರ ಚರಿತ್ರೆಯನ್ನು ಮೂಕ ಸಾಕ್ಷಿಯೆಂಬಂತೆ ವಿವರಿಸುತ್ತವೆ. ಇನ್ನೂ ಬೆಳಕಿಗೆ ಬಾರದೆ ಭೂಮಿಯಲ್ಲಿ ಹುದುಗಿರುವ ಹಲವು ವೀರಗಲ್ಲುಗಳಲ್ಲಿ ದಲಿತ ಚರಿತ್ರೆಯ ಆಯಾಮಗಳು ಅಡಕವಾಗಿವೆ ಎಂದರೆ ಅಚ್ಚರಿ ಪಡಬೇಕಾಗಿಲ್ಲ.

ವೀರಗಲ್ಲುಗಳಲ್ಲಿ ಮಡಿದ ವೀರರ ಹಿನ್ನೆಲೆಗಳನ್ನು ಗಮನಿಸಿದಾಗ ಒಂದಂಶ ಮಾತ್ರ ನಮಗೆ ಸ್ಪಷ್ಟವಾಗುತ್ತದೆ. ಸಮಾಜದಲ್ಲಿ ಅವರ ನೆನಪು ಶಾಶ್ವತವಾಗಿರಬೇಕೆಂಬ ಪೂರ್ವ ಜನ ಹಂಬಲ ಫಲವಾಗಿಯೇ ಅವರನ್ನು ಅತಿಮಾನವೀಯ ತತ್ವಕ್ಕೆ ವೀರತ್ವ ತತ್ವಕ್ಕೆ ಹೋಲಿಸಿ ಕಥನಗಳನ್ನು ಕಟ್ಟಿದ್ದಾರೆ. ಬಹುತೇಕ ಜನಪದ ಗೀತೆಗಳು ಇದಕ್ಕೆ ಪುಷ್ಟಿ ನೀಡುತ್ತವೆ. ಗರಡಿಯಾಳಾದ ವೀರದ್ಯಾಲಣ್ಣನ ದನಗಳನ್ನು ಒಮ್ಮೆ ಬೇಡರು ಕದ್ದ ವಿಷಯ ತಿಳಿದಾಗ ವೀರಗ್ಯಾಲಣ್ಣನಿಗೂ ಮತ್ತು ಬೇಡರಿಗೂ ಕಾಳಗ ನಡೆದುದರ ಬಗ್ಗೆ ಜನಪದ ಗೀತೆ ಗಮನ ಸೆಳೆಯುತ್ತದೆ.

ಶಾಸನಗಳಿಗೆ ನೀಡಿರುವ ಅಗ್ರಸ್ಥಾನಕ್ಕೆ ಕಾರಣ ಅವು ನಂಬಿಕಸ್ಥ ಆಕರಗಳೆಂದು ಪರಿಗಣಿಸಿರುವುದು. ಇದರ ಜೊತೆಗೆ ಶಾಸನಗಳನ್ನು ತಯಾರು ಮಾಡುವ ವರ್ಗದವರು, ಲಿಪಿಕಾರರು, ಕಲ್ಲನ್ನು ಕೊರೆಯುವರು, ಶಿಲ್ಪವನ್ನು ಬಿಡಿಸುವವರು ಹೀಗೆ ಮತ್ತೊಂದು ಆಯಾಮ ಶಾಸನದಲ್ಲಿ ಕಂಡುಬರುತ್ತದೆ. ಶಾಸನದ ಬರವಣಿಗೆಯಲ್ಲಿ ಹೆಚ್ಚಾಗಿ ದಾನ ಧರ್ಮಗಳ ಕುರಿತಾಗಿದ್ದರೂ ಪರೋಕ್ಷವಾಗಿ ಸಮಾಜದ ಒಟ್ಟು ಚಿತ್ರಣ ಗ್ರಹಿಸುವಲ್ಲಿ ಸಹಕಾರಿಯಾಗಿವೆ. ಶಾಸನಗಳನ್ನು ನಿರ್ಮಾಣ ಮಾಡುವ ಸಂದರ್ಭದಲ್ಲಿ ಶಿಲ್ಪವನ್ನು ಕೂಡ ಬಿಡಿಸುತ್ತಿದ್ದರು. ಶಿಲ್ಪವು ಅಂದಿನ ಸಮಾಜದ ಪ್ರತಿಬಿಂಬವು ಹೌದು. ಇದರ ಮುಖಾಂತರ ಘಟನೆಯ ಸನ್ನಿವೇಶವನ್ನು ಅರ್ಥೈಸಿಕೊಳ್ಳಲು ಸಾಧ್ಯವಿದೆ. ಶಿಲ್ಪದಲ್ಲಿ ಶಾಸನ ಶಿಲ್ಪ ಮತ್ತು ದೇವಾಲಯ ಶಿಲ್ಪ ಎಂಬ ಮಾದರಿಗಳನ್ನು ಕಾಣಬಹುದು. ಶಾಸನ ಶಿಲ್ಪವು ವಿವಿಧ ಜನಸಮುದಾಯಗಳ ಚರಿತ್ರೆಯನ್ನು ಅರ್ಥೈಸಿಕೊಳ್ಳುವುದಕ್ಕೆ ಸಾಧ್ಯತೆಯಿದೆ. ವೀರಗಲ್ಲು ಮತ್ತು ಮಾಸ್ತಿಕಲ್ಲುಗಳಲ್ಲಿ ಈ ರೀತಿಯ ವಿವರಗಳನ್ನು ಕಾಣಬಹುದು. ಅದೇ ರೀತಿಯಾಗಿ ದೇವಾಲಯದ ಶಿಲ್ಪದಲ್ಲಿ ಜನಪದ ವಿವರಗಳನ್ನು ಕಾಣಬಹುದು.

ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕದ ದಲಿತ ಚರಿತ್ರೆಯನ್ನು ಕುರಿತು ಅಧ್ಯಯನ ಮಾಡುವಾಗ ಶಾಸನಗಳ ಹಾಗೆ ವೀರಗಲ್ಲುಗಳು ದಲಿತರ ಸಾಂಸ್ಕೃತಿಕ ಬದುಕನ್ನು ಕಟ್ಟಿಕೊಡುತ್ತವೆ. ಸಮಾಜದ ಅಂದಿನ ವೈರುಧ್ಯಗಳ ಬಗ್ಗೆ ಖಚಿತ ನಿರ್ಧಾರಕ್ಕೆ ಬರುವುದು ಶಾಸನಗಳಿಂದ ಸ್ವಲ್ಪ ಹಿನ್ನಡೆಯಾದರೆ ವೀರಗಲ್ಲುಗಳು ಪ್ರಮುಖ ಪಾತ್ರ ವಹಿಸುತ್ತವೆ. ಈ ಹಿನ್ನೆಲೆಯಲ್ಲಿ ವೀರಗಲ್ಲುಗಳ ವಿವಿಧ ಪ್ರಕಾರಗಳನ್ನು ಗುರುತಿಸಿ, ಅವುಗಳಲ್ಲಿ ಕೆಳ ಸಮುದಾಯಗಳ ಪಾತ್ರವೇನು ಎಂಬುದನ್ನು ಚರ್ಚಿಸಲು ಯತ್ನಿಸಲಾಗಿದೆ. ಕನ್ನಡ ಕಾವ್ಯಗಳು ಮತ್ತು ವಿದೇಶಿ ಪ್ರವಾಸಿಗರ ಬರವಣಿಗೆಯಲ್ಲಿ ಹೆಚ್ಚಿನ ವಿವರಗಳನ್ನು ಕಾಣಬಹುದು. ಆದುದರಿಂದ ಜನಸಮುದಾಯಗಳ ಚರಿತ್ರೆಯನ್ನು ಈ ನಿಟ್ಟಿನಲ್ಲಿ ಅಧ್ಯಯನ ಮಾಡಲು ಸೂಕ್ತವಾಗಿದೆ ಎಂದು ಹೇಳಬಹುದು.

ವೀರಗಲ್ಲುಗಳಲ್ಲಿ ವಿವಿಧ ಬಗೆಯ ವಿವರಣೆಗಳನ್ನು ಗಮನಿಸಬಹುದು. ವೀರಗಲ್ಲುಗಳಲ್ಲಿ ಮಾಸ್ತಿಕಲ್ಲು, *ತುರುಗೋಳ್* ಅಥವಾ *ಗೋಗ್ರಹಣಕ್ಕೆ ಸಂಬಂಧಿಸಿದ ವೀರಗಲ್ಲುಗಳು, ಪೆಣ್ಪಯ್ಯಲೋಳ್, ಗರುಡ-ಕೀಳ್ಗುಂಟೆ-ವೇಳೆವಾಳಿ, ಸಿಡಿತಲೆಗೆ ಸಂಬಂಧಿಸಿದ ವೀರಗಲ್ಲು, ರಾಜನ ಪರವಾಗಿ ಮಡಿದವರ ವೀರಗಲ್ಲುಗಳು ಅಥವಾ ಜೋಳವಾಳಿ, ಬಂಟಸಾಸಿರ್ವರ್, ಸಾಲೆಸಾಸಿರ್ವರ್, ಎರವೆಸದೋಳ್, ಊರಳವಿನೋಳ್, ನೆಂಟನೆಡರೋಳ್* ಮುಂತಾದ ಆಯಾಮಗಳಲ್ಲಿ ಕೆಳಜಾತಿಗಳ ಚರಿತ್ರೆ ಅಡಗಿದೆ.

ಆತ್ಮಬಲಿ ಅಥವಾ ಆತ್ಮಹತ್ಯೆಯನ್ನು ಇಂಗ್ಲೀಷ್‌ನಲ್ಲಿ *ಸೂಯಿಸೈಡ್* ಎನ್ನುವುದಕ್ಕೆ ಸಂವಾದಿಯಾಗಿ ಬಳಸುತ್ತೇವೆ. ಈ ಬಲಿಯ ಅಲೌಕಿಕ ಘಟನೆಗಳು ಧಾರ್ಮಿಕ ನಂಬಿಕೆಗಳಿಂದ ಪ್ರೇರಿತವಾದವುಗಳು. ಪ್ರಾಚೀನ ಮತ್ತು ಮಧ್ಯಕಾಲೀನ ಜಗತ್ತಿನ ಧಾರ್ಮಿಕ ನೆಲೆಗಟ್ಟಿನಲ್ಲಿ ಈ ಘಟನೆಗಳು ಸಂಭವಿಸಿರುವುದಕ್ಕೆ ಚರಿತ್ರೆಯಲ್ಲಿ ವಿವರಣೆಗಳಿವೆ. ಭಾರತದಲ್ಲಿ "ಆತ್ಮಹತ್ಯೆಯನ್ನು" ಪ್ರಾಚೀನ ತತ್ವಶಾಸ್ತ್ರಗಳು, ಪುರಾಣ, ಸ್ಮೃತಿಗಳು ವರ್ಗೀಕರಿಸುತ್ತವೆ. ಆದರೆ ಕೌಟಿಲ್ಯ ಮತ್ತು ಧರ್ಮಶಾಸ್ತ್ರಗಳು ಹತ್ಯೆಯನ್ನು ವಿರೋಧಿಸುತ್ತವೆ.[೫] ಜೀವನದಲ್ಲಿ ಜಿಗುಪ್ಸೆಗೊಂಡು ಜೀವನದಿಂದ ವಿಮುಖರಾಗುವ ಪದ್ಧತಿ ಆತ್ಮಹತ್ಯೆ: ಆದರೆ ಆತ್ಮಬಲಿ ಮಾಡಿಕೊಳ್ಳುವವರಿಗೆ ನಿರ್ದಿಷ್ಟ ಉದ್ದೇಶ,

ಕಾರಣವು ಇತ್ತು. ಇದಕ್ಕೆ ಸಮಾಜದ ಒಪ್ಪಿಗೆಯು ಇತ್ತು. ನೆರೆಯ ರಾಜ್ಯವಾದ ತಮಿಳುನಾಡಿನಲ್ಲಿ ತಲೆಯನ್ನು ಬಲಿಕೊಡುವ ಪದ್ಧತಿಯಿತ್ತು. ಇದಕ್ಕೆ 'ತಲೈಬಲಿ' ಎಂಬುದಾಗಿ ಕರೆಯುತ್ತಾರೆ.[೨೨] ಪ್ರಾಚೀನ ಕರ್ನಾಟಕದಲ್ಲಿ ಎರಡು ಕಾರಣಗಳು ಪ್ರಮುಖವಾಗಿ ಪ್ರಭಾವ ಬೀರುತ್ತವೆ. ಧಾರ್ಮಿಕ ಕಾರಣಗಳು ಹಾಗೂ ಸಾಮಾಜಿಕ ಕಾರಣಗಳು. ಎಲ್ಲಾ ಸಮುದಾಯಗಳಲ್ಲಿ ವೀರತ್ವದ ಕಾರಣಕ್ಕಾಗಿ ದೇಹವನ್ನು ಬಲಿ ಕೊಡುತ್ತಿದ್ದರು. ಆದರೆ ಬಹುತೇಕ ಕೆಳಸಮುದಾಯಗಳು ಹೆಚ್ಚಿನ ಹೊರೆಯನ್ನು ಹೊಂದಿದ್ದವು. ಇದಕ್ಕೆ ವೀರಗಲ್ಲುಗಳು ಕಂಡುಬರುತ್ತಿದ್ದವು. ಸಲ್ಲೇಖನ ವ್ರತವನ್ನು ಆಚರಿಸಿ ಪ್ರಾಣತ್ಯಾಗ ಮಾಡಿಕೊಳ್ಳುತ್ತಿದ್ದರು.[೨೩] ಈ ರೀತಿಯ ವಿವರಣೆಗಳು ಮಧ್ಯಕಾಲೀನದುದ್ದಕ್ಕೂ ಕಂಡುಬಂದರೂ ಕೆಲವು ಧಾರ್ಮಿಕ ಸುಧಾರಣೆಗಳಿಂದ ಪ್ರಭಾವಿತರಾದ ಸಮಾಜ, ಎಚ್ಚರಗೊಂಡಂತೆ ಕಂಡುಬರುತ್ತದೆ. ವಚನ ಚಳುವಳಿಯ ತರುವಾಯ ವೀರಗಲ್ಲುಗಳ ಸಂಖ್ಯೆ ಕಡಿಮೆಯಾದಂತೆ ತಿಳಿದುಬರುತ್ತದೆ. ಆದರೆ ಪುನಃ ೧೪ನೇ ಶತಮಾನದ ನಂತರ ಇವುಗಳ ಏರಿಕೆ ಕಂಡುಬರುತ್ತದೆ. ಆ ಅವಧಿಯಲ್ಲಿ ವಿಜಯನಗರ ಆಳ್ವಿಕೆಯ ಸಂದರ್ಭದಲ್ಲಿ ಹೆಚ್ಚಿನ ಘರ್ಷಣೆಗಳನ್ನು ಸೂಚಿಸುತ್ತದೆ. ಅಕ್ಕಪಕ್ಕದ ರಾಜ್ಯಗಳಿಂದ, ಕದನ, ಕಲಹ, ಆಕ್ರಮಣ, ಪ್ರತ್ಯಾಕ್ರಮಣ ಸದಾ ನಡೆಯುತ್ತಲೇ ಇರುತ್ತಿದ್ದರಿಂದ ಈ ಅವಧಿಯಲ್ಲಿ ವೀರಗಲ್ಲುಗಳ ಸಂಖ್ಯೆಯಲ್ಲಿ ಹೆಚ್ಚಳ ಕಂಡುಬರುತ್ತದೆ. ಆ ಕಾಲದ ವೀರಗಲ್ಲುಗಳನ್ನು ಜನತೆ 'ಅಂಕನಕಲ್ಲು'ಗಳೆಂದು ಕರೆಯುತ್ತಿದ್ದರು. ಅಸಹಾಯಕರಾದವರ, ದುರ್ಬಲ ವರ್ಗದವರ, ಮುಗ್ಧರು, ಹಳ್ಳಿಯ ಹಸು-ಕರುಗಳು ಇವರುಗಳಿಗಾಗಿ ಕಾದಾಡಿ ಮಡಿದವರ ಯೋಧರ ಸ್ಮಾರಕಗಳು ಸಾಮಾಜಿಕ ಜೀವನದ ಒಂದು ಭಾಗವೇ ಆಗಿದ್ದವು.[೨೪] ಒಟ್ಟಾರೆಯಾಗಿ ಸ್ವಾಭಿಮಾನ, ವೀರತನದ, ಶೌರ್ಯ ಪರಾಕ್ರಮದ ಹೆಸರಿನಲ್ಲಿ ತಮ್ಮಷ್ಟಕ್ಕೆ ತಾವೇ ಬಲಿಯಾಗುವ ಕ್ರೂರ ಪದ್ಧತಿಯನ್ನು ಈ ಕಾಲಾವಧಿಯಲ್ಲಿ ಹೆಚ್ಚು ಪ್ರಚೋದಿಸಲಾಯಿತು. ಪ್ರಾಚೀನ ಮತ್ತು ಮಧ್ಯಕಾಲೀನ ಅವಧಿಯು ಇಂತಹ ಅನೇಕ ಕ್ರೂರ ಪದ್ಧತಿಗಳನ್ನು ಬೆಳೆಯಲು ಅನುವು ಮಾಡಿಕೊಟ್ಟಿದ್ದಲ್ಲದೆ ಪೋಷಿಸಿಕೊಂಡು ಬಂದಿತು. ಅವು ಸಮಾಜದ ಮೇಲೆ ಬೀರಿದ ಪ್ರಭಾವವನ್ನು ಗಮನಿಸಬಹುದು.

### ೫.೧.೨ ಮಾಸ್ತಿಕಲ್ಲುಗಳು

ಪ್ರಾಚೀನ ಕರ್ನಾಟಕದ ಸಾಮಾಜಿಕ ಜೀವನವನ್ನು ಅರಿಯಲು ಶಾಸನಗಳು ಮುಖ್ಯ ಆಕರ. ಸಮಾಜದ ವೈವಿಧ್ಯಮಯವಾದ ಆಯಾಮಗಳ ಕುರಿತು ಶಾಸನಗಳ ಹಾಗೆಯೇ ಮಾಸ್ತಿಕಲ್ಲುಗಳು ಸಹ ವಿವರಗಳನ್ನು ಒದಗಿಸುತ್ತವೆ. ವೀರಗಲ್ಲುಗಳು ಪುರುಷ ಪ್ರಧಾನ ವ್ಯವಸ್ಥೆಗೆ ಸಂಬಂಧಿಸಿದರೆ, ಮಾಸ್ತಿಕಲ್ಲುಗಳು ಸ್ತ್ರೀಯರಿಗೆ ಸಂಬಂಧಿಸಿವೆ. ಅಂದು ಮಹಿಳೆಯರು ಸಹ ಸ್ವಾಭಿಮಾನ, ವೀರತನ ಹೆಸರಿನಲ್ಲಿ ಪ್ರಾಣತ್ಯಾಗ ಮಾಡಿದ್ದಾರೆ. ಈ ಮಹಿಳೆಯರಲ್ಲಿ ಬಹುತೇಕರು ಸಮಾಜದ ಕೆಳ ಸಮುದಾಯಗಳಾದ ಗೊಲ್ಲರು, ನಾಯಕರು, ಹರಿಜನರು ಮುಂತಾದ ಜಾತಿಗಳಿಗೆ ಸೇರಿದವರು. ಇದು ಒಂದು ರೀತಿಯ ಆತ್ಮ ಬಲಿದಾನ. ಪತಿಯ ಸಲುವಾಗಿ ಸತಿ ಪ್ರಾಣಾರ್ಪಣೆ ಮಾಡಿಕೊಳ್ಳುವುದು. ಮಾಸ್ತಿ ಎಂಬುದು ಇದರ ತದ್ಭವರೂಪ. ಇದರಲ್ಲಿ ಎರಡು ವಿಧಾನಗಳಿವೆ. ಸಹಗಮನ ಮತ್ತು ಅನುಗಮನ. ಈ ಪದ್ಧತಿ ಪ್ರಾಚೀನ ಕಾಲದಿಂದಲೂ ಜಗತ್ತಿನ ಅನೇಕ ಜನಾಂಗಗಳಲ್ಲಿ ಅಸ್ತಿತ್ವದಲ್ಲಿತ್ತು ಎಂದು ಅಲ್ಟೇಕರ್ ಅಭಿಪ್ರಾಯಪಡುತ್ತಾರೆ. ಭಾರತದಲ್ಲಿ ಇದರ ಉಗಮದ ಬಗ್ಗೆ ನಿಖರವಾದ

ಮಾಹಿತಿಯಿಲ್ಲ. ಬ್ರಾಹ್ಮಣ ಮತ್ತು ಬೌದ್ಧ ಸಾಹಿತ್ಯವು ಕೂಡ ಮೌನ ವಹಿಸುತ್ತದೆ.[೩೫] ಕರ್ನಾಟಕದಲ್ಲಿ ಇದರ ಪ್ರಾರಂಭ ೫ನೆಯ ಶತಮಾನದಲ್ಲಿ ಕಂಡುಬರುತ್ತದೆ. ಕೇವಲ ಯುದ್ಧ ಮಾಡುವ ವರ್ಗಗಳಿಗೇ ಮಾತ್ರ ಸೀಮಿತವಾಗದೇ ಮಧ್ಯಕಾಲೀನ ಕರ್ನಾಟಕದಲ್ಲಿ ವೈದಿಕ ವರ್ಗವನ್ನು ಬಿಟ್ಟು ಉಳಿದ ಹಿಂದುಳಿದ ಕೆಳವರ್ಗದ ಜನರಲ್ಲಿ ಸತಿಪದ್ಧತಿ ಒಪ್ಪಿತವಾಗಿದ್ದಂಥ ಒಂದು ಸಂಪ್ರದಾಯವಾಗಿತ್ತು.[೩೬] ಕೆಳಜಾತಿಗಳಲ್ಲಿ ಈ ವಿವರವಾದ ಘಟನೆಗಳು ಅಸಂಖ್ಯಾತವಾಗಿ ಕಂಡುಬರುತ್ತವೆ. ಗೊಲ್ಲರು, ಹರಿಜನರು, ತಳವಾರರು ಈ ಮತದವರಲ್ಲಿ ಸಹಗಮನ ಮಾಡಿದವರ ನಿದರ್ಶನಗಳಿವೆ. ಜನಪದ ಗೀತೆ, ಪುರಾಣ ಕತೆ, ಆರಾಧನೆಯ ಆಚರಣೆಗಳಲ್ಲಿ ಈಗಲೂ ನಾವು ಉದಾಹರಣೆಗಳನ್ನು ಹುಡುಕಬಹುದು. ಈ ಕುರಿತಂತೆ ಮಾಸ್ತಿ ಕ್ರಿಯೆಗಳನ್ನು ಶಾಸನಗಳು ವಿವಿಧ ಹೆಸರುಗಳಿಂದ ಕರೆದಿವೆ. *ಕೈ ಕೊಟ್ಟಳ್, ತೋಳು ಕೈಕೊಟ್ಟಳ್, ಕಿಚ್ಚು ಹಾಯ್ದಳ್, ಚಿತ್ರಭಾನು ಪ್ರವೇಶಂಗೈದಳ್, ಕೂಡೆ ಹೋದಳ್, ನಿಜಾಧಿನಾಥನಾನ್ತು ಸತ್ತಳ್, ತಂನ ವರದೋಳ್, ಪ್ರತಿಪನ್ನದಿ ಸಂದಳ್, ಅಕ್ಷಯ ಸೊಗಮನಾನ್ತಳ್, ಸಹಾನುಭೂತಿ ಹೊಂದಿದಳ್, ಸಹಸಂಗತಿ ಹಿಡಿದಳ್, ಸಮಾಧಿ ಪ್ರವೇಶಂಗೈದಳ್, ಕುಮ್ಮರಿ ಪ್ರಯ್ದಳ, ಅಗ್ನಿ ಪ್ರವೇಶಂಗೈದಳ* ಎಂದಲ್ಲದೆ *ಧ್ರುವಲೋಕ, ವೀರಲೋಕ* ಸಾರಿದರೆಂದು ಹತ್ತಾರು ಬಗೆಯಲ್ಲಿ ಉಲ್ಲೇಖಿಸಿವೆ.[೩೭]

ಮಾಸ್ತಿ ಸ್ಮಾರಕಗಳು: ಅಗ್ನಿ ಪ್ರವೇಶ, ಸಲ್ಲೇಖನ ವ್ರತ, ಸಮಾಧಿ ಪ್ರವೇಶ ಮೂಲಕ ಮಹಾಸತಿಯರ ಹೆಸರಿನಲ್ಲಿ ನಿಲ್ಲಿಸಿದ ಸ್ಮಾರಕಗಳು ನಮಗೆ ಸಿಗುತ್ತವೆ. ಶಿಲೆ, ಚಿತ್ರಕಲೆ, ಬರಹ ಶಿಲೆ, ಮಾಸ್ತಿಗುಡಿ, ಮಾಸ್ತಿಗ್ರಾಮ ಎಂಬುದಾಗಿ ವರ್ಗೀಕರಿಸಬಹುದು. ಪತಿಗಾಗಿ ಸತಿ ಕೈಗೊಳ್ಳುವ ಆತ್ಮಬಲಿದಾನ 'ಸಹಗಮನ'ವಾದರೆ ಒಡೆಯನಿಗಾಗಿ ಸೇವಕ ಕೈಗೊಳ್ಳುವ ಆತ್ಮಬಲಿದಾನ 'ವೇಳೆವಾಳಿ' ಎಂದು ಹೇಳಬಹುದು. ಪ್ರಾಚೀನ ಕರ್ನಾಟಕದಲ್ಲಿ ಇಂತಹ ಲೌಕಿಕ ಬಲಿದಾನಕ್ಕೆ *ಕಿಳ್ಗುಂಟೆ, ಕೆಳ್ಗುಣಿ, ಕೀಳ್ನುಂಟೆ, ಕೇಳ್ಗುಂಠೆ, ಕೇಳ್ಗೊಣ್ಣೆ* ಎಂಬ ಪದಗಳು ಶಾಸನಗಳು ಮತ್ತು ಕಾವ್ಯಗಳಲ್ಲಿ ಕಂಡುಬರುತ್ತವೆ.[೩೮] ಪ್ರಾಚೀನ ಕನ್ನಡ ಶಾಸನಗಳಲ್ಲಿ *ಪ್ರೇಮಾಲಯ ಸುತನ್, ಮನೆಮಗನ್, ಪ್ರಿಯಪುತ್ರನ್ ಕುಲಪುತ್ರನ್* ಎಂಬ ಪುರುಷವಾಚಕ ಪದಗಳು ಕಂಡುಬಂದರೆ ಮನೆವಡತಿ, ಮನೆಯಡತಿ ಎಂಬ ಸ್ತ್ರೀ ರೂಪದ ಪದಗಳು ಕಂಡುಬರುತ್ತವೆ. ಗಂಡ ವೇಳೆವಾಳಿಯಾದರೆ ಆತನ ಹೆಂಡತಿ ಮಡದಿ ತನ್ನ ಗಂಡನಿಗಾಗಿ ಆತ್ಮಘಾತ ಮಾಡಿಕೊಳ್ಳಬಹುದು ಇಲ್ಲವೇ ಅಗ್ನಿಪ್ರವೇಶ ಮಾಡಬಹುದು.[೩೯] ಇದು ಮಾಸ್ತಿ ಮರಣವೇ ಆಗಿದ್ದರೂ ವೇಳೆವಾಳಿ ಎಂದು ಕರೆಯಬಹುದು. ಹೊಯ್ಸಳರ ಕಾಲದಲ್ಲಿ 'ವೇಳಿವಾಳಿ' ಲೆಂಕವಾಳಿ ಎಂದು ತದನಂತರ 'ಗರುಡ', ಶಾಸನಗಳಲ್ಲಿ *ಲೆಂಕ, ಲೆಂಕವಾಳಿ* ಪದಗಳು ಬರುವುದರಿಂದ 'ಗರುಡ' ಎಂಬ ಪದ ಸಂದೇಹ ಹುಟ್ಟಿಸುತ್ತದೆ.[೪೦]

ಬೆನ್ನೂರಿನ ಕುಂಬಾರ ಕುಲದ ಚಂಡವೆ ಸಹಗಮನ ಮಾಡಿಕೊಂಡಿದ್ದನ್ನು ಶಾಸನವೊಂದು ತಿಳಿಸುತ್ತದೆ. ಬೇಡ ಜನಾಂಗದ ಸ್ತ್ರೀಯರು ಸತಿ ಹೋದದ್ದನ್ನು ಮಲ್ಲಂದೂರು ಮತ್ತು ಕುಂಸಿಗ್ರಾಮದ ಶಾಸನಗಳು ತಿಳಿಸುತ್ತವೆ. "ಮಲೆಯಂದೂರು ಬೇಡ ಬೀರ ಜೀಲಜೀಯರ ಬೆಸದಾಂತಿರದಲ್ಲಿ ಅಮರರೊಳುಪೊಗೆ ಬೊಮ್ಮಕ್ಕನು ಮಹಾಸತಿಯಾಗಿ ದೇವಲೋಕ ವ್ರತರಾದರು" ಎಂದು ಶಾಸನ ತಿಳಿಸುತ್ತದೆ. ಕ್ರಿ.ಶ.೧೦೫೭ರ

ಬೇಸೂರು ಶಾಸನದಲ್ಲಿ ದೇಕಬ್ಬೆಯು ಸತಿ ಹೋದದ್ದನ್ನು ಚಿತ್ರಿಸಲಾಗಿದೆ. ಈ ದೇಕಬ್ಬೆ ಜಾತಿಯಿಂದ ಶೂದ್ರಳೆಂದು ಕಿಟಲ್‌ರು ಗುರುತಿಸಿರುವುದನ್ನು ಸ್ಮರಿಸಬಹುದು. ಶ್ರೀರಂಗಪಟ್ಟಣದ ವೀರಮಾಸ್ತಯ್ಯನವರ ಮನೆತನದಲ್ಲಿ ಸ್ತ್ರೀಯೊಬ್ಬರು ಸತಿ ಹೋಗಿರುವುದರ ಕುರುಹಾಗಿ ಕನ್ನಡಿ, ಕಳಸ, ಸೀರೆ ಬಳೆಗಳಿವೆ. ಈ ಮನೆತನದವರು ಜಾತಿಯಿಂದ ಬೆಸ್ತರಾಗಿರುವುದನ್ನು ಕಾಣಬಹುದು. ವಚನ ಸಾಹಿತ್ಯದಲ್ಲಿ ಇದರ ಉಲ್ಲೇಖ ಸಿಗುತ್ತದೆ. ಮಾದಾರ ಧೂಳಯ್ಯನ ವಚನದಲ್ಲಿ "ಧೀರೆಯಾದ ಮಾಸ್ತಿಯ ವೀರರಾಗಿದ್ದವರು ಮುಡಿಯಲರ ಹಿಡಿದ ಲಿಂಬೆಯ ಹಣ್ಣು ಬೇಡಿದಡೆ ಕೊಡುವಳು ವೀರರು ತರುವರು" ಎಂಬ ಮಾತು ಅವರ ವಚನದಲ್ಲಿ ಕಾಣಬಹುದು.

ಮಧ್ಯಕಾಲೀನ ಕರ್ನಾಟಕದಲ್ಲಿ ಈ ಬಗೆಯ ವಿವರಗಳನ್ನು ಹೆಚ್ಚಾಗಿ ಕಾಣಬಹುದು. ವಿಜಯನಗರ ಮತ್ತು ಬಹುಮನಿ ಸಾಮ್ರಾಜ್ಯಗಳ ನಡುವೆ ಆಗಿಂದಾಗ್ಗೆ ನಡೆಯುತ್ತಿದ್ದ ಘರ್ಷಣೆ ಕಲಹ, ಕದನಗಳಲ್ಲಿ ಮರಣವನ್ನಪ್ಪಿದ ವೀರಯೋಧರ ಮಡದಿಯರು ಹೆಚ್ಚಾಗಿ ಅನುಗಮನವಾಗಿರುವ ಸಾಧ್ಯತೆಗಳು ಕಂಡುಬರುತ್ತವೆ. ೧೫ನೆಯ ಶತಮಾನದ ಶಾಸನವೊಂದರಲ್ಲಿ ಮಾದಪ್ಪನ ಪತ್ನಿ ಮಸಣಕ್ಕೆ ಪತಿ ಹೋದದ್ದನ್ನು ಮರೂರ ಶಾಸನ ತಿಳಿಸುತ್ತದೆ. ಕ್ರಿ.ಶ.೧೪೯೪ರ ಶಾಸನವೊಂದು ಮಾದಿಗನೆ(?) ಸ್ವರ್ಗಸ್ಥನಾಗಲು ಆತನ ಪತ್ನಿ ಸ್ವರ್ಗಸ್ಥಳಾದುದನ್ನು ಹೇಳುತ್ತದೆ.[೬೦] ಕ್ರಿ.ಶ.೧೪೪೮ರ ಕೊಂಡಗಳಲೆ ಶಾಸನವು ಮಾದಿಗೊಂಡನು ತುರುಗಳ್ಳರೊಡನೆ ಹೋರಾಡಿ ದುಡಿಯಲಾಗಿ ಅವನ ಪತ್ನಿ ತಾಯಿಗುಡಿ ಸಹಗಮನ ಮಾಡಿಕೊಂಡದ್ದನ್ನು[೬೧] ವಿವರಿಸುತ್ತದೆ. ಕ್ರಿ.ಶ.೧೬೨೩ರಲ್ಲಿ ಇಕ್ಕೇರಿಗೆ ಭೇಟಿ ಕೊಟ್ಟ ಪಿಯತ್ರೂದೆಲ್ಲಾವಲ್ಲಿಯೂ ತಾನು ಕಂಡ ತರ್ಲೆಂಗಾ ಜಾತಿಗೆ ಸೇರಿದ ಗಿಯಕ್ಕಮಳು ಅನುಗಮನ ಮೂಲಕ ಸತಿಹೊದದ್ದನ್ನು ತುಂಬಾ ದೀರ್ಘವಾಗಿ ವಿವರಿಸಿದ್ದಾನೆ. ಮಧ್ಯಯುಗದ ಕನ್ನಡ ಸಾಹಿತ್ಯದಲ್ಲಿ ಕುಮಾರವ್ಯಾಸ, ಕನಕದಾಸ, ಕುಮಾರವಾಲ್ಮೀಕಿ, ನಂಜುಂಡ, ಚಿಕ್ಕಭೂಪಾಲನ ಸಾಂಗತ್ಯ[೬೨] ಮುಂತಾದವುಗದಲ್ಲಿ ಇದರ ಉಲ್ಲೇಖಗಳಿವೆ.

ಕೊಟ್ಟ ಗರಾಮದ ಶಾಸನವೊಂದು ಸಖೀಬಾಯಿ ಸತಿಯಾದದ್ದನ್ನು ತಿಳಿಸುತ್ತದೆ. ನಾಗರಸನ ಹೆಂಡತಿಯರಾದ ಬಯಿಚಕ್ಕ, ಬಾಯಿದೇವಿ, ಮಾದರ ಗವುಡಿಯರು ಸಹಗಮನ ಹೊಂದಿದ್ದದಂತೆ ಶಾಸನಗಳು ತಿಳಿಯಪಡಿಸುತ್ತವೆ. ಶರಣರ ಆಂದೋಲನದ ತರುವಾಯ ಉತ್ತರ ಕರ್ನಾಟಕದಲ್ಲಿ ಇದರ ಪ್ರಭಾವ ಕಡಿಮೆಯಾಗಿರಬೇಕು. ಈರೋಬಿ, ನಾಗವ್ವ, ವೀರದಿಮ್ಮವ್ವ ವಡ್ಡರ ನಾಗಮ್ಮ ಮುಂತಾದ ವೀರಸಂಕಥನಗಳನ್ನು ಜನಪದ ಗೀತೆಗಳ ಮೂಲಕ ಅರ್ಥೈಸಲು ಸಾಧ್ಯವಾಗುತ್ತದೆ.

ಹಸು ಪ್ರಾಚೀನ ಕಾಲದಲ್ಲಿ ಸಂಪತ್ತೆಂದು ಪರಿಗಣಿಸಿದ್ದರಿಂದ ಅವುಗಳನ್ನು ಕುದುರೆಯೇರಿ ಬಂದ ಶತ್ರುಗಳು ಅಪಹರಿಸುತ್ತಿದ್ದರು. ಇದು ವ್ಯಕ್ತಿಯ ಮಾನಾವಮಾನದ ಪ್ರಶ್ನೆಯೂ ಆಗಿತ್ತು. ಹಸುಗಳನ್ನು ಅಪಹರಿಸಲು ಬಂದವರು ಕೆಲವೊಮ್ಮೆ ಸ್ತ್ರೀಯರನ್ನು ಅಪಹರಿಸುತ್ತಿದ್ದರು. ಆಗ ಸ್ತ್ರೀಯರು ರಕ್ಷಣೆಗಾಗಿ ಕೂಗುತ್ತಿದ್ದರು. ಇದನ್ನೇ 'ಪೆಣ್ಬುಯಲ್' ಎಂದು ಕರೆದಿದೆ. ಸ್ತ್ರೀಯರ ವಸ್ತ್ರಗಳನ್ನು ಅಪಹರಿಸಿ ಅವರ ಮಾನಭಂಗ ಮಾಡುತ್ತಿದ್ದುದಕ್ಕೆ 'ಪೆಣ್ಣುಡೆಯುಚುರ' ಎಂದು ಹೇಳಿದೆ.[೬೩] ಇದನ್ನು ಶಾಸನಗಳು 'ಪೆಣ್ಣರುಡೆಯನುಳ್ಚುವುದು'

ಎಂದು ಕರೆದಿವೆ. 'ಪೆಣ್ಬುಯ್ಯಾಲ್ ಹುಯ್ಯಲ್ಪದಳ್' ಎಂದು ಕನ್ನಡ ಕಾವ್ಯಗಳು ಹೆಸರಿಸಿವೆ. ಪೆಣ್ಬುಯ್ಯಲ್ ಸಂದರ್ಭದಲ್ಲಿ ಪುರುಷರು ಪ್ರಾಣಾರ್ಪಣೆ ಮಾಡಿದ ಸಂದರ್ಭವೇ ಹೆಚ್ಚು. ಆದರೆ ಸ್ತ್ರೀಯರು ಪ್ರಾಣಾರ್ಪಣೆ ಮಾಡಿದ ಉಲ್ಲೇಖಗಳಿಲ್ಲ. ಕ್ರಿ.ಶ.೧೩೮೬ ತಾಳಗುಪ್ಪೆಯ ಶಾಸನವೊಂದು ಮಾದರಿ ಕಾಳ ಬೇಡರ ಹುಯ್ಯಲು ಸ್ವರ್ಗವನ್ ಏರಿದನು ಆತನ ಮದವಳಿ ಬೊಮ್ಮಬ್ಬೆಕಾದಿ ಪರಮಪದ ಪಡೆದಳು'[೩೫] ಎಂದು ಉಲ್ಲೇಖಿಸುತ್ತದೆ." ಪತಿ ಮರಣ ಯ್ಯೆಯಲ್ಲಿದ್ದಾಗ ಕೂಡ ಸತಿ ಆತ್ಮಾರ್ಪಣೆ ಮಾಡಿದ ಸಂಗತಿ ರಾಜತರಂಗಿಣಿಯಲ್ಲಿ ರಾಣಿಯೊಬ್ಬಳು ಸೇರಿದಂತೆ ಅವಳ ಸೇವಕರು ಅಗ್ನಿ ಪ್ರವೇಶಗೈದ ಸಂಗತಿಯಿದೆ.[೩೬] ಮಹಾಸತಿಯ ಆಚರಣೆಯ ಬಗ್ಗೆ ಗಮನ ಹರಿಸಿದಾಗ ನಾಯಕ, ಗೊಲ್ಲ, ಗೌಡ, ಹರಿಜನರಲ್ಲಿ ಉಳಿದುಬಂದಿರುವುದನ್ನು ಕಾಣಬಹುದಾಗಿದೆ.

ಹೆಮ್ಮನಹಳ್ಳಿಗೆ ಸಮೀಪವಿರುವ ಕಲ್ಲೂರು ಗ್ರಾಮ ಮಾಸ್ತಿ ಆಚರಣೆಯ ಸಂಪ್ರದಾಯದಲ್ಲಿ ಗಮನ ಹರಿಯುತ್ತದೆ. ಈ ಊರಿನ ಮಾಸ್ತಿಕತೆಯ ಪ್ರಕಾರ ಮಾಸ್ತಿಯಾದವಳು ಹಾರವರ ಹುಡುಗಿ, ಆದರೆ ಮಾಸ್ತಿಗೆ ಒಕ್ಕಲಾಗಿರುವರೆಲ್ಲ ದಲಿತರು. ಕೆಲವು ಒಕ್ಕಲಿಗರು ಒಕ್ಕಲಾಗಿದ್ದಾರೆ. ಮಾಸ್ತಿ ಪೂಜೆಯು ಇದರಿಂದಲೇ ನಡೆಯುವುದು. ಆದಿಕರ್ನಾಟಕ ಮತ್ತು ಒಕ್ಕಲಿಗರಿಗೆ ಸಂಪರ್ಕವಿರಿಸಿಕೊಂಡಿರುವ ಈ ಕಥೆ ಆದಿ ಕರ್ನಾಟಕದವರೆ ಈ ಮಾಸ್ತಿಗೆ ಹೆಚ್ಚು ಒಕ್ಕಲಾಗಿರುವುದರಿಂದ ಕಥೆಯ ಬಗ್ಗೆ ಕುತೂಹಲ ಮೂಡುತ್ತದೆ.[೩೭] ಇದರ ಜೊತೆಗೆ ಚನ್ನಪಟ್ಟಣದ ಸಿಲ್ಕ್ ಮಿಲ್ಸ್‌ನ ಮುಂಭಾಗದಲ್ಲಿರುವ ಮಂಗಳವಾರ ಪೇಟೆಯಲ್ಲಿ ಎರಡು ಮಾಸ್ತಿ ಗುಡಿಗಳಿವೆ. ಒಂದು ಊರಿನ ಮಧ್ಯಭಾಗದಲ್ಲಿದ್ದರೆ ಇನ್ನೊಂದು ಊರ ಹೊರಗೆ ಹರಿಜನ ಕೇರಿಯಲ್ಲಿದೆ. ಹರಿಜನ ಕೇರಿಯ ಮಾಸ್ತಿಯ ಬಗ್ಗೆ ವಿವರಗಳು ಕಡಿಮೆ. ಆದರೆ ಮಾಸ್ತಿಯ ಬಗೆಗೆ ದಲಿತರು ಹಾಡುವ ಪದಗಳಲ್ಲಿ ಕೆಲವು ಚಾರಿತ್ರಿಕ ಅಂಶಗಳು ಹಾಗೂ ಮಾಸ್ತಿ ಆಚರಣೆಯ ವಿಶೇಷ ಅಂಶಗಳು ಕಾಣಿಸಿಕೊಳ್ಳುತ್ತವೆ.[೩೮] ಟಿಪ್ಪುಸುಲ್ತಾನನ ಆಳ್ವಿಕೆಯ ಸಂದರ್ಭದಲ್ಲಿ ನಡೆದಿರಬಹುದಾದ ಘಟನೆಯೆಂದು ಹೇಳಬಹುದು. ಇದು ಗಂಗಾಮತಸ್ಥರಾದ ಬೆಸ್ತರ ಸಮುದಾಯಕ್ಕೆ ಸೇರಿದ ಘಟನೆ. ಇವರ ಮನೆತನದಲ್ಲಿ ದಂಡಿಗೆ ಹೋದ ಒಬ್ಬ ವ್ಯಕ್ತಿ ಹೋರಾಟದಲ್ಲಿ ಸತ್ತು ಹೋಗುತ್ತಾನೆ. ಅವನ ಹೆಂಡತಿ ಕೊಂಡವಾಗಲು ತೀರ್ಮಾನಿಸುತ್ತಾಳೆ. ಅವಳ ಸ್ಮಾರಕವಾಗಿ ಉಲ್ಲೇನಹಳ್ಳಿ ಗ್ರಾಮದಲ್ಲಿ ಒಂದು ಗುಡಿ ಕಟ್ಟಿದ್ದಾರೆ. ಇಂದಿಗೂ ಈ ಮಾಸ್ತಿಯನ್ನು ಗಂಗಾಮತದ ಸಮುದಾಯದವರು ಪೂಜಿಸುತ್ತಾರೆ. ಈ ರೀತಿಯ ವಿವರಣೆಗಳುಳ್ಳ ಮಾಸ್ತಿ ಆಚರಣೆ, ಸ್ಮಾರಕಗಳು ಕರ್ನಾಟಕದುದ್ದಕ್ಕೂ ಕಂಡುಬರುತ್ತವೆ.[೩೯] ಈ ವಿಚಾರಕ್ಕೆ ಸಂಬಂಧಪಟ್ಟಂತೆ 'ಮಾರಣ ಕಟ್ಟೆ' ಎಂಬ ಸ್ಮಾರಕವನ್ನು ಗುರುತಿಸಬಹುದು. ಮಾರಣ ಎಂದರೆ ಕಾಮನನ್ನು ಸಂಹರಿಸಿದ ಶಿವ, ಎಂಬ ಅರ್ಥವಿದೆ. ಮತ್ತೊಂದು ರೀತಿಯಲ್ಲಿ ನೋಡಿದರೆ ಕೊಲೆ, ಸಂಹಾರ, ಶತ್ರುಗಳನ್ನು ಸಂಹರಿಸಲು ಮಾಡುವ ಒಂದು ವಿಧಿ. 'ಮಾರಣ ಹೋಮ' ಎಂದರೆ ಅಸಂಖ್ಯಾತ ಜನರ ಭೀಕರ ಹತ್ಯೆ. ಅಸಂಖ್ಯಾತ ಯೋಧರ ಹತ್ಯೆ. ಕುಂದಾಪುರ ತಾಲೂಕಿನ ಮಾರುಕಟ್ಟೆಯು ಇಂತಹ ಒಂದು ಘಟನೆಯ ಸ್ಥಳವೆಂದು ಕಂಡುಬರುತ್ತದೆ.[೪೦]

ದಕ್ಷಿಣ ಭಾರತದ ಹಲವು ಪ್ರಾಂತ್ಯಗಳಲ್ಲಿ ಪೂರ್ವಜರ ಆರಾಧನೆಗೆ ಮಹತ್ವಪೂರ್ಣವಾದ ಸ್ಥಾನವಿದೆ. ನಮ್ಮ ಪೂರ್ವಜರ ಸಾಧನೆಗಳನ್ನು ತಿಳಿಯಪಡಿಸಲು ಬಹುತೇಕ ಸ್ಮಾರಕಗಳು ಕಂಡುಬರುತ್ತವೆ. ಆ ಮುಖಾಂತರ

ವೀರರ ಆರಾಧನಾ ಸಂಪ್ರದಾಯ ಇಂದಿಗೂ ಮುಂದುವರಿಯುತ್ತಿದೆ. ಉದಾಹರಣೆಗೆ ಕುರುಬರು ಮತ್ತು ಬೇಡರಲ್ಲಿ ವಂಶದ ಪೂರ್ವಜರನ್ನು ಆರಾಧಿಸುವ ಸಂಪ್ರದಾಯವಿದೆ. ಪಶ್ಚಿಮ ಭಾರತದಲ್ಲಿ *ಪಾಲಿಯ, ಖಾಂಬಿಯ* (ಕಂಬ) ಅಥವಾ *ಚರಾ* (ಸಮಾಧಿ ಕಲ್ಲು) ಎಂಬ ವಿಶಿಷ್ಟ ಸ್ಮಾರಕಗಳಿವೆ. ಈ ರೀತಿಯ ವಿವರಣೆಗಳನ್ನು ಕರ್ನಾಟಕದುದ್ದಕ್ಕೂ ಕಾಣಬಹುದು. ಕರ್ನಾಟಕದ ಬೇರೆ ಬೇರೆ ಪ್ರದೇಶಗಳನ್ನು ಗಮನಿಸಿದ ಹಾಗೆ ಕೊಡಗಿನಲ್ಲಿ ಸಹ ವೀರಗಲ್ಲಿನ ಮಾದರಿಗಳು ಕಂಡುಬರುತ್ತವೆ. *ಕೆಂಬಟ್ಟೆ, ಹೊಲೆಯರು, ಬೆಟ್ಟ ಕುರುಬರು, ಜೇನು ಕುರುಬರು, ಪಗ್ಗಡೆ, ಕೊಯುವ, ಐರಿರ* ಮುಂತಾದವರು ಇಲ್ಲಿನ ಮೂಲ ನಿವಾಸಿಗಳು. ಕೊಡಗಿನ ಮೂಲ ನಿವಾಸಿಗಳಲ್ಲಿ ದಲಿತ ವರ್ಗವು ಒಂದು.[೪೧]

ಕೊಡಗಿನಲ್ಲಿ ಈ ವೀರಗಲ್ಲುಗಳನ್ನು ಜನಸಾಮಾನ್ಯರು 'ಕೊಲೆಕಲ್ಲು'ಗಳೆಂದು ಕರೆಯುತ್ತಾರೆ. ಆದರೆ ತಿಳಿಯದೇ ಲಗ್ಗೆ ಕಲ್ಲು, ಗೋವಿನಕಲ್ಲು, ದಾಜಿಕಲ್ಲು ಸಲಾಂಕಲ್ಲು, ಪಲ್ಲಕ್ಕಿಕಲ್ಲು, ನಿಶಾನಿಕಲ್ಲು, ಗಾಳಿಕಲ್ಲು, ಲಿಂಗಮುದ್ರೆಕಲ್ಲು, ಸುಣ್ಣಕಲ್ಲು ಇತ್ಯಾದಿ ಹೆಸರುಗಳಿಂದ ಕರೆಯುತ್ತಾರೆ. ಸುಗ್ಗಿ ಕಲ್ಲು ಮತ್ತು ಗಾಳಿ ಕಲ್ಲುಗಳನ್ನು ಮಾತ್ರ ಆಚರಣೆ ಮತ್ತು ಶಿಲ್ಪದ ದೃಷ್ಟಿಯಿಂದ ವೀರಗಲ್ಲುಗಳ ವರ್ಗಕ್ಕೆ ಸೇರಿಸಬಹುದಷ್ಟೆ. ಆರಂಭಿಕ ಮಧ್ಯಕಾಲೀನದಿಂದ ಸುಮಾರು ೧೨ನೇ ಶತಮಾನದ ತನಕ ವೀರತ್ವದ ಯುಗ ಉಚ್ಛ್ರಾಯ ಶರಣ ಚಳುವಳಿ ಕರ್ನಾಟಕದುದ್ದಕ್ಕೂ ಪ್ರಭಾವ ಬೀರಿತು. ಆದುದರಿಂದ ಸ್ವಲ್ಪಮಟ್ಟಿಗೆ ಉತ್ತರ ಕರ್ನಾಟಕದಲ್ಲಿ ಆ ಸಮಯದಲ್ಲಿ ತಗ್ಗಿತು ಎಂದು ಹೇಳಬಹುದು. ಈ ಹಿನ್ನೆಲೆಯಲ್ಲಿ ೧೯ನೇ ಶತಮಾನದಲ್ಲಿ ಕೂಡ ಈ ರೀತಿಯ ವಿವರಣೆಗಳನ್ನು ಕಥನ ಗೀತೆಗಳ ಮೂಲಕ ಪಡೆಯಬಹುದು.[೪೨]

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ದೇವಸ್ಥಾನ, ಬಸದಿ, ಮಠ, ಚರ್ಚೆಗಳ ಬಗ್ಗೆ ಹಲವಾರು ಶಾಸನಗಳು ಚರಿತ್ರೆಯನ್ನು ಹೇಳುತ್ತವೆ. ಹೊಯ್ಸಳ, ವಿಜಯನಗರ, ಇಕ್ಕೇರಿ, ಹೈದರಾಲಿ-ಟಿಪ್ಪುಸುಲ್ತಾನ್ ಮುಂತಾದವರ ಬಗ್ಗೆ ಆಳ್ವಿಕೆ ಮಾಡಿರುವುದು ಈ ಭಾಗದಲ್ಲಿ ಕುರುಹುಗಳು ಕಂಡುಬರುತ್ತವೆ. ಶಾಸನಗಳಂತೆ ವೀರಗಲ್ಲುಗಳು ಕಂಡುಬರುತ್ತವೆ. ಆದರೆ, ಉಡುಪಿ ತಾಲೂಕಿನ ಬಾರಕೂರು ಮೂಡಕೇರಿ ದೇವಸ್ಥಾನದ ಹತ್ತಿರ, ಶಿವನ ಗ್ರಾಮದಲ್ಲಿಯೂ ವೇಣೂರಿನಲ್ಲಿಯೂ ವೀರಗಳ(ಬಂಟಕಲ್ಲು)ಗಳೆಂಬ ಕಲ್ಲುಗಳು ಇವೆ.[೪೩] ಬಾರಕೂರು ಪಂಚಲಿಂಗೇಶ್ವರ ದೇವಸ್ಥಾನದ ಹೊರಗಡೆ ಮಾರ್ಗದ ಬದಿಯಲ್ಲಿ ಮೂರು ಸತಿ ಕಲ್ಲುಗಳೂ (ಮಾಸ್ತಿಕಲ್ಲು) ಮೂಡಕೇರಿ ಸೋಮೇಶ್ವರ ದೇವಸ್ಥಾನದ ಹತ್ತಿರವೂ ಇವೆ.[೪೪]

## ೫.೨ ಸೈನ್ಯದ ಸೇವೆ

ಒಂದು ರಾಷ್ಟ್ರಕ್ಕೆ ರಕ್ಷಣೆಯ ದೃಷ್ಟಿಯಿಂದ ಮಿಲಿಟರಿ ಎಷ್ಟು ಅಗತ್ಯ ಎಂಬುದನ್ನು ಬಿಡಿಸಿ ಹೇಳಬೇಕಾಗಿಲ್ಲ. ಆಧುನಿಕ ಪಾರಿಭಾಷಿಕ ಶಬ್ದವಾದ ಮಿಲಿಟರಿ ಎಂಬ ಪದಕ್ಕೆ ಪ್ರಾಚೀನ ಕಾಲದ ಸೈನ್ಯಕ್ಕೆ ಸಂವಾದಿಯಾಗಿ ಬಳಸಬಹುದಾಗಿದೆ. ಈ ಸೈನ್ಯದಲ್ಲಿ ಸಮಾಜದ ನಾನಾ ವರ್ಗದವರು ಸೇವೆ ಸಲ್ಲಿಸುತ್ತಿದ್ದರು. ರಾಜ್ಯ ಅಥವಾ ಪ್ರಭುತ್ವವು ಆಜ್ಞೆ ಮಾಡಿದಾಗ ಇವರೆಲ್ಲ ಸೈನ್ಯದ ಸೇವೆಗೆ ಸಜ್ಜಾಗಬೇಕಾಗಿತ್ತು. ಇದರಿಂದ ದಲಿತರು

ಹೊರತಾಗಿರಲಿಲ್ಲ. ಪ್ರಭುತ್ವವು ವ್ಯವಸ್ಥೆಯ ಭಾಗವಾಗಿ ಇವರನ್ನು ಬಳಸಿಕೊಂಡಿದೆ. ಸಾಮಾಜಿಕ ಮತ್ತು ಆರ್ಥಿಕ ವಿಚಾರಗಳಿಗೆ ವ್ಯತಿರಿಕ್ತವಾಗಿ ರಾಜ್ಯವು ದಲಿತರನ್ನು ಸೈನ್ಯದ ಸೇವೆಗೆ ಸೇರಿಸಿಕೊಂಡಿದೆ. ಇಲ್ಲಿ ಸಾಮಾಜಿಕ ನೀತಿ ನಿಯಮಗಳಾವುವೂ ಪರಿಗಣನೆಗೆ ಬರುತ್ತಿರಲಿಲ್ಲ. ಕರ್ನಾಟಕದ ಚರಿತ್ರೆಯಲ್ಲಿ ಪ್ರಾಚೀನ ಕಾಲದಿಂದ ಪ್ರಸ್ತುತದವರೆಗೂ ದಲಿತರು ಸೈನ್ಯದ ಭಾಗವಾಗಿ ಸೇವೆ ಸಲ್ಲಿಸುತ್ತಿರುವುದನ್ನು ಗಮನಿಸಬಹುದು. ಬ್ರಾಹ್ಮಣರು ಮತ್ತು ಕೈಗಾರಿಕೆಗಳಲ್ಲಿ ನಿರತರಾಗಿರುವ ಜಾಡರು, ಕುಂಬಾರರು, ಕಮ್ಮಾರರು, ಪಾಂಚಾಲರು, ಗುಡಿಗಾರ, ಕಂಚುಗಾರ ಇವರ ಹೊರತು ಉಳಿದ ಎಲ್ಲಾ ಜಾತಿಯವರು ಎಂದರೆ ಬಂಟರು, ನಾಡವರು, ಬಿಲ್ಲವರು, ಬಾಕುಡಿರು, ಮುಂಡಾಲ ಹೊಲೆಯರು ಮನೆಗೆ ಒಬ್ಬನ ಪ್ರಕಾರ ಯುದ್ಧದ ಸಮಯ ರಣಭೇರಿಯನ್ನು ರಾಜಮಂದಿರದಿಂದ ಹೆಬ್ಬಾಗಿಲಲ್ಲಿ ಹೊಡೆದ ಕೂಡಲೇ ತಮ್ಮ ಆಯುಧಗಳ ಸಹಿತ ಹೊರಟು ಬರಬೇಕಿತ್ತು. ಪ್ರತಿ ಒಂದು ಗುತ್ತಿನ ಬಂಟರೂ ನಾಡವರು ಕೆಲವು ಬಿಲ್ಲವರೂ ಮುಂಡಾಲ ಹೊಲೆಯರ ಪ್ರತಿ ಒಬ್ಬ ಮುಖಾರಿಯೂ ಸೇನಾಧಿಕಾರಿಗಳಾಗಿದ್ದರು. ಈಗಲೂ ತುಳುರಾಜರಿಗೆ ಪಟ್ಟಕಟ್ಟುವ ಸಮಯದಲ್ಲಿ ಎಲ್ಲರೂ ಅರಮನೆಗೆ ಬರುವ ಪದ್ಧತಿಯಿದೆ."[೪೫]

ತುಳುನಾಡಿನ ಮೂಲನಿವಾಸಿಗಳಾದ ಹೊಲೆಯರು ಆರಂಭ ಅರಸರಾದ ಆಳುಪರ ಸೇನೆಗಳಲ್ಲಿ ಯೋಧರಾಗಿ ಕೆಲಸ ಮಾಡಿದ ಬಗ್ಗೆ ದಾಖಲೆ ಸಿಗುತ್ತದೆ. ಧರೆಗೀಶನ ಸಾಮಂತ ಜುದ್ಧಮಲ್ಲನ ಆಳು ರಣಮಣ್ಣಿ 'ಅಂಗು ಪೆಸಾರ ಪೊಲೆಗನ್' ರಣಸಾಗರನ ಸೇವೆಯೊಡನೆ ಹೋರಾಡಿ ಮಾಡಿದನು ಎಂಬ ಸಂಗತಿ ಧರೆಗೀಶ ಮತ್ತು ರಣಸಾಗರನ ಕೋಟ ಶಾಸನದಲ್ಲಿ (ಸು. ೮ನೇ ಶತಮಾನದ ಉತ್ತರಾರ್ಧ) ಇದೆ. ಅಂಗುಪೆಸಾರ ಪೊಲೆಗ ಎಂದರೆ ಅಂಗು ಎಂಬ ಹೆಸರಿನ ಪೊಲೆಯ ಅಥವಾ ಹೊಲೆಯ ಎಂದಾಗುತ್ತವೆ. ಇವರನ್ನು ಅಳುಪರು ತನ್ನ ರಕ್ಷಣೆಗೆ ಇಟ್ಟುಕೊಂಡಿರಬೇಕು. ಇವರಿಗೆ "ಮೂಲೊಡಕುಳು (ಮೂಲದವರು) ಎನ್ನುವಲ್ಲಿ ಮೂಲನಿವಾಸಿಗಳು ಎನ್ನುವ ಅಭಿಪ್ರಾಯವೂ ಕೂಡ ಇದೆ."[೪೬] ಈ ಕಾಲಘಟ್ಟದಲ್ಲಿ ಸೈನಿಕರ ಆಯ್ಕೆ ಕುರಿತು ಚರ್ಚಿಸುವುದು ಅತ್ಯಾವಶ್ಯಕ. ವಿಜಯನಗರದ ಆಳ್ವಿಕೆಯ ಸಂದರ್ಭದಲ್ಲಿ ಸೈನ್ಯವು ಎರಡು ವಿಭಾಗಗಳಲ್ಲಿ ಕೂಡಿಟ್ಟಿತು. ಒಂದು; ಕಾಯ್ದಿಟ್ಟ ಸೈನ್ಯ, ಎರಡನೆಯದು ಪ್ರಾಂತೀಯ ಸೈನ್ಯ. ಕಾಯ್ದಿಟ್ಟ ಸೈನ್ಯದ ಸೈನಿಕರ ನೇಮಕವು ರಾಜ ಅಥವಾ ಆತನ ಅಧಿಕಾರಿಗಳ ನೇರ ಅಧೀನದಲ್ಲಿದ್ದಿತು. ಪ್ರಾಂತೀಯ ಸೈನ್ಯಕ್ಕೆ ಸೈನಿಕರನ್ನು ಸಾಮಂತಾಧಿಕಾರಿಗಳಾದ ಅಮರನಾಯಕರು ಮತ್ತು ಸಾಮಂತ ಅರಸರು ನೇಮಕ ಮಾಡಿಕೊಳ್ಳುತ್ತಿದ್ದರು."[೪೭] ವಿಜಯನಗರ ಅವಧಿಯಲ್ಲಿ ಸಾಮಾನ್ಯವಾಗಿ ಎಲ್ಲಾ ವರ್ಗದ ಸೈನಿಕರು ಇದ್ದರು. ಬ್ರಾಹ್ಮಣರು, ಶೈವರು, ಬೇಡರು ಇನ್ನು ಮುಂತಾದ ಎಲ್ಲಾ ಜಾತಿ-ಉಪಜಾತಿಗಳ ಯೋಧರಿದದ್ದುದು ತಿಳಿದು ಬರುತ್ತದೆ. ಇದರಲ್ಲಿ ಕೆಲವರು ದಂಡನಾಯಕರು ಆಗಿದ್ದರು. ದಂಡನಾಯಕ ಮತ್ತಿತರ ಪ್ರಮುಖ ಹುದ್ದೆಗಳನ್ನು ಹೆಚ್ಚಾಗಿ ಬ್ರಾಹ್ಮಣರು ವಹಿಸಿದ್ದರು. ಸಾಯಮಂತ್ರಿ, ಸಾಳ್ವತಿಮ್ಮ, ಗೋಪ ಮಂತ್ರಿ, ಗೋಪಣ್ಣ ಒಡೆಯ, ಗೋವಿಂದಯ್ಯ, ಕೊಂಮರಸ, ಮಾಧವ ಇತ್ಯಾದಿ. ಇರುವಪ್ಪ ಮತ್ತು ಬೈಚಪ್ಪರು ಜೈನಧರ್ಮಕ್ಕೆ ಸೇರಿದವರು. ಕೃಷ್ಣದೇವರಾಯನ ಕಾಲದಲ್ಲಿ ರಾಮಪ್ಪನು ಬೇಡಜನಾಂಗದ ಪ್ರತಿನಿಧಿಯಾಗಿ ಅಮರನಾಯಕತನವನ್ನು ನೋಡಿಕೊಂಡಿದ್ದು ತಿಳಿದು ಬರುತ್ತದೆ. ಸೈನಿಕ ಮತ್ತು ಆಡಳಿತದ ಮುಖ್ಯ ಸ್ಥಾನಗಳನ್ನು ಬ್ರಾಹ್ಮಣರಿಗೆ ಕೊಟ್ಟಿದ್ದರು."[೪೮]

ಆಡಳಿತ ನಿರ್ವಹಣೆಯಲ್ಲಿ ರಾಜ್ಯವು ರಕ್ಷಣೆ ಕೊಡುವುದು ಅದರ ಮುಖ್ಯ ಜವಾಬ್ದಾರಿ. ದೈನಂದಿನ ಜೀವನದ ಸಾಮಾಜಿಕ ಶ್ರೇಣೀಕರಣದಲ್ಲಿ ದಲಿತರಿಗೆ ಬಹುಪಾಲು ಕೊನೆಯ ಸ್ಥಾನ. ಆದರೆ ರಾಜ್ಯದ ಹಿತರಕ್ಷಣೆ ಮಾಡುವ ಸಂದರ್ಭದಲ್ಲಿ ಪ್ರಥಮ ಸ್ಥಾನವೆಂದರೆ ತಪ್ಪಾಗಲಾರದು. ಏಕೆಂದರೆ ಸಾಮಾಜಿಕ ಜೀವನ ಮತ್ತು ಆಡಳಿತಾತ್ಮಕ ನಿರ್ವಹಣೆಯನ್ನು ಕುರಿತು ಚರ್ಚಿಸುವಾಗ ಎರಡು ಆಯಾಮಗಳನ್ನು ಪ್ರತ್ಯೇಕವಾಗಿ ನೋಡುವ ಸಂದರ್ಭ ಎದುರಾಗುತ್ತದೆ. ರಾಜ್ಯದ ದೃಷ್ಟಿಯಲ್ಲಿ ಸಾಮೂಹಿಕ ಹೊಣೆಗಾರಿಕೆ, ಜವಾಬ್ದಾರಿ, ದಿಟ್ಟತನ ಮುಖ್ಯವಾಗುತ್ತವೆಯೇ ಹೊರತು ಮೇಲು ಕೀಳಿನ ಭಾವನೆಗಳು ಆಗ ರಾಜ್ಯದ ಗಮನದಲ್ಲಿ ಕಾಣಿಸುವುದಿಲ್ಲ. ಏಕೆಂದರೆ ಚರಿತ್ರೆಯಲ್ಲಿನ ವಿವರವಾದ ಅಧ್ಯಯನಗಳನ್ನು ಗಮನಿಸಿದಾಗ ಈ ರೀತಿಯ ಅಭಿಪ್ರಾಯಗಳನ್ನು ವ್ಯಕ್ತಪಡಿಸುವುದಕ್ಕೆ ಸಾಧ್ಯವಾಗುತ್ತದೆ. ಪ್ರಾಚೀನ ಮತ್ತು ಮಧ್ಯಕಾಲೀನ ಭಾರತದಲ್ಲಿ ಬಹುತೇಕ ಅರಸರ ಆಳ್ವಿಕೆಯಲ್ಲಿ ಕೆಳಜಾತಿಗಳಿಗೆ ಸೈನಿಕ ವೃತ್ತಿಯ ಸೇರ್ಪಡೆಗೆ ಅವಕಾಶವನ್ನು ರಾಜ್ಯವು ಕೊಟ್ಟಿದೆ. ಹಾಗೆಂದ ಮಾತ್ರಕ್ಕೆ ಮೇಲ್ಜಾತಿಗಳು ಈ ಕ್ಷೇತ್ರದಿಂದ ಹೊರತಾಗಿದ್ದವು ಎಂದರ್ಥವಲ್ಲ. ಎಲ್ಲಾ ಸಮುದಾಯದ ಪ್ರತಿನಿಧಿಗಳು ಸೇನೆಯಲ್ಲಿರುತ್ತಿದ್ದರು. ವಿಶೇಷವೆಂದರೆ ದಲಿತರ ಅವಶ್ಯಕತೆ ಸೇನೆಗೆ ಎಷ್ಟಿತ್ತೆಂಬುದು ವೇದ್ಯವಾಗುತ್ತದೆ.

ಮಧ್ಯಕಾಲೀನ ಭಾರರತದಲ್ಲಿ ಸೈನ್ಯವು ರಾಜ್ಯದ ಸ್ಥಿತಿಗತಿಯನ್ನು ನಿರ್ಧರಿಸುವ ಅಂಶಗಳಲ್ಲಿ ಒಂದಾಗಿತ್ತು. ಇವತ್ತಿನ ನಮ್ಮ ಮಿಲಿಟರಿ ವ್ಯವಸ್ಥೆ ಇಲ್ಲದೇ ಇರುವ ಸ್ಥಿತಿಯನ್ನು ಕಲ್ಪಿಸಿಕೊಳ್ಳಲು ಸಾಧ್ಯವೇ ಇಲ್ಲದಂತಾಗಿದೆ. ಪ್ರಾಚೀನ ಭಾರತದಲ್ಲಿ ಬಹುತೇಕ ಬುಡಕಟ್ಟುಗಳು ಅವರದೇ ಆದ ಮುಖ್ಯಸ್ಥನನ್ನು ನೇಮಿಸಿಕೊಳ್ಳುತ್ತಿದ್ದವು. ಅತಾವಿಕ(Atavika) ಅಂದರೆ ಅರಣ್ಯವೆಂದರ್ಥ. ಮತ್ತೊಂದು ಅರ್ಥದಲ್ಲಿ ಅರಣ್ಯದಲ್ಲಿ ವಾಸಿಸುವ ಬುಡಕಟ್ಟುಗಳು ಎಂದು. ಅವುಗಳಲ್ಲಿ ನಿಷಾದ ಮತ್ತು ಮ್ಲೇಚ್ಛ ಬುಡಕಟ್ಟುಗಳು ಮುಖ್ಯವಾದವು.[೯] ಹಾಗೆಯೇ ಪ್ರಾಚೀನ ಕಾಲದಲ್ಲಿ ಬುಡಕಟ್ಟುಗಳು, ಅರಸು ಮನೆತನಗಳು ಸೈನ್ಯವನ್ನು ರಾಜ್ಯದ ಜೀವಾಳವೆಂದು ನಂಬಿದ್ದರು.

ಸೈನಿಕರ ಆಯ್ಕೆ ಕ್ರಮವನ್ನು ಕುರಿತು ವಿದೇಶಿ ಪ್ರವಾಸಿಗನಾದ ಬಾರ್ಬೋಸಾ ಕೊಡುವ ಮಾಹಿತಿ ಗಮನ ಸೆಳೆಯುತ್ತದೆ. ಸೈನಿಕರ ದೈಹಿಕ, ಮಾನಸಿಕ ಚಹರೆಗಳು ಮುಂತಾದ ನೀತಿ ನಿಯಮಗಳು ಇರುತ್ತಿದ್ದವು. ಸೈನ್ಯ ಸಂಗ್ರಹಿಸುವುದಲ್ಲಿ ಜಾತಿ, ವೃತ್ತಿಗಳ ನಿರ್ಬಂಧವಿರುತ್ತಿರಲಿಲ್ಲ. "ವೀರರಾದ ಕಾಳಂಜಿಯ ಕಂಪ, ಅಕ್ಕಸಾಲಿಯ ಚಿಕ್ಕ, ಕೊಳ್ಳಿಯ ನಾಗ, ದೇವಿಸೆಟ್ಟಿಯ ಲಿಂಗ, ಹಡಪದ ಬಲ್ಲುಗ, ಗಿಂಡಿಯ ಲಕ್ಕ, ಒಕ್ಕಲಿಗರ ನಾಗಣ್ಣ, ಭಂಡಾರಿ ಸಾವಣ್ಣ ಇತ್ಯಾದಿ ಬೇರೆ ಬೇರೆ ವೃತ್ತಿಯವರು, ಪರಾಕ್ರಮಿಗಳಾದ ಹೊಲೆಯರ ಹುಳ್ಳ ಮತ್ತು ಮಾದಿಗರ ಹಂಪ ಎಂಬ ಕೆಳಜಾತಿ ಯೋಧರೂ ಕಂಪಿಲರಾಯನ ಸೈನ್ಯದಲ್ಲಿ ಇದ್ದರೆಂಬುದನ್ನು ನಂಜುಂಡ ಕವಿಯ "ರಾಮನಾಥಚರಿತೆ" ತಿಳಿಸುತ್ತದೆ. ಜಾತಿ ಸಂಬಂಧಿತ ಕಟ್ಟುಪಾಡುಗಳು ಆ ಕಾಲದಲ್ಲಿ ಆಳವಾಗಿ ಬೇರೂರಿದ್ದರೂ ಸೈನಿಕರ ಆಯ್ಕೆಯಲ್ಲಿ ಮಾತ್ರ ಯಾವುದೇ ನಿರ್ಬಂಧಗಳು ಇರಲಿಲ್ಲವೆಂಬುದು ತಿಳಿಯುತ್ತದೆ.

ಸದೃಢರು, ಧೈರ್ಯಶಾಲಿಗಳು ಆಗಿದ್ದ ಶೂದ್ರರನ್ನು ಸೈನಿಕರನ್ನಾಗಿ ಸೇರಿಸಿಕೊಳ್ಳುವುದು ರಾಜಸತ್ತೆಯ ಸುರಕ್ಷತೆಯ ದೃಷ್ಟಿಯಿಂದ ಅಗತ್ಯವಾಗಿದ್ದುದರಿಂದ ಜಾತಿ ನಿರ್ಬಂಧಗಳನ್ನು ಪರಿಗಣಿಸದಿದ್ದುದು ಗಮನಾರ್ಹವೆಂದು ಹೇಳಬಹುದು. ಕಂಪಿಲನ ದಂಡಿನಲ್ಲಿದ್ದ ಸೈನಿಕರನ್ನು 'ಹುಳಿ ಹೇರು ಕಾಳಗ'ದ ಸಂದರ್ಭದಲ್ಲಿ ವರ್ಣಿಸುವಾಗ

ಅದರಲ್ಲಿ ಕನ್ನಡಿಗರು ತುರುಕರು, ಒಡ್ಡಿಯರು (ಒರಿಸ್ಸಾದವರು) ತೆಲುಗರು, ತಿಗುಳರು, ಮಹಾರಾಷ್ಟ್ರದವರು ಸಹ ಇದ್ದರು. ಈಗಾಗಲೇ ನಂಜುಂಡ ಕವಿಯು ತಿಳಿಯಪಡಿಸುವಂತೆ ಬೇರೆ ಬೇರೆ ಜಾತಿಯವರು ಸೈನ್ಯದಲ್ಲಿದ್ದರು.[೫೦] ಸೈನ್ಯವನ್ನು ಹಿಂಬಾಲಿಸಿ ಹೋದ ಅಗಸರ ಮತ್ತು ವೇಶ್ಯೆಯರ ವಿಚಾರ ಅಷ್ಟೇ ಗಮನಾರ್ಹವಾದುದು. ಸೈನ್ಯದ ಮುಂಚೂಣಿಯಲ್ಲಿ ರಾಜನ ಹಿಂದೆ-ಮುಂದೆ ಹತ್ತರಿಂದ ಹನ್ನೆರಡು ಸಾವಿರ ಜನ ನೀರು ತುಂಬಿಕೊಳ್ಳಲು ಚರ್ಮದ ಚೀಲಗಳನ್ನು ಹಿಡಿದುಕೊಂಡು ಹೋಗುತ್ತಿದ್ದರು. ಸೈನ್ಯದಲ್ಲಿದ್ದ ಎಲ್ಲಾ ಸಮುದಾಯದವರು ಯಾವ ಭೇದ-ಭಾವವಿಲ್ಲದೆ ಕಾರ್ಯ ನಿರ್ವಹಿಸುತ್ತಿದ್ದರು. ಮುಂಜಾಗ್ರತೆ ಕ್ರಮವಾಗಿ ನೀರಿನ ಅಭಾವ ಆಗಬಾರದೆಂಬ ಕುರಿತು ಸೈನ್ಯದ ಹಿಂದೆಯೇ ನೀರನ್ನು ಕೊಂಡೊಯ್ಯುತ್ತಿದ್ದರು.[೫೧]

ಭಾರತದಲ್ಲಿ ಅತ್ಯಂತ ಉಚ್ಛ್ರಾಯ ಸ್ತರದಲ್ಲಿ 'ಮಧ್ಯಕಾಲೀನ ಇಸ್ಲಾಂ ಯುಗದಲ್ಲಿ ಶೂದ್ರರಿಗೂ ಅಸ್ಪೃಶ್ಯರಿಗೂ ಶಿಕ್ಷಣ ಹಾಗೂ ಸ್ವಾತಂತ್ರ್ಯವೇ ಮೊದಲಾದ ಮಾನವ ಹಕ್ಕುಗಳನ್ನು ನಿರಾಕರಿಸಲಾಯಿತು. ಬದಲಾಗಿ ಮುಸಲ್ಮಾನ್ ಸಾಮ್ರಾಟರು ಹಿಂದೂಗಳಲ್ಲೆ ಕುಲೀನರು ಅಥವಾ ಸರದಾರರೆಂಬ ಒಂದು ವರ್ಗವನ್ನೇ ಹುಟ್ಟುಹಾಕಿದರು. ಈ ಅವಕಾಶಗಳನ್ನು ದಲಿತರಿಗೆ ನಿರಾಕರಿಸಿದರು. ಅಕಸ್ಮಾತ್ ಈ ಅವಕಾಶಗಳನ್ನು ದಲಿತರಿಗೆ ಕೊಟ್ಟರೆ ತಾವು ಸವರ್ಣೀಯರ ವಿರೋಧಕ್ಕೆ ಗುರಿಯಾಗಬೇಕಾಗುತ್ತದೆ ಎಂದು ಮನಗಂಡಿದ್ದರು.[೫೨] ಮರಾಠ ಸಾಮ್ರಾಜ್ಯದಲ್ಲಿ ಕೂಡ ಅಸ್ಪೃಶ್ಯರು ಅಥವಾ ಮಹರ್ ಯೋಧರು ಸೈನಿಕರಾಗಿ ಮುಸ್ಲಿಂ ಸೇನೆಯ ವಿರುದ್ಧ ವೀರತ್ವದಿಂದ ಹೋರಾಡಿದ ಈ ದಲಿತರು ಮರಾಠ ಸಾಮ್ರಾಜ್ಯದ ಸುಭದ್ರತೆಗೆ ಮೂಲ ಕಾರಣವಾದರೂ ಅವರನ್ನು ಯಾವ ನಾಗರಿಕ ಸೌಲಭ್ಯಗಳಿಗೆ ನೇಮಿಸಲಿಲ್ಲ. ಶಿವಾಜಿ ಕೂಡ ಇದರ ಬಗ್ಗೆ ಗಮನ ಹರಿಸಲಿಲ್ಲ. ಮುಸ್ಲಿಂ ಅರಸರು ಹಿಂದೂ ಜನಾಂಗವನ್ನು ಒಡೆಯುವ ಯತ್ನ ಮಾಡಿದರು ಎಂಬುದರಲ್ಲಿ ಯಾವ ಅನುಮಾನವೂ ಇದ್ದಂತೆ ಕಾಣುತ್ತಿಲ್ಲ.

ಮುಸ್ಲಿಂ ಹಾಗೂ ಮರಾಠ ಸಾಮ್ರಾಟರ ಸೈನ್ಯಗಳ ಯೋಧರೆನಿಸಿ ದುಡಿದ ಮಹರ್ ಅಸ್ಪೃಶ್ಯ ಜನಾಂಗವೆಂಬುದು ಸರ್ವವಿಧಿತ. ಆದರೂ ಸೌಲಭ್ಯವಂಚಿತರಾಗಿ ಗುಲಾಮಗಿರಿ ಅನುಭವಿಸಿದರು. ಒಮ್ಮೆ ಶಿವಾಜಿ ಪಟ್ಟಾಭಿಷೇಕ ಮಾಡಿಸಿಕೊಳ್ಳಲೆಂದು ಬಂದಾಗ ಮಹಾರಾಷ್ಟ್ರದ ಚಿತ್‌ಪಾವನ್ ಬ್ರಾಹ್ಮಣರು ನಿರಾಕರಿಸಿದಾಗ, ಅವರಿಗೆ ಹೆಚ್ಚಿನ ಹಣಕೊಟ್ಟು ಪಟ್ಟಾಭಿಷೇಕ ಮಾಡಿಸಿಕೊಂಡನು. ಕಾರಣ ಒಬ್ಬ ಶೂದ್ರನಾಗಿದ್ದರಿಂದ.[೫೩]

ಕರ್ನಾಟಕದ ಚರಿತ್ರೆಯನ್ನು ಗಮನಿಸಿದಾಗ ಬಹುತೇಕ ರಾಜವಂಶಗಳ ಆಳ್ವಿಕೆಯಲ್ಲಿ ದಲಿತರ ಸೇವೆ ಅನನ್ಯವಾದದ್ದು ಮತ್ತು ಗಮನಾರ್ಹವಾದುದು. ಆರಂಭಿಕ ಮಧ್ಯಕಾಲೀನ ಕರ್ನಾಟಕದಲ್ಲಿ ಕೆಲವು ಹೋರಾಟ ಪಡೆಗಳಿದ್ದವು. ಉದಾಹರಣೆಗೆ ಬೇಡರ ಪಡೆ. ಹಾಗೆಯೇ ದಲಿತರಿಗೆ ಅವಕಾಶ ಮಾಡಿಕೊಟ್ಟ ಅರಸರು ಚರಿತ್ರೆಯಲ್ಲಿ ಕಾಣಸಿಗುತ್ತಾರೆ. ಕುಮ್ಮಟದುರ್ಗದ ಅರಸರು ವಿಜಯನಗರದ ಅರಸರು, ಮೈಸೂರಿನ ಅರಸರು ಮುಂತಾದವರು. ವಸಾಹತುಶಾಹಿ ಪೂರ್ವ ಇಂಡಿಯಾದ ಯಾವ ದೊರೆಯೂ ಅಸ್ಪೃಶ್ಯರನ್ನು ಸೈನ್ಯಕ್ಕೆ ಸೇರಿಸಿಕೊಂಡಿರಲಿಲ್ಲ ಎಂಬ ಅಭಿಪ್ರಾಯವಿದೆ.[೫೪] ಆದರೆ ಈ ಅಭಿಪ್ರಾಯವನ್ನು ಮೇಲಿನ ಮಾತುಗಳು ಪ್ರತಿರೋಧಿಸುತ್ತವೆ ಎಂದರೆ ತಪ್ಪಾಗಲಾರದು.

ವಿವಿಧ ಜಾತಿ ಜನಾಂಗಗಳಂತೆ ಪ್ರಾದೇಶಿಕತೆಗೂ ಸ್ಥಾನವನ್ನು ನೀಡಲಾಗಿದ್ದಿತು. ನಂಜುಂಡ ಕವಿಯು ಹುಳಿಹೇರು ಕಾಳಗದಲ್ಲಿ ಪ್ರಾದೇಶಿಕ ಪಡೆಗಳನ್ನು ಗುರುತಿಸಿದ್ದಾನೆ. ಅದರಲ್ಲಿ ಕನ್ನಡಿಗರು, ತುರುಕರು, ಒಡ್ಡಿಯವರು (ಒರಿಸ್ಸಾ), ಅರಿಯ (ಮಹಾರಾಷ್ಟ್ರ), ಗೌಳ, ಗೂರ್ಜರ, ತೆಲುಗ, ತಿಗುಳು ಇನ್ನು ಮುಂತಾದ ಪ್ರಾದೇಶಿಕ ಯೋಧರಿದ್ದುದಾಗಿ ಹೇಳಿದ್ದಾನೆ. ಕ್ರಿ.ಶ. ೧೩೫೭ರ ಶಾಸನವು ಕೂಡ ಈ ಮೇಲಿನ ಹೇಳಿಕೆಯನ್ನು ಸಮರ್ಥಿಸುತ್ತದೆ. ನ್ಯೂನಿಜ್ ಪೋರ್ಚುಗೀಸದ ಪಡೆಯೊಂದು ಕೃಷ್ಣದೇವರಾಯನ ಸೈನ್ಯದಲ್ಲಿದ್ದುದಾಗಿ ಹೇಳಿದ್ದಾನೆ.[೫೬]

ಸೈನ್ಯದಲ್ಲಿ ಅಸ್ಪೃಶ್ಯರನ್ನು ಸಿಪಾಯಿಗಳನ್ನಾಗಿ ನೇಮಿಸಿಕೊಂಡ ಇಂಡಿಯಾದ ಪ್ರಪ್ರಥಮ ದೊರೆ ಸುಲ್ತಾನ್ ಟಿಪ್ಪು. ಟಿಪ್ಪು ಸೈನ್ಯದ ಈ ರಹಸ್ಯವನ್ನು ಸರಿಯಾಗಿಯೇ ಅರ್ಥಮಾಡಿಕೊಂಡಿದ್ದ ಬ್ರಿಟಿಷರು ಸುಲ್ತಾನ್ ಟಿಪ್ಪು ಪತನದ ನಂತರ ತೀರಾ ಅನತಿ ಕಾಲದಲ್ಲಿ ತಮ್ಮ ಆಡಳಿತವೇ ನಿರ್ಣಾಯಕವಾಗಿದ್ದಂತಹ ಮುಂಬೈ ಪ್ರೆಸಿಡೆನ್ಸಿಯಲ್ಲಿ 'ಮಹರ್ ರೆಜಿಮೆಂಟ್'ನ್ನು ಸ್ಥಾಪಿಸಿದರು. ತದನಂತರ ೧೮೧೮ರ ಗೋರೇಗಾಂವ್ ಯುದ್ಧದಲ್ಲಿ ಪೂನಾದ ಮಡಿವಂತ ದೊರೆ ಪೇಶ್ವೆಯ ಬ್ರಾಹ್ಮಣ ಸಾಮ್ರಾಜ್ಯ ಧೂಳೀಪಟವಾದದ್ದೇ ಮಹರ್ ರೆಜಿಮಂಟಿನ ಕೈಯಲ್ಲಿ ಎಂಬುದಕ್ಕೆ ಬೇಕಾದಷ್ಟು ಆಧಾರಗಳಿವೆ. ೧೮೫೭ ಮೇ ೧೧ರಂದು ಬ್ರಿಟಿಷ್ ಸೇನಾ ನೀತಿಯ ವಿರುದ್ಧ ಮಹರ್ ರೆಜಿಮಂಟ್ ಸೈನಿಕರೇ ದಂಗೆಯೆದ್ದವರು ಎಂಬುದಕ್ಕೆ ದಾಖಲೆಗಳಿವೆ. ಆದುದರಿಂದ ಕರ್ನಾಟಕವು ಸೇರಿದಂತೆ ಭಾರತೀಯ ಚರಿತ್ರೆಯಲ್ಲಿ ಸೈನಿಕ ಚರಿತ್ರೆ ಇನ್ನೂ ಕಣ್ಮರೆಯಾಗಿಯೇ ಉಳಿದಿದೆ.[೫೭] ಟಿಪ್ಪು ಸುಲ್ತಾನನನ್ನು ರಾಷ್ಟ್ರೀಯವಾದಿ ಇತಿಹಾಸಕಾರರು ಮತ್ತು ಬ್ರಿಟಿಷ್ ಚರಿತ್ರಕಾರರು ಮತಾಂಧನೆಂದು ಬಿಂಬಿಸುತ್ತಾರೆ. ಆದರೆ ಶೂದ್ರಾತಿ ಶೂದ್ರರಿಗೆ ಸಮಾನ ಅವಕಾಶಗಳನ್ನು ಕಲ್ಪಿಸಿಕೊಟ್ಟು, ಜಾತ್ಯತೀತವೂ, ಜನಪರವೂ ಆದ ಕಾರ್ಯಕ್ರಮಗಳನ್ನು ಹಾಕಿಕೊಳ್ಳುವುದರ ಮೂಲಕ ನಾಡಿಗೆ ಸೇವೆ ಸಲ್ಲಿಸಿದ್ದಾರೆ. ಈ ಕುರಿತಂತೆ ಮೈಸೂರು ಭಾಗದ ಜನಸಾಮಾನ್ಯರಲ್ಲಿ ಇಂದಿಗೂ ಕಂಠಸ್ಥವಾಗಿರುವ ಲಾವಣಿಗಳು ಟಿಪ್ಪುವಿನ ವ್ಯಕ್ತಿತ್ವವನ್ನು ಪರಿಚಯಿಸಿಕೊಡುತ್ತದೆ.

ಮೊದಲ ಲಾವಣಿಯ ಪ್ರಾರಂಭ ಹೈದರನ ಹಿನ್ನೆಲೆಯೊಂದಿಗೆ ಪ್ರಾರಂಭವಾಗುತ್ತದೆ. ಅವನ ಪೂರ್ವಜರ ಹಿನ್ನೆಲೆಯನ್ನು ನೀಡಿದ ಮೇಲೆ ಹೈದರನ ಕಾಲದಲ್ಲಿ ಮೈಸೂರು ಹೇಗಿತ್ತು ಎಂಬುದನ್ನು ಹೀಗೆ ಹಾಡುತ್ತಾರೆ.

ಹೈದರ್ ಕಾಲದಿ ಮೈಸೂರು ದೇಶ
ಮಾದರಿಗಿಂತ ಮುಂದೊರೆದಿತ್ತು
ಹೈದರ್ ಅಲಿಗೆ ಖಾನ್ ಬಹದ್ದೂರ್
ನವಾಜನೆಂಬುವ ಬಿರುದಿತ್ತು.
ಜಾತಿ ಮೂಡಲಿಲ್ಲ ಹೈದರಾಲಿಗೆ
ಪ್ರೀತಿ ಇದ್ದಿತು ಜನರಲ್ಲಿ
ಜಾತಿ ಭೇದವ ಬಿಟ್ಟು ಹೈದರ
ಖ್ಯಾತಿ ಪೊಂದಿದ ನಿಳೆಯಲ್ಲಿ[೫೮]

ಹೈದರನ ಜಾತಿ ಸಮನ್ವಯತೆಯ ಬಗ್ಗೆ ಅನೇಕ ಕಥೆಗಳು ಮೈಸೂರಿನ ಸುತ್ತಮುತ್ತ ಇವೆ. ಅದರಲ್ಲಿ ಒಂದು ಕತೆ ಹೀಗಿದೆ. ಒಮ್ಮೆ ಗಣೇಶ ಚತುರ್ಥಿಯಂದು ಹಿಂದೂಗಳು ಶ್ರೀರಂಗ ಪಟ್ಟಣದ ರಾಜಬೀದಿಯಲ್ಲಿ ಗಣೇಶನ ಮೆರವಣಿಗೆಯನ್ನು ಕೊಂಡೊಯ್ಯುತ್ತಿದ್ದರು. ಗಣೇಶನ ಮೆರವಣಿಗೆಯೆಂದ ಮೇಲೆ ಬಾಜಾಬಜಂತ್ರಿ, ವಾದ್ಯ ಘೋಷಗಳು ಇದ್ದದ್ದೇ. ಮೆರವಣಿಗೆ ರಾಜ್ಯದ ಮೌಲ್ವಿಯ ಮನೆಯ ಮುಂದೆ ಹಾದು ಹೋಗುತ್ತಿತ್ತು. ಮೆರವಣಿಗೆಯ ಗಲಾಟೆ ಮೌಲ್ವಿಯ ಕಿವಿಗೆ ಬಿತ್ತು. ಅದೇನೆಂದು ನೋಡಿಕೊಂಡು ಬಾರೆಂದು ತನ್ನ ಆಳನ್ನು ಅಟ್ಟಿದ. ಅವನು ಬಂದು ಹಿಂದೂಗಳ ಮೆರವಣಿಗೆಯ ಬಗ್ಗೆ ತಿಳಿಸಿದ. ಇದರಿಂದ ಕ್ಷುದ್ರವಾದ ಮೌಲ್ವಿ ಅಲ್ಲಾನ ರಾಜ್ಯದಲ್ಲಿ ಕಾಫಿರರ ಮೆರವಣಿಗೆಯೇ? ಎಂದು ತನ್ನ ಸೈನಿಕರನ್ನು ಕರೆದು ಕೂಡಲೆ ಮೆರವಣಿಗೆಯನ್ನು ಚದುರಿಸಲು ಹೇಳಿದ. ಅದರಂತೆ ಸೈನಿಕರು ಮೆರವಣಿಗೆಗಾರರನ್ನು ಜಡಿದು ಓಡಿಸಿದರು. ಮಾರನೇ ದಿನ ಮೆರವಣಿಗೆಯ ಮುಂದಾಳುಗಳು ದೂರು ತೆಗೆದುಕೊಂಡು ಹೈದರನ ಹತ್ತಿರ ಹೋದರು. ಹೈದರ್ ಅವರ ದೂರು ಆಲಿಸಿ, ಮೌಲ್ವಿಗೆ ಬರುವಂತೆ ಹೇಳಿ ಕಳುಹಿಸಿದ. ಮೌಲ್ವಿ ಬಂದ ಮೇಲೆ ನೀವು ಮೆರವಣಿಗೆಯನ್ನು ಚದುರಿಸಿದ್ದು ನಿಜವೇ? ಎಂದು ಕೇಳಿದ. ಅದಕ್ಕೆ ಮೌಲ್ವಿ ಮುಸ್ಲಿಂ ರಾಜ್ಯದ ರಾಜಬೀದಿಯಲ್ಲಿ ಕಾಫಿರರು ತಮ್ಮ ಮೆರವಣಿಗೆಯನ್ನು ತೆಗೆದುಕೊಂಡು ಹೋಗಲು ಹಕ್ಕಿಲ್ಲ ಎಂದ. ಅದಕ್ಕೆ ಹೈದರ್ ಇದನ್ನು ಮುಸ್ಲಿಂ ರಾಜ್ಯವೆಂದು ನಿಮಗೆ ಹೇಳಿದವರ್ಯಾರು? ಎಂದು ಕೇಳಿದ. ಮೌಲ್ವಿ ನನಗೆ ಯಾರು ಹೇಳಬೇಕಾಗಿಲ್ಲ. ಇಲ್ಲಿ ಮುಸ್ಲಿಂ ದೊರೆ ಆಳುತ್ತಿದ್ದಾನೆ. ಅದಕ್ಕೆ ಇದು ಮುಸ್ಲಿಂ ರಾಜ್ಯ ಎಂದು ತಿಳಿಸಿದ. ಆಗ ಹೈದರ್ ಹೇಳಿದನಂತೆ, "ಇಲ್ಲಿ ಕೇಳಿ ಸ್ವಾಮಿ, ಇದು ಮುಸ್ಲಿಂ ರಾಜ್ಯವೂ ಅಲ್ಲ ಹಿಂದೂ ರಾಜ್ಯವೂ ಅಲ್ಲ ಇದು ಮೈಸೂರು ರಾಜ್ಯ. ಇಲ್ಲಿ ಎಲ್ಲಾ ಪ್ರಜೆಗಳಿಗೂ ಸಮಾನ ಸ್ವಾತಂತ್ರ್ಯ ಇದೆ. ಯಾರು ಬೇಕಾದರೂ ತಮ್ಮ ಧಾರ್ಮಿಕ ಆಚರಣೆಗಳನ್ನು ತಮಗಿಷ್ಟ ಬಂದಂತೆ ಆಚರಿಸಿಕೊಳ್ಳಬಹುದು. ಇನ್ನು ಮೇಲೆ ನೀವು ಅವರ ತಂಟೆಗೆ ಹೋಗಕೂಡದು" ಎಂದ.[೫೮] ಇದರಿಂದ ವ್ಯಗ್ರನಾದ ಮೌಲ್ವಿ ಇಂಥ ಕಾಫಿರ ರಾಜ್ಯದಲ್ಲಿ ನಾನು ಇರಲು ಇಷ್ಟ ಪಡುವುದಿಲ್ಲ ಎಂದ. ಕೂಡಲೇ ಹೈದರ್ ತನ್ನ ಸೇನಾಧಿಪತಿಯನ್ನು ಕರೆದು ಮೌಲ್ವಿಯವರಿಗೆ ಬೇಕಾದ ಎಲ್ಲಾ ಗೌರವವನ್ನು ಸಲ್ಲಿಸಿ ಅವರನ್ನು ಸುರಕ್ಷಿತವಾಗಿ ಕರೆದುಕೊಂಡು ಹೋಗಿ, ನಮ್ಮ ರಾಜ್ಯದ ಗಡಿ ದಾಟಿಸಿ ಬಾ ಎಂದು ಆಜ್ಞಾಪಿಸಿದನಂತೆ.[೫೯] ರಾಷ್ಟ್ರೀಯವಾದಿ ಚರಿತ್ರಕಾರರು ಟಿಪ್ಪು ಸುಲ್ತಾನನ್ನು ರಾಷ್ಟ್ರದ್ರೋಹಿ ಎಂದು ಕರೆಯುವ ಸಂದರ್ಭದಲ್ಲಿ ಈ ಲಾವಣಿಯ ಸಾರಾಂಶವು ಅದನ್ನು ದೂರ ತಳ್ಳುತ್ತದೆ. ಟಿಪ್ಪು ಸುಲ್ತಾನನ ಬಗ್ಗೆ ಈ ರೀತಿಯ ವಿವರಗಳು ಲಾವಣಿ ಸಾಹಿತ್ಯದಲ್ಲಿ ಸಿಗುತ್ತವೆ.

## ೫.೩ ತಳವಾರಿಕೆ

ತಳವಾರಿಕೆಯನ್ನು ಕರ್ನಾಟಕದ ಬೇರೆ ಬೇರೆ ಸಮುದಾಯಗಳು ನಡೆಸಿಕೊಂಡು ಬಂದಿವೆ. ಇದಕ್ಕೆ ಸಮುದಾಯಗಳ ಸ್ಥಿತ್ಯಂತರವೇ ಕಾರಣವಾಗಿದೆ. ಉತ್ತರ ಕರ್ನಾಟಕದಲ್ಲಿ ನೀಡಿರುವ ಹಂಡೆಯವರು ಇದಕ್ಕೆ ಉತ್ತಮ ಉದಾಹರಣೆ. ಬ್ರಿಟಿಷರ ಕಾಲದಲ್ಲಿ ಒಂದೇ ರೀತಿಯಿತ್ತು ಎಂದು ಹೇಳುವುದು ಕಷ್ಟ. ಬಹುಪಾಲು

ತಳವಾರಿಕೆ ಎಂದ ತಕ್ಷಣ ಬೇಡರಿಗೆ ಅನ್ವಯಿಸಿ ಮಾತನಾಡುತ್ತೇವೆ. ಆದರೆ ಕರ್ನಾಟಕದ ಬೇರೆ ಬೇರೆ ಪ್ರಾಂತ್ಯಗಳಲ್ಲಿ ಬೇರೆ ಬೇರೆ ಸಮುದಾಯಗಳು ನಡೆಸಿಕೊಂಡು ಬಂದಿವೆ. ಇದಕ್ಕೆ ದಲಿತ ಸಮುದಾಯಗಳು ಹೊರತಾಗಿರಲಿಲ್ಲ.[೬೦]

ಮೈಸೂರು ಸಂಸ್ಥಾನದಲ್ಲಿ ಗಿರಿಜನ, ಹೊಲೆಯ, ಮಾದಿಗರು ತಳವಾರರಾಗಿದ್ದಾರೆ. ಹೈದರಾಬಾದ್ ಕರ್ನಾಟಕದಲ್ಲಿ ಬಾರಿಕೇರ, ಬೆಸ್ತರು ತಳವಾರರಿದ್ದ ಬಗ್ಗೆ ತಿಳಿದು ಬರುತ್ತದೆ. ಮುಂಬೈ-ಕರ್ನಾಟಕದಲ್ಲಿ ಬೇಡರೆ ತಳವಾರರಾಗಿದ್ದರಿಂದ ಅವರಲ್ಲಿ 'ತಳವಾರ' ಎಂಬ ಉಪಜಾತಿ ಸೃಷ್ಟಿಯಾಯಿತು. ಇಲ್ಲಿ ಸಹ ಲಿಂಗಾಯತ, ಕುರುಬ, ಹರಿಜನರು ತಳವಾರರಾಗಿದ್ದರು. ಮದ್ರಾಸ್-ಕರ್ನಾಟಕದ ಬಳ್ಳಾರಿ, ದಕ್ಷಿಣ ಕನ್ನಡ ಮತ್ತು ಕೊಳ್ಳೇಗಾಲ ಪ್ರದೇಶದಲ್ಲಿ ಭಿನ್ನವಾಗಿದ್ದ ತಳವಾರಿಕೆಗೆ ಬೇಡರು, ನಾಯಕರು, ಇತರೆ ಹಿಂದುಳಿದ ಜನಾಂಗದವರು ಹೆಗಲುಕೊಟ್ಟರೆ ಕೊಳ್ಳೇಗಾಲ ಪ್ರದೇಶದಲ್ಲಿ ಪರಿಶಿಷ್ಟ ಜಾತಿಗೆ ಸೇರಿದ ಹೊಲೆಯ-ಮಾದಿಗರಲ್ಲಿ ತೋಟಿ (ತಳವಾರ) ನಿರ್ವಹಣೆ ಇದೆ. ತೋಟಿಗಳು ಗ್ರಾಮಲೆಕ್ಕಿಗ, ಪಟೇಲ ಹೇಳಿದ ಕೆಲಸ, ಗ್ರಾಮ ಲೆಕ್ಕದ ಕೆಲಸ, ಸುದ್ದಿಸಾರುವ ಕೆಲಸವನ್ನು ಮತ್ತು ಮೇಲಧಿಕಾರಿಗಳು ಹೇಳಿದ್ದನ್ನು ತೋಟಿ ಮಾಡುತ್ತಾನೆ. ಗೋಕಾಕ್ ಪಟ್ಟಣದ ಮಧ್ಯೆ ಗುಡ್ಡ ಇದೆ (ಸಮಾಧಿ).[೬೧] ಇಲ್ಲಿರುವ ತಳವಾರರ ಸಮಾಧಿಗಳನ್ನು ತಳವಾರರ ಸಮಾಧಿಗಳೆಂದು ಕರೆಯುವರು. ಈ ರೀತಿಯಾಗಿ ಕರ್ನಾಟಕದ ವಿವಿಧ ಕಾಲಘಟ್ಟಗಳಲ್ಲಿ ಬೇರೆ ಬೇರೆ ಪ್ರದೇಶದಲ್ಲಿರುವ ದಲಿತ ಸಮುದಾಯಗಳು ಒಂದಲ್ಲಾ ಒಂದು ರೀತಿಯಾಗಿ ಆಡಳಿತದ ನಿರ್ವಹಣೆಗೆ ಒಳಗಾಗಿದ್ದಾರೆ. ಪ್ರಾಚೀನ ಕಾಲದಿಂದ ದಲಿತ ಸಮುದಾಯಗಳ ಜೀವನ ನಿರ್ವಹಣೆಯನ್ನು ಕೇವಲ ಸಾಮಾಜಿಕ ಜೀವನದ ದೃಷ್ಟಿಕೋನದಲ್ಲಿ ನೋಡುತ್ತಿದ್ದೇವೆಯೇ ವಿನಃ ಆಡಳಿತಾತ್ಮಕ ದೃಷ್ಟಿಕೋನದಲ್ಲಿ ಅಧ್ಯಯನ ಮಾಡುವ ಜರೂರು ಅತ್ಯಾವಶ್ಯಕವಾಗಿದೆ. ತಳವಾರಿಕೆ ವೃತ್ತಿಯನ್ನು ಹೆಚ್ಚಿನದಾಗಿ ನಾಯಕ ಜಾತಿಯವರು ಹೆಚ್ಚಿನದಾಗಿ ನಿರ್ವಹಿಸಿದ ಕುರಿತು ವಿವರಗಳು ಚರಿತ್ರೆಯಲ್ಲಿ ದಾಖಲಾಗಿರುವುದು ಗಮನಿಸಬಹುದು. ಮಧ್ಯಕಾಲೀನ ಸಂದರ್ಭದಲ್ಲಿ ವಿಶೇಷವಾಗಿ ವಿಜಯನಗರ ಆಳ್ವಿಕೆಯ ತರುವಾಯ ತಳವಾರನು ರಾಜ್ಯದ ಅವಿಭಾಜ್ಯ ಅಂಗವಾಗಿ ಕಾರ್ಯ ನಿರ್ವಹಿಸಿದನು. ಆ ಮುಖಾಂತರ ರಾಜ್ಯದ ರಕ್ಷಣೆಯ ಜವಾಬ್ದಾರಿಯ ಕಾರ್ಯವನ್ನು ನಿರ್ವಹಿಸತೊಡಗಿದನು. ಕ್ರಮೇಣ ಈ ವೃತ್ತಿಯು ನಾಯಕ ಜಾತಿಯವರಿಗೆ ರೂಢಿಗತವಾಗಿ ಬೆಳೆಯತೊಡಗಿತು. ಇದಕ್ಕೆ ಪ್ರತಿಯಾಗಿ ಇತರೆ ಜಾತಿಯವರು ಸಹ ತಳವಾರಿಕೆ ವೃತ್ತಿಯನ್ನು ನಿರ್ವಹಿಸಿದರ ಬಗೆಗೆ ಉಲ್ಲೇಖಗಳು ಸಿಗುತ್ತವೆ. ಮಧ್ಯಕಾಲೀನೋತ್ತರ ಸಂದರ್ಭದಲ್ಲಿ ತಳವಾರರ ಕಾರ್ಯಕ್ಷೇತ್ರ ವಿಸ್ತರಣೆಯಾಗತೊಡಗಿತು. ಇಂದಿಗೂ ಕೂಡ ತಳವಾರರು ಹಿಂದೆ ನಿರ್ವಹಿಸಿದ ಕುರುಹುಗಳು ಸಿಗುತ್ತವೆ. ತಳವಾರ, ತಳವಾರರಕೇರಿ, ತಳವಾರಿಕೆ ಮುಂತಾದ ಶಬ್ದಗಳು ತಳವಾರಿಕೆ ಚರಿತ್ರೆಯನ್ನು ಹೇಳುತ್ತವೆ.

## ೫.೪ ಪಾಳೆಯಗಾರರು ಮತ್ತು ದಲಿತರು

ಮಧ್ಯಕಾಲೀನೋತ್ತರ ಕಾಲಘಟ್ಟದಲ್ಲಿ ಕರ್ನಾಟಕವು ಕೆಲವು ಬದಲಾವಣೆಗಳಿಗೆ ಒಳಪಟ್ಟಿತು. ೧೬ನೇ ಶತಮಾನವು ಈ ಕುರಿತಂತೆ ಮಹತ್ವದ ತಿರುವಿಗೆ ನಾಂದಿ ಹಾಡಿದ ಶತಮಾನ. ವಿಜಯನಗರ ಸಾಮ್ರಾಜ್ಯ ಪತನದ

ತರುವಾಯ ಆಡಳಿತ ವಿಕೇಂದ್ರೀಕರಣ ಪ್ರಕ್ರಿಯೆ ವಿಸ್ತರಿಸತೊಡಗಿತು. ಸಾಮಂತರು, ಸ್ಥಾನಿಕ ಅರಸರು, ಪಾಳೆಯಗಾರರು ಸ್ವತಂತ್ರರಾಗಲು ಯತ್ನಿಸಿದರು, ಬಹುತೇಕ ಪಾಳೆಯಗಾರರು ಸ್ವತಂತ್ರರಾದರು. ವಿಜಯನಗರದ ಆಡಳಿತ ಸಡಿಲವಾಯಿತು ಎಂಬುದು ಸ್ಪಷ್ಟ. ಕೇಂದ್ರೀಕೃತ ಆಡಳಿತ ಕುಸಿಯತೊಡಗಿ ಕರ್ನಾಟಕದ ವಿವಿಧ ಪ್ರದೇಶಗಳಲ್ಲಿ ಪಾಳೆಯಗಾರರ ಆಳ್ವಿಕೆ ಪ್ರಭಾವಯುತವಾಗಲು ಭದ್ರಬುನಾದಿಯಾಯಿತು. ಈ ಕುರಿತು ಚರಿತ್ರಕಾರರು ಹೆಚ್ಚಿನ ಅಧ್ಯಯನ ಮಾಡಿದ್ದಾರೆ. ಈ ಅವಧಿಯಲ್ಲಿ ಪಾಳೆಯಪಟ್ಟಗಳು ಮುಖ್ಯ ವಾಹಿನಿಯಲ್ಲಿರುವಾಗ ಪಾಶ್ಚಿಮಾತ್ಯರ ಆಗಮನ ಭಾರತಕ್ಕೆ ಪ್ರಾರಂಭವಾಯಿತು. ಈ ಸಂಕೀರ್ಣ ಸಂದರ್ಭದಲ್ಲಿ ಕಾಲಕ್ರಮೇಣ ಪಾಶ್ಚಿಮಾತ್ಯರ ಹತೋಟಿ ಕರ್ನಾಟಕವು ಸೇರಿದಂತೆ ಭಾರತದಲ್ಲಿ ಪ್ರಬಲವಾಯಿತು. ಮತ್ತೊಂದು ಕಡೆ ಪಾಳೆಯಗಾರರು ಇತರೆ ಸ್ಥಾನಿಕ ಅರಸರೊಂದಿಗೆ ಕೆಲವೊಂದು ಸಂದರ್ಭದಲ್ಲಿ ಬ್ರಿಟೀಷರೊಂದಿಗೆ ಘರ್ಷಣೆಗೆ ಇಳಿಯದೇ ಇರುವ ಸಂದರ್ಭಗಳಿಲ್ಲ. ಈ ಹಿನ್ನೆಲೆಯಲ್ಲಿ ಪಾಳೆಯಗಾರರ ಆಳ್ವಿಕೆಯಲ್ಲಿ ದಲಿತ ಸಮುದಾಯಗಳು ಗಮನಾರ್ಹ ಕೊಡುಗೆಯನ್ನು ರಾಜ್ಯಕ್ಕೆ ಸಲ್ಲಿಸಿವೆ. ಸುರಪುರ ಸಂಸ್ಥಾನ, ಚಿತ್ರದುರ್ಗ, ತರೀಕೆರೆ, ಹರಪನಹಳ್ಳಿ, ಬಳ್ಳಾರಿ ಮುಂತಾದ ಪಾಳೆಯ ಪಟ್ಟುಗಳು ಆಳ್ವಿಕೆ ನಡೆಸಿವೆ.

ಕೊಟಗಾರರು: ಕೊಟಗಾರರೆಂದರೆ ಕೋಟೆಯನ್ನು ರಕ್ಷಿಸುವವರು. ಕೋಟೆಗಳ ಕುರಿತು ಕನ್ನಡ ಕಾವ್ಯಗಳು ಮತ್ತು ಶಾಸನಗಳು ಪ್ರಸ್ತಾಪಿಸುತ್ತವೆ. ಕರ್ನಾಟಕದ ಪ್ರಾಚೀನ ಕೋಟೆಯೆಂದರೆ ಬಾದಾಮಿ ಕೋಟೆ. ಕನ್ನಡ ಶಾಸನಗಳು ಮೂರು ರೀತಿಯ ದುರ್ಗಗಳನ್ನು ಹೇಳುತ್ತವೆ. ಗಿರಿದುರ್ಗ, ವನದುರ್ಗ ಮತ್ತು ಜಲದುರ್ಗ. ಈ ಪಟ್ಟಿಗೆ 'ಸ್ಥಲದುರ್ಗ' ಎಂಬ ಹೆಸರಿನ ನಾಲ್ಕನೆ ದುರ್ಗವನ್ನು ದುರ್ಗಸಿಂಹ ಹೇಳುತ್ತಾನೆ. ಕೋಟೆ, ಕೊಟ್ಟ, ಕೊಂಟೆ ಎಂದರೆ ಕಿಲ್ಲೆ ಅಥವಾ ದುರ್ಗವಾಗಿದ್ದು ಸೇನೆಯ ಅಥವಾ ರಾಜಧಾನಿಗೋಸ್ಕರ ಕಟ್ಟಿದ ಎತ್ತರ, ಬಲ, ಸುತ್ತುಗೋಡೆ ಮತ್ತು ಕಾವಲುಗೋಡೆ. ಕೊತ್ತಳ ಎಂದರೆ ಮೇಲಣ ಎತ್ತರದ ಬುರುಜು. ಕೊತವಾಲ, ಕೊಟ್ಟವಾಳ, ಕೊಟ್ಟಪಾಳೆ, ಕೋಟೆಯ ಕಾವಲುಗಾರನ ಇತರ ಹೆಸರುಗಳು.[೨] ಸುರಪುರದ ಸಂಸ್ಥಾನದಲ್ಲಿ ಇಂತಹ ಕೋಟೆಗಾರರು ಪ್ರಮುಖ ಪಾತ್ರ ವಹಿಸಿದ್ದರು. ಅವರು ದಲಿತ ಸಮುದಾಯಗಳಿಗೆ ಸೇರಿದ್ದು ವಿಶೇಷ.

ಸುರಪುರದಲ್ಲಿಯ ಕೋಟಗಾರರು ಹೊಲೆಯ ಜಾತಿಯವರು. ಇವರ ಬಳಿಯಲ್ಲಿ ಪ್ರತಿಯೊಬ್ಬನಲ್ಲಿ ಒಂದೊಂದು ಉಡುಪು, ಅದಕ್ಕೆ ಕಟ್ಟಲು ರೇಶಿಮೆಯ ಹಗ್ಗಗಳು ಮತ್ತು ಮಂಗಾಲುಗಳಿರುತ್ತಿದ್ದವು. ಅಗಲವಾದ ಕತ್ತಿ, ಢಾಲುಗಳು ದೊರೆಯಿಂದ ಕೊಡಲಾಗುತ್ತಿದ್ದವು. ಕೊಟಗಾರರ ಮೇಲೆ ಯಾವ ಸರದಾರನ ಅಧಿಕಾರವಿದ್ದಂತೆ ಕಂಡುಬರುವುದಿಲ್ಲ, ಇವರೆಲ್ಲ ರಾಜನ ಅಧೀನರು. ಯುದ್ಧ ಕಾಲದಲ್ಲಿ ರಾಜನ ಸುತ್ತಮುತ್ತ ಇವರೇ ಇರುತ್ತಿದ್ದು, ತಮ್ಮ ಭಲ್ಲೆಗಳನ್ನು ದೊರೆಯ ಮೇಲೆ ಹಿಡಿದು ಅಂಗರಕ್ಷಣೆ ಮಾಡುತ್ತಿದ್ದರು. ಪ್ರತಿಯೊಂದು ಮನೆಯವರಿಗೆ ಒಂದು ಕೋಣದ ತೊಡೆಯ ಚಪ್ಪೆಯನ್ನು ಊಟದ ಸಲುವಾಗಿ ಸರ್ಕಾರದಿಂದ ಕೊಡಲಾಗುತ್ತಿದ್ದಿತು. ಸುರಪುರದಲ್ಲಿ ಬರಲು ಇವರಿಗೆ ನಿರ್ಬಂಧವಿತ್ತು. ಇವರಿಂದ ಊರಿನವರಿಗೆ ಉಪಟಳವಿತ್ತು. ಆದುದರಿಂದ ಬೇಡರು ಇವರನ್ನು ಯಾವಾಗಲೂ ಕಾಯುತ್ತಿದ್ದರು. ಸ್ವಭಾವತಃ ಕ್ರೂರರು ಯುದ್ಧದಲ್ಲಿ ನಿಪುಣರಾಗಿದ್ದರು. ಸುರಪುರ ಸಂಸ್ಥಾನದಲ್ಲಿ ಹನ್ನೆರಡು ಸಾವಿರ ಬೇಡ ಜಾತಿಯ ಸೈನಿಕರಲ್ಲದೆ, ಒಂದು ಸಾವಿರದ ಒಂಬೈನೂರು

ಜನ ಕೋಟೆಗಾರ ಜಾತಿಯ ಸೈನಿಕರಿದ್ದರು. ಯುದ್ಧಗಳಲ್ಲಿ ಅರಸನ ಅಂಗರಕ್ಷಕರಾಗಿರುತ್ತಿದ್ದ ಇವರು ಅರಸನ ಸುತ್ತಲೂ ಭಲ್ಲೆಗಳನ್ನು ಹಿಡಿದು ಆತನನ್ನು ರಕ್ಷಿಸುತ್ತಿದ್ದರು. ತಮ್ಮ ಪ್ರಾಣ ಹೋದರೂ ಸರಿ ರಾಜನಿಗೆ ತೊಂದರೆ ಆಗಬಾರದೆಂದು ನಂಬಿದ್ದವರು. ಹೀಗಾಗಿ ಇವರನ್ನು ಆತ್ಮಹತ್ಯೆಯ ದಳವೆಂದು ಕರೆಯುವರು. ಸಂಸ್ಥಾನದಲ್ಲಿ ಬಹುತೇಕ ಕೇರಿಗಳ ಕಾವಲಿಗಾಗಿ ಕೊಟಗಾರರನ್ನು ಕಾವಲುಗಾರನನ್ನಾಗಿ ನೇಮಕ ಮಾಡುತ್ತಿದ್ದರು. ದೊಣ್ಣೆಕೇರಿ ಹುಲಕೇರಿ, ಪಲ್ಲೇದ ಕೇರಿ, ಗೋಗಿ ಕೇರಿ ಹೀಗೆ ಮುಂತಾದ ಕೇರಿಗಳನ್ನು ಇವರದೇ ಆದ ರಕ್ಷಣಾ ವ್ಯವಸ್ಥೆ ಇತ್ತು.[೬೩] ಕೊಟಗಾರರು ಅರಸನ ಆಜ್ಞಾಪಾಲಕರಾಗಿದ್ದರು. ಅರಸನು ತನಗೆ ಅಗತ್ಯವೆನಿಸಿದಾಗ ಅಧೀನದ ಅರಸರನ್ನು ಬಂಧಿಸುವಲ್ಲಿ ಕೊಟಗಾರರ ಸಹಾಯವನ್ನು ತೆಗೆದುಕೊಳ್ಳುತ್ತಿದ್ದನು. ಕನಕಗಿರಿಯ ಅರಸ ಹಿರೇನಾಯಕನು ಕ್ರೂರಿ ಹಾಗೂ ದುರ್ನಡತೆಯುಳ್ಳವನಾಗಿದ್ದನು. ಜನಸಾಮಾನ್ಯರಿಗೆ, ರೈತರಿಗೆ, ಸುಂದರವಾದ ಹೆಣ್ಣು ಮಕ್ಕಳು ಸಿಕ್ಕರೆ ಅಪಹರಿಸುತ್ತಿದ್ದನು. ಇವನ ಅಧೀನದಲ್ಲಿದ್ದ ಬಂಡಿಯ ದೇಸಾಯಿಯ ಪತ್ನಿಯನ್ನು ಬಲಾತ್ಕಾರದಿಂದ ಅಪಹರಿಸಿದ್ದನು. ಈ ಸಂದರ್ಭದಲ್ಲಿ ಹಿರೇನಾಯಕನನ್ನು ಬಂಧಿಸಲು ಅಪ್ಪಣೆ ನೀಡಿದರೆ ಕ್ಷಣಾರ್ಧದಲ್ಲಿ ತಮ್ಮ ಮುಂದೆ ನಿಲ್ಲಿಸುತ್ತೇವೆ ಎಂದು ರಾಜನಿಗೆ ಮಾತುಕೊಟ್ಟರು. ಒಂದು ದಿನ ರಾತ್ರಿಯ ವೇಳೆಯಲ್ಲಿ ಎಮ್ಮಿಗುಡ್ಡವನ್ನು ಪ್ರವೇಶಿಸಿ ಹಿರೇನಾಯಕನನ್ನು ಶೋಧಿಸಿ ಆತನ ಕೈಕಾಲು ಕಟ್ಟಿ ಹಿಡಿದು ತಂದು ಅರಸನ ಮುಂದೆ ಪ್ರತ್ಯಕ್ಷ ಮಾಡಿದರು. ಹೀಗೆ ರಾಜ್ಯಕ್ಕಾಗಲಿ, ಅಕ್ಕಪಕ್ಕದ ರಾಜರುಗಳಿಗಾಗಲಿ, ಜನತೆಗಾಗಿ ಇಡೀ ಪ್ರಾಣವನ್ನೇ ತ್ಯಾಗಮಾಡಲು ಸಿದ್ಧವಿರುವುದಾಗಿ ಪಣ ತೊಟ್ಟವರು. ಸುರಪುರದ ಚರಿತ್ರೆಯುದ್ಧಕ್ಕೂ ಇವರಿಗೆ ಆಶ್ಚರ್ಯಕರವಾದ ಚರಿತ್ರೆಯಿದೆ.[೬೪] ಈ ರೀತಿಯ ಸೈನಿಕ ಕೌಶಲ್ಯಗಳನ್ನು ರೂಢಿಸಿಕೊಂಡಿದ್ದ ಕೊಟಗಾರರ ಜನಾಂಗವನ್ನು ಸುರಪುರದ ಅರಸರು ಗುರುತಿಸಿ ಅವರ ಸೇವೆಯನ್ನು ರಾಜ್ಯಕ್ಕೆ ಸಮರ್ಥಿಸಿಕೊಂಡಿದ್ದಾರೆ. ಕೊಟಗಾರರ ಕುಟುಂಬದಲ್ಲಿ ಗಂಡು ಮಗು ಜನಿಸಿದರೆ ಆ ಮಗುವಿನ ಪೋಷಣೆಗಾಗಿ ಸಂಸ್ಥಾನದ ಖಜಾನೆಯಿಂದ ಪ್ರತಿ ತಿಂಗಳು ಐದು ರೂಪಾಯಿಗಳನ್ನು ಮಗು ಪ್ರೌಢಾವಸ್ಥೆ ಬರುವವರೆಗೂ ನೀಡುತ್ತಿದ್ದರು. ಮುಂದೆ ಬಾಲಕನಿಗೆ ಗರಡಿ ಮನೆಯಲ್ಲಿ ಮಲ್ಲವಿದ್ಯೆ ಶಸ್ತ್ರಾಸ್ತ್ರ ವಿದ್ಯೆ, ಕುದುರೆ ಸವಾರಿ, ಈಜುವಿಕೆ, ಮುಷ್ಟಿಯುದ್ಧ, ತುಪಾಕಿ ಉಪಯೋಗಿಸುವುದು ಮತ್ತು ಜಟ್ಟಿ ಕಾಳಗ ಹೀಗೆ ಅನೇಕ ಕಲೆಗಳನ್ನು ಕಲಿಸುತ್ತಿದ್ದರು.[೬೫] ಹೀಗೆ ಹತ್ತು ಹಲವು ಯುದ್ಧಗಳಲ್ಲಿ ಹಾಗೂ ಸುರಪುರ ಸಂಸ್ಥಾನದ ಅರಸರ ರಕ್ಷಣೆಯಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿದ್ದರಲ್ಲದೇ ಸುರಪುರಕ್ಕೆ ಬೆನ್ನೆಲುಬಾಗಿ ನಿಂತು ಹೋರಾಡಿದವರು ಈ ಕೊಟಗಾರರು.

೧೮ನೇ ಶತಮಾನದ ಕೊನೆಯ ಭಾಗದವರೆಗೆ ದಕ್ಷಿಣ ಕರ್ನಾಟಕದ ಕೊಡಗು ಭಾಗ ಹಲವು ಕಾರಣಗಳಿಗೆ ಸಂದಿಗ್ಧ ಪರಿಸ್ಥಿತಿಯಲ್ಲಿತ್ತು. ವೀರರಾಜೇಂದ್ರ ಮತ್ತು ಟಿಪ್ಪು ಸುಲ್ತಾನನಿಗೆ ಆಗಿಂದಾಗೆ ರಾಜ್ಯದ ವಿಷಯದಲ್ಲಿ ಸಣ್ಣ ಪುಟ್ಟ ಘರ್ಷಣೆಗಳು ನಡೆಯುತ್ತಲೇ ಇದ್ದವು. ಈ ಅವಧಿಯಲ್ಲಿ ಕೊಡಗಿನಲ್ಲಿ ಮುಸಲ್ಮಾನ ಭೂಮಾಲೀಕರನ್ನು ಕೊಡಗಿನಿಂದ ಹೊಡೆದು ಓಡಿಸುತ್ತಿರುವ ವರ್ತಮಾನವನ್ನು ಸುಲ್ತಾನನಿಗೆ ತಿಳಿಸಲಾಯಿತು. ತಕ್ಷಣ ಕಾರ್ಯಪ್ರವೃತ್ತರಾದ ಟಿಪ್ಪು ಕೊಡಗು ತನ್ನ ಕೈ ಬಿಡಬಾರದೆಂಬ ಸೈನಿಕರನ್ನು ಕಳುಹಿಸಿದನು. ಕೊಡಗಿಗೆ ನುಗ್ಗಿದ ಸೈನಿಕ ದಂಡು ದವಸ ಧಾನ್ಯಗಳನ್ನು ಸೂರೆ ಮಾಡಿದ್ದಲ್ಲದೆ ಮಲೆನಾಡಿನ ತಪ್ಪಲಿನಲ್ಲಿ ವಾಸಿಸುತ್ತಿದ್ದ

ಇತರೆ ಕೊಡಗರನ್ನು ಹಿಡಿಯಬೇಕೆಂಬ ಹಂಬಲದಿಂದ ಜೀತದಾಳುಗಳಾಗಿದ್ದ ಹೊಲೆಯರನ್ನು (ಹರಿಜನರನ್ನು) ಹಿಡಿದುಕೊಂಡು ತನ್ನ ದಂಡಿನ ಸಮೇತ ಕಳುಹಿಸಿದನು.[೬] ಕೊಡಗಿನಲ್ಲಿ ಗುಲಾಮರಾಗಿ ಜೀವನ ಸಾಗುತ್ತಿದ್ದ ಬಹುತೇಕ ದಲಿತರು ಸುಲ್ತಾನರ ಪರ ಸೈನಿಕ ಸೇವೆಯನ್ನು ಮಾಡಿರುವುದು ಕಂಡುಬರುತ್ತದೆ. ಬುಡಕಟ್ಟುಗಳು, ಕೆಳ ಜಾತಿಗಳು ಈ ಬಗೆಯ ಕ್ಷೇತ್ರಗಳಲ್ಲಿ ಅದ್ವಿತೀಯ ಸಾಧನೆಯನ್ನು ಮಾಡಿರುವುದು ಕಾಣಬಹುದು. ಪ್ರಕೃತಿದತ್ತವಾದ ದೈಹಿಕ ಬಲ ಇವರಿಗೆ ಮತ್ತಷ್ಟು ಸೇವೆ ಸಲ್ಲಿಸುವುದಕ್ಕೆ ಪ್ರಚೋದನೆಯಾಗಿದೆ. ಈ ಮೇಲಿನ ವಿವರಣೆಗಳನ್ನು ಗಮನಿಸಿದಾಗ ಮಧ್ಯಕಾಲೀನ ಕರ್ನಾಟಕದುದ್ದಕ್ಕೂ ದಲಿತ ಸಮುದಾಯಗಳು ಆಡಳಿತದ ಒಂದು ಭಾಗವಾಗಿ ಕಾಣಿಸಿಕೊಂಡಿವೆ ಎಂದರೆ ತಪ್ಪಾಗಲಾರದು. ಸೈನಿಕ ಕ್ಷೇತ್ರಕ್ಕೆ ಅವರ ಸೇವೆ ಅದ್ವಿತೀಯ. ರಾಜ್ಯದ ಮತ್ತು ಸಮುದಾಯಗಳ ಹಿತವನ್ನು ಹೊಣೆಗಾರಿಕೆ, ಜವಾಬ್ದಾರಿ ಮತ್ತು ನಿಗದಿಪಡಿಸಿದ ಕರ್ತವ್ಯಗಳನ್ನು ಚಾಚೂ ತಪ್ಪದೇ ಪಾಲನೆ ಮಾಡಿಕೊಂಡು ಬಂದಿರುವ ವಿವರಗಳು ಚರಿತ್ರೆಯಲ್ಲಿ ಸಿಗುತ್ತವೆ. ಆದರೆ ಈ ಸಮುದಾಯಗಳ ಕುರಿತು ಸೈನಿಕ ಚರಿತ್ರೆ ಈಗ ಬಂದಿರುವ ಚರಿತ್ರೆ ಲೇಖನ ಸಿದ್ಧಾಂತಗಳನ್ನು ಗೌಣವೆನಿಸಿದೆ. ಶಾಸನ, ವೀರಗಲ್ಲು, ಆಚರಣೆಗಳು, ಶಿಲ್ಪ ಮುಂತಾದ ಆಯಾಮಗಳನ್ನು ವಿಶ್ಲೇಷಣೆಗೆ ಒಳಪಡಿಸಿದಾಗ ದಲಿತರ ಚರಿತ್ರೆ ವಿಸ್ತರಿಸತೊಡಗುತ್ತದೆ.

ಚಿಂತಕರು, ಶ್ರಮಜೀವಿಗಳು, ಪ್ರಗತಿಪರರು ಕೇವಲ ಬರಹಗಳಿಂದ ಇದೇ ವ್ಯವಸ್ಥೆಯನ್ನು ಕ್ರಾಂತಿಕಾರಿಕ ಬದಲಾವಣೆ ಮಾಡಬೇಕಾದರೆ ಅದಕ್ಕೆ ಪ್ರಭುತ್ವದ ಸಹಕಾರ ಇದ್ದಾಗ ಮಾತ್ರ. ಇಲ್ಲದಿದ್ದರೆ ಅದು ಏಕದಾರಿಯಲ್ಲಿ ಮುನ್ನಡೆದು ಅವಸಾನದ ಹಾದಿಯನ್ನು ಹಿಡಿಯುತ್ತದೆ. ಯಾವುದೇ ರಾಜ್ಯ ಅಥವಾ ಪ್ರಾಂತ್ಯದಲ್ಲಿ ತನ್ನದೇ ಆಡಳಿತ ಯಂತ್ರವನ್ನು ಹೊಂದಿದ್ದ ಎಲ್ಲಾ ಸಮುದಾಯಗಳು ಸಹಭಾಗಿತ್ವವನ್ನು ಸಾಧಿಸಿರುತ್ತವೆ. ಆದರೆ ಚರಿತ್ರೆಯನ್ನು ಅವಲೋಕಿಸಿದಾಗ ಇದಕ್ಕೆ ಅಪವಾದವೆಂಬಂತೆ ಪ್ರಭುತ್ವದ ತಳಹದಿಗೆ ಶ್ರಮಜೀವಿಗಳಿಂದ ಕಾಯಕ ಬೇಕು, ಆದರೆ ಅವರಿಗೆ ನಾಗರಿಕ ಸೌಲಭ್ಯಗಳು ಬೇಡ ಎನ್ನುವಷ್ಟರ ಮಟ್ಟಿಗೆ ಕೆಲವು ಸಮುದಾಯಗಳು ನಡೆಸಿಕೊಂಡಿವೆ. ಎಲ್ಲಿಯವರೆಗೆ ಕೆಳಜಾತಿಗಳಿಗೆ, ಬುಡಕಟ್ಟುಗಳಿಗೆ ಮತ್ತು ದಲಿತರಿಗೆ ರಾಜಕೀಯ ಶಕ್ತಿ ಸಿಗುವುದಿಲ್ಲವೊ ಅಲ್ಲಿಯವರೆಗೆ ಅವುಗಳು ಪತನದ ಅಥವಾ ಅವಸಾನದ ಅಂಚಿನಲ್ಲಿರುತ್ತವೆ. ಅಧ್ಯಯನದ ಅವಧಿಯಲ್ಲಿ ವಿವಿಧ ರಾಜಪ್ರಭುತ್ವಗಳು ದಲಿತರನ್ನು ಚೆನ್ನಾಗಿ ಬಳಸಿಕೊಂಡಿವೆ. ರಾಜ್ಯಕ್ಕೋಸ್ಕರ ಇವರು ಶ್ರಮಿಸಿದ್ದಾರೆ, ಹೋರಾಡಿದ್ದಾರೆ ಹಾಗೂ ಪ್ರಾಣ ತ್ಯಾಗವನ್ನು ಕೂಡ ಮಾಡಿದ್ದಾರೆ. ದಲಿತರಿಗೆ ಮಾತನಾಡಲು ಅವಕಾಶ ಸಿಕ್ಕಿದ್ದು ವಚನ ಆಂದೋಲನದ ಸಮಯದಲ್ಲಿ. ಅದು ಬರವಣಿಗೆಯ ಮೂಲಕ. ತುಳುನಾಡಿನ ಪರಿಸರದಲ್ಲಿ ದಲಿತರು ವಿವಿಧ ಕ್ಷೇತ್ರಗಳಲ್ಲಿ ದುಡಿದಿದ್ದಾರೆ ಎನ್ನುವುದು ಸರ್ವವಿದಿತ. ಕರ್ನಾಟಕದ ಇತರೆ ಪ್ರದೇಶಗಳಿಗೆ ಹೋಲಿಸಿಕೊಂಡರೆ ತುಳು ಮತ್ತು ಕೊಡಗು ಪ್ರದೇಶದಲ್ಲಿ ಪ್ರಭುತ್ವಕ್ಕೆ ಹೆಚ್ಚಿನದಾಗಿ ದುಡಿದಿದ್ದಾರೆ. ಕಾಲಕ್ರಮೇಣ ಸಾಮಂತ ಅರಸರಾಗಲಿ, ಪಾಳೆಯಗಾರರಾಗಲಿ ಅವರಿಂದ ಸೇವೆ ಪಡೆದರೆ ವಿನಃ ಯಾವ ಸೌಲಭ್ಯ ಮತ್ತು ಸಹಕಾರಯುತವಾದ ಕಾರ್ಯಕ್ರಮಗಳನ್ನು ಕೈಗೊಳ್ಳಲಿಲ್ಲ. ಈ ವಿಷಯಕ್ಕೆ ಸಂಬಂಧಿಸಿದಂತೆ ಕರ್ನಾಟಕದುದ್ದಕ್ಕೂ ಪಾಳೆಯಗಾರರ ಆಳ್ವಿಕೆಯಲ್ಲಿ ದಲಿತರ ಅಸ್ತಿತ್ವವನ್ನು ಗುರುತಿಸುವುದಾದರೂ ತನ್ನ ಮೂಲ

ಸಂಪ್ರದಾಯಗಳು ಹಾಗೆಯೇ ಮುಂದುವರಿದವು. ಇದಕ್ಕೆ ಸುರಪುರ ಸಂಸ್ಥಾನದಲ್ಲಿ ಕೋಟಗಾರರ ಪಾತ್ರ ಉಲ್ಲೇಖನೀಯ.

ಪ್ರಮುಖವಾಗಿ ಸಮಾಜವು ಪರಿವರ್ತನೆಯ ಹಾದಿಯಲ್ಲಿ ಪ್ರವಹಿಸಬೇಕಾಗುತ್ತದೆ. ಕೆಲವು ಸಲ ಮಾನವನ ಆಸೆ ಆಕಾಂಕ್ಷೆ ಹಾಗೂ ಯಾಜಮಾನ್ಯ ದರ್ಪದಿಂದಾಗಿ ಸಮಾಜದ ಬದಲಾವಣೆಗೆ ವಿರೋಧ ಒಡ್ಡುತ್ತವೆ. ಇನ್ನೂ ಕೆಲವು ಸಲ ಪೋಷಕವಾಗಿರುತ್ತದೆ. ಜೀವನ ಪದ್ಧತಿಯಲ್ಲಿ ವ್ಯತ್ಯಾಸವಾಗದಿದ್ದರೆ ಸಮಾಜ ರಚನೆಯಲ್ಲಿಯೂ ವ್ಯತ್ಯಾಸವಾಗುವುದಿಲ್ಲ. ಜೀವನದ ಸ್ಥಿತಿಗತಿ ಪರಿವರ್ತನಶೀಲವಾಗಿರುವುದರಿಂದ ಸಮಾಜದಲ್ಲಿ ಬದಲಾವಣೆಗಳು ಅನಿವಾರ್ಯವಾಗುತ್ತದೆ. ಈಗಾಗಲೇ ಮೇಲೆ ವಿವರಿಸಿದಂತೆ, ಕೆಲವು ಪುರಾತನ ಸಾಂಪ್ರದಾಯಿಕ ಸಮಾಜಗಳು ಬದಲಾವಣೆಯನ್ನು ಹೆಚ್ಚಾಗಿ ಪ್ರಗತಿಪರವಾಗಿ ಸ್ವೀಕರಿಸುವುದಿಲ್ಲ. ಇಂತಹ ಪರಿಸ್ಥಿತಿಯಲ್ಲಿ ವಿವಿಧ ಸಮುದಾಯಗಳ ಮಧ್ಯೆ ಸಕಾರಾತ್ಮಕ ಬದಲಾವಣೆಯನ್ನು ನಿರೀಕ್ಷಿಸುವುದು ಕಷ್ಟವಾಗುತ್ತದೆ. ಹೀಗಿರುವಾಗ ಇನ್ನು ರಾಜಪ್ರಭುತ್ವದ ಸಂದರ್ಭದಲ್ಲಿ ದಲಿತರ ಉದ್ಧಾರದ ಕುರಿತು ಯೋಚಿಸುವುದು ತುಸು ಕಷ್ಟವೇ.

ರಾಜ್ಯವ್ಯವಸ್ಥೆ ಕುರಿತು ಚರ್ಚೆಗಳಾಗುತ್ತಿರುವುದು ಹೊಸದೇನಲ್ಲ. ರಾಜ್ಯ ವ್ಯವಸ್ಥೆಯನ್ನು ಸ್ಥೂಲವಾಗಿ ಆಡಳಿತಾತ್ಮಕ ಪರಿಭಾಷೆಯಲ್ಲಿ ನೋಡುವುದೇ ಹೆಚ್ಚು. ಆದರೆ ರಾಜವಂಶಗಳ ಆಡಳಿತವೇ ಬೇರೆ, ರಾಜ್ಯವ್ಯವಸ್ಥೆಯೇ ಬೇರೆ. ಇವೆರಡಕ್ಕೂ ಅಜಗಜಾಂತರ ವ್ಯತ್ಯಾಸವಿದೆ. ರಾಜರ ಆಳ್ವಿಕೆಯಲ್ಲಿ ಆಡಳಿತ, ಸಾಮಂತರು, ಅಧಿಕಾರಿಗಳು ಮುಂತಾದವರು ರಾಜರ ಪ್ರಭುತ್ವದಡಿಯಲ್ಲಿ ಕೆಲಸ ಮಾಡುತ್ತಿದ್ದರು. ರಾಜ್ಯ ವ್ಯವಸ್ಥೆ ಎನ್ನುವುದು ಒಂದು ರಾಜ್ಯದ ಸಮಗ್ರ ಕಲ್ಪನೆಯನ್ನು ಹೊಂದಿರುತ್ತದೆ. ಪ್ರಜೆಗಳ ರಕ್ಷಣೆ, ಸಾಮಾಜಿಕ ಆರ್ಥಿಕ ಪ್ರಧಾನ ಅಂಶಗಳು, ರಾಜ್ಯದ ಪ್ರತಿಯೊಂದು ಕ್ಷೇತ್ರಗಳನ್ನು ಅವಲೋಕಿಸುತ್ತ ಸರ್ವತೋಮುಖ ಬೆಳವಣಿಗೆಗೆ ಶ್ರಮಿಸಲು ಪ್ರಯತ್ನಿಸುತ್ತದೆ.

ಈ ಮೇಲಿನ ಅಂಶಗಳನ್ನು ಗಮನಿಸಿದಾಗ ಕರ್ನಾಟಕವು ಸೇರಿದಂತೆ ಭಾರತದಾದ್ಯಂತ ಸಮಾಜದ ಎಲ್ಲಾ ಸಮುದಾಯಗಳು ರಾಜ್ಯದ ವಿಚಾರದಲ್ಲಿ ಗಮನಾರ್ಹವಾದ ಪಾಲ್ಗೊಳ್ಳುವಿಕೆ ಜೊತೆಗೆ ಪ್ರಭುತ್ವವು ದಲಿತ ಸಮುದಾಯಗಳನ್ನು ವ್ಯವಸ್ಥೆಯ ಭಾಗವಾಗಿ ಬಳಸಿಕೊಂಡಿದೆ. ಆಡಳಿತಾತ್ಮಕ ಸಂಬಂಧಗಳು ಸೇರಿದಂತೆ ಕರ್ನಾಟಕದ ರಾಜವಂಶಗಳ ಆಳ್ವಿಕೆಯ ಸಂದರ್ಭದಲ್ಲಿ ಸೈನ್ಯದ ಸರ್ವ ಶಕ್ತಿ ಎಂದರೆ ದಲಿತ ಸಮುದಾಯಗಳು. ಇದಕ್ಕೆ ಆಳುಪರ ಕಾಲದಲ್ಲಿ ಸ್ಪಷ್ಟವಾಗಿ ಗುರುತಿಸುವುದರ ಜೊತೆಗೆ ಈ ರೀತಿಯ ಪ್ರಕ್ರಿಯೆಯು ಕಾಲಘಟ್ಟದಿಂದ ಕಾಲಘಟ್ಟಕ್ಕೆ ಮುಂದುವರಿಯಿತು. ಮಧ್ಯಕಾಲೀನ ಸಮಯದಲ್ಲಿ ವೀರಗಲ್ಲುಗಳು ಮತ್ತು ಮಾಸ್ತಿಕಲ್ಲುಗಳು ದಲಿತ ಚರಿತ್ರೆಯನ್ನು ಅಧ್ಯಯನ ಮಾಡಲು ಮುಖ್ಯ ಸಂಗತಿಗಳಾದವು. ಇದರಲ್ಲಿ ಕರ್ನಾಟಕದ ಗ್ರಾಮೀಣ ಪರಿಸರದ ಸ್ಥಳೀಯ ಚರಿತ್ರೆಯು ಅಡಕವಾಗಿದೆ. ವಿಜಯನಗರ ಸಾಮ್ರಾಜ್ಯದ ತರುವಾಯ ಜನಸಾಮಾನ್ಯರು ಪ್ರಭುತ್ವದ ಜೊತೆಗೆ ಪಾಲ್ಗೊಳ್ಳುವಿಕೆ ಹಾಗೂ ರಾಜ್ಯದ ಸೇವೆಗೆ ಸೇರ್ಪಡೆಯಾಗುತ್ತಿದ್ದರು ಎಂಬುದು ಅಧ್ಯಯನದಿಂದ ವೇದ್ಯವಾಗುತ್ತದೆ. ಮಧ್ಯಕಾಲೀನೋತ್ತರ ಕರ್ನಾಟಕದ ಸಂದರ್ಭದಲ್ಲಿ ಪಾಳೆಯ ಪಟ್ಟುಗಳು ಸಮಾಜದ ಮುಖ್ಯ ವಾಹಿನಿಗೆ ಬರಲು ಯತ್ನಿಸಿದವು. ಇದಕ್ಕೆ ವಿಜಯನಗರ ಸಾಮ್ರಾಜ್ಯದ ಪತನದ ಜೊತೆಗೆ ಸಾಮ್ರಾಜ್ಯದ ನಿಯಂತ್ರಣ ದಿನದಿಂದ ದಿನಕ್ಕೆ ಕಡಿಮೆಯಾಗತೊಡಗಿತು. ಇದರಿಂದ ಪಾಳೆಯಗಾರರ ಆಳ್ವಿಕೆ

ಮುಂದುವರಿಯುವುದರ ಜೊತೆಗೆ ದಲಿತ ಸಮುದಾಯಗಳು ರಕ್ಷಣೆಯ ವ್ಯಾಪ್ತಿಯಲ್ಲಿ ಆಳರಸರ ಜೊತೆಗೆ ಸೇರ್ಪಡೆಯಾಗುತ್ತಿದ್ದರು. ಇವೆಲ್ಲಾ ಅಂಶಗಳು ಕೂಡ ಈ ಸಮುದಾಯಗಳು ಕರ್ನಾಟಕದ ಚಾರಿತ್ರಿಕ ಪ್ರಕ್ರಿಯೆಯಲ್ಲಿ ರಾಜ್ಯದೊಂದಿಗೆ ಅವಿನಾಭಾವ ಸಂಬಂಧವನ್ನು ಸಾಧಿಸಿದ್ದವು ಎಂಬುದು ಸರ್ವವಿದಿತ.

## ಟಿಪ್ಪಣಿಗಳು

೧. ಶರ್ಮ ಆರ್.ಎಸ್., (ಅನು: ವಿವಿಧ ಲೇಖಕರು), *ಪ್ರಾಚೀನ ಭಾರತದಲ್ಲಿ ಶೂದ್ರರು,* ನವಕರ್ನಾಟಕ ಪ್ರಕಾಶನ, ೨೦೦೪, ಪು.೧೪೭

೨. ಕೊಸಾಂಬಿ ಡಿ.ಡಿ., *ಆನ್ ಇಂಟ್ರೊಡಕ್ಷನ್ ಟು ದಿ ಸ್ಟಡಿ ಆಫ್ ಇಂಡಿಯನ್ ಹಿಸ್ಟರಿ,* ಪು.೩೫೧

೩. ಶರ್ಮ ಆರ್.ಎಸ್., (ಅನು: ಶಂಕರನಾರಾಯಣರಾವ್ ಪಿ.), *ಪ್ರಾಚೀನ ಭಾರತ,* ನವಕರ್ನಾಟಕ, ೧೯೯೭, ಪು.೧೯; ನಮ್ಮ ದೇಶದ ಹಲವಾರು ರಾಜವಂಶಗಳಂತೆ ಕರ್ನಾಟಕದ ಅರಸು ಮನೆತನಗಳೂ ವೈದಿಕರು ಹೇಳಿದ್ದ 'ಕ್ಷತ್ರಿಯ ವರ್ಗ'ಕ್ಕೆ ಸೇರಿದವಲ್ಲ. ಕೆಳಜಾತಿ ಅಥವಾ ಬುಡಕಟ್ಟು ರಾಜ್ಯಗಳು ಪ್ರಬಲಗೊಂಡಾಗ ಬ್ರಾಹ್ಮಣರು ಶ್ರೀಮಂತ ಯಜ್ಞಗಳನ್ನು ಮಾಡಿಸುವ ಮೂಲಕ ಅವರನ್ನು ಕ್ಷತ್ರಿಯ ವರ್ಗಕ್ಕೆ ಸೇರಿಸುತ್ತಿದ್ದರು. ಕರ್ನಾಟಕದ ಪ್ರಥಮ ಸಾಮ್ರಾಜ್ಯ ಚಾಲುಕ್ಯರು ದ್ರಾವಿಡ ಜನ ಕುಲಗಳಲ್ಲಿ ಚಾಲುಕ್ಯರು ಯಾರು? ಕ್ರಿ.ಶ.೬೧೦ರ ಬಾದಾಮಿ ಶಾಸನದಲ್ಲಿ ಪೊಲೆಕೇಸಿ ಇವಲ್ಲಭನ ಉಲ್ಲೇಖವಿದೆ. ಪೊಲೆಕೇಸಿ ಎಂದು ಹೇಳುತ್ತ ಬಂದ ಬಾದಾಲು ಚಾಲುಕ್ಯ ವಂಶದ ಪ್ರಖ್ಯಾತ ಅರಸ 'ಪೊಲೆ'ಕೇಸಿ. ಇರುವ ಪೊಲೆ-'ಪೊಲೆಯ'ದ (ಹೊಲೆಯ) ಸವೆದ ರೂಪ. ಪ್ರಸ್ತುತ ಶಾಸನ ಬಾದಾಮಿ ಚಾಲುಕ್ಯರು ಹೊಲೆಯರೆಂಬುದನ್ನು ಸಾಬೀತು ಮಾಡುವ ಇನ್ನು ಕೆಲವು ಅಂಶಗಳನ್ನು ಒಳಗೊಂಡಿದೆ. ಇದು ಸಂಸ್ಕೃತದಲ್ಲಿರುವ ಚಿಕ್ಕ ಶಾಸನ. ಅದು

ಸ್ವಸ್ತಿ ಶ್ರೀ ಮದ್ವಿಜಯ ವಾತಾಪ್ಯ...
ನೇ ಪರಮ ಭಾಗವತಾನಾಂ ಸ್ವಾಮಿ..
ನ ಮಾತೃಗಣ ಪಾದಾನುಧ್ಯಾತಾನಾಂ..
ತ್ರಾಣಾಲ ಹಾರೀತಿ ಪುತ್ರಾಣಾಲ ಚಾಲುಕ್ಯಾ..
ಲಲ ಕರಿಷ್ಣೋ; ಅಶ್ವಮೇಧಾವ ಭೃಥ ಸ್ನಾನ ಪ...
... ಶ್ರೀ ಪೊಲೆಕೇಸಿ ವಲ್ಲಭ ಮ...

ಮಾತೃಮೂಲೀಯ ಕುಲದವರಾದ ಚಾಲುಕ್ಯರು ಹಾರೀತಿ ಎಂಬುವಳ ಪುತ್ರರೆಂದೂ, ಸಪ್ತ ಮಾತೃಕೆಯರಿಂದ ಪೋಷಿಸಲ್ಪಟ್ಟವರೆಂದೂ ಹೇಳಿಕೊಳ್ಳುತ್ತಾರೆ. ಕಾರ್ತಿಕೇಯ ಸ್ವಾಮಿ ಕೃಪೆಗೆ ಪಾತ್ರರಾದವರೆಂದೂ, ಹಂದಿ ಗುರುತಿನವರೆಂದೂ ತಿಳಿದಿದೆ. ಎಸ್.ಎಸ್. ಹಿರೇಮಠ ಅಂದು ಹೇಳುವಂತೆ ಚಾಲುಕ್ಯರು ದಲಿತ ಹಿನ್ನೆಲೆಯಿಂದ ಬಂದರೆಂದು ಅಭಿಪ್ರಾಯಪಡುತ್ತಾರೆ. (ಎಸ್.ಎಸ್. ಹಿರೇಮಠ, ದಲಿತ ಸಂಸ್ಕೃತಿ, ಪು.೮೯)

೪. ಸುಭಾಷ್ ಭರಣಿ, *ಧರೆಗೆ ದೊಡ್ಡವರು,* ಸಿದ್ಧಾರ್ಥ ಗ್ರಂಥಮಾಲೆ ಮೈಸೂರು, ೨೦೦೬, ಪು.೩೨

೫. ವಿರೂಪಾಕ್ಷಿ ಪೂಜಾರಹಳ್ಳಿ, *ಕರ್ನಾಟಕದಲ್ಲಿ ತಳವಾರಿಕೆ,* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬, ಪು.೫೪

೬. ಚಿದಾನಂದಮೂರ್ತಿ ಎಂ., *ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ,* ಸಪ್ನ ಬುಕ್ ಹೌಸ್, ೨೦೦೨, ಪು.೩೧೨

೭. ಎ.ಇ., ಸಂಪುಟ-IV, ಪು.161

೮. ಚಿದಾನಂದಮೂರ್ತಿ ಎಂ., *ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ*, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೫, ಪು.೫೫

೯. *ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ, ಕೊಪ್ಪಳ ಜಿಲ್ಲೆ*, ಪು.೧೮೯

೧೦. ಎ.ಕ., III, ೧೧ನೇ ಶತಮಾನ, ನಂ.೨೪೨

೧೧. ಎ.ಕ., II, ೧೧ನೇ ಶತಮಾನ, ನಂ.೯೮

೧೨.. ಎ.ಕ., V, ೧೧ನೇ ಶತಮಾನ, ನಂ.೧೭೩

೧೩. ಎ.ಕ., VIII, ೧೧ನೇ ಶತಮಾನ, ನಂ.೩೭

೧೪. *ಸಂವಾದ, ಸಂಚಿಕೆ-೪, ಸಂಪುಟ-೩*, ೨೦೦೫, ಪು.೨೦೦

೧೫. ಅದೇ, ಪು.೨೦೧

೧೬. ಅದೇ, ಪು.೨೦೧

೧೭. ಅದೇ, ಪು.೨೦೨

೧೮. ಚಿದಾನಂದಮೂರ್ತಿ ಎಂ., *ವೀರಗಲ್ಲುಗಳು*, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪು.೪

೧೯. ಹಿರೇಮಠ ಎಸ್.ಎಸ್., *ದಲಿತ ಸಂಸ್ಕೃತಿ*, ಪ್ರಸಾರಾಂಗ, ವಿಶ್ವವಿದ್ಯಾಲಯ, ಹಂಪಿ, ೨೦೦೧, ಪು.೪೭

೨೦. ಅದೇ, ಪು.೪೯

೨೧. ಬಸವರಾಜ ಕಲ್ಗುಡಿ, *ಮಹಾಸತಿ ಆಚರಣೆ*, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ೧೯೮೪, ಪು.೩; ರಾಜ್ಯ ನಿರ್ಮಾಣ ಪ್ರಕ್ರಿಯೆಯಲ್ಲಿ ರಾಜರು ಮತ್ತು ಇತರೆ ಸಾಮಂತ ಅರಸರು ಪ್ರಮುಖ ಪಾತ್ರ ವಹಿಸುವುದರ ಜೊತೆಗೆ ಅವರ ಅಂಗರಕ್ಷಕರ ಪಾತ್ರವು ಅಷ್ಟೇ ಮುಖ್ಯವಾದದ್ದು. ಯಾವುದೇ ಕಾರಣಕ್ಕೂ ಅರಸರಿಗೆ ತೊಂದರೆಯಾಗುವಂತಿರಲಿಲ್ಲ. ಅವರ ಸುತ್ತಮುತ್ತ ಅನೇಕ ಅಂಗರಕ್ಷಕರು ಅವರನ್ನು ಕಾವಲು ಕಾಯುತ್ತಿದ್ದರು. ಈ ರೀತಿಯ ಉದಾಹರಣೆಗಳನ್ನು ಕರ್ನಾಟಕದ ಚರಿತ್ರೆಯಲ್ಲಿ ಹೆಚ್ಚು ಅಂಗರಕ್ಷಕರನ್ನು ಬಳಸಿಕೊಂಡಿದ್ದು ಹೊಯ್ಸಳ ಅರಸರು. ಬಹುಶಃ ಅಂದಿನ ಸಂದರ್ಭದಲ್ಲಿ ಶತ್ರು ರಾಜರ ಪ್ರಾಬಲ್ಯ ಮತ್ತು ಆಗಿಂದಾಗ್ಗೆ ನಡೆಯುತ್ತಿದ್ದ ಘರ್ಷಣೆಗಳು ಈ ರೀತಿಯ ಒತ್ತಡಗಳಿಗೆ ಕಾರಣವಾಗಿರಬಹುದು. ದಟ್ಟ ಮಲೆನಾಡು ಪ್ರದೇಶದಲ್ಲಿ ತಲೆ ಎತ್ತಿದ ಹೊಯ್ಸಳ ರಾಜ್ಯ ನಿರ್ಮಾಣ ಪ್ರಕ್ರಿಯೆಯಲ್ಲಿ ಕಲೆ ಮತ್ತು ವಾಸ್ತುಶಿಲ್ಪಕ್ಕೆ ಅಷ್ಟೇ ಪ್ರಾಮುಖ್ಯತೆ ಕೊಟ್ಟಿತ್ತು. ಅಂಗರಕ್ಷಕರನ್ನು ವಿವಿಧ ಹೆಸರುಗಳಿಂದ ಕರೆಯಲಾಗುತ್ತಿತ್ತು. ಚಾಲುಕ್ಯರ ಕಾಲದಲ್ಲಿ ಸಹವಾಸಿನ್ ಎಂದು, ಚೋಳರ ಕಾಲದಲ್ಲಿ ವೇಳೈಕಾರರ್, ಹೊಯ್ಸಳರ ಕಾಲದಲ್ಲಿ ಗರುಡರೆಂದು, ಅಪಟ್ಟುದವಿಗಲ್ ಎಂದು ಪಾಂಡ್ಯರ ಕಾಲದಲ್ಲಿ ಕರೆಯಲಾಗುತ್ತಿತ್ತು. (ಕೆ.ಎ. ನೀಲಕಂಠಶಾಸ್ತ್ರಿ, ಹಿಸ್ಟರಿ ಆಫ್ ಸೌತ್ ಇಂಡಿಯಾ, ಪು.೩೧೭)

೨೨. ಶೇಷಶಾಸ್ತ್ರಿ ಆರ್., *ಕರ್ನಾಟಕದ ವೀರಗಲ್ಲುಗಳು*, ಕನ್ನಡ ಸಾಹಿತ್ಯ ಪರಿಷತ್ತು, ೧೯೮೨, ಬೆಂಗಳೂರು, ಪು.೩೫

೨೩. ಚಿದಾನಂದಮೂರ್ತಿ ಎಂ., *ವೀರಗಲ್ಲುಗಳು*, ಪು.೧ ೮

೨೪. ಸುರೇಂದ್ರರಾವ್ (ಸಂ.), *ಕರ್ನಾಟಕ ಚರಿತ್ರೆ, ಸಂಪುಟ-೩*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭, ಪು.೧೧೬.

೨೫. ಚೆನ್ನಕ್ಕ ಎಲಿಗಾರ, *ಶಾಸನಗಳಲ್ಲಿ ಸ್ತ್ರೀ ಸಮಾಜ*, ಪು.೨೩೬

೨೬. ಬಸವರಾಜ ಕಲ್ಗುಡಿ, ಪೂರ್ವೋಕ್ತ, ಪು.೫೩

೨೭. ಅದೇ, ಪು.೫೭-೫೮

೨೮. ಚೆನ್ನಕ್ಕ ಎಲಿಗಾರ, ಪೂರ್ವೋಕ್ತ, ಪು.೨೪೬

೨೯. ಅದೇ, ಪು.೨೪೬-೫೫

೩೦. ಅದೇ, ಪು.೨೫೩

೩೧. ಅದೇ, ಪು.೨೫೪

೩೨. ಶೇಠ್ ಬಿ.ಎಸ್., *ಕರ್ನಾಟಕದಲ್ಲಿ ಸತಿ ಪದ್ಧತಿ*, ಪು.೧೫೮

೩೩. ಅದೇ, ಪು.೧೪೬

೩೪. ಅದೇ, ಪು.೧೪೯

೩೫. ಅದೇ, ಪು.೧೫೦

೩೬. ಚೆನ್ನಕ್ಕ ಎಲಿಗಾರ, ಪೂರ್ವೋಕ್ತ, ಪು.೨೪೫

೩೭. ಶ್ರೀಧರ್ ಎಚ್., *ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಯುದ್ಧ ಕಲೆ*, ಶಿವರಾಮ ಕಾರಂತ ಅಧ್ಯಯನ ಕೇಂದ್ರ, ಪುತ್ತೂರು, ೨೦೦೨, ಪು.೧೩೭

೩೮. ಅದೇ. ಪು. ೧೩೮.

೩೯. ಚೆನ್ನಕ್ಕ ಎಲಿಗಾರ, ಪೂರ್ವೋಕ್ತ, ಪು.೨೬೫

೪೦. ಅದೇ, ಪು.೨೩೬

೪೧. ಕೃಷ್ಣಯ್ಯ ಡಿ.ಎನ್., *ಕೊಡಗಿನ ಇತಿಹಾಸ*, ಮೈಸೂರು ವಿಶ್ವವಿದ್ಯಾನಿಲಯ, ೧೯೬೫, ಪು.೮೬

೪೨. ಅದೇ, ಪು.೮೭

೪೩. ಅದೇ, ಪು.೮೮

೪೪. ಮಾಲತಿ ಕೆ. ಮತ್ತು ಹೆಚ್.ವಿ. ನರಸಿಂಹಮೂರ್ತಿ, *ಕುಂದಾಪುರ ತಾಲೂಕು: ಒಂದು ಅಧ್ಯಯನ*, ಬಂಡಾರ್‌ಕಾರ್ ಆರ್ಟ್ಸ್ ಮತ್ತು ಸೈನ್ಸ್ ಕಾಲೇಜ್, ಕುಂದಾಪುರ, ೧೯೯೪, ಪು.೩೧

೪೫. ಗಣಪತಿರಾವ್ ಐಗಳ್, *ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ*, ಪು.೨೯೦

೪೬. ವಿವೇಕ ರೈ ಬಿ.ಎ., *ತುಳು ಜನಪದ ಸಾಹಿತ್ಯ*, ಪು.೪೩; ಮತ್ತೊಂದು ಅಭಿಪ್ರಾಯದಲ್ಲಿ ಮೂಲದವರು ಎಂದರೆ ತುಳುನಾಡಿನ ಪರಿಸರದಲ್ಲಿ ಜೀತದ ಆಳುಗಳು ಎಂದರ್ಥ.

೪೭. ಎಸ್.ವೈ. ಸೋಮಶೇಖರ್, *ವಿಜಯನಗರ ಕಾಲದ ಸೈನ್ಯ ವ್ಯವಸ್ಥೆ ಮತ್ತು ಯುದ್ಧನೀತಿ*, (ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ಪಿಎಚ್.ಡಿ. ಮಹಾಪ್ರಬಂಧ), ೨೦೦೦, ಪು.೭೬

೪೮. ಅದೇ, ಪು.೮೧

೪೯. ಜಗದೀಶ್ ನಾರಾಯಣ ಸರ್ಕಾರ್, *ದಿ ಆರ್ಟ್ ಆಫ್ ವಾರ್ ಇನ್ ಮಿಡಿವಲ್ ಇಂಡಿಯಾ*, ಮುನ್ಶಿರಾಮ್ ಮನೋಹರ್‌ಲಾಲ್ ಪಬ್ಲಿಕೇಷನ್, ನ್ಯೂಡೆಲ್ಲಿ, ೧೯೮೪, ಪು.೫೭-೬೧

೫೦. ತಳವಾರ್ ಎನ್.ಎಂ., *ನಂಜುಂಡ ಕವಿಯ ರಾಮನಾಥ ಚರಿತೆ*, ಅಭಿರುಚಿ ಪ್ರಕಾಶನ, ಮೈಸೂರು, ೨೦೦೨, ಪು.೧೩೦

೫೧. ಶ್ರೀಕಂಠಯ್ಯ, *ವಿಜಯನಗರ ಕಾಲದ ಕನ್ನಡ ಸಾಹಿತ್ಯದಲ್ಲಿ ಜನಜೀವನ ಚಿತ್ರ*, ಪು.೧೭೪

೫೨. ಅದೇ, ಪು.೧೭೯

೫೩. ಜವರಯ್ಯ ಮ.ನ., *ಅಂಬೇಡ್ಕರ್ ಮತ್ತು ಸಾಮಾಜಿಕ ನ್ಯಾಯ,* ಪು.೭

೫೪. ಅದೇ, ಪು.೪

೫೫. ಅದೇ, ಪು.೯

೫೬. ಪ್ರಜಾವಾಣಿ ದಿನಪತ್ರಿಕೆ, ೨೦.೧೦.೦೬; ಹೈದರನು ಮೈಸೂರು ಅರಸರ ಪಾಳೆಯದಿಂದ ರಾಜ್ಯವನ್ನೇ ಆಕ್ರಮಿಸಿಕೊಂಡ ನಂತರ ಆ ರಾಜ್ಯದಲ್ಲಿ ಜನಕಂಟಕರಂತಿದ್ದ ಪಾಳೆಗಾರರ ವಿರುದ್ಧ ಹೋರಾಟ ನಡೆಸಿದ ಪರಿಣಾಮವಾಗಿ ಹಳ್ಳಿಯಲ್ಲಿ ರೈತರನ್ನು ಲೂಟಿ ಹೊಡೆದು ಸುಲಿಯುತ್ತಿದ್ದ ಪಾಳೆಗಾರರ ಕಾಟದಿಂದ ರೈತರು ಮುಕ್ತರಾದರೆ ಮತ್ತೊಂದೆಡೆ ಹೈದರಾಲಿ ಅಂತಹ ರೈತ ಮಕ್ಕಳನ್ನು ಸೇರಿಸಿಕೊಂಡು ಸ್ವ ಆಸ್ತಿ ಭೂಮಟ್ಟದಲ್ಲಿ ವಿಸ್ತರಿಸಿದ. ಹೈದರಾಲಿ ಮತ್ತು ಟಿಪ್ಪು ಸುಲ್ತಾನರು ಹಾಸನ, ಶಿವಮೊಗ್ಗ, ದಕ್ಷಿಣ ಕನ್ನಡ, ಚಿತ್ರದುರ್ಗ, ರಾಯಚೂರು, ಬಳ್ಳಾರಿ, ತುಮಕೂರು, ಕೋಲಾರಗಳಲ್ಲಿ ಸುಮಾರು ಎರಡುನೂರು ಪಾಳೇಗಾರರನ್ನು ಸದೆಬಡಿದವೆಂದು ಹೇಳಲಾಗಿದೆ. ೧೭೯೯ರ ಟಿಪ್ಪು ಸುಲ್ತಾನ್ ಪತನದ ನಂತರ ಮೈಸೂರು ಪ್ರಾಂತ್ಯದ ಸಂಪೂರ್ಣ ಅಧ್ಯಯನ ಮಾಡಿದ ಬ್ರಿಟಿಷ್ ತಜ್ಞ ಫ್ರಾನ್ಸಿಸ್ ಬುಕಾನನ್ ಗುರುತಿಸಿದಂತೆ ಮೈಸೂರು ಅರಸರಾದ ಹೈದರ್ ಟಿಪ್ಪುಗಳ ಪಾಳೆಗಾರಿ ವಿರೋಧಿ ಸೈನಿಕ ಕಾರ್ಯಾಚರಣೆಗಳಿಂದಾಗಿ ಮೈಸೂರು ಪ್ರಾಂತ್ಯದಲ್ಲಿ ಉಳಿಗಮಾನ್ಯ ವ್ಯವಸ್ಥೆ ಕುಸಿದುಬಿದ್ದಿತು. ಹಿಂದಿನ ಪಾಳೆಯಗಾರರ ಜಮೀನನ್ನು ವಶಪಡಿಸಿಕೊಂಡ ಟಿಪ್ಪು ಅದನ್ನು ಶೂದ್ರ ರೈತಾಪಿಗೆ ಹಂಚಿ ಕ್ರಾಂತಿಕಾರಿ ಬದಲಾವಣೆಗೆ ಕಾರಣನಾದ. ಬುಕಾನನ್ ದಾಖಲಿಸಿದಂತೆ ನಂಜನಗೂಡಿನಲ್ಲಿ ೫೦೦ ಬ್ರಾಹ್ಮಣ ಮನೆಗಳಿದ್ದು ವಾರ್ಷಿಕ ಹದಿನಾಲ್ಕು ಸಾವಿರ ಪಗೋಡಗಳಷ್ಟು ಆದಾಯ ತರುತ್ತಿದ್ದ ಜಮೀನನ್ನು ಹೊಂದಿದ್ದವು. ಅದೇ ಊರಿನಲ್ಲಿ ಏಳುನೂರು ಶೂದ್ರ ಕುಟುಂಬಗಳಿದ್ದು ಅವರು ಈ ಭೂಮಿಯಲ್ಲಿ ಚಾಕರಿ ಮಾಡಿದರೂ ಊರ ಹೊರಗೆ ವಾಸಿಸಬೇಕಿತ್ತು. ಇವರಿಗೆ ಉಚಿತವಾಗಿ ಆ ಭೂಮಿಯನ್ನು ನೀಡಿದ. (ಆರ್. ಶೇಷಶಾಸ್ತ್ರಿ, ಕರ್ನಾಟಕದ ವೀರಗಲ್ಲುಗಳು, ಪು.೨೭೭)

೫೭. ಲಿಂಗದೇವರು ಹಳೆಮನೆ, *ಕನ್ನಡ ಅಧ್ಯಯನ, ಸಂಚಿಕೆ, ಮಳೆ ಸಂಚಿಕೆ-೧, ಸಂಪುಟ-೬,* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯, ಪು.೨೯

೫೮. ಅದೇ, ಪು.೩೦

೫೯. ಅದೇ, ಪು.೩೧

೬೦. ವಿರೂಪಾಕ್ಷಿ ಪೂಜಾರಹಳ್ಳಿ, *ಕರ್ನಾಟಕದಲ್ಲಿ ತಳವಾರಿಕೆ,* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೫೫

೬೧. ಅದೇ, ಪು.೬೦

೬೨. *ಇತಿಹಾಸ ದರ್ಶನ,* ಸಂ.೧೮, ಪು.೧೮೯

೬೩. ಅದೇ, ಪು.೧೯೨

೬೪. ಕಪಟರಾಳ ಕೃಷ್ಣರಾಯ, *ಸುರಪುರ ಸಂಸ್ಥಾನದ ಇತಿಹಾಸ,* ಶಕ್ತಿ ಪ್ರಕಾಶನ, ಬೆಂಗಳೂರು, ಪು.೨೧೦

೬೫. ಅದೇ, ಪು.೨೧೫

೬೬. ಕೃಷ್ಣಯ್ಯ ಡಿ.ಎನ್., *ಕೊಡಗಿನ ಇತಿಹಾಸ,* ಮೈಸೂರು ವಿಶ್ವವಿದ್ಯಾನಿಲಯ, ೧೯೯೫, ಪು.೧೮೫

# ಉಪಸಂಹಾರ

ವಸಾಹತುಪೂರ್ವ ಕಾಲಘಟ್ಟದಲ್ಲಿ ದಲಿತರ ಚರಿತ್ರೆಯ ಅಧ್ಯಯನಕ್ಕೆ ಇರುವ ಆಕರಗಳು ಬಹಳಷ್ಟು ಮಿತಿಗಳನ್ನು ಹೊಂದಿದ್ದರೂ ಪ್ರಸ್ತುತ ಚರಿತ್ರೆ ಬರವಣಿಗೆಯು ಮಿತಿಗಳನ್ನು ಮೀರಬೇಕಾದ ಅನಿವಾರ್ಯತೆಗಳನ್ನು ಪ್ರಸ್ತುತ ಮಹಾಪ್ರಬಂಧದುದ್ದಕ್ಕೂ ಪ್ರಯತ್ನಿಸಲಾಗಿದೆ. ಆ ಮೂಲಕ ಕರ್ನಾಟಕ ಚರಿತ್ರೆಯ ಬರವಣಿಗೆಯ ಸಿದ್ಧ ಮಾದರಿಗಳನ್ನು ಪ್ರಶ್ನಿಸುತ್ತ ಹೊಸ ಆಯಾಮಗಳನ್ನು ಕಂಡುಕೊಳ್ಳಲು ಅಲ್ಲಲ್ಲಿ ಪ್ರಯತ್ನಿಸಲಾಗಿದೆ. ಇಂದಿನ ಕಾಲಘಟ್ಟದಲ್ಲಿ ಬಹಳ ಪ್ರಧಾನವಾಗಿರುವ ದಲಿತ ರಾಜಕಾರಣದ ವಾಙ್ಮಯಗಳನ್ನು ಈ ಮಹಾಪ್ರಬಂಧದಲ್ಲಿ ಚರ್ಚೆಗೆ ಒಳಪಡಿಸಲಾಗಿದೆ. ದಲಿತರೆಂದರೆ ಅಸ್ಪೃಶ್ಯರು ಮಾತ್ರವಲ್ಲದೆ ಮಧ್ಯಕಾಲೀನ ಸಂದರ್ಭದಲ್ಲಿ ಬುಡಕಟ್ಟು ಸಮುದಾಯಗಳು ಕೂಡ ಎನ್ನುವಂತಹ ಅಧ್ಯಯನ ವಿಧಾನವನ್ನು ಮಹಾಪ್ರಬಂಧದುದ್ದಕ್ಕೂ ಬಳಸಿಕೊಳ್ಳಲಾಗಿದೆ. "ದಲಿತ ಚರಿತ್ರೆ"ಗೆ ಪೂರಕವಾದ ಆಕರಗಳನ್ನು ಮಾತ್ರ ಬಳಸಿಕೊಳ್ಳದೆ ಸಾಂಪ್ರದಾಯಿಕ ಆಕರಗಳನ್ನು ಬಳಸಿಕೊಳ್ಳಲಾಗಿದೆ. ಈ ಬಗೆಯ ಬರವಣಿಗೆ ಕ್ರಮ ಚರಿತ್ರೆ ಬರವಣಿಗೆಯಲ್ಲಿ ಪ್ರಧಾನವಾಗಿರುವ ರಾಷ್ಟ್ರೀಯವಾದಿ ಮತ್ತು ಲಿಬರಲ್ ಮಾದರಿಯ ಗ್ರಹಿಕೆಗಳಿಗಿಂತ ಭಿನ್ನವಾಗಿದೆ. ಮಾರ್ಕ್ಸ್‌ವಾದಿ ಮತ್ತು ಸಬಾಲ್ಟನ್ ಪಂಥಗಳು ಆಗಾಗ್ಗೆ ಉಲ್ಲೇಖಿಸುವ ಕೆಳಸಮುದಾಯಗಳನ್ನು ಕೇಂದ್ರವಾಗಿಟ್ಟುಕೊಂಡು ಚರಿತ್ರೆಯನ್ನು ರಚಿಸುವ ಅಧ್ಯಯನ ಕ್ರಮವನ್ನು ಪ್ರಸ್ತುತ ಮಹಾಪ್ರಬಂಧವು ಹೊಂದಿದೆ. ಈ ಬಗೆಯ ಸೈದ್ಧಾಂತಿಕ ಚರ್ಚೆಗಳನ್ನು ಕೈಗೆತ್ತಿಕೊಂಡಿದ್ದ ಸಂದರ್ಭದಲ್ಲಿ ಬಹುತೇಕವಾಗಿ ಸಾಂಪ್ರದಾಯಿಕ ಆಕರಗಳನ್ನು ಪ್ರಸ್ತುತ ಅಧ್ಯಯನದ ವಿಸ್ತರಣೆಗೆ ಉಪಯೋಗಿಸಿಕೊಂಡಿರುವ ವಿಷಯ ಗಮನಾರ್ಹವಾದದು. ಈ ಹಿನ್ನೆಲೆಯಲ್ಲಿ ಮಧ್ಯಕಾಲೀನ ಕಾಲದ ದಲಿತರ ಚರಿತ್ರೆಯನ್ನು ವಿಶ್ಲೇಷಿಸುವ ಸಂದರ್ಭದಲ್ಲಿ ಸಮಾಜ, ಅರ್ಥವ್ಯವಸ್ಥೆ ಮತ್ತು ರಾಜ್ಯವ್ಯವಸ್ಥೆಯನ್ನು ಅಭ್ಯಸಿಸುತ್ತ ಇವುಗಳಲ್ಲಿ ದಲಿತರ ಚರಿತ್ರೆಯ ವಿವಿಧ ಆಯಾಮಗಳನ್ನು ಅಭ್ಯಸಿಸಲು ಹೇಗೆ ಸಹಕಾರಿಯಾಗಿವೆ ಎಂಬುದನ್ನು ವಿಶ್ಲೇಷಿಸಲಾಗಿದೆ. ಇಂತಹ ಸಂದರ್ಭಗಳಲ್ಲಿ ಸಾಂಪ್ರದಾಯಿಕ ಆಕರಗಳು ಮತ್ತು ಅವುಗಳನ್ನು ನಿರ್ವಚಿಸಿರುವ ರಾಷ್ಟ್ರೀಯವಾದಿ ದೃಷ್ಟಿಕೋನದಿಂದ ಹುಟ್ಟುಕೊಂಡ ಮಾದರಿಗಳನ್ನು ಗಮನಿಸುತ್ತ, ಅಧ್ಯಯನ ಮಾಡುತ್ತ ಮತ್ತು ಅವುಗಳನ್ನು ವಿಶ್ಲೇಷಿಸುತ್ತ ದಲಿತ ಕೇಂದ್ರಿತ ಚರಿತ್ರೆಗೆ ಹೊಸ ಆಯಾಮವನ್ನು ಕಲ್ಪಿಸಲು ಪ್ರಯತ್ನಿಸಲಾಗಿದೆ.

* * * * *

ಪ್ರಾಚೀನ ಕಾಲಘಟ್ಟದ ದಲಿತರ ವಿಧಾನವನ್ನು ಅರ್ಥಮಾಡಿಕೊಳ್ಳಬೇಕಾದರೆ ಪ್ರಥಮವಾಗಿ ಸಾಮಾಜಿಕ ಸಂರಚನೆಯನ್ನು ಮೊದಲು ಗಮನಿಸಬೇಕಾಗುತ್ತದೆ. ಕರ್ನಾಟಕದ ಚಾರಿತ್ರಿಕ ಕಾಲಘಟ್ಟದ ಸಮಾಜವು

ಶ್ರೇಣೀಕರಣ ಮಾದರಿಯನ್ನು ಒಳಗೊಂಡಿದೆ. ಈ ಸಾಮಾಜಿಕ ಶ್ರೇಣೀಕರಣದ ಕೊನೆಯ ಸ್ಥಾನದಲ್ಲಿದ್ದವರು ಅಸ್ಪೃಶ್ಯರು. ಇವರು ಸಾಮಾಜಿಕ ಶ್ರೇಣೀಕರಣದಿಂದ ಮಾತ್ರವಲ್ಲದೆ ಎಲ್ಲ ನಾಗರಿಕ ಹಕ್ಕುಗಳಿಂದ ತಿರಸ್ಕರಿಸಲ್ಪಟ್ಟವರಾಗಿದ್ದರು. ಸಮಾಜದಿಂದ ದೂರ ಸರಿಯಲು ಮತ್ತು ಸಾಮಾಜಿಕ ಸ್ಥಾನಮಾನವನ್ನು ನಿರ್ಧರಿಸುವಲ್ಲಿ ಜಾತಿ ಪ್ರಮುಖ ಪಾತ್ರ ವಹಿಸಿತು. ದಲಿತರು ಗ್ರಾಮೀಣ ಪರಿಸರದಲ್ಲಿ ಇಂದಿಗೂ ಊರ ಹೊರಗಡೆ ವಾಸ ಮಾಡುವ ಚಿತ್ರಣ ಸಿಗುತ್ತದೆ. ಜಗತ್ತಿನ ಯಾವುದೇ ಭಾಗದಲ್ಲಿ ಕಂಡುಬರದಂತ ಅನಿಷ್ಟ ಪದ್ಧತಿ ಭಾರತದಲ್ಲಿ ಇತ್ತು. ಅದುವೇ ಅಸ್ಪೃಶ್ಯತೆ, ಅಸ್ಪೃಶ್ಯತೆಯ ಪರಿಣಾಮವಾಗಿ ದಲಿತರು ಚಾರಿತ್ರಿಕ ಕಾಲಘಟ್ಟದಲ್ಲಿ ಎಲ್ಲ ಸಮುದಾಯಗಳಂತೆ ಊರಿನ ಮಧ್ಯೆ ವಾಸಿಸುವಂತಿರಲಿಲ್ಲ. (ಹೆಚ್ಚಿನ ವಿವರಗಳಿಗೆ ಮಹಾಪ್ರಬಂಧದ ಅಧ್ಯಾಯ ಮೂರರಲ್ಲಿ ಜಾತಿಯ ಸಂರಚನೆ ಮತ್ತು ದಲಿತರಿಗಿದ್ದ ಸಾಮಾಜಿಕ ಸ್ಥಾನಮಾನ ಎನ್ನುವ ವಿಷಯದಲ್ಲಿ ಚರ್ಚಿಸಲಾಗಿದೆ. ಪು.೩೫-೬೫). ಅಸ್ಪೃಶ್ಯತೆ, ಜಾತಿಯತೆ, ಮೇಲು-ಕೀಳು ಈ ಬಗೆಯ ಸಮಾಜ ಘಾತಕ ಪದ್ಧತಿಗಳ ವಿರುದ್ಧ ಧರ್ಮಗಳು, ಚಳವಳಿಗಳು, ಪಂಥಗಳು ಹೋರಾಟ ಮಾಡಿವೆ. ಭಕ್ತಿಯನ್ನು ಕೇಂದ್ರವಾಗಿಟ್ಟುಕೊಂಡು ಜನಸಾಮಾನ್ಯರನ್ನು ಸಾಮಾಜಿಕ ಸಮಸ್ಯೆಗಳಿಂದ ವಿಮುಕ್ತಿಗೊಳಿಸುವುದು ಚಳವಳಿಗಳ ಪ್ರಮುಖ ಆಶಯವಾಗಿತ್ತು. ಅವುಗಳು ಸಮಾಜದ ಕೆಳಸಮುದಾಯಗಳ ಜನತೆಯ ಅಭಿವೃದ್ಧಿಗೆ ಪೂರಕವಾಗಿ ಕೆಲಸ ಮಾಡಿದವು. ಇದರ ಜೊತೆಗೆ ದಲಿತರು ಶ್ರದ್ಧೆ, ವಿಚಾರಗಳಲ್ಲಿ ಉಳಿದೆಲ್ಲವರಿಗಿಂತ ಶ್ರೇಷ್ಠರು ಎಂಬುದನ್ನು ಪ್ರಚುರ ಪಡಿಸಲಾಯಿತು. ಮಧ್ಯಕಾಲೀನ ಕರ್ನಾಟಕದ ಸಂದರ್ಭದಲ್ಲಿ ಹಲವು ಚಳವಳಿಗಳು ಸಾಮಾಜಿಕ ಮತ್ತು ಧಾರ್ಮಿಕ ಆಂದೋಲನಗಳಾಗಿ ರೂಪುಗೊಂಡವು. ಈ ಕುರಿತು ರಾಮಾನುಜಾಚಾರ್ಯರು ಪ್ರಯತ್ನಗಳು ದಲಿತರು ದೇವಾಲಯ ಪ್ರವೇಶಕ್ಕೆ ಅನುವು ಮಾಡಿಕೊಟ್ಟಿರುವುದನ್ನು ಗಮನಿಸಬಹುದು. (ಈ ಕುರಿತು ಹೆಚ್ಚಿನ ವಿವರಗಳಿಗೆ ಮಹಾಪ್ರಬಂಧದ ಅಧ್ಯಾಯ ಮೂರರಲ್ಲಿ ರಾಮಾನುಜಾಚಾರ್ಯರು ಮತ್ತು ದಲಿತ ವರ್ಗ ಎನ್ನುವ ವಿಷಯದಲ್ಲಿ ಚರ್ಚಿಸಲಾಗಿದೆ. ಪು.೬೯-೭೧). ಮಧ್ಯಕಾಲೀನ ಕರ್ನಾಟಕದಲ್ಲಿ ವಚನ ಚಳವಳಿ ಹೆಚ್ಚಿನ ಚರ್ಚೆಗೆ ಗ್ರಾಸ ಒದಗಿಸಿದೆ. ಅದು ಸಮಾಜದ ಶೋಷಣೆಯ ವಿವಿಧ ಆಯಾಮಗಳನ್ನು ಸಂಪೂರ್ಣವಾಗಿ ವಿರೋಧಿಸಿತು. ಅಂದು ಸಮಾಜದಲ್ಲಿ ತಾಂಡವಾಡುತ್ತಿದ್ದ ಸ್ಥಾಪಿತ ಮೌಲ್ಯಗಳ ವಿರುದ್ಧ ಪ್ರತಿಭಟಿಸಿತು. ಸಮಾಜ ಅಂದು ಸಾಮಾಜಿಕ ಬದಲಾವಣೆಗಳನ್ನು ಬಯಸುತ್ತಿತ್ತು. ವಿಶೇಷವೆಂದರೆ ಈ ಚಳವಳಿಯಲ್ಲಿ ದಲಿತ ಲೋಕದಿಂದ ಬಂದ ಶರಣರು ಸಕ್ರಿಯವಾಗಿ ಪಾಲ್ಗೊಂಡರು. ಪ್ರಭುತ್ವ, ಪುರೋಹಿತಶಾಹಿ, 'ಜಾತಿ' ಎಂಬ ಸ್ಥಾಪಿತ ವ್ಯವಸ್ಥೆ ವಿರುದ್ಧ ಚಳವಳಿ ಪ್ರಬಲವಾಗಿ ವಿರೋಧಿಸಿ ಜನಸಾಮಾನ್ಯರ ಕಲ್ಯಾಣಕ್ಕಾಗಿ ಶ್ರಮಿಸಿತು. ಈ ಕಾಲಘಟ್ಟದಲ್ಲಿ ಜಾತಿ ವ್ಯವಸ್ಥೆಯು ಪುನರ್ ಜೀವನ ಪಡೆಯಿತು. ಚರಿತ್ರೆಯ ಆಕರಗಳಲ್ಲಿ ಜಾತಿ, ಧರ್ಮ ಮುಂತಾದ ವಿಚಾರಗಳೇ ಪ್ರಧಾನವಾಗಿ ಕಾಣಿಸಿಕೊಳ್ಳಲು ಮೇಲಿನ ವಿವರಗಳು ಪ್ರಮುಖವಾದವು. ವಚನ ಚಳವಳಿ ತರುವಾಯ ಹರಿದಾಸ ಚಳವಳಿ ಸಮಾಜದ ಸಮಾನತೆಗಾಗಿ ಹೋರಾಡಿರುವುದನ್ನು ಗಮನಿಸಬಹುದು.

ದೇವಾಲಯ ಸಂಸ್ಕೃತಿ ವಿಷಯವು ಬಲಾಢ್ಯ ಜಾತಿಗಳಿಗೆ ಸಂಬಂಧಿಸಿದ ವಿಚಾರವೆಂದು ಮೇಲ್ನೋಟಕ್ಕೆ ಕಂಡರೂ ಅದರ ಅಂತರಂಗದಲ್ಲಿ ಸಮಾಜದ ಸಮಸ್ತ ಜಾತಿ/ಸಮುದಾಯಗಳು ಪಾಲ್ಗೊಂಡು ಕಾರ್ಯ

ನಿರ್ವಹಿಸುತ್ತಿದ್ದವು. ಸಾಹಿತ್ಯ ವಿಪುಲವಾಗಿ ಬೆಳವಣಿಗೆ ಕಂಡಿತು. ಇದರ ಪ್ರತಿಫಲವಾಗಿ ಕರ್ನಾಟಕದುದ್ದಕ್ಕೂ ದೇವಾಲಯಗಳು ನಿರ್ಮಾಣಗೊಂಡವು. ದೇವಾಲಯಗಳ ನಿರ್ಮಾಣ ಕಾರ್ಯದಲ್ಲಿ ಶ್ರಮ ವಹಿಸಿದವರು ಜನಸಾಮಾನ್ಯರೇ ಹೊರತು ಸಮಾಜದ ಉನ್ನತ ಸ್ತರದಲ್ಲಿದ್ದವರು ಅಲ್ಲ. ಆದರೆ ಅವುಗಳ ಇನ್ನೊಂದು ನೆಲೆಯಲ್ಲಿ ಅಧ್ಯಯನ ಮಾಡಿದಾಗ ಸಾಮಾಜಿಕ ಶ್ರೇಣೀಕರಣ ಮುಂದುವರಿಯಲು ಸಹಕಾರಿಯಾಯಿತು. ಸ್ಥಾಪಿತ ಮೌಲ್ಯಗಳೆಂಬ ವಿಚಾರಗಳು ಹಾಗೆಯೇ ಮುಂದುವರಿಯುವಂತೆ ವ್ಯವಸ್ಥಿತವಾಗಿ ನೋಡಿಕೊಳ್ಳಲಾಯಿತು. ಈ ಹಿನ್ನೆಲೆಯಲ್ಲಿ ಪರಿಚಾರಕವರ್ಗ, ಮಠಗಳು ಮತ್ತು ದೇವದಾಸಿ ಪದ್ಧತಿ ವಿಚಾರಗಳು ಗಮನ ಸೆಳೆಯುತ್ತವೆ (ಹೆಚ್ಚಿನ ವಿವರಗಳಿಗೆ ಮಹಾಪ್ರಬಂಧದ ಅಧ್ಯಾಯ ಮೂರರಲ್ಲಿ ದೇವಾಲಯ ಸಂಸ್ಕೃತಿ ಮತ್ತು ದಲಿತರು ಎನ್ನುವ ವಿಷಯದಲ್ಲಿ ಚರ್ಚಿಸಲಾಗಿದೆ. ಪು.೮೩-೮೭).

ಚಾರಿತ್ರಿಕ ವಿಚಾರಗಳನ್ನು ಕುರಿತು ವಿಶ್ಲೇಷಿಸುವ ಸಂದರ್ಭದಲ್ಲಿ ಮೌಖಿಕ ಆಕರಗಳನ್ನು ಬಳಸಿಕೊಂಡು ಚರಿತ್ರೆಯನ್ನು ರಚಿಸುವ ತುರ್ತು ಇತ್ತೀಚಿನ ದಿನಮಾನಗಳಲ್ಲಿ ಕಾಣಬಹುದು. ಕರ್ನಾಟಕದ ಚರಿತ್ರೆಯಲ್ಲಿ ಬಹುತೇಕ ಬುಡಕಟ್ಟು ಕಾವ್ಯಗಳು ಮಧ್ಯಕಾಲೀನ ಸಂದರ್ಭದಲ್ಲಿ ಹುಟ್ಟಿಕೊಂಡಿರುವುದು ಗಮನಾರ್ಹ. ವಚನ ಆಂದೋಲನದ ತರುವಾಯ ಸಿಡಿದೆದ್ದ ಬಹುತೇಕ ಕೆಳ ಸಮುದಾಯಗಳು ತಮ್ಮ ತಮ್ಮ ಸಮುದಾಯಗಳ ನಾಯಕರಾಗಿ ಕಾಣಿಸಿಕೊಂಡಿರುವುದು ವಿಶೇಷ. ಅವರನ್ನು ಇಲ್ಲಿ ಸಾಂಸ್ಕೃತಿಕ ನಾಯಕರೆಂದು ಗುರುತಿಸಲಾಗಿದೆ. ಅವರಲ್ಲಿ ಮಂಟೇಸ್ವಾಮಿ, ಮಲೆಮಾದೇಶ್ವರ, ಜುಂಜಪ್ಪ, ಮೈಲಾರಲಿಂಗ, ಕುಮಾರರಾಮ, ಎಲ್ಲಮ್ಮ ಮುಂತಾದವರು ಪ್ರಮುಖರು. ಅಂದಿನ ಸಾಮಾಜಿಕ ಬಿಕ್ಕಟ್ಟುಗಳ ವಿವರಗಳನ್ನು ಮೌಖಿಕ ಪರಂಪರೆಯಲ್ಲಿ ಬಿಟ್ಟು ಹೋಗಿದ್ದಾರೆ. ಈ ಸಾಂಸ್ಕೃತಿಕ ನಾಯಕರು ಸಾಂಸ್ಕೃತಿಕ ಸಂಘರ್ಷಗಳನ್ನು ಶಕ್ತಿ ಮತ್ತು ಯುಕ್ತಿಯಿಂದ ಪ್ರಶ್ನಿಸುತ್ತ, ಪರಿಹರಿಸುತ್ತ ಹಾಗೂ ದಬ್ಬಾಳಿಕೆ ಪ್ರವೃತ್ತಿ, ಬಲಾಢ್ಯ ಜಾತಿಗಳ ಆರ್ಭಟಗಳನ್ನು ತಲ್ಲಣಗೊಳಿಸುತ್ತಾರೆ. ರೂಢಿಗತ ಮೌಲ್ಯಗಳನ್ನು ಧಿಕ್ಕರಿಸುವ ಅಂಶಗಳನ್ನು ಗಮನಿಸಬಹುದಾಗಿದೆ. ತದನಂತರ ಹದಿನಾರು ಮತ್ತು ಹದಿನೇಳನೆ ಶತಮಾನದಲ್ಲಿ ಸಾಂಸ್ಕೃತಿಕ ನಾಯಕರು ಎರಡನೆಯ ಮರು ಹುಟ್ಟಿಗೆ ಕಾರಣರಾದರು. ಆ ಸಂದರ್ಭದಲ್ಲಿ ಜನಸಮುದಾಯಗಳ ಸಂಕರ ಮತ್ತು ಆರಾಧನೆಯಿಂದ ಈ ರೀತಿ ವಿವರಗಳನ್ನು ಕಾಣಬಹುದು (ಹೆಚ್ಚಿನ ವಿವರಗಳಿಗೆ ಮಹಾಪ್ರಬಂಧದ ಅಧ್ಯಾಯ ಮೂರರಲ್ಲಿ ಬುಡಕಟ್ಟು ಸಮುದಾಯಗಳು ಎನ್ನುವ ವಿಷಯದಲ್ಲಿ ಚರ್ಚಿಸಲಾಗಿದೆ. ಪು.೧೧೩-೧೪೦).

ದಲಿತರ ಆರ್ಥಿಕ ವಿಚಾರಗಳನ್ನು ಕುರಿತು ಗಮನಿಸುವುದಾದರೆ ಸಂಪ್ರದಾಯಿಕ ವೃತ್ತಿಗಳಲ್ಲಿ ಯಾವ ಬದಲಾವಣೆಯನ್ನು ಕಾಣಲಾಗುವುದಿಲ್ಲ. ಬಹಿಷ್ಕಾರ ಪದ್ಧತಿ, ದೌರ್ಜನ್ಯ, ಕೊಲೆ ಸುಲಿಗೆ, ಮಲ ಹೊರುವ ಪದ್ಧತಿಗಳು ಇಂದಿಗೂ ಗ್ರಾಮೀಣ ಪ್ರದೇಶಗಳಲ್ಲಿ ಜರುಗುತ್ತಿವೆ. ಪ್ರಾಚೀನ ಕಾಲದಲ್ಲಿ ಗುಲಾಮ ಪದ್ಧತಿ, ಜೀತ ಪದ್ಧತಿ ಮತ್ತು ಕೂಲಿ ಕೆಲಸ ಕ್ರಮೇಣ ಕಾಲಕ್ಕೆ ತಕ್ಕಂತೆ ಬದಲಾವಣೆಗೊಂಡು ಬೇರೆ ಬೇರೆ ಆಯಾಮಗಳಲ್ಲಿ ಮುಂದುವರೆದಿದೆ. ಮಧ್ಯಕಾಲೀನ ಸಂದರ್ಭದಲ್ಲಿ ಗುಲಾಮರು ಒಡೆಯರ ಆದೇಶದಂತೆ ನಡೆಯಬೇಕಾಗಿತ್ತು.

ದಲಿತರು ಗುಲಾಮರಾಗಿ ಜೀವನ ನಡೆಸಿದಂತಹ ಘಟನೆಗಳನ್ನು ಗಮನಿಸಿದರೆ ಅವರಿಗೆ ಯಾವುದೇ ರೀತಿಯ ಸೌಲಭ್ಯ ಮತ್ತು ಸ್ವಾತಂತ್ರ್ಯವು ಕನಸಿನ ಮಾತಾಗಿತ್ತು. ಪ್ರಾಚೀನ ಕರ್ನಾಟಕದಲ್ಲಿ ಹುಟ್ಟಾಳು, ಹೊಲೆಮಗ, ಮನೆಮಾದಿಗ, ಮನೆಮಗತಿನ್, ಆಳ್ಮಗ, ಮನೆಯಮಗ, ಮನೆವೆಗ್ಗಡೆ, ಮನೆದೊತ್ತು, ತೊತ್ತು, ದಾಸ, ಗುಲಾಮ, ಬೆಸದಾಳು, ಪಾನೆಮಗೆತಿನ್ ಮುಂತಾದ ಶಬ್ದಗಳು ದಲಿತರ ಮತ್ತು ಕೆಳಜಾತಿಗಳ ಕೋಪಗಳನ್ನು ಅಭಿವ್ಯಕ್ತಿಗೊಳಿಸುವ ಅಂಶಗಳಾಗಿವೆ. ದಕ್ಷಿಣ ಕನ್ನಡ ಮತ್ತು ಕೊಡಗು ಪ್ರದೇಶಗಳು ಜೀತಗಾರಿಕೆ, ಗುಲಾಮಗಿರಿಯಿಂದ ಮುಕ್ತವಾಗಿರಲಿಲ್ಲ ಎಂಬುದು ಅಧ್ಯಯನದಿಂದ ವೇದ್ಯವಾಗುತ್ತದೆ (ಹೆಚ್ಚಿನ ವಿವರಗಳಿಗೆ ಮಹಾಪ್ರಬಂಧದ ಅಧ್ಯಾಯ ನಾಲ್ಕರಲ್ಲಿ ಮಲೆನಾಡು ಪ್ರದೇಶ ಮತ್ತು ದಲಿತ ಮಹಿಳೆ ಎನ್ನುವ ವಿಷಯದಲ್ಲಿ ಚರ್ಚಿಸಲಾಗಿದೆ. ಪು.೧೬೧-೧೬೪). ದಲಿತರ ಸಾಮಾಜಿಕ ಮತ್ತು ಆರ್ಥಿಕ ವಿಚಾರಗಳಿಗೆ ವ್ಯತಿರಿಕ್ತವಾಗಿ ರಾಜ್ಯಕ್ಕೆ ಸಂಬಂಧಿಸಿದ ಕೆಲವು ವಿಚಾರಗಳು ಗಮನ ಸೆಳೆಯುತ್ತವೆ. ಈ ಕುರಿತು ಚರ್ಚಿಸುವಾಗ ಪ್ರಭುತ್ವವು ವಿವಿಧ ಸಮುದಾಯಗಳನ್ನು ವ್ಯವಸ್ಥೆಯ ಭಾಗವಾಗಿ ಬಳಸಿಕೊಂಡಿದೆ. ಇದಕ್ಕೆ ದಲಿತ ಸಮುದಾಯಗಳು ಹೊರತಾಗಿಲ್ಲ. ಆಡಳಿತಾತ್ಮಕ ಸಂಬಂಧಗಳು, ಸೈನ್ಯದ ಸೇವೆ ಮುಂತಾದ ವಿಚಾರಗಳು ಚರ್ಚೆಗೆ ಒಳಪಟ್ಟಿವೆ. ಕರ್ನಾಟಕದ ಚರಿತ್ರೆಯಲ್ಲಿ ಪ್ರಾಚೀನ ಕಾಲದಿಂದ ಪ್ರಸ್ತುತದವರೆಗೂ ದಲಿತರು ಸೈನ್ಯದ ಭಾಗವಾಗಿ ಸೇವೆ ಸಲ್ಲಿಸಿದ ವಿವರಗಳನ್ನು ಕಾಣಬಹುದು (ಈ ಕುರಿತು ಹೆಚ್ಚಿನ ವಿವರಗಳಿಗೆ ಮಹಾಪ್ರಬಂಧದ ಅಧ್ಯಾಯ ಐದರಲ್ಲಿ ಸೈನ್ಯದ ಸೇವೆ ಎಂಬ ವಿಷಯದಲ್ಲಿ ಚರ್ಚಿಸಲಾಗಿದೆ. ಪು.೨೧೭-೨೨೨).

* * * * *

ಪ್ರಸ್ತುತ ಮಹಾಪ್ರಬಂಧದಲ್ಲಿ ಕೆಲವೊಂದು ವಿಶೇಷ ವಿಚಾರಗಳನ್ನು ಅಧ್ಯಯನ ಮಾಡಲಾಗಿದೆ. ಅವುಗಳಲ್ಲಿ ದಲಿತ ಸ್ತ್ರೀ ವಿಚಾರವು ಒಂದು. ಮಧ್ಯಕಾಲೀನ ಚರಿತ್ರೆಯ ಬರವಣಿಗೆಗಳಲ್ಲಿ ದಲಿತ ಮಹಿಳೆಯ ಸಂಗತಿಗಳು ವಿರಳವಾಗಿ ಕಂಡರೂ ಬಹುರೂಪಿ ನೆಲೆಯಲ್ಲಿ ಅಧ್ಯಯನ ಮಾಡಲು ಸಹಾಯಕವಾಗಿವೆ. ಮಹಿಳೆಯು ಅಂದು ಎದುರಿಸಿದ ಸಮಸ್ಯೆಗಳು ವೈವಿಧ್ಯಮಯವಾಗಿದ್ದು, ವ್ಯವಸ್ಥೆ ಅವರನ್ನು ನಡೆಸಿಕೊಂಡಿರುವ ರೀತಿ ಮಾತ್ರ. ಕಠೋರವಾಗಿದೆ. ಸಾಮಾಜಿಕ ಮತ್ತು ಆರ್ಥಿಕ ಆಯಾಮಗಳ ಕುರಿತಾದ ವಿವರಣೆಗಳು ಇದನ್ನು ದೃಢಪಡಿಸುತ್ತವೆ. ಸ್ಥಾಪಿತ ಮೌಲ್ಯವೆಂದು ಗುರುತಿಸಿಕೊಂಡಿರುವ ಜಾತಿ ಸಂಕೋಲೆಯಿಂದ ಹೊರಬರಲು ಯತ್ನಿಸಿ ತಮಗೂ ಕೂಡ ಸಮಾಜದಲ್ಲಿ ಸಮಾನತೆಯಿಂದ ಜೀವಿಸುವ ಹಕ್ಕು ಇದೆ ಪ್ರತಿಪಾದಿಸಿದ್ದು ವಚನ ಚಳವಳಿಯ ಸಂದರ್ಭದಲ್ಲಿ. ಆ ಅವಧಿಯಲ್ಲಿ ಶರಣರು ಸೇರಿದಂತೆ ದಲಿತ ಮಹಿಳೆಯರ ಕಾರ್ಯಚಟುವಟಿಕೆಗಳು ಅಷ್ಟೇ ಪ್ರಭಾವಿತವಾಗಿದ್ದವು. ಹಾಗೆಯೇ ಇದುವರೆಗಿನ ನಡೆದಿರುವ ಬಹುತೇಕ ಅಧ್ಯಯನಗಳು ದಲಿತ ಮಹಿಳೆಯರನ್ನು ಕುರಿತು ಗಂಭೀರವಾಗಿ ಅನುಲಕ್ಷಿಸಿಲ್ಲವೆಂದರೆ ತಪ್ಪಾಗಲಾರದು. ಮಲೆನಾಡು ಮತ್ತು ಕರಾವಳಿ ಪ್ರದೇಶವು ಬೆಟ್ಟಗುಡ್ಡಗಳಿಂದ ಆವೃತವಾಗಿ, ಕೃಷಿಗೆ ಯೋಗ್ಯವಾದ ಭೂಮಿಯನ್ನು ಹೊಂದಿದ್ದರಿಂದ ಕೃಷಿ ಚಟುವಟಿಕೆಗಳು ಭರದಿಂದ ಸಾಗತೊಡಗಿದವು. ಇದರ ಪರಿಣಾಮ ಭೂಮಿಯನ್ನು ಉಳುಮೆ ಮಾಡಲು ಉತ್ಪಾದನಾ ಅಂಗಗಳ ಅವಶ್ಯಕತೆ ಉಂಟಾಯಿತು. ಕಾಲಕ್ರಮೇಣ ಮಧ್ಯಕಾಲೀನ ಸಂದರ್ಭದಲ್ಲಿ ಭೂ ಒಡೆಯರು ಹೆಚ್ಚಿನ ಭೂಮಿಯನ್ನು

ಹೊಂದಿದ್ದರಿಂದ ಜನಸಾಮಾನ್ಯರು ಭೂಮಾಲೀಕರ ಹತ್ತಿರ ದುಡಿಯುವುದು ಅನಿವಾರ್ಯವಾಯಿತು. ಜೀತಗಾರಿಕೆ, ದಲಿತರ ಮಾರಾಟ ಪ್ರಕ್ರಿಯೆಗಳು ದಿನದಿಂದ ದಿನಕ್ಕೆ ವಿಸ್ತರಿಸಿಕೊಳ್ಳಲು ಆರಂಭಿಸಿದವು. ಪ್ರಾಚೀನ ಕನ್ನಡ ಪಠ್ಯಗಳಾದ ರಾಘವಾಂಕನ 'ಹರಿಶ್ಚಂದ್ರ ಕಾವ್ಯ', ಬಾಲಚಂದ್ರದೇವನ 'ತತ್ವರತ್ನ ಪ್ರದೀಪಿಕೆ' ಮುಂತಾದ ಕೃತಿಗಳು ದಲಿತದ ಮಾರಾಟದ ಕುರಿತು ವಿವರಗಳನ್ನು ಒದಗಿಸುವಲ್ಲಿ ಸಹಾಯಕವಾಗಿವೆ. ದಲಿತರ ಮಾರಾಟ ಪ್ರಕ್ರಿಯೆಯು ಇಂದಿಗೂ ಮುಂದುವರಿಯಲು ಸಾಮಾಜಿಕ, ಆರ್ಥಿಕ ಮತ್ತು ನೈತಿಕ ಕಾರಣಗಳು ಮುಖ್ಯವಾಗಿವೆ. ಮಧ್ಯಕಾಲೀನ ಸಂದರ್ಭದಲ್ಲಿ ರಾಜಕೇಂದ್ರಿತ, ಶ್ರೀಮಂತರ ಕಾರ್ಯಭಾರಗಳು, ಭೂಮಾಲೀಕರ ಕಾರ್ಯಗಳು ಹೆಚ್ಚು ವಿಸ್ತರಿಸಿಕೊಳ್ಳಲಾರಂಭಿಸಿದವು. ಸಾಮಾನ್ಯ ಜನತೆಯ ವಿಚಾರಗಳು ಅಂದಿನ ಸಮಾಜಕ್ಕೆ ತೀರ ಸ್ವಭಾವಿಕವೆಂದು ಕಾಣತೊಡಗಿದವು. ಅವುಗಳಲ್ಲಿ ದಲಿತರ ಮಾರಾಟ ವಿಷಯವು ಒಂದು (ಈ ಕುರಿತು ಹೆಚ್ಚಿನ ವಿವರಗಳಿಗೆ ಮಹಾಪ್ರಬಂಧದ ಅಧ್ಯಾಯ ಐದರಲ್ಲಿ ದಲಿತರ ಮಾರಾಟ ಎಂಬ ವಿಷಯದಲ್ಲಿ ಚರ್ಚಿಸಲಾಗಿದೆ. ಪು.೧೫೮-೧೬೧). ಈ ಬಗೆಯ ಸಾಮಾಜಿಕ ಪ್ರಕ್ರಿಯೆಗಳನ್ನು ಸಮಕಾಲೀನ ಸಂದರ್ಭದಲ್ಲಿ ಕೂಡ ಗಮನಿಸಬಹುದು. ಇವೆಲ್ಲಾ ಕಾರಣಗಳಿಂದ ದಲಿತ ಚರಿತ್ರೆ ಕರಾವಳಿ ಕರ್ನಾಟಕದ ಪ್ರದೇಶಗಳಲ್ಲಿ ಇತರೆ ಪ್ರದೇಶಗಳಿಗಿಂತ ಭಿನ್ನವಾಗಿ ಕಾಣಿಸಿಕೊಳ್ಳುತ್ತದೆ. ಈ ಮಹಾಪ್ರಬಂಧದಲ್ಲಿ ಈ ಬಗ್ಗೆ ವಿವರವಾಗಿ ಚರ್ಚಿಸಲಾಗಿದೆ. ಭೂಮಿ ಮತ್ತು ಉಳುಮೆ ಮಾಡುವ ವಿನಿಮಯ ಸಂಬಂಧದ ಬಗ್ಗೆ, ಅದರಲ್ಲಿಯೂ ದಲಿತ ಕಾರ್ಮಿಕರ ಬಗ್ಗೆ ವಿವರವಾಗಿ ಚರ್ಚಿಸಲು ಪ್ರಯತ್ನಿಸಲಾಗಿದೆ. (ಹೆಚ್ಚಿನ ವಿವರಗಳಿಗಾಗಿ ಮಹಾಪ್ರಬಂಧದ ಅಧ್ಯಾಯ ನಾಲ್ಕರಲ್ಲಿ ಭೂಮಾಲೀಕರು ಮತ್ತು ಕೃಷಿಕಾರ್ಮಿಕರು ಎನ್ನುವ ವಿಷಯದಲ್ಲಿ ಚರ್ಚಿಸಲಾಗಿದೆ. ಪು.೧೮೦-೧೮೧).

ಚಾರಿತ್ರಿಕ ವಿಚಾರಗಳನ್ನು ಕುರಿತು ವಿಶ್ಲೇಷಿಸುವ ಸಂದರ್ಭದಲ್ಲಿ ಲಿಖಿತ ದಾಖಲೆಗಳ ಹಾಗೆಯೇ ಮೌಖಿಕ ಆಕರಗಳನ್ನು ಬಳಸಿಕೊಂಡು ಚರಿತ್ರೆಯನ್ನು ಪುನಾರಚಿಸುವ ಆಯಾಮ. ಇತ್ತೀಚಿನ ಸಂಶೋಧನಾ ವಿಧಾನಗಳಲ್ಲಿ ಕಾಣಿಸಿಕೊಳ್ಳುತ್ತಿರುವುದನ್ನು ಗಮನಿಸಬಹುದು. ಸಮಕಾಲೀನ ಸಂದರ್ಭದಲ್ಲಿ ನಡೆದ ಸಾಮಾಜಿಕ ಆರ್ಥಿಕ ಪ್ರಕ್ರಿಯೆಗಳ ವಿವರಗಳು ಮೌಖಿಕ ಪರಂಪರೆಯಲ್ಲಿ ಉಳಿದುಕೊಂಡಿದೆ. ಬಹುತೇಕ ಜನಪದ ಮಹಾಕಾವ್ಯಗಳು ಹುಟ್ಟಿಕೊಂಡಿರುವುದು ಮಧ್ಯಕಾಲೀನ ಕಾಲಘಟ್ಟದಲ್ಲಿ ಎಂಬುದು ಸರ್ವವಿದಿತ. ಈ ಕಾವ್ಯಗಳ ನಾಯಕರನ್ನು ಸಾಂಸ್ಕೃತಿಕ ನಾಯಕರೆಂದು ಗುರುತಿಸಿ "ಬುಡಕಟ್ಟು ವೀರರು" ಎಂದು ಕರೆಯಲಾಗಿದೆ. ಮಲೆ ಮಾದೇಶ್ವರ, ಮಂಟೇಸ್ವಾಮಿ, ಜುಂಜಪ್ಪ, ಮೈಲಾರಲಿಂಗ ಮುಂತಾದ ಸಾಂಸ್ಕೃತಿಕ ನಾಯಕರು ಮೌಖಿಕ ಪರಂಪರೆಯ ಮುಖಾಂತರ ಅಂದಿನ ಸಾಮಾಜಿಕ ಚಿತ್ರಣ ಒದಗಿಸುತ್ತಾರೆ. ಪ್ರಭುತ್ವದೊಂದಿಗೆ ಈ ನಾಯಕರು ನಡೆಸಿದ ನಡೆಸಿದ ವೈರುಧ್ಯಗಳು, ಬಲಾಢ್ಯ ಸಮುದಾಯಗಳೊಂದಿಗೆ ನಡೆಸಿದ ಸಂಘರ್ಷಗಳನ್ನು ಚಾರಿತ್ರಿಕ ನೆಲೆಯಲ್ಲಿ ಅಧ್ಯಯನ ನಡೆಸಲು ಯತ್ನಿಸಿದೆ (ಈ ಕುರಿತಂತೆ ಹೆಚ್ಚಿನ ವಿವರಗಳಿಗೆ ಮಹಾಪ್ರಬಂಧದ ಅಧ್ಯಾಯ ಮೂರರಲ್ಲಿ ಬುಡಕಟ್ಟು ಸಮುದಾಯಗಳು ಎನ್ನುವ ವಿಷಯದಲ್ಲಿ ಚರ್ಚಿಸಲಾಗಿದೆ. ಪು.೧೧೩-೧೪೦). ಸಮಾಜದಿಂದ ಸಿಡಿದೆದ್ದ ಸಮುದಾಯಗಳು ತಮಗೂ ಕೂಡ ಚರಿತ್ರೆಯಿದೆ ಎಂದು ಈ ಸಾಂಸ್ಕೃತಿಕ ನಾಯಕರ ಮೂಲಕ ಗುರುತಿಸಿಕೊಳ್ಳಲು ಯತ್ನಿಸಿದವು. ಜನಸಾಮಾನ್ಯರ ಪರವಾಗಿ, ಸಮಾಜಘಾತಕ ಶಕ್ತಿಗಳ ವಿರುದ್ಧ ಅಖಂಡವಾಗಿ ವಿರೋಧಿಸುವ,

ಪ್ರತಿಭಟಿಸುವ, ಪ್ರಶ್ನಿಸುವ ಆಯಾಮಗಳನ್ನು ಮೌಖಿಕ ಆಕರಗಳಲ್ಲಿ ಕಾಣಬಹುದು. ಈ ಹಿನ್ನೆಲೆಯಿಂದ ಮೌಖಿಕ ಚರಿತ್ರೆಯು ಸಾಮಾಜಿಕ-ಆರ್ಥಿಕ ಪ್ರಕ್ರಿಯೆಗಳನ್ನು ಕುರಿತು ಸಂಶೋಧನೆ ನಡೆಸುವಲ್ಲಿ ಮೌಖಿಕ ಆಕರಗಳು ಹೊಸ ಬಗೆಯ ಆಯಾಮಗಳನ್ನು ಅರ್ಥ ಮಾಡಿಕೊಳ್ಳಲು ಸಹಕಾರಿಯಾಗಿವೆ.

ಕರ್ನಾಟಕ ಚರಿತ್ರೆಯ ರಚನೆಯ ಸಂದರ್ಭದಲ್ಲಿ ಚಾಲ್ತಿಯಲ್ಲಿರುವ ಬಹುತೇಕ ಇತಿಹಾಸ ಬರವಣಿಗೆ ಕ್ರಮಗಳು ಕ್ರಮಿಸಿರುವ ಹಾದಿಯಿಂದ ಭಿನ್ನವಾಗಿ ಉಪೇಕ್ಷೆಗೆ ಒಳಪಟ್ಟ ವರ್ಗವನ್ನು ಕೇಂದ್ರವಾಗಿಟ್ಟುಕೊಂಡು ಮಾಡಿದ ಪ್ರಸ್ತುತ ಅಧ್ಯಯನವು ಉದ್ದೇಶಿತ ನಿಲುವಿಗೆ ಬದ್ಧವಾಗಲು ಮಹಾಪ್ರಬಂಧದ ಉದ್ದಕ್ಕೂ ಯತ್ನಿಸಿದೆ. ಕರ್ನಾಟಕ ಚರಿತ್ರೆ ಬರವಣಿಗೆಯಲ್ಲಿ ಅದರಲ್ಲೂ ಮಧ್ಯಕಾಲೀನ ಕರ್ನಾಟಕ ಚರಿತ್ರೆಯಲ್ಲಿ ದಲಿತರನ್ನು ಅಭ್ಯಾಸ ಮಾಡಿರುವ ಈ ಮಹಾಪ್ರಬಂಧವು ಕರ್ನಾಟಕದ ವೃತ್ತಿಪರ ಚರಿತ್ರೆಕಾರರಲ್ಲಿ ಚಾಲ್ತಿಯಲ್ಲಿರುವ ಸೈದ್ಧಾಂತಿಕ ವಿಚಾರಗಳನ್ನು ಕೇಂದ್ರೀಕರಿಸಿಕೊಂಡು ಅಧ್ಯಯನವನ್ನು ಮಾಡಲು ಈ ನಿಟ್ಟಿನಲ್ಲಿ ಅಲ್ಪ ಪ್ರಯತ್ನವನ್ನು ಮಾಡಿದೆ.

# ಪರಾಮರ್ಶನ ಗ್ರಂಥಗಳು

## ಪ್ರಕಟಿತ ಆಕರಗಳು

### ಕನ್ನಡದಲ್ಲಿ ಪ್ರಕಟಿತವಾದ ಗ್ರಂಥಗಳು


ಅಂಬೇಡ್ಕರ್ ಬಿ.ಆರ್., ಅನು: ಕುಮಾರವೆಂಕಣ್ಣ, ಅಸ್ಪೃಶ್ಯರು, ವಸಂತ ಪ್ರಕಾಶನ, ಬೆಂಗಳೂರು, ೧೯೭೩

ಅಭಯಕುಮಾರ್ ಕೌಕ್ರಾಡಿ, ಮುಗೇರರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು ಮತ್ತು ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿ, ಮಂಗಳೂರು, ೧೯೯೭

ಅಮರೇಶ ನುಗಡೋಣಿ(ಸಂ), ಬಸವಣ್ಣನ ವಚನಗಳು: ಸಾಂಸ್ಕೃತಿಕ ಮುಖಾಮುಖಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

ಅಮೃತ ಸೋಮೇಶ್ವರ(ಸಂ), ತುಳು ಪಾಡ್ದನ ಸಂಪುಟ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭

ಅರವಿಂದ ಮಾಲಗತ್ತಿ(ಸಂ), ದಲಿತ ಮಾರ್ಗ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೨

ಅರವಿಂದ ಮಾಲಗತ್ತಿ, ದಲಿತಯುಗ ಮತ್ತು ಕನ್ನಡ ಸಾಹಿತ್ಯ, ಚೇತನ ಬುಕ್ ಹೌಸ್, ಮೈಸೂರು, ೧೯೯೯

ಕಪಟರಾಳ ಕೃಷ್ಣರಾಯ, ಸುರಪುರ ಸಂಸ್ಥಾನದ ಇತಿಹಾಸ, ಶಕ್ತಿ ಪ್ರಕಾಶನ, ಬೆಂಗಳೂರು

ಕುಮಾರಸ್ವಾಮಿ ಕೆ.ಎಸ್., ಪ್ರಾಚೀನ ಕರ್ನಾಟಕದಲ್ಲಿ ಶಿಲ್ಪಾಚಾರ್ಯರು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೬

ಕಲಬುರ್ಗಿ ಎಂ.ಎಂ., ಮಾರ್ಗ-೧, ಕರ್ನಾಟಕ ಬುಕ್ ಏಜೆನ್ಸಿ, ಬೆಂಗಳೂರು, ೧೯೯೫

ಕಲಬುರ್ಗಿ ಎಂ.ಎಂ., ಮಾರ್ಗ-೪, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೦೪

ಕಲಬುರ್ಗಿ ಎಂ.ಎಂ., ಸಮಾಧಿ-ಬಲಿದಾನ-ವೀರಮರಣ ಸ್ಮಾರಕಗಳು, ಐಬಿಎಚ್ ಪ್ರಕಾಶನ, ಬೆಂಗಳೂರು, ೧೯೮೦

ಕಲಬುರ್ಗಿ ಎಂ.ಎಂ., ರಾಮಭಟ್ಟ ಬಿ.ಎಸ್.(ಸಂ), ಕೆಳದಿ ಸಂಸ್ಥಾನದ ಸಾಂಸ್ಕೃತಿಕ ಅಧ್ಯಯನ, ಮಲೆನಾಡು ವೀರಶೈವ ಅಧ್ಯಯನ ಸಂಸ್ಥೆ, ಆನಂದಪುರ, ೧೯೯೪

ಕಲಬುರ್ಗಿ ಎಂ.ಎಂ., ಕರ್ನಾಟಕದ ಕೈಫಿಯತ್ತುಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೪

ಕಲಬುರ್ಗಿ ಎಂ.ಎಂ.(ಸಂ), ಹರಿಹರನ ರಗಳೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

ಕಾಳೇಗೌಡ ನಾಗವಾರ, ಹುಚ್ಚಪ್ಪ ಮಾಸ್ತರ(ಸಂ), ಗಿರಿಜನ ಸಂಸ್ಕೃತಿ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೨೦೦೦

ಕೋಟಗಾನಹಳ್ಳಿ ರಾಮಯ್ಯ, ಸಿಂದ್ ಮಾದಿಗರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩

ಕೃಷ್ಣಯ್ಯ ಡಿ, ಕೊಡಗಿನ ಇತಿಹಾಸ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೫

ಕೆಳದಿ ವೆಂಕಟೇಶ ಜೋಯಿಸ್, ಕೆಳದಿ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೬

ಕೊಸಾಂಬಿ ಡಿ.ಡಿ., ಅನು: ಟಿ.ಎಸ್. ವೇಣುಗೋಪಾಲ್, ಶೈಲಜಾ, ಪುರಾಣ ಮತ್ತು ವಾಸ್ತವ, ಚಿಂತನ ಪ್ರಕಾಶನ, ಶಿರಸಿ, ೨೦೦೩

ಗಣಪತಿರಾವ್ ಐಗಳ್ ಎಂ., ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ, ೨೦೦೪

ಗೋಪಾಲನ್ ಬಾಲ, ಅನು: ಶ್ರೀಮತಿ ಎಚ್.ಎಸ್., ಪ್ರಾಚೀನ ಭಾರತದ ಚರಿತ್ರೆ: ಡಿ.ಡಿ. ಕೊಸಾಂಬಿಯವರ ಚಿಂತನೆಗಳು, ಬೆಳ್ಳಿಚುಕ್ಕಿ ಪ್ರಕಾಶನ, ಬೆಂಗಳೂರು, ೧೯೯೮

ಚಂದ್ರಶೇಖರ್ ಎಸ್., ಸಾಹಿತ್ಯ ಮತ್ತು ಚರಿತ್ರೆ, ನಮ್ಮ ಪ್ರಕಾಶನ, ತಿಪಟೂರು, ೧೯೯೯

ಚಿದಾನಂದಮೂರ್ತಿ ಎಂ., ಜನ-ಜನಪದ-ಜಾನಪದ, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೦೨

ಚಿದಾನಂದಮೂರ್ತಿ ಎಂ., ಹೊಸತು ಹೊಸತು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೧೯೯೮

ಚಿದಾನಂದಮೂರ್ತಿ ಎಂ., ವೀರಗಲ್ಲುಗಳು ಮತ್ತು ಮಾಸ್ತಿಕಲ್ಲುಗಳು, ಐಬಿಎಚ್ ಪ್ರಕಾಶನ, ಬೆಂಗಳೂರು, ೧೯೮೪

ಚಿದಾನಂದಮೂರ್ತಿ ಎಂ., ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೫

ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೦೨

ಚಿನ್ನಸ್ವಾಮಿ ಸೋಸಲೆ ಎನ್., ಸಾಮ್ರಾಜ್ಯ ಮತ್ತು ಸಂಸ್ಥಾನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

ಚೆನ್ನಕ್ಕ ಎಲಿಗಾರ, ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೦

ಜವರಯ್ಯ ಮ.ನ., ದಲಿತ ವರ್ಗದ ಶರಣರು ಮತ್ತು ಶರಣೆಯರು ಒಂದು ಅಧ್ಯಯನ, ಸಿದ್ಧಾರ್ಥ ಗ್ರಂಥಮಾಲೆ, ಮೈಸೂರು, ೧೯೯೭

ಜವರಯ್ಯ ಮ.ನ., ಅಂಬೇಡ್ಕರ್ ಮತ್ತು ಸಾಮಾಜಿಕ ನ್ಯಾಯ, ಸಿದ್ಧಾರ್ಥ ಗ್ರಂಥಮಾಲೆ, ಮೈಸೂರು, ೧೯೯೬

ತಳವಾರ ಎನ್.ಎಮ್.(ಸಂ), ನಂಜುಂಡ ಕವಿಯ ರಾಮನಾಥ ಚರಿತೆ, ಅಭಿರುಚಿ ಪ್ರಕಾಶನ, ಮೈಸೂರು, ೨೦೦೨

ತಂಬಂಡ ವಿಜಯ್ ಪೂಣಚ್ಚ, ಆಧುನಿಕ ಕೊಡಗು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

ತಾಳ್ತಜೆ ವಸಂತಕುಮಾರ್, ಕರ್ನಾಟಕದಲ್ಲಿ ಬೌದ್ಧಧರ್ಮ, ವಿನಯ ಪ್ರಕಾಶನ, ಬೆಂಗಳೂರು, ೧೯೮೮

ಧರ್ಮಾನಂದ ಕೊಸಾಂಬೀ, (ಅನು: ಆದ್ಯರಂಗಾಚಾರ್ಯ), ಭಗವಾನ್ ಬುದ್ಧ, ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೮

ನಂಜುಂಡಾರಾಧ್ಯರು ಎಂ.ಜಿ., ಹಿಂದೂಧರ್ಮ ಮತ್ತು ಅಸ್ಪೃಶ್ಯತೆ, ಶ್ರೀ ಜಗದ್ಗುರು ಗಂಗಾಧರ ಧರ್ಮ ಪ್ರಚಾರಕ ಮಂಡಳ, ಮೂರುಸಾವಿರಮಠ, ಹುಬ್ಬಳ್ಳಿ, ೧೯೮೨

ನಾಗೇಶ್ ಹೆಚ್.ವಿ., ಗ್ರಾಮ ವ್ಯಾಸಂಗ, ಚಂದ್ರನಾಥ ಪ್ರಕಾಶನ, ಧಾರವಾಡ, ೧೯೮೧

ನಾಗೇಗೌಡ ಎಚ್.ಎಲ್.(ಸಂ), ಪ್ರವಾಸಿ ಕಂಡ ಇಂಡಿಯಾ, ಸಂಪುಟ-೧, ಮೈಸೂರು ವಿಶ್ವವಿದ್ಯಾನಿಲಯ, ೧೯೬೫

ನಾವಡ ಎ.ವಿ., ಗಾಯತ್ರಿ ನಾವಡ(ಸಂ), ಸಾವಿರಾರು ಕೀರ್ತನೆಗಳು, ಅಂಕಿತ ಪ್ರಕಾಶನ, ಬೆಂಗಳೂರು, ೨೦೦೨

ಪಾಂಡುರಂಗ ವಾಮನ ಕಾಣೆ, ಅನು; ಎಸ್.ಕೆ. ರಾಮಚಂದ್ರರಾವ್, ಎನ್.ಎಸ್. ಶಾರದಾ ಪ್ರಸಾದ್, ಧರ್ಮಶಾಸ್ತ್ರದ ಇತಿಹಾಸ, ಸಂಪುಟ-೧, ಭಾಗ-೨, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೨೦೦೩

ಪುಟ್ಟಯ್ಯ ಬಿ.ಎಂ.(ಸಂ), ವಡ್ಡಾರಾಧನೆ: ಸಾಂಸ್ಕೃತಿಕ ಮುಖಾಮುಖಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

ಪುರುಷೋತ್ತಮ ಬಿಳಿಮಲೆ, ದಲಿತ ಜಗತ್ತು, ಹೊಸದಿಕ್ಕು ಪ್ರಕಾಶನ, ಬೆಂಗಳೂರು, ೧೯೮೯

ಬಸವರಾಜ ಕಲ್ಗುಡಿ, ಅನುಭಾವ: ಸಾಂಸ್ಕೃತಿಕ ಸಮಸ್ಯೆ ಮತ್ತು ಹುಡುಕಾಟ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೧

ಬಸವರಾಜ ಕಲ್ಗುಡಿ, ಮಹಾಸತಿ ಆಚರಣೆ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೮೪

ಬಸವರಾಜ ಸಬರದ, ವಚನಕಾರರು ಮತ್ತು ದಲಿತ ಸಂವೇದನೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

ಬಸವರಾಜ ಸಬರದ, ಶಾಸನಗಳು: ಪ್ರಭುತ್ವ ಮತ್ತು ಜನತೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

ಮಲ್ಲಾಪುರ ಬಿ.ವಿ.(ಸಂ), ನಯಸೇನ ಮತ್ತು ಅವನ ಕೃತಿಗಳು, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೮

ಮಹದೇವ ಸಿ, ಕರ್ನಾಟಕದ ಪುರಾತತ್ವ ಶೋಧ, ಲಕ್ಷ್ಮಿ ಪ್ರಕಾಶನ, ಶ್ರೀರಂಗಪಟ್ಟಣ, ೨೦೦೧

ಮಾಲತಿ ಕೆ. ಮೂರ್ತಿ ಮತ್ತು ಹೆಚ್.ವಿ. ನರಸಿಂಹಮೂರ್ತಿ, ಕುಂದಾಪುರ ತಾಲೂಕು: ಒಂದು ಅಧ್ಯಯನ, ಭಂಡಾರ್‌ಕಾರ್ ಆರ್ಟ್ಸ್ ಮತ್ತು ಸೈನ್ಸ್ ಕಾಲೇಜ್, ಕುಂದಾಪುರ, ೧೯೯೪

ಮಿರ್ಜಿ ಅಣ್ಣಾರಾಯ, ಜೈನ ಧರ್ಮ, ಶಾಂತಿಸೇವಾ ಸದನ, ಸೇಡಬಾಳ, ಬೆಳಗಾಂ, ೧೯೯೭

ಮೈತ್ರಿ ಕೆ.ಎಂ., ಬುಡಕಟ್ಟು ಕುಲಕಸುಬುಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

ಮೋಹನ್‌ಕೃಷ್ಣ ರೈ, ಜನತೆ ಮತ್ತು ಪ್ರಭುತ್ವ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫

ಯೋಗೀಶ್ವರಪ್ಪ ಡಿ.ಎನ್., ಹಾಗಲವಾಡಿ ನಾಯಕರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ,

ರಂಗನಾಥ ಶರ್ಮ(ಸಂ), ಅಮರಸಿಂಹನ ಅಮರಕೋಶ, ಸುವಿದ್ಯಾ ಪ್ರಕಾಶನ, ಬೆಂಗಳೂರು, ೧೯೯೬

ರಾಜಶೇಖರಯ್ಯ ಎ.ಎಂ.(ಸಂ), ಡಾ. ಬಾಬಾಸಾಹೇಬ್ ಅಂಬೇಡ್ಕರ್ ಬರಹಗಳು ಮತ್ತು ಭಾಷಣಗಳು, ಸಂಪುಟ - ೩, ೫, ೭, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೯೮

ರಾಜಾರಾಮ ಹೆಗಡೆ, ಲೌಕಿಕ-ಅಲೌಕಿಕ, ಆನಂದಕಂದ ಗ್ರಂಥಮಾಲೆ, ಮಲ್ಲಾಡಿಹಳ್ಳಿ, ೨೦೦೧

ರಾಜಾರಾಮ ಹೆಗಡೆ, ಅಶೋಕ ಶೆಟ್ಟರ್(ಸಂ), ಮಲೆಕರ್ನಾಟಕದ ಅರಸು ಮನೆತನಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

ರಾಮಚಂದ್ರರಾವ್ ಸಾ.ಕೃ., ದಾಸಸಾಹಿತ್ಯ ಮತ್ತು ಸಂಸ್ಕೃತಿ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೩

ರಾಮಶೇಷನ್ ಎನ್.ಕೆ., ಹರಿದಾಸ ಆಂದೋಲನ, ಮೈಸೂರು, ೧೯೯೧

ರಾಮೇಗೌಡ, ಕನ್ನಡ ಕಾವ್ಯಗಳಲ್ಲಿ ಐತಿಹಾಸಿಕ ವಿಚಾರಗಳು, ಚಿತ್ರಕೂಟ, ಮೈಸೂರು, ೧೯೯೨

ಲಕ್ಕಪ್ಪಗೌಡ ಎಚ್.ಜೆ.(ಸಂ), ಕರ್ನಾಟಕದ ಬುಡಕಟ್ಟುಗಳು, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೧೯೯೮

ಲಕ್ಷ್ಮಣ್ ತೆಲಗಾವಿ, ಹಿಂದುಳಿದ ವರ್ಗಗಳ ಮತ್ತು ದಲಿತ ಚಳವಳಿಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭

ವಸು, ಮೌಖಿಕ ಚರಿತ್ರೆ, ಅಂಕಿತ ಪುಸ್ತಕ, ಬೆಂಗಳೂರು, ೨೦೦೪

ವಿಜಯ್ ಪೂಣಚ್ಚ ತಂಬಂಡ, ಪಳಮೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫

ವಿದ್ಯಾಶಂಕರ ಎಸ್.(ಸಂ), ಸಂಕೀರ್ಣ ವಚನ ಸಂಪುಟ-೨, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೯೩

ವಿದ್ಯಾಶಂಕರ ಎಸ್., ವಚನಾನುಶೀಲನ, ಸ್ನೇಹ ಪ್ರಕಾಶನ, ಬೆಂಗಳೂರು, ೧೯೮೯

ವಿವಿಧ ಲೇಖಕರು, ವೇದಯುಗ, ಭಾಗ-೧, ಭಾರತೀಯ ವಿದ್ಯಾಭವನ, ಬೆಂಗಳೂರು, ೨೦೦೬

ವಿವಿಧ ಲೇಖಕರು, ಕನ್ನಡ ಸಾಹಿತ್ಯದಲ್ಲಿ ಅಸ್ಪೃಶ್ಯತೆಯ ಪರಿಕಲ್ಪನೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩

ವಿವಿಧ ಲೇಖಕರು, ಅಭಿಜಾತ ಯುಗ, ಭಾರತೀಯ ವಿದ್ಯಾಭವನ, ಬೆಂಗಳೂರು, ೨೦೦೦

ವಿರೂಪಾಕ್ಷಿ ಪೂಜಾರಹಳ್ಳಿ, ಕರ್ನಾಟಕದಲ್ಲಿ ತಳವಾರಿಕೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬

ವಿವೇಕ ರೈ ಬಿ.ಎ., ತುಳು ಜನಪದ ಸಾಹಿತ್ಯ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೫

ವಿವೇಕ ರೈ ಬಿ.ಎ.(ಸಂ), ಪ್ರವಾಸಿ ಕಂಡ ವಿಜಯನಗರ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬

ವೃಷಭೇಂದ್ರಸ್ವಾಮಿ(ಸಂ), ಜಾನಪದ ಸಾಹಿತ್ಯ ದರ್ಶನ-೯, ಜುಂಜಪ್ಪ, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೮

ವೀರಣ್ಣ ರಾಜೂರ(ಸಂ), ಸಂಕೀರ್ಣ ವಚನ ಸಂಪುಟ-೫, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೯೩

ಷೇಕ್ ಅಲಿ ಬಿ.(ಸಂ), ಕರ್ನಾಟಕ ಚರಿತ್ರೆ, ಸಂಪುಟ-೪, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭

ಶರ್ಮ ಆರ್.ಎಸ್., ಅನು: ವಿವಿಧ ಲೇಖಕರು, ಪ್ರಾಚೀನ ಭಾರತದಲ್ಲಿ ಶೂದ್ರರು, ನವಕರ್ನಾಟಕ, ಬೆಂಗಳೂರು, ೨೦೦೨

ಶರ್ಮ ಆರ್.ಎಸ್., ಅನು: ಶಂಕರನಾರಾಯಣರಾವ್ ಎನ್.ಪಿ., ಪ್ರಾಚೀನ ಭಾರತ, ನವಕರ್ನಾಟಕ ಪಬ್ಲಿಕೇಷನ್, ಬೆಂಗಳೂರು, ೧೯೯೭

ಶ್ಯಾಮಾಚರಣ ದುಬೆ, ಅನು: ಅನಂತರಾಮಯ್ಯ ಆರ್.ಎಲ್., ಭಾರತೀಯ ಸಮಾಜ, ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ, ೧೯೯೦

ಶಿವಕುಮಾರಸ್ವಾಮಿ ಸಿ.ಎಸ್., ಕರ್ನಾಟಕ ಜಾತ್ರೆಗಳು, ಮೈಸೂರು ವಿಶ್ವವಿದ್ಯಾನಿಲಯ, ೧೯೮೮

ಶಿವಣ್ಣ ಕೆ.ಎಸ್.(ಸಂ), ಕರ್ನಾಟಕ ಚರಿತ್ರೆ, ಸಂಪುಟ-೩, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭

ಶೈಲಾ ಟಿ. ವರ್ಮಾ, ತುಳುನಾಡಿನ ಶಾಸನಗಳು: ಸಾಂಸ್ಕೃತಿಕ ಅಧ್ಯಯನ, ಜ್ಞಾನೋದಯ ಪ್ರಕಾಶನ, ಬೆಂಗಳೂರು, ೨೦೦೨

ಶೆಟ್ಟರ್ ಷ., ಅನು: ಸದಾನಂದ ಕಾನವಳ್ಳಿ, ಷ. ಶೆಟ್ಟರ್, ಸಾವಿಗೆ ಆಹ್ವಾನ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೪

ಶೇಷಶಾಸ್ತ್ರಿ ಆರ್., ಕರ್ನಾಟಕದ ವೀರಗಲ್ಲುಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೨

ಶೇಠ್ ಬಿ.ಎಸ್., ಕರ್ನಾಟಕದಲ್ಲಿ ಸತಿ ಪದ್ಧತಿ, ಬೆಳಗಾವಿ, ೧೯೯೧

ಶ್ರೀಕಂಠಯ್ಯ, ವಿಜಯನಗರ ಕಾಲದ ಕನ್ನಡ ಸಾಹಿತ್ಯದಲ್ಲಿ ಜನಜೀವನ ಚಿತ್ರ, ಗೀತಾ ಬುಕ್ ಹೌಸ್, ಮೈಸೂರು, ೧೯೮೩

ಶ್ರೀ ಪಾದ ಅಮೃತ ಡಾಂಗೆ, ಅನು: ಅನಂತಕೃಷ್ಣ ಹೆಬ್ಬಾರ್ ಮತ್ತು ರಾಮಚಂದ್ರ ಉಡುಪ, ಭಾರತ ಸಂಘಜೀವನದಿಂದ ಗುಲಾಮಗಿರಿಗೆ, ಅಭಿವ್ಯಕ್ತಿ ಪ್ರಕಾಶನ, ಮಂಗಳೂರು, ೧೯೮೩

ಶ್ರೀಧರ್ ಎಚ್., ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಯುದ್ಧಕಲೆ, ಶಿವರಾಮಕಾರಂತ ಅಧ್ಯಯನ ಕೇಂದ್ರ, ಪುತ್ತೂರು, ೨೦೦೨

ಶ್ರೀನಿವಾಸಮೂರ್ತಿ ಎಚ್.ವಿ., ರಾಮಕೃಷ್ಣನ್ ಆರ್., ಸಮಗ್ರ ಕರ್ನಾಟಕ ಚರಿತ್ರೆ, ಓರಿಯಂಟ್ ಲಾಂಗಮನ್, ಬೆಂಗಳೂರು, ೧೯೯೫

ಸುಧಾಕರ(ಸಂ), ಕನಕದಾಸರ ಕೀರ್ತನೆಗಳು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು,
ಸುಭಾಷ್ ಭರಣಿ, ಧರೆಗೆ ದೊಡ್ಡವರು, ಸಿದ್ಧಾರ್ಥ ಗ್ರಂಥಮಾಲೆ, ಮೈಸೂರು, ೨೦೦೬
ಸುರೇಂದ್ರರಾವ್ ಬಿ.(ಸಂ), ಕರ್ನಾಟಕ ಚರಿತ್ರೆ, ಸಂಪುಟ-೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭
ಸಾವುಕಾರ್ ಎಸ್. ಕಾಂಬಳೆ, ಲಿಂಗಾಯತ ಅಸ್ಪೃಶ್ಯರು: ಒಂದು ಅಧ್ಯಯನ, ವೀರಶೈವ ಅಧ್ಯಯನ ಸಂಸ್ಥೆ, ಗದಗ, ೨೦೦೩
ಹಂಪ ನಾಗರಾಜಯ್ಯ(ಸಂ), ಜೈನ ಕಥಾಕೋಶ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭
ಹಿರೇಮಠ ಬಿ.ಆರ್., ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಧಾರವಾಡ, ೧೯೮೬
ಹಿರೇಮಠ ಎಸ್.ಎಸ್., ಜನಪದ ಸಮಾಜ ಸಂಸ್ಕೃತಿ, ಸೂರ್ಯ ಪ್ರಕಾಶ, ಮಲ್ಲಾಡಿಹಳ್ಳಿ, ೨೦೦೫
ಹಿರೇಮಠ ಎಸ್.ಎಸ್., ಜಾತ್ರೆಗಳು ಭಾಗ-೨, ಸಮತಾ ಪ್ರಕಾಶ, ಹೊಸಪೇಟೆ, ೧೯೯೩
ಹಿರೇಮಠ ಎಸ್.ಎಸ್., ಸಮಾಜ ಸಂಸ್ಕೃತಿ ಸಂಘರ್ಷ, ಸಿವಿಜಿ ಪಬ್ಲಿಕೇಷನ್ಸ್, ಬೆಂಗಳೂರು, ೨೦೦೫
ಹಿರೇಮಠ ಎಸ್.ಎಸ್., ದಲಿತ ಸಂಸ್ಕೃತಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧
ಹಿರೇಮಲ್ಲೂರು ಈಶ್ವರನ್, ಲಿಂಗಾಯತ ಧರ್ಮ: ಒಂದು ಅಧ್ಯಯನ, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು, ೧೯೯೭

## ಜನಪದ ಮಹಾಕಾವ್ಯಗಳು

ಅಂಬಳಿಕೆ ಹಿರಿಯಣ್ಣ, ಜನಪದ ಮಹಾಕಾವ್ಯಗಳು, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೮
ಕೇಶವನ್ ಪ್ರಸಾದ್ ಕೆ.(ಸಂ), ಮಲೆ ಮಾದೇಶ್ವರ ಮಹಾಕಾವ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭
ಗಂಗಾಧರ ದೈವಜ್ಞ (ಸಂ), ಮಾಳಿಂಗರಾಯನ ಕಾವ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯
ಚಲುವರಾಜು (ಸಂ), ಜುಂಜಪ್ಪ, ಮಹಾಕಾವ್ಯ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭
ನಾವಡ ಎ.ವಿ. (ಸಂ), ಸಿರಿಪಾಡ್ದನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯
ಪರಮಶಿವಯ್ಯ ಜೀ.ಶಂ., ದಕ್ಷಿಣ ಕರ್ನಾಟಕದ ಜನಪದ ಕಾವ್ಯ ಸಂಪ್ರದಾಯಗಳು, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ೧೯೭೯
ಬೋರಲಿಂಗಯ್ಯ ಹಿ.ಚಿ.(ಸಂ), ಮಂಟೇಸ್ವಾಮಿ ಮಹಾಕಾವ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭
ಮಂಜುನಾಥ ಬೇವಿನಕಟ್ಟಿ(ಸಂ), ಮೈಲಾರಲಿಂಗನ ಕಾವ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯
ಮಂಜುನಾಥ ಬೇವಿನಕಟ್ಟಿ, ಮಾತಂಗಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೬

ಮುದೇನೂರು ನಿಂಗಪ್ಪ, ಜನಪದ ಮಹಾಕಾವ್ಯಗಳಲ್ಲಿ ಸಾಂಸ್ಕೃತಿಕ ವೀರರು, ಸಿವಿಜಿ ಪಬ್ಲಿಕೇಷನ್ಸ್, ಬೆಂಗಳೂರು, ೨೦೦೪

ಮೊಗಳ್ಳಿ ಗಣೇಶ್, ಮೌಖಿಕ ಕಥನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬

ಮೈತ್ರಿ ಕೆ.ಎಂ.(ಸಂ), ಕುಮಾರರಾಮ ಮತ್ತು ಕೃಷ್ಣಗೊಲ್ಲರ ಮಹಾಕಾವ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭

ವೆಂಕಟೇಶ ಇಂದ್ವಾಡಿ(ಸಂ), ಗೋಣಿ ಬಸಪ್ಪನ ಕಾವ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬

ವೆಂಕಟೇಶ ಇಂದ್ವಾಡಿ(ಸಂ), ಮಂಟೇಸ್ವಾಮಿ ಕಾವ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

ಶಂಕರನಾರಾಯಣ ತೀ.ನಂ., ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ೧೯೮೨

ಶಂಕರನಾರಾಯಣ ತೀ.ನಂ., ಕರ್ನಾಟಕ ಜನಪದ ಮಹಾಕಾವ್ಯಗಳು, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೧೯೯೮

ಸ್ವಾಮಿ ಬಿ.ಎಸ್., ಮಲೆಯ ಮಾದೇಶ್ವರ ಜನಪದ ಮಹಾಕಾವ್ಯ, ದಾಮಿನಿ ಪ್ರಕಾಶನ, ಬೆಂಗಳೂರು, ೨೦೦೧

ಸಿದ್ಧಲಿಂಗಯ್ಯ, ಗ್ರಾಮದೇವತೆಗಳು, ಮೂಲಭಾರತಿ ಪ್ರಕಾಶನ, ಬೆಂಗಳೂರು, ೧೯೯೭

**ಅಪ್ರಕಟಿತ ಆಕರಗಳು**

ಗುರುರಾಜ ಕೆ.ಎ., ಮಧ್ಯಕಾಲೀನ ಅಲಕ್ಷಿತ ಸಾಹಿತ್ಯ, ಎಂ.ಫಿಲ್. ನಿಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೫

ನಂಚರಯ್ಯ, ಕ್ಯಾಸ್ಟ್ ಆಂಡ್ ಲ್ಯಾಂಡ್: ಎ ಸ್ಟಡಿ ಆಫ್ ಶಿಫ್ಟ್ ಇನ್ ಲ್ಯಾಂಡ್ ಓನರ್‌ಶಿಪ್ ಇನ್ ಸೌತ್ ಇಂಡಿಯಾ, ಪಿಎಚ್.ಡಿ. ಥೀಸಿಸ್, ಆಂಧ್ರ ವಿಶ್ವವಿದ್ಯಾಲಯ, ೧೯೮೫

ನಿಂಗಪ್ಪ ಎಚ್., ಜನಪದ ಮಹಾಕಾವ್ಯಗಳಲ್ಲಿ ಸಾಂಸ್ಕೃತಿಕ ವೀರರು, ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

ಪುಟ್ಟಯ್ಯ ಬಿ.ಎಂ., ಅಲಕ್ಷಿತ ವಚನಕಾರರ ಲೋಕದೃಷ್ಟಿ, ಎಂ.ಫಿಲ್. ನಿಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೫

ರಾಜಕುಮಾರ ಕೆ., ಸ್ವಾತಂತ್ರ್ಯೋತ್ತರ ಕರ್ನಾಟಕದಲ್ಲಿ ಮಾದಿಗರು: ಚಾರಿತ್ರಿಕ ಅಧ್ಯಯನ, ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

ಸುಧಾ ಎ.ಸಿ., ಜನಪದ ಕಾವ್ಯಗಳಲ್ಲಿ ಬಲಿದಾನ: ಒಂದು ಅಧ್ಯಯನ, ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫

ಸೋಮಶೇಖರ್ ಎಸ್.ವೈ., ವಿಜಯನಗರ ಕಾಲದ ಸೈನ್ಯ ವ್ಯವಸ್ಥೆ ಮತ್ತು ಯುದ್ಧನೀತಿ, ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

ಸಿಂಗೆ ಎಸ್.ಆರ್., ಹೊಲೆಯರು: ಒಂದು ಅಧ್ಯಯನ, ಪಿಎಚ್.ಡಿ. ಮಹಾಪ್ರಬಂಧ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೧

ಶುಭಾ, ಸುರಪುರ: ವಿಮೋಚನಾ ಹೋರಾಟ, ಎಂ.ಫಿಲ್. ನಿಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭

ಹನುಮಂತರಾಯ ಜಿ., ಜನಪದ ಮಹಾಕಾವ್ಯಗಳಲ್ಲಿ ದಲಿತ ಸಂವೇದನೆ, ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫

## ಶಾಸನ ಸಂಪುಟಗಳು ಮತ್ತು ವರದಿಗಳು

ಬಾಂಬೆ-ಕರ್ನಾಟಕ ಇನ್ಸ್‌ಕ್ರಿಪ್ಷನ್ಸ್, ಆರ್ಕಿಯಾಲಜಿಕಲ್ ಸರ್ವೆ ಆಫ್ ಇಂಡಿಯಾ, ನ್ಯೂ ಡೆಲ್ಲಿ,

ಎಪಿಗ್ರಾಫಿಯಾ ಕರ್ನಾಟಿಕ ಸಂಪುಟಗಳು, ಸಂಪುಟ ೧-೧೨, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಎಪಿಗ್ರಾಫಿಯಾ ಇಂಡಿಕಾ ಸಂಪುಟಗಳು, ಸಂಪುಟ-XX, ದಿ ಡೈರೆಕ್ಟರ್ ಜನರಲ್, ಆರ್ಕಿಯಾಲಾಜಿಕಲ್ ಸರ್ವೆ ಆಫ್ ಇಂಡಿಯಾ, ನ್ಯೂ ಡೆಲ್ಲಿ

ಸುಬ್ರಮಣ್ಯ ಅಯ್ಯರ್ ಕೆ.ವಿ., ಸೌತ್ ಇಂಡಿಯನ್ ಇನ್ಸ್ಕ್ರಿಪ್ಷನ್ಸ್ ಸಂಪುಟಗಳು, ಗವರ್ನಮೆಂಟ್ ಆಫ್ ಇಂಡಿಯಾ, ಸೆಂಟ್ರಲ್ ಪಬ್ಲಿಕೇಷನ್ ಬ್ರಾಂಚ್, ಕೊಲ್ಕತ್ತಾ

ದೇವರಕೊಂಡಾರೆಡ್ಡಿ (ಸಂ), ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ: ೧, ೨, ೩, ೭, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಇಂಡಿಯನ್ ಆಂಟಿಕ್ವರಿ, ಸಂ.XIX, ಸ್ವಾತಿ ಪಬ್ಲಿಕೇಷನ್ಸ್, ಡೆಲ್ಲಿ, ೧೯೮೫

ಮೈಸೂರು ಆರ್ಕಿಯಾಲಾಜಿಕಲ್ ರಿಪೋರ್ಟ್

## ಗ್ಯಾಝೆಟಿಯರ್ ಮತ್ತು ವಿಶ್ವಕೋಶಗಳು

ಕೃಷ್ಣಮೂರ್ತಿ ಹನೂರ್ (ಸಂ), ಎನ್‌ಸೈಕ್ಲೊಪಿಡಿಯಾ ಆಫ್ ದಿ ಫೋಕ್ ಕಲ್ಚರ್ ಆಫ್ ಕರ್ನಾಟಕ, ಸಂ-೧, ಇನ್‌ಸ್ಟಿಟ್ಯೂಟ್ ಆಫ್ ಏಷಿಯನ್ ಸ್ಟಡೀಸ್, ಮದ್ರಾಸ್, ೧೯೯೧

ಭಾರತ ಗ್ಯಾಝೆಟಿಯರ್, ಸಂಪುಟ-೨, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಕರ್ನಾಟಕ ಸರ್ಕಾರ, ಬೆಂಗಳೂರು, ೧೯೮೭

ವೆಂಕಟ ರಂಗೋ ಕಟ್ಟಿ (ಭಾಷಾ), ಮುಂಬೈ ಕರ್ನಾಟಕ ಗ್ಯಾಝೆಟಿಯರ್, ಗವರ್ನಮೆಂಟ್ ಸೆಂಟ್ರಲ್ ಬುಕ್ ಡಿಪೊ, ಮುಂಬೈ, ೧೮೯೩

ಸೂರ್ಯನಾಥ್ ಯು. ಕಾಮತ್ (ಮು.ಸಂ.), ಕರ್ನಾಟಕ ರಾಜ್ಯ ಗ್ಯಾಝೆಟಿಯರ್- ಕೊಡಗು ಜಿಲ್ಲೆ, ಕರ್ನಾಟಕ ರಾಜ್ಯ ಸರ್ಕಾರ, ಬೆಂಗಳೂರು, ೧೯೯೨

ಹಯವದನರಾವ್ ಸಿ.(ಸಂ), ಮೈಸೂರು ಗ್ಯಾಝೆಟಿಯರ್, ಸಂಪುಟ ೧-೩, ಬಿ.ಆರ್. ಪಬ್ಲಿಷಿಂಗ್, ೧೯೮೪

ತಿಪ್ಪೇರುದ್ರಸ್ವಾಮಿ ಎಚ್.(ಸಂ), ಕನ್ನಡ ವಿಶ್ವಕೋಶ, ಸಂಪುಟ-೧೨, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೮೬

ವೆಂಕಟಸುಬ್ಬಯ್ಯ ಜಿ., ಕನ್ನಡ ನಿಘಂಟು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೭೯

ಸಂಜಯ್ ಪಾಸ್ವಾನ್, ಪರಮಾನ್ಶಿ ಜೈದೇವ (ಸಂ), ಎನ್‌ಸೈಕ್ಲೊಪಿಡಿಯಾ ಆಫ್ ದಲಿತ್ಸ್ ಇನ್ ಇಂಡಿಯಾ, ಕಲ್ಪಜ್ ಪಬ್ಲಿಕೇಷನ್ಸ್, ಡೆಲ್ಲಿ, ೨೦೦೪

## ಸಂಶೋಧನಾ ಪತ್ರಿಕೆಗಳು/ನಿಯತಕಾಲಿಕೆಗಳು

ನಾಗರಾಜ ಎಂ.ಜಿ., ಕೃಷ್ಣಮೂರ್ತಿ ಪಿ.ವಿ.(ಸಂ), ಇತಿಹಾಸ ದರ್ಶನ, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು, ೧೯೯೯

ರಹಮತ್ ತರೀಕೆರೆ (ಸಂ), ಕನ್ನಡ ಅಧ್ಯಯನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬

ರಾಜಶೇಖರ್ ವಿ.ಟಿ. (ಸಂ), ದಲಿತ್ ವಾಯ್ಸ್, ಸಂಪುಟ-೨೬, ಬೆಂಗಳೂರು, ೨೦೦೭

ದಿ ಇಂಡಿಯನ್ ಎಕನಾಮಿಕ್ ಆಂಡ್ ಸೋಷಿಯಲ್ ಹಿಸ್ಟರಿ ರಿವಿವ್, ನ್ಯೂ ಡೆಲ್ಲಿ, ಸಂ.XLI, ಸೇಜ್ ಪಬ್ಲಿಕೇಷನ್ಸ್, ೨೦೦೪

ಲಕ್ಷ್ಮಣ್ ತೆಲಗಾವಿ (ಸಂ), ಚರಿತ್ರೆ ಅಧ್ಯಯನ, ಸಂಪುಟ-೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬

ವಿಜಯ್ ಪೂಣಚ್ಚ ತಂಬಂಡ (ಸಂ), ಜರ್ನಲ್ ಆಫ್ ಕರ್ನಾಟಕ ಸ್ಟಡೀಸ್, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫-೦೬

ಬೋರಲಿಂಗಯ್ಯ ಹಿ.ಚಿ., ಪ್ರಭಾಕರ್ ಎ.ಎಸ್.(ಸಂ), ಬುಡಕಟ್ಟು ಅಧ್ಯಯನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫

ಭಟ್‌ಸೂರಿ ಕೆ.ಜಿ.(ಸಂ), ಶಾಸನ ಅಧ್ಯಯನ, ಸಂಪುಟ-೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬

ವೃಷಭೇಂದ್ರಸ್ವಾಮಿ (ಸಂ), ಜಾನಪದ ಸಾಹಿತ್ಯ ದರ್ಶನ-೯, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೮

ವೀರತಪ್ಪ (ಸಂ), ಪ್ರೊಸೀಡಿಂಗ್ಸ್ ಆಫ್ ದಿ ಕರ್ನಾಟಕ ಹಿಸ್ಟರಿ ಕಾಂಗ್ರೆಸ್, ಭಾರತಿ ಪ್ರಕಾಶನ, ಮೈಸೂರು, ೧೯೮೭

ಪ್ರೊಸೀಡಿಂಗ್ಸ್ ಆಫ್ ದಿ ಇಂಡಿಯನ್ ಹಿಸ್ಟರಿ ಕಾಂಗ್ರೆಸ್, ೬೪ನೇ ಸೆಷನ್ ಮೈಸೂರು ೨೦೦೩, ಇಂಡಿಯನ್ ಹಿಸ್ಟರಿ ಕಾಂಗ್ರೆಸ್, ನ್ಯೂ ಡೆಲ್ಲಿ, ೨೦೦೪

ಸುಕುಮಾರ್ ಭಟ್ಟಾಚಾರ್ಯ (ಸಂ), ದಿ ಕ್ವಾರ್ಟರ್ಲಿ ರಿವಿವ್ ಆಫ್ ಹಿಸ್ಟಾರಿಕಲ್ ಸ್ಟಡೀಸ್, ಇನ್‌ಸ್ಟಿಟ್ಯೂಟ್ ಆಫ್ ಹಿಸ್ಟಾರಿಕಲ್ ಸ್ಟಡೀಸ್, ಕೊಲ್ಕತ್ತ, ೨೦೦೪

ಸೂರ್ಯನಾಥ್ ಯು. ಕಾಮತ್ (ಸಂ), ದಿ ಕ್ವಾರ್ಟರ್ಲಿ ಜರ್ನಲ್ ಆಫ್ ದಿ ಮಿಥಿಕ್ ಸೊಸೈಟಿ, ಸಂ.XLVI, ಮಿಥಿಕ್ ಸೊಸೈಟಿ, ಬೆಂಗಳೂರು, ೨೦೦೫

ಗೋಪಾಲ್ ಎಸ್.(ಸಂ), ಸ್ಟಡೀಸ್ ಇನ್ ಹಿಸ್ಟರಿ, ಸಂ.XII, ನಂ.೧, ಸೇಜ್ ಪಬ್ಲಿಕೇಷನ್ಸ್, ನ್ಯೂ ಡೆಲ್ಲಿ, ೧೯೯೬

## ಇಂಗ್ಲಿಶ್‌ನಲ್ಲಿ ಪ್ರಕಟವಾದ ಗ್ರಂಥಗಳು


Alivar Mendelson, Marika vicziany, The Untouchables, Foundation Books, New Delhi, 2000

Bhattacharya N., Ancient Indian History and Civilization, Manohar, New Delhi, 1998

Burton Stein, Peasant State and Society in Medieval South India, Oxford University Press, New Delhi, 1980

Dikshit G.S., Local Self Government in Medieval Karnataka, Karnataka University, Dharwad, 1974

Edgar Thurston and Rangachari K., Castes and Tribes of Southern India, Asian Educational Service, New Delhi, 1987

Francis Buchanan, A Journey From Madras, Through the Countries of Mysore, Canara and Malabar, Vol-II, Asian Educational Services, New Delhi, 1988

Gail Omvedt, Dalit Vision, Sage Publication, New Delhi, 1995

Ghurye G.S., Caste and Race in India, Popular Prakashan, Bombay, 1990

Gopal B.R.(Ed), Vijayanagara Inscriptions Government of Karnataka, Mysore

Gururajchar S., Some Aspects of Economic and Social Life in Karnataka, Mysore University, Mysore, 1974

Hermann Kulke(Ed), The State in India, Oxford University Press, New Delhi, 1995

Iyer L.K., The Mysore Tribes and Castes, Vol-4, Mittal Publication, Delhi, 1988

Ismail K., Karnataka Temples: Their Role and Socio-Economic Life, Sundeep Prakashana, Delhi, 1984

James Massey, Dalits in India, Manohar, New Delhi, 1995

Jagadish Narayan Sarkar, The Art of War in Medieval India, Munshiram Manoharlal Publication Pvt, New Delhi, 1984

Jyotsna Kamath, Social Life in Medieval Karnataka, Abhinava Publication, New Delhi, 1980

Kunwar and Dev Prasad, Taxation in Ancient India, Mittal Publications, Delhi, 1987

Kuppuswamy G.R., Economic Conditions in Karnataka, Karnataka University, Dharwar, 1975

Lata Murugakar, Dalit Panthar Movement in Maharastra, Sangam Books, Bombay, 1991

Luis Dumont, A South Indian Subcastes, Oxford University Press, New Delhi, 1986

Percy Brown, Indian Architecture, Bombay, 1971

Kosambi D.D., An Introduction to the Study of Indian History, Sangam Books, Mumbai, 1975

Mahalingam T.V., Administration and Social Life under Vijayanagara, University of Madras, Madras, 1975

Michael S.M.(ed), Dalits in Modern India, Vitsar Publication, New Delhi, 1999

Mamata Rajawat, History of Dalits, Anmol Publication, New Delhi, 2005

Mathew K.S., Mariners Merchants and Oceans, Manohar, New Delhi, 1975

Mathew K.S., Portuguese Trade with Indian in the Sixteenth Century, Manohar, New Delhi, 1983

Mumtaz Alikhan, Identity Formation and Self Identity Among Harijan Elite, Uppal Publishing House, New Delhi, 1994

Nilakanta Sastri K.A., A History of South India, Oxford University Press, Madras, 1991

Ramesh K.V., A History of South Kanara, Karnataka University, Dharwad, 1970

Robert Sewell, A Forgotten Empire, Asian Educational Services, 1988

Romila Thapar, Exile and Kingdom: Some Thoughts on the Ramayana, The Mythic Society, Bangalore, 1978

Romila Thapar, Ancient Indian Social History: Some Interpretation, Orient Longman, New Delhi, 1979

Saki, Making History, Karnataka's People and their Past, Vol-I, Vimukti Prakashana, Bangalore, 1998

Sheik Ali B., History of Western Gangas, University of Mysore, Mysore, 1976

Shankar Mokashi Punekar, Harijan Contribution to Medieval Indian Thought, Prasaranga, Bangalore University, Bangalore, 1991

Sharma R.S., Sudras in Ancient India, Motilal Banarsidas, Delhi, 1980

Shivanna K.S., The Agrarian System of Karnataka, Prasaranga, Manasagangothri, Mysore, 1983

Singh K.S., The Scheduled Castes, Oxford University Press, 1993

Singh K.S.(ed), Peoples of India - Karnataka, Vol - XXVI, Part-1, 2, 2003

Stephen Fuchs, At the Bottom of Indian Society, Munshiram Manoharlal, New Delhi, 1981

Stuart Blackburn (ed), Oral Epics in India, University of California Press, Berkeley, 1989

Surendra Rao B., Chinnappa Gowda K. (ed), The Retrieved Acre, Prasaranga, Mangalore University, Mangalore, 2003

Syed Siraj Ul Hassan, Castes and Tribes of H.E.H. Nijamas Dominions, Asian Educational Services, New Delhi, 1989

Vasanth Madhav K.G., Religions in Coastal Karnataka, Inter India Publication, New Delhi, 1985

Vasanth Madhav K.G., Western Karnataka: Its Agrarian Relations 1500-1800 A.D., Navranga, New Delhi, 1991

Venkataramanaiah N., Studies in the History of Third Dynasty Vijayanagara, Gyan Publication House, New Delhi, 1986

Victor Retonburg(ed), Feudal Society and Culture, Progress Publishers, Mosco, 1988

Vijay Poonacha Thambanda, Conflicting Identities in Karnataka, Prasaranga, Kannada University, Hampi, 2004

